ಗುರುರಾಜೋ ವಿಜಯತೆ

# ಗೀತಾವಲೋಕನ

## ಭಾಗ — ೧

ಗೀತಾ ಗ್ರಂಥ ವಿವರಣೆ

**ಸಂಪುಟ ೧**

(೧–೨ನೇ ಅಧ್ಯಾಯಗಳ [illegible] ಶ್ಲೋಕಗಳು)

*

ಲೇಖಕರು ;

ಗು. ಭೀ. ಜೋಶಿ

*

ದುರ್ಮತಿ ಸಂ॥
ವೈ ಶುದ್ಧ
ಅಕ್ಷಯ ತೃತೀಯಾ

ಇಸ್ವಿ : ೧೯೮೧

ಗುರುರಾಜೋ ವಿಜಯತೆ

# ಗೀತಾವಲೋಕನ

## ಭಾಗ — ೧

### ಗೀತಾ ಗ್ರಂಥ ವಿವರಣೆ

### ಸಂಪುಟ ೧

(೧-೨ನೇ ಅಧ್ಯಾಯಗಳ ೪೫ ಶ್ಲೋಕಗಳು)



ಲೇಖಕರು :

ಗು. ಭೀ. ಜೋಶಿ



ದುರ್ಮತಿ ಸಂ॥
ವೈ. ಶುದ್ಧ
ಅಕ್ಷಯ ತೃತೀಯಾ

ಇಸ್ವಿ : ೧೯೮೧

(ತಿರುಪತಿ ದೇವಸ್ಥಾನ ಸಹಾಯದಿಂದ
ಪ್ರಕಾಶಕರು:
ಜಿ. ಬಿ ಜೋಶಿ
ಎಕ್ಸಟೆನ್‌ಶನ್, ಗದಗ

ಪ್ರಥಮ ಮುದ್ರಣ : ೧೯೮೧

ಪ್ರತಿಗಳು ; ೧೦೦೦

ಪ್ರಕಾಶನ ಪೂರ್ವ ಬೆಲೆ ; ರೂ. ೨೫–೦೦ (೧–೩ ಅಧ್ಯಾಯ)
ಪ್ರಕಾಶನ ನಂತರ ಬೆಲೆ : ರೂ. ೩೦–೦೦ (೧–೩ ಅಧ್ಯಾಯ)

ಮುದ್ರಕರು:
ಪವಮಾನ ಮುದ್ರಣಾಲಯ,
ಕಾಲೇಜ ರೋಡ, ಧಾರವಾಡ

ಉಪೋದ್ಘಾತ (ಪುಟ ೧ ರಿಂದ ೪೦)
ಸಮೀರ ಎಂಟರಪ್ರೈಜಿಸ್, ಗದಗ

# ಮುನ್ನುಡಿ



ಗೀತೆಯ ಪರಿಚಯವಾದುದು ನನಗೆ ಈಗ ೬೦ ವರ್ಷಗಳ ಹಿಂದೆ. ಆಮೇಲೆ ಅದರ ಅಭ್ಯಾಸಕ್ಕೆ ವಿಶೇಷ ಚಾಲನೆ ದೊರೆತುದು ೧೯೫೫ರಲ್ಲಿ ನಾನು ಶಿರಹಟ್ಟಿಯಲ್ಲಿ ಒಂದು ಹಾಯಸ್ಕೂಲಿನಲ್ಲಿ ಶಿಕ್ಷಕನಿದ್ದಾಗ, ನನ್ನ ಮಿತ್ರರು ಗೀತೆಯ ಮೇಲೆ ಉಪನ್ಯಾಸಕ್ಕೆ ಪ್ರೋತ್ಸಾಹಿಸಿದರು. ನನ್ನ ಅಭ್ಯಾಸ ಪ್ರಾರಂಭವಾಯಿತು ನನ್ನ ಡಿಗ್ರಿಪರೀಕ್ಷೆಯಲ್ಲಿ ಪಾಸಾಗಲಿಕ್ಕೆ ಅಲ್ಪ-ಸ್ವಲ್ಪ ಓದಿದ್ದನ್ನು ಶೇಖರಿಸಿಕೊಂಡು ಸಾಂಪ್ರದಾಯಿಕ ಭಾಷ್ಯಗಳನ್ನು ಓದಿಕೊಂಡು ಉಪನ್ಯಾಸಗಳನ್ನು ಮುಂದುವರಿಸಿದೆ. ಆಗ ನಾನು ಆಧುನಿಕರಲ್ಲಿ ಬಹು ಜನರು ಪ್ರಾಚೀನ ಸಾಂಪ್ರದಾಯಿಕ ಭಾಷ್ಯಗಳನ್ನು ನಿರರ್ಗಳವಾಗಿ ನಿಂದಿಸುತ್ತಿರುವವರನ್ನು ಕಂಡುಕೊಂಡೆನು ಆಧುನಿಕರಲ್ಲಿ ಗೀತೆಯ ಮೇಲೆ ಬರೆದ ಮುಖ್ಯ ಮುಖ್ಯ ಜನರ ಗ್ರಂಥಗಳನ್ನು ಓದಹತ್ತಿದೆ. ಗೀತಾರಹಸ್ಯಕಾರರು ಭಾಷ್ಯಕಾರರ ಭರ್ತ್ಸನೆಯನ್ನೇ ಭಂಡವಾಲು ಮಾಡಿಕೊಂಡು ರಹಸ್ಯಮಂದಿರವನ್ನು ಕಟ್ಟಿದ್ದು ನೋಡಿ ನೊಂದುಕೊಂಡೆ ಶ್ರೀ ಅರಬಿಂದೋರವರು ಪೂರ್ಣಯೋಗವನ್ನು ಮಂಡಿಸುವಾಗ ಭಾಷ್ಯಕಾರರ ಅಪೂರ್ಣತೆಯನ್ನೇ ಮೂಲ ಧನ ಮಾಡಿಕೊಂಡದ್ದು ತಿಳಿದು ಬಂತು. ಮಹಾತ್ಮಾಗಾಂಧಿಯವರೂ ಸಹ ಬರೀ ಭಾಷ್ಯಕಾರರನ್ನು ಅಷ್ಟೇ ಅಲ್ಲ ಭಗವಂತನನ್ನೂ ಭೀಮನನ್ನೂ ಮಹಾಭಾರತ ಯುದ್ಧವನ್ನೂ ಐತಿಹಾಸಿಕವಲ್ಲವೆಂದು ನಿರಾಕರಿಸಿ ಅಹಿಂಸೆಯ ಮಂಜುಗಡ್ಡೆಯನ್ನು ಗೀತೆಯಲ್ಲಿ ಎತ್ತಿ ತೋರಿಸಿದ್ದನ್ನು ನೋಡಿ ವಿಷಣ್ಣನಾದೆ. ಡಾ ರಾಧಾಕೃಷ್ಣನ್ನರು, ಡಾ. ರಾನಡೆಯವರು ವಿಮರ್ಶಕರ ವೇಷ ಹಾಕಿ ಪ್ರಾಚೀನರ ಅಭಿಪ್ರಾಯವನ್ನೇ ಭಾಷಾಸೌಂದರ್ಯದಿಂದ ಅಲಂಕರಿಸಿ ವಿಷಯಗಳನ್ನು ಹೊಸ ರೂಪದಲ್ಲಿ ಪ್ರತಿಪಾದಿಸಿದ್ದನ್ನು ನೋಡಿ ಧೈರ್ಯಗೊಂಡೆ. ಪಾಶ್ಚಾತ್ಯ ವಿಮರ್ಶಕರಾದ ಗಾರ್ಬೆ ಓಟೊ, ಎಡ್ಗರಟಿನ, ಹಿಲ್ಲ ಮೊದಲಾದವರನ್ನು ಓದಿದಾಗ ಗೀತಾ ತಾತ್ಪರ್ಯದ ವಿಷಯದಲ್ಲಿ ಸಹಾಯವೇನೂ ಆಗಲಿಲ್ಲ ಪಾಠಾಂತರ, ಪ್ರಕ್ಷೇಪ, ಗೀತೆಯ ಮೂಲ ರೂಪ ಅದರ ಆವೃತ್ತಿ ಇವುಗಳ ವಿಷಯ, ಕಾಲನಿರ್ಣಯ ಇವುಗಳನ್ನು ಹೊರತು ಪಡಿಸಿ ಹೆಚ್ಚಿನದೇನೂ ಸಿಗಲಿಲ್ಲ. ಕೆಲವು ವಿಮರ್ಶಕರು ಮಾತ್ರ ಗೀತೆಯ ಮೂಲ ಗ್ರಂಥಗಳಲ್ಲಿ ಭಾಗವತಧರ್ಮ ಪ್ರತಿಪಾದಕವಾದ ಪಂಚರಾತ್ರಾಗಮವನ್ನು ಉದಾಹರಿಸಿ, ಭಾಗವತಧರ್ಮದ ಪ್ರಸಾರ ಅದರ ಐತಿಹಾಸಿಕತೆ, ಗೀತೆಯ ಮೇಲೆ ಅದರ ಪ್ರಭಾವ ಮೊದಲಾದ ವಿಷಯಗಳನ್ನು ನೀಡಿ (ಡಾ. ಭಾಂಡಾರಕರರಂಥವರು) ಗೀತಾ ತಾತ್ಪರ್ಯ ತೆಗೆಯಲಿಕ್ಕೆ ಹೊಸ ಯತ್ನ ಮಾಡಿದ್ದು ಪ್ರಶಂಶನಾರ್ಹವೆಂದು

ತಿಳಿದು ಬಂತು. ಇವೆಲ್ಲವುಗಳ ಸಹಾಯದಿಂದ ಗೀತೆಯ ಮೇಲೆ ೭ ರಿಂದ ೧೪ ರ ವರೆಗೆ ಉಪನ್ಯಾಸಗಳನ್ನು ಆಧುನಿಕ ವಿಚಾರಸರಣಿಯಲ್ಲಿ ತಯಾರಿಸಿದೆ. ಗದಗ ಹುಬ್ಬಳ್ಳಿ, ಧಾರವಾಡ, ಹೈದರಾಬಾದ, ಬಳ್ಳಾರಿ ಮೊದಲಾದ ಸ್ಥಳಗಳಲ್ಲಿ ಆ ಉಪನ್ಯಾಸಗಳನ್ನು ಕೊಟ್ಟೆ. ಅವು ಒಳ್ಳೆ ಜನಪ್ರಿಯವಾದವು. ಆಗ ಅನೇಕ ನನ್ನ ಮಿತ್ರರು ಗೀತೆಯನ್ನು ಹೊಸ ರೀತಿಯಾಗಿ ಅಧ್ಯೈಸಿ ಅದರ ನಿಜವಾದ ತಾತ್ಪರ್ಯ ತೆಗೆಯುವಂತೆ ಒಂದು ಅಭ್ಯಾಸಯುಕ್ತ ಗ್ರಂಥವನ್ನು ಬರೆಯಬೇಕೆಂದು ಆಗ್ರಹ ಪಡಿಸಿದರು. ೧೯೭೨ ರಲ್ಲಿ ಕೊನೆಯದಾಗಿ ನಾನು ಸೇವೆಯಿಂದ ನಿವೃತ್ತನಾಗಿ ಗೀತೆಯ ಅಭ್ಯಾಸವನ್ನು ಮುಂದುವರಿಸಿದೆ, ಯುನಿವ್ಹರ್ಸಿಟಿ ಲಾಯಬ್ರರಿಯಿಂದ ಅನೇಕ ಪುಸ್ತಕಗಳನ್ನು ತಂದು ಸಾವಿರ ಪುಟಗಳಷ್ಟು ಟಿಪ್ಪಣಿಗಳನ್ನು ಬರೆದುಕೊಂಡು ಸಿದ್ಧನಾದೆ. ನನ್ನ ಮಗ ಭೀಮಸೇನನು ಅಮೇರಿಕೆಯಿಂದ ಗೀತೆಯ ಮೇಲಿನ ಕೆಲವು ಪುಸ್ತಕಗಳನ್ನು ತಂದದ್ದರಿಂದ ನನಗೆ ಹೆಚ್ಚು ಸಹಾಯವಾಯಿತು.

ಭಾಷ್ಯಕಾರರಲ್ಲಿ ಶ್ರೀ ಶಂಕರ, ಶ್ರೀ ರಾಮಾನುಜ, ಶ್ರೀ ಮಧ್ವ ಈ ಮೂವರನ್ನು ಚನ್ನಾಗಿ ಅಭ್ಯಾಸ ಮಾಡಿ, ಗೀತೆಯ ತಾತ್ಪರ್ಯ ತೆಗೆಯಲಿಕ್ಕೆ ಗೀತೆಯನ್ನೇ ಅವಲಂಬಿಸಿ ಯಾರು ಪ್ರಯತ್ನ ಪಟ್ಟಿದ್ದಾರೆಂಬುದನ್ನು ಲಕ್ಷ್ಯಪೂರ್ವಕವಾಗಿ ನೋಡಿದಾಗ ಮಧ್ವಾಚಾರ್ಯರೊಬ್ಬರೇ ಗೀತೆಯ ತಾತ್ಪರ್ಯವನ್ನು ಗೀತೆಯ ಸಹಾಯದಿಂದ ಮಾತ್ರ ತೆಗೆಯಲು ಯತ್ನಿಸಿದ್ದಾರೆಂದು ಕಂಡು ಬಂದಿತು. ಪಾಶ್ಚಾತ್ಯ ಪೌರ್ವಾತ್ಯರ ವಿಮರ್ಶಾತ್ಮಕ ಗ್ರಂಥಗಳು ನನ್ನ ಅಭಿಪ್ರಾಯವನ್ನು ಪ್ರೋತ್ಸಾಹಿಸಿದವು. ಆದರೆ ಅವರು ಎಲ್ಲಿಯೂ ಮಧ್ವಾಚಾರ್ಯರನ್ನು ಹೆಸರು ಹೇಳಿ ಎತ್ತಿ ಹಿಡಿದಿಲ್ಲ. ಅವರಿಗೆ ಸಮಾನ ಅಭಿಪ್ರಾಯವುಳ್ಳವರಾಗಿದ್ದಾರೆ ಮಾತ್ರ, ಅವರಿಗೆ ಮಧ್ವಾಚಾರ್ಯರ ಭಾಷ್ಯ ಮತ್ತು ತಾತ್ಪರ್ಯದ ಪರಿಚಯವಿದ್ದಂತೆ ಕಾಣಲಿಲ್ಲ. ಗೀತೆಯು ಭಕ್ತಿಪ್ರಧಾನ ಗ್ರಂಥ, ಭಾಗವತ ಧರ್ಮವನ್ನು ಪ್ರಸಾರಮಾಡುವ ಮುಖ್ಯ ಗ್ರಂಥ, ಕರ್ಮ ಭಕ್ತಿ ಜ್ಞಾನಗಳಿಂದ ಕೂಡಿದ್ದೇ ಯೋಗ. ಜೀವನೆಂದೂ ಬ್ರಹ್ಮನಲ್ಲಿ ಐಕ್ಯ ಹೊಂದಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುವದಿಲ್ಲ. ಜಗತ್ತು ಸತ್ಯವಾದುದು. ಜೀವರಲ್ಲಿಯ ತಾರತಮ್ಯ, ಭಗವಂತ ಒಬ್ಬನೇ, ಅವನು ಸಗುಣ; ಅವನೇ ಬ್ರಹ್ಮ– ಈ ವಿಚಾರಗಳನ್ನು ಚರ್ಚಾಪೂರ್ವಕವಾಗಿ ಆಧಾರ ಸಹಿತವಾಗಿ ಆಧುನಿಕರು ಬಹುಜನರು ಬೇರೆ ಬೇರೆಯಾಗಿ ಒಪ್ಪಿ ಕೊಂಡದ್ದು ತಿಳಿದುಬಂತು. ಇವುಗಳನ್ನು ಅನುಸರಿಸಿ ಶ್ಲೋಕಾರ್ಥ ನಿರೂಪಿಸಿದರೇ ಅದು ಸರಳ ಸುಸಂಗತವಾದ ಅರ್ಥವಾಗುತ್ತದೆ. ಮತ್ತು ಉಪಕ್ರಮ ಉಪಸಂಹಾರಗಳಿಂದ ಆಧಾರಿತವಾದ ತಾತ್ಪರ್ಯವನ್ನು ಕೊಡುತ್ತದೆ. ಇದನ್ನು ನೋಡಿ ಪರಮಾಶ್ಚರ್ಯವಾಯಿತು. ಆದರೆ ಈ ಎಲ್ಲ ತತ್ವಗಳನ್ನು ಗೀತೆಯೇ ಪ್ರತಿಪಾದಿಸಿದೆಯೆಂದು ಏಳುನೂರು ವರ್ಷಗಳ ಹಿಂದೆ ಹೇಳಿದ ಮಧ್ವಾಚಾರ್ಯರ ಹೆಸರನ್ನು ಒಬ್ಬರೂ ಎತ್ತಿ ಹಿಡಿದಿಲ್ಲ. ಇವುಗಳನ್ನು

ನಾವು ಗೀತೆಯಲ್ಲಿ ಕಂಡಿದ್ದೇವೆಂದು ತಮ್ಮ ಕೀರ್ತಿಕುದುರೆಯನ್ನು ಮುಂದೆ ಓಡಿಸಿದ್ದಾರೆ ಇದು ಪರಮ ಅನ್ಯಾಯವೆಂದು ಅನಿಸಿದೆ ನಾನು ನನ್ನ ಅಭಿಪ್ರಾಯವನ್ನು ವ್ಯವಸ್ಥಿತವಾಗಿ ಸಾವಿರಾರು ಜನರ ಸಭೆಯಲ್ಲಿ ಧೈರ್ಯದಿಂದ, ಮಂಡಿಸಿದೆ. ಜನರಿಂದ ಮತ್ತಿಷ್ಟು ಪ್ರೋತ್ಸಾಹ ದೊರೆಯಿತು. ಆಗ ನಾನು ಒಂದು ಹೊಳವು ಹಾಕಿ ಒಂದು ಭಾಗದಲ್ಲಿ ಶ್ಲೋಕ–ಶ್ಲೋಕಾರ್ಥ, ಇನ್ನೊಂದು ಭಾಗದಲ್ಲಿ ಒಂದು ನಾಲ್ವತ್ತು ಉಪನ್ಯಾಸಗಳು ಹೀಗೆ ಗ್ರಂಥ ರಚನೆ ಮಾಡಬೇಕೆಂದು ನಿರ್ಣಯಿಸಿ ಒಂದು ಐದು ಉಪನ್ಯಾಸಗಳನ್ನು ಬರೆದೆ ಆ ಮೇಲೆ ಶ್ಲೋಕ ಶ್ಲೋಕಾರ್ಥ ಬರೆದೆ, ಶ್ಲೋಕ, ಶ್ಲೋಕದ ಕನ್ನಡದಲ್ಲಿ ಅನುವಾದ, ಆ ಮೇಲೆ ವಿಶೇಷ ಟಿಪ್ಪಣಿಗಳು ಇದು ನನ್ನ ಗ್ರಂಥದ ರೂಪರೇಷೆ

ನನಗೆ ಒಳ್ಳೆ ಸಹಾಯಕ ಗ್ರಂಥಗಳು ಎಂದರೆ ಸತ್ಯಧ್ಯಾನತೀರ್ಥರ ಪದಪದಾರ್ಥ ಸಂಗ್ರಹ ಸಿ. ಎಮ್ ಪದ್ಮನಾಭಾಚಾರ್ಯರ ಇಂಗ್ಲೀಷಿನಲ್ಲಿ ಬರೆದ ಗೀತೆ, ರಾಘವೇಂದ್ರಸ್ವಾಮಿಗಳ ಗೀತಾವಿವೃತಿ – ಮೂರು ಭಾಷ್ಯಗಳು – ಟೀಕೆ ಟಿಪ್ಪಣಿಗಳು ಸಹಿತ – ಪಾಶ್ಚಾತ್ಯರ ಇಂಗ್ಲೀಷಿನಲ್ಲಿ ಬರೆದ ಗೀತೆಯ ಭಾಷಾಂತರಗಳು. ಸತ್ಯಧ್ಯಾನರ ಭಾಷಾಂತರವು ಒಳ್ಳೆ ಸಂಶೋಧಿತವಾದುದು ಆದರೆ ಅವರ ಕನ್ನಡ ಮಾತ್ರ ಪೌರಾಣಿಕ, ಆದುದರಿಂದ ಸಾಹಿತ್ಯಕ ಕನ್ನಡದಲ್ಲಿ ಅದನ್ನು ಪರಿವರ್ತಿಸಿದ್ದೇನೆ ಎಲ್ಲ ಆಚಾರ್ಯರ ಅಭಿಪ್ರಾಯಗಳನ್ನೂ ಅರ್ಥಗಳನ್ನೂ ನಮೂದು ಮಾಡಿ ಸರಿಯಾದುದನ್ನು ಆರಿಸಿ ಅದಕ್ಕೆ ಪುಷ್ಟೀಕರಣ ದೊರೆತರೆ ಕೊಟ್ಟು ಕೊನೆಯದಾಗಿ ಪಾಶ್ಚಾತ್ಯರ ವಿಮರ್ಶೆಗಳನ್ನು ಜೋಡಿಸಿ ಅದರ ವಿಶೇಷ ಟಿಪ್ಪಣಿ ಮುಗಿಸಿದ್ದೇನೆ ಅಧ್ಯಾಯದ ಪ್ರಾರಂಭಕ್ಕೆ ಅದಕ್ಕೆ ಪೂರ್ವ ಸಂಗತಿ, ಅಧ್ಯಾಯದ ಸಮಾಪ್ತಿಯಾದಾಗ ಅದರ ಸಾರಾಂಶ ಅದರಲ್ಲಿ ಅಡಕವಾದ ತತ್ವಗಳ ನಿರೂಪಣೆ ಈ ವಿಧದಿಂದ ೩ ಅಧ್ಯಾಯದ ಈ '**ಗೀತಾವಲೋಕನ**' ವೆಂಬ ಗ್ರಂಥವು ಅಜಮಾಸು ೫೦೦ ಪತ್ರಗಳಷ್ಟು ಗಾತ್ರದ್ದು ಸಿದ್ಧವಾಯಿತು

ಆ ಮೇಲೆ ಅದನ್ನು ಶ್ರೀ ಶ್ರೀ ಪೇಜಾವರ ಶ್ರೀಗಳವರಿಗೆ ತೋರಿಸಿದಾಗ – ಇದು ಅಪೂರ್ವ ಗ್ರಂಥ, ಇದನ್ನು ನೀವು ಮುದ್ರಿಸಿರಿ ಎಂದು ಒಂದುಸಾವಿರ ರೂಪಾಯಿ ಕೊಟ್ಟು ಆಶೀರ್ವದಿಸಿದರು, ಅದರಂತೆ ವ್ಯಾಸರಾಯರ ಮಠದ ಶ್ರೀ ಶ್ರೀಗಳವರು ಶ್ರೀ ಶ್ರೀ ಭಾಂಡಾರಕೇರಿ ಶ್ರೀಗಳವರು, ಶ್ರೀ ಶ್ರೀ ರಾಘವೇಂದ್ರ ಮಠದ ಶ್ರೀಗಳವರು, ಶ್ರೀ ಶ್ರೀ ಉತ್ತರಾದಿ ಮಠದ ಶ್ರೀಗವರು, ಶ್ರೀ ಶ್ರೀ ಭೀಮನಕಟ್ಟಿ ಶ್ರೀಗಳವರು ಸಹಸ್ರ ಸಹಸ್ರ ರೂಪಾಯಿ ಕೊಟ್ಟು ಆಶೀರ್ವದಿಸಿದ್ದಾರೆ. **ಇವರ ಆಶೀರ್ವಾದದ ಬಲದಿಂದ ತಿರುಪತಿ ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿಗಳನ್ನು ಸಂಧಿಸಿದೆ. ಅವರು ಸಹ ಮೊದಲಿನ ಸಂಪುಟಕ್ಕೆ**

೩೪೦೦ ರೂಪಾಯಿಗಳನ್ನು ಸಹಾಯ ಧನವನ್ನಾಗಿ ನೀಡಿದರು. ನನ್ನ ಚಿರಂಜೀವ ಭೀಮಸೇನನು ಈ ಸತ್ಕಾರ್ಯಕ್ಕೆ ನಾಲ್ಕು ಸಾವಿರ ರೂಪಾಯಿ ಸಹಾಯ ಧನವನ್ನು ನೀಡಿದ್ದಾನೆ. ಇವರೆಲ್ಲರ ಸಹಾಯದಿಂದ ಅಚ್ಚು ಹಾಕಿಸಲಿಕ್ಕೆ ಸಿದ್ಧನಾದೆ

ಕೈ ಬರಹಗಳನ್ನು ಓದಿ ತಿದ್ದುವ ಕೆಲಸದಲ್ಲಿ ಮೊದಲಿನಚ್ಚನ್ನು ತಿದ್ದುವದರಲ್ಲಿ ಮೇಲೆ ಮೇಲೆ ಸೂಚನೆ ಸಲಹೆ ಕೊಡುವದರಲ್ಲಿ ನನಗೆ ನೆರವಾದವರು ಪಂಡಿತ ಕೇಶವಾಚಾರ್ಯ ಜಾಲಿಹಾಳ, ಶ್ರೀಯುತ ಬರ್ಲಿಮಾಸ್ತರರು ಹುಲಗಿ ಮಾಸ್ತರರು, ಮತ್ತು ನನ್ನ ಮೊಮ್ಮಗನಾದ ದೇಶಪಾಂಡೆ ಗೋವಿಂದರಾಯರು; ನನ್ನ ಚಿಕ್ಕ ಮಿತ್ರ ದತ್ತಾತ್ರೇಯ ಪಾಟೀಲರು ಇವರ ಸಹಾಯವನ್ನು ಕೃತಜ್ಞತಾಪೂರ್ವಕ ಸ್ಮರಿಸದೆ ಇರಲಾರೆ.

ಇನ್ನು ಅಚ್ಚಿನ ಕೆಲಸವನ್ನು ನಮ್ಮ ಪವಮಾನ ಪ್ರಿಂಟಿಂಗ ಪ್ರೆಸ್ಸಿನ ಶ್ರೀ ಎ. ಆರ್. ಪಂಚಮುಖಿಯವರು ಬಹು ಉತ್ಸಾಹದಿಂದ ಸಾಗಿಸಿಕೊಂಡು ಬಂದುದರಿಂದ ಕೆಲಸ ಚನ್ನಾಗಿ ಆಯಿತು. ಅವರು ಭಗವಂತನಲ್ಲಿ ಭಕ್ತಿಯಿಂದ ಭಗವಂತನು ಪ್ರೀತನಾಗಬೇಕೆಂಬ ಕರ್ಮಯೋಗ ತತ್ವವನ್ನು ಈ ಕೆಲಸದ ರೂಪದಿಂದ ಕಾರ್ಯಾಚರಣೆಯಲ್ಲಿ ತಂದುದರಿಂದ ಗೀತಾವಲೋಕನ ಹೊರಬೀಳುವಂತಾಯಿತು. ನಾನು ಪಟ್ಟ ಶ್ರಮಕ್ಕೆಲ್ಲ ಅಚ್ಚಿನ ಅಂದವಾದ ರೂಪ ಕೊಟ್ಟು ಅದನ್ನು ಓದುಗರ ಕೈಯಲ್ಲಿ ಇರಿಸಲಿಕ್ಕೆ ಸಹಾಯ ಮಾಡಿದವರು ನನ್ನ ಚಿಕ್ಕ ಮಿತ್ರರಾದ ಆನಂದತೀರ್ಥರು

ಗೀತೆಯು ಆಧುನಿಕ ಜನರಿಗೆ ಮಾರ್ಗದರ್ಶಕ, ತರುಣ-ತರುಣಿಯರಿಗೆ ದಾರಿ ದೀಪ, ಗೊಂದಲದಲ್ಲಿ ಬಿದ್ದು ನಿರ್ವಿಣ್ಣರಾಗಿ ಕೆಳಗೆ ಹೇಳಿದಂತೆ ಕೂಗುತ್ತಿರುವ ಜಗತ್ತಿಗೆ ಅಸಾಂಪ್ರದಾಯಿಕ ಗ್ರಂಥವೆಂದು ಸ್ಮರಿಸಿ ಈ ೮೩ರ ಇಳಿ ವಯಸ್ಸಿನಲ್ಲೂ ಶ್ರಮ ಪಟ್ಟಿದ್ದೇನೆ ಈಗಲೂ ' ಕುರು ' ಕ್ಷೇತ್ರದಲ್ಲಿ ಹೋರಾಡುವ ಕಂಗೆಟ್ಟ ಧೀರರಿಗೆ ಗೀತೆಯು ಕರ್ಮಯೋಗ ಸನ್ಮಾರ್ಗವನ್ನು ತೋರಿಸಿ ಪಾರುಮಾಡುತ್ತದೆಂದು ನನ್ನ ವಿಶ್ವಾಸವು ನನಗೆ ಪ್ರೋತ್ಸಾಹಿಸಿದೆ. ಇದು ಜನರ ಕೂಗು ;—

Mystics cry out thus with T. S. Eliot :-

" Where is the life we have lost in living ?
Where is the wisdom we have lost in knowledge ?
Where is the knowledge we have lost in information ?
The cycle of Heaven in Twenty Centuries
Brings us further from God and nearer to Dust ".

In Shaw's St. Joan :-

Oh Lord thon hast created this beautiful world
when will it be ready to receive its saints ? How long ?
How long ?

ಭಕ್ತರು T. S Eliot ರ ದ್ವಾರದಿಂದ ಹೀಗೆ ಕರುಳು ಕಿತ್ತುವಂತೆ ಕೂಗುತ್ತಾರೆ –

ಬದುಕಿರುವದರಲ್ಲಿಯೇ ಕಳಕೊಂಡ ಜೀವನವೆಲ್ಲಿದೆ ?
ಜ್ಞಾನದಲ್ಲಿಯೇ ಕಳಕೊಂಡ ಬುದ್ಧಿ ಎಲ್ಲಿದೆ ?
ಸಂಗತಿಗಳ ಸಂಕಲನದಲ್ಲಿಯೇ ಕಳಕೊಂಡ ಜ್ಞಾನವಾದರೂ ಎಲ್ಲಿದೆ ?
ಇಪ್ಪತ್ತು ಶತಮಾನಗಳ ತಿರುಗಿದ ಈ ದಿವ್ಯ ಚಕ್ರವು
ದೇವರಿಂದ ದೂರ ನಮ್ಮನ್ನು ಒಯ್ಯುತ್ತಿದೆ, ಮಣ್ಣಿನ ಮಸಣಕ್ಕೆ
ಸಮೀಪ ತರುತ್ತದೆ.

ಹಾಗೆ ಬರ್ನಾಡ ಶಾರವರು ತಮ್ಮ st Joan ದಲ್ಲಿ ;–

ಪ್ರಭು ! ಎಂಥ ಸುಂದರ ಜಗತ್ತನ್ನು ನಿರ್ಮಿಸಿದ್ದೀಯಾ !
ಎಂದು ಅದು ತನ್ನ ಸಂತರನ್ನು ಸ್ವಾಗತಿಸುತ್ತಿದೆ ? ಇನ್ನೂ
ಎಷ್ಟು ದಿವಸ ಎಷ್ಟು ದಿವಸ ?

ಈ ಕೂಗಿಗೆ ಭಗವಂತನ ಉತ್ತರ :–

**अनन्याश्चितयंतोमां येजनाः पर्युपसते**
**तेषां निन्याभियुक्तानां योगक्षेमं वहाम्यहम् ॥**

**–गीता**

ನಮ್ಮಿಂದವೇ ತಡ !!

**ಗುರುರಾಜ. ಭೀ. ಜೋಶಿ**

# ಪರಿವಿಡಿ


| | |
|---|---|
| ಮುನ್ನುಡಿ | V |
| ಉಪೋದ್ಘಾತ | ೧–೪೦ |
| ಗೀತಾಗ್ರಂಥ ವಿವರಣೆ— | |
| ೧ನೇ ಅಧ್ಯಾಯ | ೧ |
| ೨ನೇ ಅಧ್ಯಾಯ | ೬೪ |

# ಉಪೋದ್ಘಾತ

ಗೀತೆಯು ಭಾರತ ಭೂಮಿಯಲ್ಲಿ ಬೆಳಗುತ್ತಿರುವ ಆಧ್ಯಾತ್ಮಪ್ರದೀಪವು, ಸಂಸಾರ ಸಾಗರದಲ್ಲಿ ನೌಕೆಗಳನ್ನು ಬಂಡೆಗಲ್ಲುಗಳಿಗೆ ಅಪ್ಪಳಿಸುವ ಅಪಘಾತದಿಂದ ಉಳಿಸುವ ಏಕಮೇವ ದೀಪಸ್ತಂಭವು ಎಷ್ಟು ಜನ ಯತಿಗಳಿಗೆ ಅದು ಚಿತ್ತಸ್ಥೈರ್ಯ ವನ್ನು ನೀಡಿ ಪರಮಾತ್ಮನ ಅಪರೋಕ್ಷವನ್ನು ಮಾಡಿಸಿಲ್ಲ! ಎಷ್ಟು ಜನ ಸಂಸಾರಿ ಗಳಿಗೆ ಸರಾಗವಾಗಿ ಪಾರಾಗುವ ಯೋಚನೆಯನ್ನು ನೀಡಿ ಅದು ಶಾಂತಿಯನ್ನು ಕರು ಣಿಸಿಲ್ಲ! ಆಪತ್ತುಗಳಲ್ಲಿ ಬಿದ್ದವರಿಗೆ ಧೈರ್ಯ ನೀಡಿ ಬೆಳಕು ಕೊಟ್ಟು, ಉಳಿಸಿ, ದಂಡೆಗೆ ಮುಟ್ಟಿಸಿಲ್ಲ!! ಕಂಗೆಟ್ಟು ಬೆಂದು ಬೆಂಡಾದವರಿಗೆ ತಂಪು ನೆರಳಿನಲ್ಲಿ ಕೂಡಿಸಿ ತಣ್ಣನ್ನ ಹಣ್ಣು ತಿನಿಸಿ ಮಾರ್ಗಾಯಾಸವನ್ನು ಕಡಿಮೆ ಮಾಡಿದ್ದೂ ಗೀತೆಯೇ ಅಲ್ಲವೇ? ರಾಷ್ಟ್ರಪುರುಷರು ದಿಙ್ಮೂಢರಾದಾಗ ದಿವ್ಯದೃಷ್ಟಿ ಕೊಟ್ಟು ಸಮಗ್ರ ದರ್ಶನ ಮಾಡಿಸಿ ತೊಡಕಿನ ರಾಷ್ಟ್ರದ ಪ್ರಶ್ನೆಯನ್ನು ಬಿಡಿಸಲಿಕ್ಕೆ ಸಹಾಯ ನೀಡಿದ ಉಜ್ವಲ ಕೀರ್ತಿಯೂ ಗೀತೆಗೆ ಮೀಸಲಾಗಿದೆ.

ರಾಜರು ಕಿರೀಟಗಳನ್ನು ತಲೆಯ ಮೇಲಿಟ್ಟಿದ್ದರಿಂದಲ್ಲ, ಗೀತೆಯನ್ನು ತಲೆಯ ಮೇಲಿಟ್ಟುಕೊಂಡದ್ದರಿಂದ ರಾಜರೆನಿಸಿದ್ದಾರೆ. ಗೀತೆಯ ಪಾಠಗಳನ್ನೇ ಕೃತಿಯಲ್ಲಿ ತಂದದ್ದಕ್ಕೆ ಪುರುಷರು ಪುಣ್ಯಪುರುಷರಾಗಿದ್ದಾರೆ. ಗೀತೆಯಲ್ಲಿ ಹೇಳಿದ ಕರ್ಮಯೋಗವೇ ಗಾಢವಾದ ಜೀವನದ ಮರ್ಮವೆಂದು ಜಗತ್ತಿಗೆ ಅದು ತಿಳಿಸಿದೆ. ಭಗವಂತನ ಅಧರಾ ಮೃತದಿಂದ ಅಮೃತ ಸೋಂಕಿದ ಗೀತಾವಾಣಿಯು ಅನೇಕ ಜನ ದಾಸರ ಮಧುರವಾಣಿ ಯಾಗಿ ಜಗತ್ತಿನಲ್ಲಿ ಸೂಸಿ ಹರಿಯುತ್ತಿದೆ. ಪೂಜಕನಿಗೆ ಪೀಠದ ಮೇಲೆ, ಯಾಜಕನಿಗೆ ಅಗ್ನಿಯ, ಚಿಂತಕನಿಗೆ ಹೃದಯದಲ್ಲಿ, ರೋಗಿಗೆ ಹಾಸಿಗೆಯ ಮೇಲೆ, ತಾಯಿಯ ಕರುಣೆಯಲ್ಲಿ ಅಭ್ಯಾಸಿಗೆ ಕಣ್ಣು ಮುಂದೆ ಇರುವದು ಗೀತೆಯ ಮಂಗಲ ವಚನವೇ ಅಲ್ಲವೇ?

ಎತ್ತರವಾದ ಹಿಮಾಲಯವಾಗಿ ನಿಂತದ್ದು ಗೀತೆಯೇ! ತಗ್ಗಿನಲ್ಲಿ ತುಂಬಿ ಸಮುದ್ರವಾಗಿ ನಿಂತದ್ದು ಗೀತೆಯೇ! ಓಡಿ ಓಡಿ ಹರಿದು ನದಿ ನದಿಗಳಾಗಿ ಸಮುದ್ರಕ್ಕೆ ಕೂಡಿದ್ದೂ ಗೀತೆಯೇ! ಗಿಡ-ಬಳ್ಳಿಗಳಾಗಿ ಬೆಳೆದು ಹಸಿರೆಲೆಗಳಿಂದ ಶೋಭಿಸಿ ಅಂದ ವಾಗಿ ಘಮಘಮಿಸುವ ಹೂಗಳಲ್ಲಿ ಅರಳಿದ್ದು ಗೀತೆಯೇ! ಅಂದಚಂದವಾದ ನಾನಾ ರೂಪಗಳಲ್ಲಿ ಪ್ರಪಂಚದ ತುಂಬ ಹರಿದಾಡುವ ಮೆರೆದಾಡುವ ಪ್ರಾಣಿ ಪ್ರಪಂಚವೆಲ್ಲ ಗೀತೆಯೇ!! ಆಕಾಶದಲ್ಲಿ ನಕ್ಷತ್ರಗಳಾಗಿ ಮಿನುಗುತ್ತಿರುವ ದಿವ್ಯಪ್ರಕಾಶವೂ ಗೀತೆಯೇ. ಗೀತೆಯ ಈ ಅಗಾಧವಾದ ವಿರಾಟ ರೂಪವನ್ನು ಕಂಡು ವಿಸ್ಮಯಗೊಂಡ ಮಾನ ವನು ಇದರ ಮೂಲಪ್ರತಿಯನ್ನು ಗೀತೆಯಲ್ಲಿ ವರ್ಣಿಸಲ್ಪಟ್ಟ ವಿರಾಟರೂಪದಲ್ಲಿ ಕಾಣುತ್ತಾನೆ.

ಗೀತೆಯ ಸಾರ್ವ ಜನೀನತೆ, ಮೋಹಕತೆ, ಮಧುರತೆಗಳನ್ನು ಕಂಡ ಮಹನೀಯರು ಅದರಲ್ಲಿರುವ ಆಳವಾದ ಜ್ಞಾನ, ವಿಚಿತ್ರವಾದ ಕುಶಲತೆ, ಪ್ರೇಮದ ಸವಿಯಿಂದ ತುಂಬಿದ ಭಕ್ತಿಯ ಜೇನು ಹುಟ್ಟುಗಳನ್ನು ನೋಡಿ ಜನರನ್ನು ಕೈಮಾಡಿ ಕರೆಯುತ್ತಿದ್ದಾರೆ. ಎಷ್ಟು ದಿವಸಗಳಿಂದ ಸವಿಯುತ್ತ ಬಂದಿದ್ದರೂ ಆ ನಿಧಿಯು ಸ್ವಲ್ಪು ಕೂಡ ಸವೆದಿಲ್ಲ. ಹೊಸ ನಿಧಿಯನ್ನೇ ಜನರು ಮತ್ತೆ ಮತ್ತೆ ಕಾಣುತ್ತಿದ್ದಾರೆ. ಆದುದರಿಂದಲೇ ಜನರು ಎಷ್ಟೋ ಸಾವಿರ ವರುಷಗಳ ಮೇಲೂ ಹೊಸ ವಸ್ತುವನ್ನೇ ಗೀತೆಯ ಖನಿಯೊಳಗಿಂದ ತೆಗೆದು ತೋರಿಸುತ್ತಿದ್ದಾರೆ. ಅನೇಕ ವಸ್ತುಗಳು ಹಳೆಯದಾಗಿ ಹೋಗಿದ್ದರೂ, ಕೊಳೆತು ಕೀಳಾಗಿದ್ದರೂ, ಹುಗಿದು ಮಣ್ಣಾಗಿದ್ದರೂ, ಸುಟ್ಟು ಬೂದಿಯಾಗಿದ್ದರೂ ಗೀತೆಯ ಮಧುರ ಮಾತುಗಳು ಕೃಷ್ಣನ ಬಾಯಿಂದ ಈ ಹೊತ್ತು ಹೊರಟಂತೆ, ಈ ಹೊತ್ತಿನ ಇರಾಣ, ಇರಾಕ, ಅಫಗಾನ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡುವಂತೆ ತೋರುತ್ತದೆ. ಭಗವಂತನು ದಬ್ಬಾಳಿಕೆ, ಭ್ರಷ್ಟಾಚಾರ, ಗೋಳಿಬಾರು, ಸ್ತ್ರೀಯರ ಮಾನಭಂಗ, ಹಿಂಸಾಚಾರ ಮೊದಲಾದವುಗಳು ದುರ್ಯೋಧನ, ದುಶ್ಯಾಸನರೆಂಬ ಅಸುರರನ್ನು ನಾಶಪಡಿಸಲು ಅವತರಿಸಿದಂತೆ ತೋರುತ್ತದೆ. ಶ್ರೀಕೃಷ್ಣನು ಗೀತೆಯ ಮಾತುಗಳಿಂದ ನರರನ್ನು ಎಬ್ಬಿಸುತ್ತಿದ್ದಾನೆ, ಹೋರಾಡಲಿಕ್ಕೆ ಕರೆಯುತ್ತಿದ್ದಾನೆ ಹಿಂಜರಿಯಬೇಡಿರೆಂದು ಹೇಳುತ್ತಿದ್ದಾನೆ. ನಿಮ್ಮ ಸಂಧ್ಯೆ. ನಿಮ್ಮ ಜಪ, ನಿಮ್ಮ ಪೂಜೆ, ನಿಮ್ಮ ದೇವರು ಎಲ್ಲವೂ ಗಂಡಾಂತರದಲ್ಲಿವೆಯೆಂದು ಎಚ್ಚರಿಸುತ್ತಿದ್ದಾನೆ. ಆದುದರಿಂದ ಗೀತೆಯ ಅಭ್ಯಾಸ ಅವಶ್ಯ. ಗೀತಾ ಸಂದೇಶ ನವಚೈತನ್ಯವನ್ನು ನೀಡುವದರಲ್ಲಿ ಸಂದೇಹವಿಲ್ಲ.

ಗೀತೆಯು ಸರಳವಾದ ಅನುಷ್ಟುಪ್ ಶ್ಲೋಕ ರೂಪದಲ್ಲಿದ್ದರೂ ಅದರ ತಾತ್ಪರ್ಯದ ವಿಷಯದಲ್ಲಿ ತೀವ್ರ ಭಿನ್ನಾಭಿಪ್ರಾಯ ತೋರಿಬರುತ್ತದೆ. ಈ ಜಗತ್ತನ್ನು ಬಿಟ್ಟು ಸನ್ಯಾಸಿಯಾಗುವದೇ ಪರಮಧರ್ಮವೆಂದು ಗೀತೆಯು ಸಾರುತ್ತದೆಂದು ಕೆಲವರು ಹೇಳಿದರೆ, ಇದು ಸರಿಯಲ್ಲ ನಮ್ಮ ಕರ್ತವ್ಯವನ್ನು ನಾವು ಮಾಡಿ ಮನಸ್ಸನ್ನು ಗೆದ್ದು ಎಲ್ಲವನ್ನೂ ಮಾಧವನಿಗೆ ಒಪ್ಪಿಸುವದೇ ಗೀತೆಯ ಸಂದೇಶವೆಂದು ಮತ್ತೆ ಕೆಲವರು ಹೇಳುತ್ತಾರೆ. ಗೀತೆಯಲ್ಲಿ ದ್ವೈತವೇ ಅದ್ವೈತವೇ ವಿಶಿಷ್ಟಾದ್ವೈತವೇ ಎಂಬ ಪ್ರಶ್ನೆ ಉದ್ಭವಿಸಿದಾಗ ಗೀತೆ ಇದನ್ನು ಹೇಳಲು ಹೊರಟಿಲ್ಲ. ಗೀತೆಯು ಕರ್ತವ್ಯ ವಿಮುಖನಾದ ಅರ್ಜುನನಿಗೆ ಕರ್ತವ್ಯ ಮಾಡಲಿಕ್ಕೆ ಹೇಳುತ್ತದೆ. ಅದು ಮೋಕ್ಷಶಾಸ್ತ್ರವಲ್ಲ. ಅದು ಜೀವನ ಶಾಸ್ತ್ರವೆಂದು ಮತ್ತೆ ಕೆಲವರು ಹೇಳುತ್ತಾರೆ.

ಏನೇ ಇದ್ದರೂ ಇಷ್ಟು ನಿಶ್ಚಿತ! ಅರ್ಜುನನು ಕರ್ತವ್ಯದ ಪ್ರಶ್ನೆ ಎತ್ತಿದ್ದಾನೆ. ಯುದ್ಧವು ಕರ್ತವ್ಯವೇ? ಹಿಂಸೆ ರಕ್ತಪಾತಗಳಿಂದ ಕೂಡಿದ ಯುದ್ಧವು ಕರ್ತವ್ಯ

ಹೇಗೆ ? ಮೇಲಾಗಿ ಗುರು-ಹಿರಿಯರನ್ನು ಬಂಧು-ಬಾಂಧವರನ್ನು ಕೊಲ್ಲುವದು ಕರ್ತವ್ಯ ಹೇಗೆ ? ಎಂದು ಪ್ರಶ್ನೆ ಕೇಳಿದಾಗ ಇದು ಜೀವನದಷ್ಟೇ ವ್ಯಾಪಕವಾದ ಪ್ರಶ್ನೆಯಾಯಿತು! ಈ ಪ್ರಶ್ನೆಯನ್ನು ಬಿಡಿಸಬೇಕಾದರೆ ಜೀವನದ ಗೂಢ ಪ್ರಶ್ನೆ ಯನ್ನೇ ಬಿಡಿಸಬೇಕಾಗುತ್ತದೆ. ಆಗ ಜೀವನದಲ್ಲಿಯ ನಿಜ ಮತ್ತು ನಿತ್ಯವಾದ ತತ್ವ ಗಳನ್ನು ಕಂಡು ಅವುಗಳ ಆಧಾರದ ಮೇಲೆ ಈ ಜೀವನದ ಪ್ರಶ್ನೆಯನ್ನು ಬಿಡಿಸ ಬೇಕಾಗುತ್ತದೆ. ಮತಪ್ರವರ್ತಕರು ಇದೇ ಮಾತನ್ನೇ ಎತ್ತಿ ನಿರ್ಣಯಿಸಿದ್ದಾರೆ. ಆದರೆ ಶ್ರೀಕೃಷ್ಣನು ಇಲ್ಲಿ ಯಾವ ಮತವನ್ನು ಹೇಳುತ್ತಾನೆಂಬುದು ಒಮ್ಮೆಲೇ ಹೇಳಲಿಕ್ಕೆ ಬಾರದಿದ್ದರೆ ಕೃಷ್ಣನು ಹೇಳುವ ಮತವನ್ನಂತೂ ತಿಳಕೊಳ್ಳಲಿಕ್ಕೇ ಬೇಕು. **(ಯೇಮೇ ಮತ ನಿತ್ಯ)** ಕೃಷ್ಣನೇ ಹೇಳಿದ್ದರಿಂದ ಅದನ್ನು ನಾವು ಅವನ ಮತವೆಂದು ತಿಳಿದು ನಾವು ಸಾಗಬಹುದು. ಗೀತೆಯ ಅಭ್ಯಾಸದಲ್ಲಿ ಕೃಷ್ಣನ ಮತವು ಎಂತಹದು; ಮತ್ತು ಅದು ಅವನ ಸಂದೇಶಕ್ಕೆ ಹೇಗೆ ತಳಹದಿಯಾಗಿದೆ ಎಂಬುದನ್ನು ನಮ್ಮ ಅಭ್ಯಾಸದ ಗುರಿಯನ್ನಾಗಿ ಇಟ್ಟುಕೊಳ್ಳಬಹುದು.

ಪ್ರಾಚೀನ ಭಾಷ್ಯಕಾರರು ಗೀತೆಯ ತಾತ್ಪರ್ಯ ತೆಗೆಯಲಿಕ್ಕೆ ಯತ್ನಿಸಿದ್ದಾರೆ. ಆಗ ಅವರು ನಿತ್ಯಭೂತವಾದ ಈಶ್ವರ, ಜೀವ ಜಗತ್ತು ಇವೇ ಜೀವನದ ಮೂಲ ತತ್ವಗಳು; ಇವುಗಳ ಪರಸ್ಪರ ಸಂಬಂಧ ನಿರ್ಣಯಿಸದೇ ಜೀವನದ ರಹಸ್ಯವನ್ನು ತಿಳಿಯಲು ಸಾಧ್ಯವಿಲ್ಲ ಎಂದು ಈ ಭಾಷ್ಯಕಾರರು ಇವುಗಳ ಸಂಬಂಧವನ್ನು ಕೃಷ್ಣನ ಮತದಂತೆ ನಿರ್ಣಯಿಸಿ ಅದರ ಮೇಲೆ ಕೃಷ್ಣನ ಸಂದೇಶವಾದ ಜೀವನ ಕರ್ತವ್ಯವನ್ನು ನಿರ್ಣಯಿಸುತ್ತಾರೆ. ಇದು ಎಲ್ಲ ಭಾಷ್ಯಕಾರರ ಪ್ರಾಮಾಣಿಕ-ಪ್ರಯತ್ನವಾಗಿದ್ದರೂ ಪರಿಣಾಮದಲ್ಲಿ ಮಾತ್ರ ನಿರ್ಣಯವು ಅತ್ಯಂತ ಭಿನ್ನವಾಗಿದೆ. ಶಂಕರಾಚಾರ್ಯರು ಚೇತನೊಬ್ಬನೇ ಸತ್ಯ; ಆತನಲ್ಲಿ ಜೀವನು ಜಗತ್ತನ್ನು ಆರೋಪಿಸಿ ಹಗ್ಗದಲ್ಲಿ ಹಾವನ್ನು ಕಂಡಂತೆ ಕಾಣುತ್ತಾನೆಂದು ಹೇಳುತ್ತಾರೆ. ಆ ಅಖಂಡ ಚೈತನ್ಯ ಒಂದೇ ಸತ್ಯ. ಆ ಚೇತನ ನಿರ್ಗುಣ ನಿರಾಕಾರನಾಗಿರುವದರಿಂದ ಸೃಷ್ಟಿಯನ್ನು ಮಾಡುವ ದಿಲ್ಲ. ಸೃಷ್ಟಿಕರ್ತನು ಮಾಯಿಕನೇ. ಮಾಯಿಕನಾದ ಸೃಷ್ಟಿಕರ್ತನು ಮಾಯಾಸೃಷ್ಟಿ ಯನ್ನು ನಿರ್ಮಿಸುತ್ತಾನೆ. ಬ್ರಹ್ಮಜ್ಞಾನದಿಂದ ಜಗತ್ತಿನ ಭ್ರಮೆ ನಾಶವಾಗುತ್ತದೆ. ಅಜ್ಞಾನಕ್ಕಾಗಿ ಕರ್ಮಗಳು; ನಿಜವಾಗಿ ಕರ್ಮಸನ್ಯಾಸವೇ ಯೋಗ್ಯವಾದ ಉಪಾಯ. ಆದರೆ ಅರ್ಜುನನು ಆ ಯೋಗ್ಯತೆಗೆ ಮುಟ್ಟಿಲ್ಲವಾದುದರಿಂದ ಕೃಷ್ಣನು ಅವನಿಗೆ ಕರ್ಮ ಮಾಡಲಿಕ್ಕೆ ಹೇಳಿದ್ದಾನೆ. ಅದರಿಂದ ಅಂತಃಕರಣ ಶುದ್ಧವಾಗಿ ಜ್ಞಾನ ಬಂದ ಮೇಲೆ ಕರ್ಮದ ಅವಶ್ಯಕತೆ ಇಲ್ಲ.

ರಾಮಾನುಜರು— ಶ್ರೀಪತಿಯಾದ ಪರಮಾತ್ಮನು...... ನಿರತಿಶಯವಾದ ಸೌಂದರ್ಯ ಸೌಶೀಲ್ಯ ಮೊದಲಾದ ಗುಣಗಳ ಆವಿಷ್ಕಾರದಿಂದ ಅಕ್ರೂರ ಮೊದಲಾ

ದವರನ್ನು ಪರಮ ಭಾಗವತರನ್ನಾಗಿ ಮಾಡಿ ಅರ್ಜುನನಿಗೆ ಯುದ್ಧಕ್ಕೆ ಹುರಿದುಂಬಿಸುವ ನೆವದಿಂದ ಪರಮಪುರುಷಾರ್ಥವಾದ ಮೋಕ್ಷಕ್ಕೆ ಸಾಧನವಾದ ವೇದಾಂತದಲ್ಲಿ ಹೇಳಿದಂತೆ ತನ್ನ ವಿಷಯಕವಾದ ಜ್ಞಾನ ಕರ್ಮಗಳಿಂದ ಅನುಗ್ರಹೀತವಾದ (ಸಾಧ್ಯವಾದ) ಭಕ್ತಿಯೋಗವನ್ನೇ ನಿರೂಪಿಸಿದನು.

ಶಂಕರಾಚಾರ್ಯರೂ, ರಾಮಾನುಜರೂ ಅರ್ಜುನನನ್ನು ಮುಢನೆಂದು ಭಾವಿಸಿದ್ದಾರೆ. ಆದುದರಿಂದ ಅವನಿಗೆ ಜ್ಞಾನಯೋಗವನ್ನು ಹೇಳುವದನ್ನು ಬಿಟ್ಟು ಕರ್ಮಯೋಗವನ್ನು ಭಗವಂತನು ಉಪದೇಶಿಸಿದನೆಂದು ಅವರ ವಾದ ರಾಮಾನುಜರು ಜ್ಞಾನಯೋಗಿಗಳು ಸಹ ಕರ್ಮಯೋಗವು ಸುಲಭವಾದುದರಿಂದ, ಸುರಕ್ಷಿತವಾದುದರಿಂದ ಅದನ್ನೇ ಆಚರಿಸಬೇಕೆಂದು ಅಭಿಪ್ರಾಯ ಪಡುತ್ತಾರೆ.

ಮಧ್ವಾಚಾರ್ಯರು ಮಾತ್ರ– ಅರ್ಜುನನು ಅಪರೋಕ್ಷಜ್ಞಾನಿಯು, ಅವನಿಗೆ ಕೆಲವೊಂದು ಕಾರಣಗಳಿಂದ ಅಲ್ಪವಾದ ಮೋಹ ಬಂದಿದೆ. ಬಂಧು–ಬಳಗದವರು ಸಾಯುವರೆಂಬ ದುಃಖಕ್ಕೆ ಒಳಗಾಗಿ ಯುದ್ಧವು ಕರ್ತವ್ಯವಾಗಿದ್ದರೂ ಅದು ಅಕರ್ತವ್ಯವೆಂದು ಭಾವಿಸಿ ಯುದ್ಧ ಮಾಡಬಾರದೆಂದು ನಿಶ್ಚಯಿಸಿದನು. ಅವನಿಗೆ ಯುದ್ಧವು ಕ್ಷತ್ರಿಯನಿಗೆ ವಿಹಿತ ಕರ್ಮ. ಸ್ವೋಚಿತ ಕರ್ಮವನ್ನು ಭಕ್ತಿಯಿಂದ ಭಗವದಾರಾಧನವೆಂದು ಮಾಡುವದೇ ಪರಮಧರ್ಮ. ಉಳಿದುದೆಲ್ಲ ಅಧರ್ಮ ಎಂದು ಕೃಷ್ಣನು ಉಪದೇಶ ಮಾಡುತ್ತಾನೆ. ಎಲ್ಲ ಉಪದೇಶಗಳಲ್ಲಿ ಆಚಾರ್ಯರ ಉಪದೇಶವೇ ಗೀತೆಯ ತಾತ್ಪರ್ಯಕ್ಕೆ ಸರಿಯಾಗಿ ಹೊಂದಿಕೆಯಾಗುತ್ತದೆ. ಪಾಶ್ಚಾತ್ಯ-ಪೌರ್ವಾತ್ಯ ಎಲ್ಲ ವ್ಯಾಖ್ಯಾನುಕಾರರೂ ಇದೇ ತಾತ್ಪರ್ಯವನ್ನೇ ಅಂಗೀಕರಿಸಿದ್ದಾರೆ. Arjuna himself is a Vibhuti— he is a man high in the spiritual evolution... a chosen instrument of Divine Narayan—

*Essays on Gita pp-33*

ಶಂಕರಾಚಾರ್ಯರ ಜ್ಞಾನಪೂರ್ವಕ ಸನ್ಯಾಸ ಮಾರ್ಗವನ್ನೂ "ಜಗತ್ತು ಸುಳ್ಳು, ಬ್ರಹ್ಮಸಗುಣ-ನಿರ್ಗುಣನೆಂದು ಎರಡು ತರಹ, ಜೀವಬ್ರಹ್ಮ ಒಂದೇ" ಎಂಬ ವಾದವನ್ನೂ ಗೀತೆಯು ಒಪ್ಪಿಲ್ಲವೆಂದು ಗೀತಾ ತಾತ್ಪರ್ಯಕಾರರೆಲ್ಲರೂ ಮುಕ್ತಕಂಠದಿಂದ ಹೇಳುತ್ತಾರೆ.

ರಾಮಾನುಜಾಚಾರ್ಯರು ಜ್ಞಾನಯೋಗಕ್ಕೆ ಅಪ್ರಾಶಸ್ತ್ಯ ಕೊಟ್ಟು, ಎಲ್ಲರೂ ಕರ್ಮಯೋಗವನ್ನೇ ಆಚರಿಸಬೇಕೆಂಬುದು ಇನ್ನೊಂದು ಅತಿರೇಕ; ಅದನ್ನು ಗೀತೆಯು ಒಪ್ಪಿಲ್ಲವೆಂದು ಎಲ್ಲ ವಿಮರ್ಶಕರೂ ಒಪ್ಪಿದ್ದಾರೆ. ಅವರವರ ಯೋಗ್ಯತೆಗೆ ತಕ್ಕಂತೆ

ಜ್ಞಾನಪ್ರಧಾನವಾದ ಯೋಗವನ್ನಾಗಲೀ ಕರ್ಮಪ್ರಧಾನವಾದ ಯೋಗವನ್ನಾಗಲೀ ಭಕ್ತಿಪ್ರಧಾನವಾದ ಯೋಗವನ್ನಾಗಲೀ ಅವರವರು ಆಚರಿಸಬಹುದು ಯೋಗವು ಜ್ಞಾನ ಭಕ್ತಿ ಕರ್ಮಗಳ ಸಂವಲನವು. ಒಂದೋಂದರಲ್ಲಿ ಒಂದೊಂದು ಅಂಶ ಹೆಚ್ಚಾದುದರಿಂದ ಅದಕ್ಕೆ ಜ್ಞಾನಯೋಗ ಕರ್ಮಯೋಗ ಭಕ್ತಿಯೋಗವೆಂದು ಕರೆಯುತ್ತಾರೆ: ಒಂದೊಂದಕ್ಕೆ ಅಧಿಕಾರಿಗಳು ಬೇರೆ ಬೇರೆ ಇದು ಗೀತೆಯ ಅಭಿಪ್ರಾಯವೆಂದು ಮಧ್ವಾಚಾರ್ಯರು ಹೇಳುತ್ತಾರೆ. ಇದೇ ಪೂರ್ಣಯೋಗವು ಇದನ್ನೇ ಗೀತೆಯು ಉಪದೇಶಿಸುತ್ತದೆಂದು ಅರವಿಂದರು ಹೇಳುತ್ತಾರೆ

ಗೀತಾರಹಸ್ಯಕಾರರ ಮತವು ಅವರ ಅನುಯಾಯಿಗಳಾದ ಜ ಸ ಕರಂದೀಕರ ಅವರಿಗೂ ಸಮ್ಮತವಾಗಿಲ್ಲ. ಅದ್ವೈತ ವಾದವನ್ನು ಪೂರ್ತಿಯಾಗಿ ಇದ್ದಂತೆ ಒಪ್ಪಿ ಅವರ ಮೇಲೆ ಕೊನೆಯವರೆಗೂ—ಅಪರೋಕ್ಷ ಜ್ಞಾನವಾದ ಮೇಲೆ ಸಹ ಕರ್ಮಯೋಗವನ್ನು ನಿಲ್ಲಿಸಲಿಕ್ಕೆ ಬರುವುದಿಲ್ಲ ಜ ಸ ಕರಂದೀಕರರು ಅದಕ್ಕಾಗಿ ಮತದಲ್ಲಿ ಭೇದಾಭೇದವನ್ನು ಒಪ್ಪಬೇಕೆಂದು ಹೇಳುತ್ತಾರೆ. ತಾತ್ಪರ್ಯದಲ್ಲಿ ಅರವಿಂದರೂ ಇದೇ ಅಭಿಪ್ರಾಯ ದವರೇ ಇದ್ದಾರೆ

ಮಧ್ವಾಚಾರ್ಯರು ಗೀತೆಯ ಮೇಲಿಂದಲೇ ಬಂದ ಅಭಿಪ್ರಾಯವನ್ನೇ ತಮ್ಮ ಮತವೆಂದು ಒಪ್ಪಿದ್ದಾರೆ. ಗೀತೆಯ ಮೇಲೆ ತಮ್ಮ ಅಭಿಪ್ರಾಯವನ್ನು ಹೇರಿಲ್ಲವೆಂಬ ಮಾತನ್ನು ಸತ್ಯಧ್ಯಾನತೀರ್ಥರು ಗೀತೆಯ ಮೇಲಿಂದಲೇ ಜಗತ್ತು ಸತ್ಯ, ಪರಮಾತ್ಮನು ಸರ್ವೋತ್ತಮ, ಜೀವನು ಭಿನ್ನನು ಮತ್ತು ತಾರತಮ್ಯೋಪೇತನು ಎಂಬುದನ್ನು ಸೋದಾಹರಣವಾಗಿ ಸಿದ್ಧ ಮಾಡಿದ್ದಾರೆ.

ಕೆಲವರ ಅಭಿಪ್ರಾಯದಂತೆ ಶ್ರೀ ಕೃಷ್ಣನ ಗೀತೆಯಲ್ಲಿ ದ್ವೈತ ಅದ್ವೈತ ವಿಶಿಷ್ಟಾದ್ವೈತ ಮೊದಲಾದ ಯಾವ ಮತಗಳೂ ನಿರ್ದಿಷ್ಟವಾಗಿಲ್ಲ. ಅಲ್ಲಿ ಸಾಂಸಾರಿಕ ಸಮಸ್ಯೆಗಳಿಂದ ಪಾರಾಗುವ ಉಪಾಯಗಳನ್ನು ಮಾತ್ರ ಬೋಧಿಸಿದ್ದಾನೆಂದು ವಾದಿಸುತ್ತಾರೆ. ಆದರೆ ಇವುಗಳಲ್ಲಿ ಯಾವ ಮತವೂ ಅಲ್ಲಿ ಆಪಾತತಃ ನಿರ್ದಿಷ್ಟವಾಗದಿದ್ದರೂ ಕೃಷ್ಣನ ಮತವೊಂದು ಇದೆ. ಅದನ್ನು ಅನುಸರಿಸಿದರೆ ಕೃಷ್ಣನು ದೊರೆಯುತ್ತಾನೆ ಅದನ್ನು ಅನುಸರಿಸಿದವರಿಗೆ ಅಧೋಗತಿಯಾಗುತ್ತದೆಂದು ಕೃಷ್ಣನೇ ಹೇಳುತ್ತಾನೆ ಆ ಕೃಷ್ಣನ ಮತ ಯಾವುದು ಎಂದು ಶೋಧಿಸಿದರೆ– ಹನುಮನ ಮತವೇ ಹರಿಯ ಮತವು ಎಂದು ದಾಸರು ಹೇಳಿದಂತೆ ಕೃಷ್ಣನ ಮತವೇ ಮಧ್ವಾಚಾರ್ಯರ ಮತವೆಂದು ಗೀತಾಸಾರಸಂಗ್ರಹದಿಂದ ಸ್ಪಷ್ಟವಾಗುತ್ತದೆ ವಿಮರ್ಶಕರು ಆಚಾರ್ಯರ ಮತವನ್ನು ಒಪ್ಪದಿದ್ದರೂ ಕೃಷ್ಣನ ಮತವನ್ನು ಒಪ್ಪಿದರೆ ಸಾಕು !!

ಮುಖ್ಯವಾಗಿ ಕೃಷ್ಣನ ಮತವನ್ನು ಸಂಶೋಧಿಸುವದೇ 'ಗೀತಾಲೋಕನ'ದ ಉದ್ದೇಶ; ನಿಷ್ಪಕ್ಷಪಾತದಿಂದ ತುಲನಾತ್ಮಕವಾಗಿ ಎಲ್ಲ ವ್ಯಾಖ್ಯಾನಗಳನ್ನು ವಿಮರ್ಶಿ

ಸಿದರೆ ಅದರ ವಿವೇಚನೆಯ ಫಲವು ಮಧ್ವಾಚಾರ್ಯರ ಮತಕ್ಕೆ ಹೆಚ್ಚು ಹೋಲುತ್ತ ದೆಂಬುದನ್ನು ತೋರಿಸುವದೇ 'ಗೀತಾವಲೋಕನ'ದ ಉದ್ದೇಶವು.

ಒಂದು ಸಿದ್ಧಾಂತವನ್ನು ರಚಿಸುವ ಎಲ್ಲ ಪಾಶ್ಚಾತ್ಯ ಪೌರ್ವಾತ್ಯ ವ್ಯಾಖ್ಯಾನ ಕಾರರ ವಿವೇಚನೆಯನ್ನು ಪ್ರತಿ ಶ್ಲೋಕಕ್ಕೂ ಅವರು ಬರೆದ ಅರ್ಥವನ್ನು ಸಂಗ್ರಹಿಸಿ ವಿಶ್ಲೇಷಿಸಿ ವಿಮರ್ಶಿಸಿ ಅರ್ಥನಿರ್ಣಯ ಮಾಡಿದಾಗ ಅದು ಮಧ್ವಾಚಾರ್ಯರ ಭಾಷ್ಯಕ್ಕೇ ಹೋಲುತ್ತದೆಂಬುದನ್ನು ಸ್ಪಷ್ಟವಾಗಿ ವಿವರಿಸಿದ್ದೇವೆ. ಎಲ್ಲಿ ಆಚಾರ್ಯರ ಭಾಷ್ಯ ತಾತ್ಪರ್ಯಗಳಿಂದ ಅರ್ಥ ಸ್ಪಷ್ಟವಾಗದೇ ನಿರ್ಣಯವು ಸಾಧ್ಯವಾಗುವದಿಲ್ಲ, ಆ ಸ್ಥಳಗಳಲ್ಲಿ ಜಯತೀರ್ಥ, ರಾಘವೇಂದ್ರರ ಸಹಾಯದಿಂದ ಭಾಷ್ಯ ತಾತ್ಪರ್ಯಗಳನ್ನು ವಿಶದೀಕರಿಸಿ ಪ್ರಕೃತ ಶ್ಲೋಕದ ಸುಸಂಗತ ಅರ್ಥವನ್ನು ನಿರ್ಣಯಿಸಲಾಗುತ್ತದೆ.

ಗಾಂಧೀಜಿಯವರು— ಗೀತೆಯು ಹಿಂಸಾತ್ಮಕ ಯುದ್ಧವನ್ನು ಉಪದೇಶಿಸಲಾರದು, ಅದು ಅಹಿಂಸಾತ್ಮಕ ಯುದ್ಧವನ್ನು ಉಪದೇಶಿಸಿದೆ ಎಂದು ಸಿದ್ಧಮಾಡಲಿಕ್ಕೆ ಗೀತೆಯಲ್ಲಿ ನಡೆದ ಮಹಾಭಾರತ ಯುದ್ಧವು ಮಾನಸಿಕ ಯುದ್ಧ; ಅದು ಐತಿಹಾಸಿಕವಲ್ಲವೆಂದು ತಮ್ಮ ಅನಾಸಕ್ತಿ ಯುಗದಲ್ಲಿ ಹೇಳಿದ್ದು ಸತ್ಯವಲ್ಲ. ಮಹಾಭಾರತಕ್ಕೆ ಗೀತೆಗೆ ಅಧ್ಯಾತ್ಮ ಪರವಾದ ಅರ್ಥವನ್ನು ಆಚಾರ್ಯರು ಅಂಗೀಕರಿಸಿದ್ದರೂ ಐತಿಹಾಸಿಕಾರ್ಥ ವನ್ನು ಅವರು ಅಲ್ಲಗಳೆದಿಲ್ಲ ಇಡೀ ಮಹಾಭಾರತ ಯುದ್ಧ ವರ್ಣನೆಯನ್ನು ರೂಪಕ ದಲ್ಲಿ ಹೊಂದಿಸುವದು ಅಸಾಧ್ಯವೂ ಅಹುದು ಅಸ್ವಾಭಾವಿಕವೂ ಅಹುದು ಎಂದು ಎಲ್ಲ ವಿಮರ್ಶಕರೂ ಒಪ್ಪಿಕೊಂಡಿದ್ದಾರೆ ಆಚಾರ್ಯರದೂ ಇದೇ ಅಭಿಪ್ರಾಯವಾಗಿದೆ

ಗೀತೆಯ ಶ್ಲೋಕಗಳ ಮೇಲಿಂದ ತತ್ವಗಳ ವಿಷಯದಲ್ಲಿ ಹೊರಡತಕ್ಕ ಅಭಿ ಪ್ರಾಯವನ್ನು ಇಲ್ಲಿ ನಮೂದಿಸಲಾಗಿದೆ. ಇಲ್ಲಿ ಒಂದು ಮಾತನ್ನು ನೆನಪಿನಲ್ಲಿಡ ಬೇಕು ಮಹಾಭಾರತವೂ ಮಹಾಭಾರತದೊಳಗಿನ ಗೀತಾಗ್ರಂಥವೂ ಭಾಗವತ ಧರ್ಮದ ಮೂಲಗ್ರಂಥವೆನ್ನುವದನ್ನು ಮರೆಯಬಾರದು. ಭಾಗವತಧರ್ಮದಲ್ಲಿ ವಿಷ್ಣು ಸರ್ವೋತ್ತಮನೆಂದು ಪ್ರತಿಪಾದಿತವಾಗಿದೆನ್ನುವದನ್ನು ಟಿಳಕರೇ ಗೀತಾರಹಸ್ಯ ದಲ್ಲಿ ಒಪ್ಪಿದ್ದಾರೆ ವಿಷ್ಣುವು ಸರ್ವೋತ್ತಮನು ಅವನು ಮುಕ್ತರಿಗೆ ಪ್ರಾಪ್ಯನು ಎನ್ನುವದನ್ನು ಶಂಕರಾಚಾರ್ಯರೂ ಒಪ್ಪಿದ್ದಾರೆ. ಶ್ರೀಕೃಷ್ಣನೇ ಹೃಷೀಕೇಶ, ಗೋವಿಂದ, ಎಂದು ಕರೆಯಲ್ಪಟ್ಟಿದ್ದರಿಂದ ಅವನೇ ವಿಷ್ಣುವೆಂದು ಸಿದ್ಧವಾಗುತ್ತದೆ. (घृतिनविदामि शमचविष्णा) ಅವನನ್ನೇ ವಿಷ್ಣುವೆಂದು ಕರೆದಿದ್ದಾರೆ. ಅವನೇ ಪರ ಬ್ರಹ್ಮನು (परब्रह्म परधाम पवित्र परम भवान्). ಅವನೇ ನಿರ್ಗುಣನು ಅವನೇ ಗುಣಭೋಕ್ತೃ (ಈ ನಿರ್ಗುಣ ಶಬ್ದಕ್ಕೆ ಶಂಕರಾಚಾರ್ಯರೇ ಸತ್ವರಜ ತಮೋಗುಣ ಗಳಿಲ್ಲದವನೆಂದು ವ್ಯಾಖ್ಯಾನ ಮಾಡಿದ್ದಾರೆ.) ಅವನೇ ಕ್ಷರಾಕ್ಷರರಿಗೆ ಅತೀತನಾದ

ಪುರುಷೋತ್ತಮನು. ಇವನು ಪುರುಷೋತ್ತಮು ಎಂಬ ಜ್ಞಾನವು ಯಾವ ಮೋಹವೂ ಆವರಿಸದಿದ್ದ ಜ್ಞಾನವು ಈ ಜ್ಞಾನದಿಂದಲೇ ಉಪಾಸಕನು ಕೃತ ಕೃತ್ಯನಾಗುತ್ತಾನೆ

ಗೀತೆಯಲ್ಲಿ ಸಗುಣನಿರ್ಗುಣಯೆಂಬ ಭೇದವಿಲ್ಲಂದೂ ಆಧುನಿಕ ವಿಮರ್ಶಕರು ಒಪ್ಪುತ್ತಾರೆ ನಿರ್ಗುಣದಕ್ಕಿಂತ ಸಗುಣ ಬ್ರಹ್ಮನೇ ಶ್ರೇಷ್ಠನೆಂದು ಆರ್ ಡಿ ರಾನಡೆ ಯವರು ತಮ್ಮ Philosophy of Gita ದಲ್ಲಿ ಹೇಳಿದ್ದಾರೆ It is not an exclusive impersonality of the Absolute that is the highest secret ಈ ಕೃಷ್ಣನನ್ನು ಹೊಂದುವದರಿಂದ ಜನ್ಮರಹಿತವಾದ ಮುಕ್ತಿಯನ್ನು ಹೊಂದುತ್ತಾರೆ. (मामुपेत्यन् कौनेय पुनर्जन्म नविद्यते) ಕ್ಷರಾಕ್ಷರಗಳಿಗೆ ಅತೀತನಾದ ಪುರುಷೋತ್ತಮನು ತಾನೇ ಎಂದು ಲೋಕವೇದಗಳಲ್ಲಿ ಪ್ರಸಿದ್ಧನೆಂದೂ ಸಾರಿ, ಆಮೇಲೆ ಪುರು-ಷೋತ್ತಮನೆಂದು ಯಥಾರ್ಥವಾಗಿ ಯಾವನು ತಿಳಿಯುತ್ತಾನೋ ಅವನೇ ಎಲ್ಲವನ್ನೂ ತಿಳಿದವನೆಂದು ಹೇಳಿದ್ದರಿಂದ ಅವನೇ ಕೃತಕೃತ್ಯನೆಂದು ಸಿದ್ಧಮಾಡಿದ್ದಾರೆ ಎಂದ ಮೇಲೆ ಗುಣ ಪರಿಪೂರ್ಣನಾದವನೇ ಪರಬ್ರಹ್ಮನೆಂದು ಗೀತೆಗೆ ಅಭಿಪ್ರೇತವೆಂದು ಸಿದ್ಧವಾಗುತ್ತದೆ

ಇಂಥ ಗುಣ ಪರಿಪೂರ್ಣನಾದ ಪರಬ್ರಹ್ಮನೇ ಈ ಜಗತ್ತನ್ನು ಸೃಷ್ಟಿಸಿದ್ದರಿಂದ ಈ ಜಗತ್ತು ಸತ್ಯವೆಂದು ಗೀತೆಯ ಅಭಿಪ್ರಾಯ. ಪ್ರಕೃತಿ ಮೊದಲಾದ ಜಗತ್ತು ಸತ್ಯವೆಂಬ ವಿಷಯದಲ್ಲಿ ಸಂಶಯವೇ ಇಲ್ಲ. भूमिरापोऽनलोवायु ಎಂದು ಅಷ್ಟವಿಧ ಪ್ರಕೃತಿಯನ್ನು ಹೇಳಿ ಅದು ಅಪಾರವಾದ ಪ್ರಕೃತಿ, ಚಿತ್ ಪ್ರಕೃತಿಯು ತನ್ನ ಪ್ರಕೃತಿಯೆಂದು ಹೇಳಿದ್ದಾನೆ ಆಮೇಲೆ मय ऽध्यक्षेण प्रकृति· सूयते सचराचर ಎಂದು ತಿಳಿಸಿದ್ದರಿಂದ ಜಗತ್ತು ಸತ್ಯವೆಂದು ಸಿದ್ಧಿಸುತ್ತದೆ ಪ್ರಯತ್ನಪೂರ್ವಕವಾಗಿ ವಿವಿಧ ಪ್ರಕಾರವಾಗಿ ಸೃಷ್ಟಿ ಮಾಡುತ್ತೇನೆನು (।वसृजामि) ಭಗವಂತನು ಹೇಳಿದ್ದರಿಂದ ಈ ಜಗತ್ತು ಸತ್ಯವಿರಬೇಕು ಅರವಿಂದ ಘೋಷರು ರಾಧಾಕೃಷ್ಣನ್ನರು ಅನೇಕ ಜನ ಪಾಶ್ಚಾತ್ಯ ವಿಮರ್ಶಕರು ಈ ವಿಷಯದಲ್ಲಿ ತಮ್ಮ ಸಮ್ಮತಿಯನ್ನು ನೀಡಿದ್ದಾರೆ. इहैकस्थ जगत्कृत्स्न ಎಂದು ಪರಮಾತ್ಮನ ವಿಶ್ವರೂಪದಲ್ಲಿ ಅರ್ಜುನನು ಜಗತ್ತನ್ನು ನೋಡುತ್ತಾನೆಂಬುದು ಜಗತ್ತಿನ ಸತ್ಯತ್ವಕ್ಕೆ ಸಾಧಕವಾಗಿದೆ ಜಗತ್ತಿಗೆ ಅಶ್ವತ್ಥವೆಂದು ಕರೆದುದರಿಂದ ಅದು ಯಾವಾಗಲೂ ಬದಲಾಗುತ್ತಿದ್ದರೂ ಪ್ರವಾಹ ರೂಪದಿಂದ ನಿತ್ಯವೆಂದೂ ಭಗವಂತನು ತೋರಿಸುತ್ತಾನೆ ಜಗತ್ತು ಅಸತ್ಯವೆಂದು ಅಸುರರು ಹೇಳುತ್ತಾರೆಂದು ಭಗವಂತನು ಹೇಳಿದ್ದಾನೆ.

ಇನ್ನು माया ದ ವಿಷಯದಲ್ಲಿ ಗೀತೆಯಲ್ಲಿ ಈ ಶಬ್ದವು 'ಕಲ್ಪಿತ' 'ಅಸತ್ಯ' ವೆಂಬ ಅರ್ಥದಲ್ಲಿ ಇಲ್ಲವೆಂದು ಎಲ್ಲರೂ ಏಕಕಂಠದಿಂದ ಹೇಳುತ್ತಾರ. माया ಎಂದರ ಪರಮಾತ್ಮನ ಸಂಕಲ್ಪ ಅಥವಾ ಇಚ್ಛೆ ಎಂದು ಎಲ್ಲರೂ ಇದರ ಅರ್ಥವನ್ನು ಹಚ್ಚಿದ್ದರಿಂದ ಶಂಕರಾಚಾರ್ಯರ ಅರ್ಥದಲ್ಲಿ ಮಾಯಿಕವು ಜಗತ್ತು ಎಂದು ಪ್ರಸ್ತಕವೇ ಆಗಿಲ್ಲ

ದಾಸಗುಪ್ತರು ಹೇಳುತ್ತಾರೆ— "The Geeta does not assert any where that Brahman is the only reality and all else that appears is take and un real". (ಗೀತೆಯು ಎಲ್ಲಿಯೂ ಬ್ರಹ್ಮ ಒಂದೇ ಸತ್ಯವೆಂದೂ ಉಳಿದುದು ತೋರಿದ್ದೆಲ್ಲವೂ ಅಸತ್ಯವೆಂದೂ ಹೇಳಿಲ್ಲ )

ಲಾಲಜಿ ತಮ್ಮ ಗ್ರಂಥದ ಉಪೋದ್ಘಾತದಲ್ಲಿ—Far from calling the world an illusion or delusion or a prison house, Shri Krishna has boldly declared that it is filled with God. ಜಗತ್ತು ಮಾಯೆ ಅಥವಾ ಆರೋಪಿತವೆಂದು ಕರೆದಿಲ್ಲ ಇಷ್ಟೇ ಅಲ್ಲ; ಅದು ಈಶಾ ವಾಸ್ಯವೆಂದು ಹೇಳಿದ್ದಾರೆಂದು ಸಾರಿದ್ದಾರೆ. ಅವರೇ ಮುಂದೆ ಹೇಳಿದ್ದಾರೆ— "There can be no hope of reaching God if the world and its requirements are regarded as unreal". "ಜಗತ್ತು ಮತ್ತು ಅದಕ್ಕೆ ಬೇಕಾದ ವಸ್ತುಗಳು ಸುಳ್ಳೆಂದು ಭಾವಿಸಿದರೆ ದೇವರನ್ನು ಮುಟ್ಟುವ ಆಶೆಯೇ ಇಲ್ಲ. "The world for the Geeta is real a creation of the Lord" (Arabindo).

ಇನ್ನು ಜೀವನು ಯಾರು ? ಗೀತೆಯಲ್ಲಿ ಇದಕ್ಕೆ ದೊಡ್ಡ ಆಧಾರವೆಂದರೆ ममैवांशो जीवलोके जीव भूतः सनातनः ಎಂದು ಹೇಳಿದ್ದರಿಂದ ಬ್ರಹ್ಮನ ಸಾಕ್ಷಾತ್ ಅಂಶಗಳೇ ಜೀವರು ಎಂಬ ವಿಚಾರಕ್ಕೆ ಅವಕಾಶ ಕೊಟ್ಟಿದೆ. ಆದುದರಿಂದ ಜೀವರು ಬ್ರಹ್ಮಸ್ವರೂಪರೇ ಎಂದು ಅವರ ವಾದ, ಎಂದರೆ ಬ್ರಹ್ಮನೇ ಮಧ್ಯದಲ್ಲಿ ಕುಳಿತುಕೊಂಡು ತನ್ನ ಸ್ವರೂಪಭೂತವಾದ ಜೀವಗಳಿಂದ ಹೊಗಳಿಸಿಕೊಳ್ಳುತ್ತ स्तूयमानो गणसंघैः ಎಂಬಂತೆ ಸುಳ್ಳು ಸರ್ವೋತ್ತಮತ್ವದಿಂದ ವಿಷ್ಣುವು ವಿರಾಜಮಾನನಾಗಿದ್ದಾನೆಂದು ಅರ್ಥವಾಗುವದು. ಆದರೆ ಗೀತೆಯಲ್ಲಿ ಈ ಅಭೇದವನ್ನು ಬೋಧಿಸುವ ಒಂದಾದರೂ ವಾಕ್ಯವು ಸಿಗುವದಿಲ್ಲ. ಅದಕ್ಕೆ ವಿಪರೀತವಾಗಿ ಜೀವನು ಪರಬ್ರಹ್ಮನಿಂದ ಭಿನ್ನನೇ ಎಂದು ಉಕ್ತಿಗಳು ದೊರೆಯುತ್ತವೆ.

೧) परस्तस्मात्तु भावोऽन्योऽव्यक्तोऽव्यक्तात् सनातनः । "ಅವ್ಯಕ್ತನಾಮಕ ಭಗವಂತನು ಹುಟ್ಟುಸಾವುಳ್ಳ ಸಮಸ್ತ ಪ್ರಾಣಿಗಳಕ್ಕಿಂತ ಭಿನ್ನನು" ಎಂದು ಭಗವಂತನು ಹೇಳಿದ್ದಾನೆ. ಈ ಅವ್ಯಕ್ತನೇ ಅಕ್ಷರನು ಅವನೇ ಪರಮಗತಿಯೆಂದು ಹೇಳಿದ್ದರಿಂದ ಅವನೇ ಪರಬ್ರಹ್ಮನಾದುದರಿಂದ ಬ್ರಹ್ಮನಿಂದ ಸಾಮಾನ್ಯ ಜೀವನು ಭಿನ್ನನು ಎಂದು ಗೀತೆ ಹೇಳುತ್ತದೆ.

೨) द्वाविमौ पुरुषौ लोके ಎಂಬಲ್ಲಿ ಸ್ಪಷ್ಟವಾದ ಪರಜೀವರಕ್ಕಿಂತ ಆತನು ಉತ್ತಮನೆಂದು ಭಗವಂತನೇ ಹೇಳಿದ್ದಾನೆ.

೩) ಜೀವರೆಲ್ಲ ನಿತ್ಯರು (ಅವರ ದೇಹ ಮಾತ್ರ ನಾಶವಾಗುತ್ತದೆ) ಎಂಬ ಅಭಿಪ್ರಾಯವನ್ನು ಭಗವಂತನು ಎತ್ತಿ ಹಿಡಿದಿದ್ದಾನೆ.

೪) ಆದರೆ ಅವ್ಯಯದ ವಿನಾಶವನ್ನು ಯಾರೂ ಮಾಡಲಾರರು ಎಂದು ಭಗವಂತನು ಹೇಳುತ್ತಾನೆ.

೫) ಇದರಿಂದ ಜೀವರ ದೇಹಕ್ಕೆ ನಾಶವದೆ ಸ್ವರೂಪಕ್ಕೆ ನಾಶವಿಲ್ಲ, ಪರಬ್ರಹ್ಮನಿಗೆ ಯಾವ ನಾಶವೂ ಇಲ್ಲ. ಆದುದರಿಂದ ಅನ್ಯವಾದ ಜೀವನು ಅನ್ಯಾತ್ಮನಾಗಿ ಪರಿಣಮಿಸುವದು ಶಕ್ಯವಿಲ್ಲ.

೬) ಜಗತ್ತಿನಲ್ಲಿರುವ ಮೂರುಗಳ ಭಾವದಿಂದ ಮೂಢರಾದ ಜೀವರು ತ್ರಿಗುಣಗಳಿಂದ ಭಿನ್ನವಾದ ತ್ರಿಗುಣ ವಿಕಾರಗಳಿಂದರಹಿತವಾದ ದೇಹವುಳ್ಳ ನನ್ನನ್ನು ಬೇರೆಯೆಂದು ತಿಳಿಯುವದಿಲ್ಲ. ಆದುದರಿಂದ ಅರವಿಂದರು ಸ್ಪಷ್ಟವಾಗಿ ಹೇಳಿದ್ದಾರೆ :—"It appears indeed to admit an eternal plurality of souls, subject to and sustained by their eternal unity. for cosmos is forever, and manifestaion goes on in unending cycles, nor does it affirm any where or use any expression that would indicate an absolute disappearance, Laya, the annullation of the individual soul in the infinite. (Essays on Gita pp. 391).

೭) ಜೀವನು ಕೊನೆಯವರೆಗೂ ಜೀವನಾಗಿಯೇ ಉಳಿಯುವನು. ಬ್ರಹ್ಮನು ಬ್ರಹ್ಮನಾಗಿಯೇ ಇರುವನು. ಆದುದರಿಂದ ಇವರು ಬೇರೆ ಬೇರೆ ಅರವಿಂದರು ಮಾತ್ರ ಜೀವ ಬ್ರಹ್ಮರು ಸ್ವರೂಪದಲ್ಲಿ ಒಂದಾದರೂ ಮುಕ್ತಿಯಲ್ಲಿ ಬೇರೆ ಬೇರೆಯಾಗಿಯೇ ಉಳಿಯುವರೆಂದು ಹೇಳುತ್ತಾರೆ. One side of the highest perfection and status of our liberated consciousness must there be to assume the true place of the Jeeva in a supreme **Spiritual Nature,** there to dwell in the glory of the supreme Purusha and there to have the joy of eternal spiritual oneness.

೮) मय्यर्पितमनोबुद्धिः मामेवैष्यसशयम् । "ನನ್ನಲ್ಲಿ ಮನಸ್ಸನ್ನಿಟ್ಟರೆ ನೀನು ನನ್ನನ್ನೇ ಹೊಂದುವಿ" ಎಂದು ಹೇಳಿದ್ದಾನೆ, ನನ್ನಲ್ಲಿ ಲಯ ಹೊಂದುವಿಯೆಂದು ಹೇಳಿಲ್ಲ. ಅದಕ್ಕೂ ಸ್ಪಷ್ಟವಾಗಿ विशन्ति यद् यतयः ಯಾರಲ್ಲಿ ಯತಿಗಳು ಪ್ರವೇಶಿಸುತ್ತಾರೆ.

೯) मम साधर्म्यमागताः ನನ್ನನ್ನು ಹೋಲುತ್ತಾರೆ. ब्रह्मसम्पद्यते तदा ಬ್ರಹ್ಮನನ್ನು ಹೊಂದುತ್ತಾನೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ "ಸಂಪತ್ತಿಯೆಂದರೆ ಆಪತ್ತಿಯಲ್ಲ (ಆ ಸ್ವರೂಪವನ್ನು ಹೊಂದುವದಿಲ್ಲ) ಎಂದು ಶಂಕರಾಚಾರ್ಯರೇ ಬರೆದಿದ್ದಾರೆ.

೧೦) ब्रह्मभूयाय कल्पते ಬ್ರಹ್ಮನಲ್ಲಿ ಉತ್ತಮ ಸ್ಥಿತಿಯನ್ನು ಹೊಂದಲಿಕ್ಕೆ ಯೋಗ್ಯನಾಗುವನು.

೧೧) ಅರ್ಜುನನು ವಿಶ್ವರೂಪದಲ್ಲಿ ಪರಮಾತ್ಮನ ಮಹಿಮೆಯನ್ನು ಕಂಡ ಮೇಲೂ (ಅಧಿಷ್ಠಾನದ ಜ್ಞಾನವಾದ ಮೇಲೂ) ಆ ವಿಶ್ವರೂಪದಲ್ಲಿ ಆರೋಪಿತವಾದ ಜೀವರುಗಳು ಜಗತ್ತು ಮತ್ತು ಅವುಗಳಿಗೆ ಪರಸ್ಪರ ಭೇದವನ್ನೂ ಸ್ಪಷ್ಟವಾಗಿ ತಿಳಿಯುತ್ತಾನೆ. ಆದುದರಿಂದ ಅವು ಆರೋಪಿತವಲ್ಲ

The soul too which takes on this or that form of Nature is no less eternal than she (विद्धि अनादि उभावपि) This is patent that it is only an appearance It is a subordinate act or state of conscious ness, it is self oblivious identification with the modes of nature in the limited workings of this lower motivity and with this self wrapped ego-bounded knot of action of the mind life and body. (Essays on Gita pp 379)

೧೨) तान्यहं वेद सर्वाणि नत्व वेत्थ परंतप ಸರ್ವಜ್ಞತ್ವ ಅಲ್ಪಜ್ಞತ್ವ ವೊದಲಾದ ವಿರುದ್ಧ ಧರ್ಮಗಳಿರುವದರಿಂದ ಜೀವಬ್ರಹ್ಮರಿಗೆ ಭೇದವಿದೆ. ಇದನ್ನು ಶಂಕರಾಚಾರ್ಯರೂ ಒಪ್ಪುತ್ತಾರೆ ಆದರೆ ಆ ಧರ್ಮಗಳು ಮಿಥ್ಯಾ ಎಂದು ಹೇಳುತ್ತಾರೆ. ಆದರೆ ಗೀತೆಯಲ್ಲಿ ಬ್ರಹ್ಮಸಾಕ್ಷಾತ್ಕಾರವಾದ ಮೇಲೆ ಅರ್ಜುನನು ಭಗವಂತನಲ್ಲಿ ಆ ಧರ್ಮಗಳನ್ನು ಕಾಣುತ್ತಾನೆ. (महिमान तवेद) ಆದುದರಿಂದ ಸತ್ಯವಾದ ವಿರುದ್ಧ ಧರ್ಮಗಳಿದ್ದಲ್ಲಿ ಭೇದವು ಇರಬೇಕು.

ಇಷ್ಟು ವಾಕ್ಯಗಳು ಸ್ಪಷ್ಟವಾಗಿ ಜೀವನು ಪರಮಾತ್ಮನಿಂದ ಸ್ವರೂಪತಃ ಭಿನ್ನನೆಂದು ಸಾರುತ್ತಿರುವಾಗ ममैवांशो ಒಂದು ಶ್ಲೋಕವನ್ನು ಇದಕ್ಕೆ ಅನುಗುಣವಾಗಿ ಪರಮಾತ್ಮನಿಂದ ಭಿನ್ನಾಂಶರೇ ಎಂದು ಹೇಳಬೇಕು ಪರಮಾತ್ಮನ ಅಂಶರೇ ಜೀವರೆಂದು ಹೇಳಲಿಕ್ಕೆ ಶಂಕರರಿಗೂ ಬರುವದಿಲ್ಲ ಯಾಕೆಂದರೆ ಶಂಕರರ ಮತದಲ್ಲಿ ಪರಬ್ರಹ್ಮನಲ್ಲಿ ಅಂಶಗಳೇ ಇಲ್ಲ. ಅವನು ನಿರಂಶನು.

ಇಷ್ಟಾಗಿಯೂ ಬ್ರಹ್ಮನಿಗೆ ಅಜ್ಞಾನವು ಆವರಕವಾಗಿ ಅವನಿಗೆ ನಾನಾ ಜೀವಭಾವವು ಬರುವದೆಂದು ಹೇಳಬೇಕು. ಬ್ರಹ್ಮನಿಗೆ ಅಜ್ಞಾನವನ್ನು ಹೊಂದಿಸುವದು ದುರ್ಘಟವಾದುದೆಂದು ಶಂಕರಾಚಾರ್ಯರೇ ಒಪ್ಪಿಕೊಂಡಿದ್ದಾರೆ. ಆದರೆ ಬಾಬೂ ಅರವಿಂದ ಘೋಷರು ಈ ನಮಾಜನ್ನು ಮಾಡಲಿಕ್ಕೆ ಹೋಗಿ ಮಸೀದೆಯನ್ನೇ ಕೊರಳಿಗೆ ಹಾಕಿಕೊಂಡಿದ್ದಾರೆ. ಅವರು Life Divine ದಲ್ಲಿ ಅಜ್ಞಾನದ ಪ್ರಕರಣಗಳಲ್ಲಿ ಅಜ್ಞಾನವನ್ನು ಹೊಂದಿಸಲಿಕ್ಕೆ ಹೋಗಿ ಯಾವ ಸ್ಥಿತಿಯನ್ನು ಹೊಂದಿದ್ದಾರೆ ನೋಡಬೇಕು.

ಅಜ್ಞಾನದ ಮೇಲೆ ಹಾಗೂ ಹೀಗೂ ನಾಲ್ಕೈದು ಪ್ರಕರಣಗಳನ್ನು ಅರಬಿಂದೋ ರವರು ತಮ್ಮ Life Divine ದಲ್ಲಿ ಬರೆದಿದ್ದರೂ ಅವರ ಅಜ್ಞಾನದ ಮತವನ್ನು ತಿಳಿಯಲಿಕ್ಕೆ Origin of Ignorance, Tapas and Ignorance, Origin of falsehood and evil ಇವಿಷ್ಟು ಓದಿದರೆ ಸಾಕು ಇವೆಲ್ಲಕ್ಕೂ ಹಿಂದಿನ ಪ್ರಕರಣವಾದ Boundries of the Ignoranceದ ಕೊನೆಗೆ– "ನಾವು ನಮ್ಮ ನಿತ್ಯವಾದ ಅತಿಪ್ರಬೋಧ ಅವಪ್ರಬೋಧ ಆತ್ಮದ ಅರಿವನ್ನು ಕಳಕೊಂಡಿದ್ದೇವೆ ವಿಶ್ವಾತ್ಮನ ಅರಿವಂತೂ ನಮಗೆ ಇಲ್ಲವೇ ಇಲ್ಲ. ಆದರೆ ನಮ್ಮ ಅಜ್ಞಾನದಲ್ಲಿ ಒಂದು ಪ್ರಚೋದನೆ ಇರುವದರಿಂದ ನಾವು ಬದುಕಿದ್ದೇವೆ. ಆ ಪ್ರಚೋದನೆಯಿಂದ ಒದ್ದಾಡುತ್ತ ಆತ್ಮ ಸಂಪತ್ತು, ಆತ್ಮಜ್ಞಾನದ ಕಡೆಗೆ ಆಡೆತಡೆಗಳನ್ನು ಲೆಕ್ಕಿಸದೆ ಧಾವಿಸುತ್ತೇವೆ. ವಿಭಕ್ತ ಅರುವಿನಿಂದ ಪೂರ್ಣ ಚೈತನ್ಯ, ಪೂರ್ಣ ಜ್ಞಾನದ ಕಡೆಗೆ ಧಾವಿಸುತ್ತೇವೆ

ಆಮೇಲೆ origin of ignorance ದಲ್ಲಿ "ಪೂರ್ಣ ಏಕಮೇವಾದ್ವಿತೀಯವಾದ ಬ್ರಹ್ಮನಲ್ಲಿ ಅಜ್ಞಾನಕ್ಕೆ ಅವಕಾಶವೇ ಇಲ್ಲ ಜೀವನು ಬ್ರಹ್ಮನಿಂದ ಬೇರೆ ಅಲ್ಲ ದಿದ್ದರೂ ಜೀವನಿಗೆ ಈ ಬ್ರಹ್ಮನ ಅರಿವಿಲ್ಲ ಮತ್ತು ಯಾವದರಿಂದ ಈ ವಿರೋಧ ಪ್ರಾರಂಭಿಸುತ್ತದೆ ಅದರ ಅರಿವಿಲ್ಲ ... ನಾವು ಸ್ವರೂಪದಿಂದ ಒಂದು ಇದ್ದರೂ ವ್ಯವಹಾರದಲ್ಲಿ ನಾನಾಜನರಾಗಿದ್ದೇವೆ ....ಅಜ್ಞಾನವು ಹೇಗೆ ಬಂದಿತೆಂಬುದು ನಮಗೆ ತಿಳಿಯದ ಸಂಗತಿಯೆಂಬ ಅಜ್ಞೇಯವಾದವು ಒಂದು ಸೋಲು (ತಿಳಿಯುವ ಅಸಮರ್ಥತೆಯೆ !!)....ಅಜ್ಞಾನವು ಒಂದು ಸಂಗತಿಯು ಜಲವತ್ತರ ಕೃತಿಯು ಅದೊಂದು ಚಿತ್‌ಶಕ್ತಿಯು, ಸೃಜನಶೀಲವಾದುದು. ಇದನ್ನು ನಾವು ಅಭ್ಯಸಿಸಬೇಕು. .. ಬ್ರಹ್ಮನಲ್ಲಿ ಸೃಜನಶಕ್ತಿ ನಿಷ್ಕ್ರಿಯ ಶಕ್ತಿ ಎಂದು ಎರಡು ಶಕ್ತಿಗಳು ಇವೆರಡೂ ಬೇರೆ ಬೇರೆ ಅಲ್ಲ. ಈ ಪ್ರಭೇದವು ಒಬ್ಬ ಚೇತನನವು ಒಂದು ಸ್ಥಿತಿಯಿಂದ ಇನ್ನೊಂದು ಸ್ಥಿತಿಗೆ ನಡೆದಾಗ ತೋರಿ ಬರುತ್ತದೆ ಜೀವನು ಸೃಜನ ಶಕ್ತಿಯ ಕಡೆಗೆ ನೋಡಿದಾಗ ಅವನಲ್ಲಿ ಪ್ರವೃತ್ತಿಯೂ ಅಂತರ್ಭಾವನೆಯಲ್ಲಿ ಕಂಡಾಗ ನಿವೃತ್ತಿಯೂ ತೋರಿ ಬರುತ್ತದೆ ಈ ಕೃತಿಯಲ್ಲಿ ಜೀವನು ಅಜ್ಞನಾಗುತ್ತಾನೆ ತನ್ನ ನಿಷ್ಕ್ರಿಯತೆಯನ್ನು ಮರೆಯುತ್ತಾನೆ ನಿಷ್ಕ್ರಿಯತೆಯೇ ಅದರ ಮೂಲ ಸ್ವರೂಪವು ಆಮೇಲೆ ನಿಷ್ಕ್ರಿಯತೆಯಲ್ಲಿದ್ದಾಗ ತನ್ನ ಕ್ರಿಯಾ ಶೀಲತೆಯನ್ನು ಮರೆಯುತ್ತಾನೆ ಈ ಅಜ್ಞಾನದಲ್ಲಿ ನಾವು ಚಿತ್ತಿನ ಒಂದು ಭಾಗದೊಡನೆ ತಾದತ್ಮ್ಯ ಹೊಂದುತ್ತೇವೆ. ಆ ಚಿತ್ತವು ಮಾನಸಿಕ ಅಥವಾ ಆತ್ಮಿಕ ಮಾನಸಿಕ ವಿರಬಹುದು ಆ ಜೀವವು ತನ್ನ ಗತಿಯಲ್ಲಿತನ್ನ ಸ್ಥಿತಿಯನ್ನೇ ಅದು ತಿಳಿಯುವದಿಲ್ಲ (ಅಜ್ಞಾನ). ಪೂರ್ಣ ನಿಷ್ಕ್ರಿಯವಾಗಿ ಅದು ನಿದ್ರೆ ಅಥವಾ ಮೂರ್ಛೆ ಹೋಗುತ್ತದೆ. ಅಥವಾ ಆತ್ಮಿಕ ಶಾಂತಿಯಲ್ಲಿ ಮೋಚನೆ ಹೊಂದುತ್ತದೆ. ಹೀಗೆ ಅದು ಭಾಗಶಃ ಅಜ್ಞಾನದಿಂದ ನಿವೃತ್ತಿಯನ್ನು ಹೊಂದಿದರೂ ಪ್ರಗತಿಶೀಲ ತತ್ವದ ಪ್ರಕಾಶಮಾನ ಅಜ್ಞಾನವನ್ನು ಅದು ಹೊಂದ

ಬೇಕಾಗುತ್ತದೆ. ಈ ಶಾಂತಿಯ ಮೋಚನೆಯಲ್ಲಿ ಜೀವನು ಬ್ರಹ್ಮನ ಕಡೆಗೆ ಸಾಗುತ್ತಾನೆ".

ಈ ವಿವರಗಳನ್ನು ನಿಲ್ಲಿಸಿ ಅವರು ಸಂಕ್ಷೇಪವಾಗಿ ಒಂದುಗೂಡಿಸಿದ ವಾಕ್ಯಪುಂಜವನ್ನು ಉದಾಹರಿಸಿ ಅವರ ಅಜ್ಞಾನದ ಕಲ್ಪನೆಯನ್ನೂ ಮಾಡಿಕೊಳ್ಳೋಣ—"ಅಜ್ಞಾನವು ತನ್ನ ಸತ್ತೆಯ ಮೂಲ ಸ್ಥಾನವನ್ನಾಗಲಿ, ತನ್ನ ವಿಭಾಗಶೀಲ ಕೃತಿಗಳ ಪ್ರಾರಂಭದ ಸ್ಥಳವನ್ನಾಗಲೀ ನಿರ್ವಿಶಿಷ್ಟ ಬ್ರಹ್ಮನನ್ನಾಗಲಿ ಪಡೆಯಲಾರದು, ಅಥವಾ ಆಂತರಿಕ ಸಚ್ಚಿದಾನಂದದಲ್ಲಾಗಲೀ ಪಡೆಯಲಾರದು. ಅದು ನಾವು ತಾದಾತ್ಮ್ಯವನ್ನು ಹೊಂದಿಕೊಂಡ ಒಂದು ಭೂತದ ಕಾರ್ಯಾಂಗದೊಡನೆ ಸಂಬಂಧ ಬೆಳಿಸಿದೆ. ಈ ತಾದಾತ್ಮ್ಯವು ನಾವು ದೇಹದಲ್ಲಿ ಮೇಲ್ಪದಿಗಿರುವ ಅಂಶಭೂತವಾದ ಅರಿವಿನೊಡನೆ ತಾದಾತ್ಮ್ಯ ಹೊಂದಿ ನಿದ್ರೆ ಎಚ್ಚರಿಕೆಗಳ ಮಧ್ಯದಲ್ಲಿ ತೂಗಾಡುತ್ತಿರುವಂತೆ ಇರುತ್ತದೆ. ಈ ತಾದಾತ್ಮ್ಯವೇ ಮಹಾತತ್ವದ ಉಳಿದ ಅಂಶಗಳನ್ನೆಲ್ಲ ಹಿಂಬದಿಗೆ ಇರಿಸಿ ಅಜ್ಞಾನಕ್ಕೆ ಮೂಲ ಕಾರಣವಾಗಿರುತ್ತದೆ. .... ಇದು ಬ್ರಹ್ಮನಿಗಂತೂ ಸಂಬಂಧ ಪಟ್ಟದ್ದಲ್ಲ. .... ಇದೊಂದು ಮುಖ್ಯವಾದ ಉತ್ತರ ವರ್ತಿಯಾದ ಅಂಶರೂಪವಾದ ಸಾಪೇಕ್ಷ ಗತಿಯಿರಬೇಕು (Movement)".

"ಹಾಗಾದರೆ ಇದು ಜೀವರುಗಳ ನಾನಾತ್ವದಲ್ಲಿ ಸಹಜಾತವಾದದ್ದೇ ? ಬ್ರಹ್ಮನು ಬಹುಭಾವವನ್ನು ಹೊಂದಬೇಕೆಂದು ಈಕ್ಷಿಸುತ್ತಿರುವಂತೆಯೋ ಕೂಡಲೇ ಈ ಅಜ್ಞಾನವು ಅಸ್ತಿತ್ವದಲ್ಲಿ ಬಂದಿದೆಯೋ ? ಆದರೆ ಇದೆಲ್ಲ ನಮ್ಮ ಅರುವಿನ ಮೇಲ್ಪದಿಯಲ್ಲಿ ಮಾತ್ರ ನಮ್ಮ ಹೊರ ಮನಸ್ಸಿಗೆ ತೋರುವ ಸಂಗತಿಯು ನಾವು ಆಳವಾದ ನಮ್ಮ ಚಿತ್ತಿನ ವಿಶಾಲ ವಿನ್ಯಾಸದಲ್ಲಿ ಸೂಕ್ಷ್ಮವಾಗಿ ಇಳಿದರೆ ನಾನಾ ಜೀವರುಗಳನ್ನು ವಿಂಗಡಿಸುವ ಗೋಡೆಗಳು ತೆಳ್ಳಗೆ ತೆಳ್ಳಗೆ ಆಗುತ್ತ ಕೊನೆಗೆ ವಿಂಗಡಿಸುವ ಗೋಡೆಯೂ ಇಲ್ಲ, ಅಜ್ಞಾನವೂ ಇಲ್ಲವೆಂದು ನಮಗೆ ಕಂಡು ಬರುತ್ತದೆ"

ಆಮೇಲೆ ಅವರು ಹೀಗೆ ಹೇಳುತ್ತಾರೆ.— "The origin of ignorance must then be sought for in some self absorbed concentration of Tapas of Conscious- force in action on a separate movement of the Force.........we have to ask our selves what is the nature of this absorbing........this self forgetful concentration... In the infinity of being and its infinite awareness, concentration of consciousness, Tapas, is always present as an inherent power of Consciousness Force".

"This power of exclusive conscentration is not confined to absorption in a particular character or type of working of one's

own larger self, but extends to a complete self forgetfulness in the particular action in which we happen at the moment to be engaged. The inconscience of material Nature is no more real than the ignoranee of exclusive concentration.. .....Nescience in Nature is the complete self ignorance The general ignorance of man is a partial self ignorance The root nature of ignorance is phenomenal and not real.. ... ....Ignorance is assumed in Nature by the secret spirit"

"Ignorance is not in the secret soul, but in the apparent Prakiti, that too is partial"

"This Ignorance is the power of knowledge to limit itself, to concentrate itself on the work in hand an exclusive concentration in practice which does not prevent the full existence of the working of the whole conscious being behind, but working in the conditions chosen and self imposed on the nature"

So too the Ignorance considered as a power of manifoldly self absorbed and self limiting concentration of the conscious being, is a natural capacity of variation in his self conscious knowledge, one of the possible poises of relation of the Absolute in its manifestation, of the Infinite in its series of infinite workings of the one in its self enjoyment in the Many The power hy self absorption to become unaware of the world which yet at the same time continues in the being is one extreme of this Capacitv of Consciousness, the power by absorption in the cosmic workings to become Ignorant of the self which a.l the time is carrving on those workings is the reverse extreme. But neither really limits the integral self aware existence of Sachidananda which is superior to these apparent oppositions, even in their opposition they help to express and manifest the ineffable

೧೫ನೇ ಪ್ರಕರಣದಲ್ಲಿ ಪ್ರಾರಂಭಕ್ಕೆ ಹೇಳಿದಂತೆ— "ಅಜ್ಞಾನದ ಉಗಮವು ಜ್ಞಾನಕ್ಕೆ ಹಾಕಿದ ಮಿತಿಯಲ್ಲದೆ; ಆ ಅಜ್ಞಾನದ ಸ್ವಭಾವವೆಂದರೆ ಜೀವನನ್ನು ಅದರ ಪರಿಪೂರ್ಣತೆಯಿಂದ ಮತ್ತು ಅದರ ಪೂರ್ಣ ಸತ್ಯತೆಯಿಂದ ಪ್ರಥಕ್ಕರಿಸುವದು. ಈ ಅಜ್ಞಾನದ ಸೀಮೆಯೆಂದರೆ ಈ ಚಿತ್ತಿನ ಪ್ರಥಕ್ಕರಣದ ಪ್ರವರ್ಧನೆಯಿಂದ ಪರಿಮಿತ

ವಾಗಿದೆ. ಅದು ನಮ್ಮ ನಿಜವಾದ ಸ್ವರೂಪಸನ್ನಷ್ಟೇ ನಮ್ಮಿಂದ ಮುಚ್ಚುವದಲ್ಲದೇ ಮತ್ತು ಇಡೀ ನಿಸರ್ಗದ ನಿಜಸ್ವರೂಪದಿಂದ ಮುಚ್ಚುವದಲ್ಲದೇ ನಮ್ಮನ್ನು ಆಪಾತತಃ ಮೇಲೆ ತೋರುವ ಸತ್ತೆಯಲ್ಲಿ ಇರುವಂತೆ ಒತ್ತಾಯಿಸುತ್ತದೆ ನಮ್ಮ ಪರಿಪೂರ್ಣತೆ ಯನ್ನು ತಿರುಗಿ ಸಂಪಾದಿಸುವ ಕಡೆಗೆ ಗಮನ, ಮಿತಿಮಾನಗಳನ್ನು ಅಳಿಯುವಂತೆ ಮಾಡುವದು, ಈ ಪ್ರಥಕ್ಕರಣ ಅಥವಾ ಭೇದವನ್ನು ನಾಶಗೊಳಿಸುವದು. ನಮ್ಮ ಸ್ವರೂಪ ಭೂತ ಪೂರ್ಣ ಸತ್ಯತೆಯನ್ನು ಸಂಪಾದಿಸುವದು—ಜ್ಞಾನದ ಕಡೆಗೆ ನಮ್ಮ ಆಂತರಿಕ ಗಮನದ ಸಂಕೇತವಿರಬೇಕು".

ಇದು ಅರವಿಂದರ ಅಜ್ಞಾನ ವಾದದ ಸಂಕ್ಷೇಪವಾದ ನಿರೂಪಣೆ. ತಪ್ಪು ತಿಳು ವಳಿಕೆಯಾಗದಂತೆ ನಾವು ಈ ಸಂಕ್ಷೇಪದ ವಿಸ್ತಾರವನ್ನು ಸಪ್ರಮಾಣವಾಗಿ ಮಾಡಿದ ಮೇಲೆ ನಮಗೆ ಆ ವಾದದಲ್ಲಿಯ ಗುಣದೋಷಗಳು ಸ್ಪಷ್ಟವಾಗುತ್ತವೆ. ಅರವಿಂದರ ಅಭಿಪ್ರಾಯದಲ್ಲಿ ಸಚ್ಚಿದಾನಂದ ಬ್ರಹ್ಮ ಒಂದೇ ಈ ಜಗತ್ತಿನ ಹಿಂದಿರುವ ತತ್ವ "ಈ ಒಂದು ತತ್ವದ ಆವಿರ್ಭಾವವೇ ಪ್ರಪಂಚದೊಳಗಿನ ಎಲ್ಲ ಶಕ್ತಿಗಳು. ಇದರಲ್ಲಿ ಜೀವ ಶಕ್ತಿಯು (is a conscioas power of being of Eternal) ನಿತ್ಯವಾದ ಮಹಾ ಶಕ್ತಿ(ಬ್ರಹ್ಮನ)ಯ ಚೈತನ್ಯ ಶಕ್ತಿಯ ಸ್ವರೂಪವು, ಯಾವಾಗಲೂ ಬ್ರಹ್ಮದೊಡನೆ ಐಕ್ಯದಿಂದ ಅದರ ಸತ್ತೆಯು, ಯಾವಾಗಲೂ ಬಹುತ್ವ ಹೊಂದುವ ಸಾಮರ್ಥ್ಯ ವುಳ್ಳದ್ದು, ಅದು ಆತ್ಮಜ್ಞಾನದಿಂದ ಮೋಚನೆಯನ್ನೂ ಅನುರತ್ವವನ್ನೂ ಹೊಂದು ತ್ತದೆ". (The individual spirit exists and ever existed beyond in the Eternal) ಈ ಸನಾತನ ಜೀವವು ಬ್ರಹ್ಮನಲ್ಲಿ ಇತ್ತು ಮತ್ತು ಯಾವಾಗಲೂ ಇರುತ್ತದೆ. ಆದರೆ ಅವನಲ್ಲಿ ಲಯ ಹೊಂದುವದಿಲ್ಲ ಅದು ಪುರುಷೋತ್ತಮನಲ್ಲಿ (निवसिष्य सि मय्येव) ವಾಸಿಸುತ್ತದೆ ವಿಶಿಷ್ಟಾದ್ವೈತದ ಅಪ್ರಥಗ್ಭಾವವನ್ನು ಒಪ್ಪು ತ್ತಾರೆ. (Essays on Gita 397). ಯಾಕೆಂದರೆ ಜೀವನು ಬ್ರಹ್ಮನಿಂದ ಬೇರೆ ಇಲ್ಲ. ಜೀವನು ಸ್ವರೂಪತಃ ಬ್ರಹ್ಮನೇ ಜಗತ್ತೂ ಬ್ರಹ್ಮನೇ; ಒಂದೂ ಅವನೇ ನಾನಾನೂ ಅವನೇ ಇದು ಅರಬಿಂದೋರವರ ವಿಶೇಷ.

"ಜೀವನಿಗೆ ಅಜ್ಞಾನ ಬಂದಿದೆ, ಅದು ಬ್ರಹ್ಮನಿಗೆ ಇಲ್ಲ. ಬ್ರಹ್ಮನಲ್ಲಿ ಕ್ರಿಯಾತ್ಮಕ ವಾದ ಸೃಜನಶಕ್ತಿ; ನಿಷ್ಕ್ರಿಯಾತ್ಮಕವಾದ ಶಾಂತಿ ಎಂಬ ಎರಡು ವಿರುದ್ಧಶಕ್ತಿಗಳು ತೋರಿಬರುತ್ತವೆ ಕ್ರಿಯಾತ್ಮಕವಾದ ಸೃಜನಶಕ್ತಿಯಿಂದ ಈಶ್ವರನು ಸೃಷ್ಟಿಮಾಡುತ್ತಾನೆ ಶಂಕರಾಚಾರ್ಯರು ಒಪ್ಪುವಂತೆ ಬ್ರಹ್ಮನಿಗೆ ಅಜ್ಞಾನದಿಂದ ಜೀವಭಾವ ಬಂದಿಲ್ಲ. ಬ್ರಹ್ಮನಲ್ಲಿಯ ಸೃಜನಶಕ್ತಿಯಿಂದ ನಿಶ್ಚಯವಾಗಿ ಬ್ರಹ್ಮನು ನಾನಾ ಭಾವವನ್ನು ಹೊಂದಿದ್ದಾನೆ. ನಿಸರ್ಗವೂ ಹೊರಬಿದ್ದಿದೆ. ಜೀವನು ಹೊರಬಿದ್ದಿದ್ದಾನೆ. ಜೀವನು ಸೃಜನ ಶಕ್ತಿಯ ಕಡೆಗೆ ನೋಡಿದಾಗ ಅವನಲ್ಲಿ ಪ್ರವೃತ್ತಿ ಹುಟ್ಟುತ್ತದೆ. ಆಗ ಅವನು

ತನ್ನ ನಿಷ್ಕ್ರಿಯತೆಯನ್ನು ಮರೆಯುತ್ತಾನೆ ಅವನಲ್ಲಿ ಅಜ್ಞಾನವು ಪ್ರವೇಶಿಸುತ್ತದೆ ಆದರೆ ಅಜ್ಞಾನವು ಆತ್ಮನಲ್ಲಿ ಇಲ್ಲ, ಅದು ವೇಲಿ ತೋರುವ ಪ್ರಕೃತಿಯಲ್ಲಿದೆ '' ಎಂದು ಅರವಿಂದರವಾದ

ಇದರಲ್ಲಿ ಎರಡು ಪ್ರಶ್ನೆಗಳು ಅಡಕವಾಗಿವೆ ೧) ಬ್ರಹ್ಮನಿಂದ ಜೀವನು ಹೊರ ಬಿದ್ದಾಗ ಅವನು ಬ್ರಹ್ಮನೆ ಅಲ್ಲವೆ. ಅವನಿಗೆ ಪ್ರಕೃತಿ ಸಂಬಂಧವೂ ಬರುವವರೆಗೆ ಅವನಿಗೆ ಅಜ್ಞಾನವಿಲ್ಲವೆಂದಂತಾಯಿತು ಸಚ್ಚಿದಾನಂದ ರೂಪಿಯಾದ ಬ್ರಹ್ಮನಿಗೆ ಹೇಗೆ ಅಜ್ಞಾನವೂ ಆವರಿಸುವದಿಲ್ಲವೋ ಹಾಗೆಯೆ ಸಚ್ಚಿದಾನಂದ ರೂಪಿಯಾದ ಜೀವನಿಗೂ ಅಜ್ಞಾನವು ಆವರಿಸಲಾರದು ಜೀವನಿಗೆ ಅಜ್ಞಾನವು ಆವರಿಸಿದರೆ ಅದು ಬ್ರಹ್ಮನಿಗೇಕೆ ಬೇಡ ? ಯಾವದು ಇರುವದರಿಂದ ಅಜ್ಞಾನವು ಬ್ರಹ್ಮನನ್ನು ತಟ್ಟಲಾರದು ಅದು ಜೀವನಲ್ಲಿ ಇಲ್ಲದ್ದರಿಂದ ಅವನಿಗೆ ಅಜ್ಞಾನ ತಟ್ಟಿದ್ದಾದರೆ ಬ್ರಹ್ಮನಿಗೂ ಜೀವನಿಗೂ ಸ್ವರೂಪದಲ್ಲಿ ವ್ಯತ್ಯಾಸವಿರಬೇಕು !! ವ್ಯತ್ಯಾಸವಿದ್ದರೆ ಅವನು ಪೂರ್ಣ ಬ್ರಹ್ಮನಾಗಲಾರ ೧) ಇನ್ನು ಈ ವ್ಯತ್ಯಾಸ ಅಜ್ಞಾನದಿಂದಲೇ ಅಥವಾ ಪ್ರಕೃತಿಯಿಂದ ಬಂದಿದ್ದರೆ ಅದು ಬ್ರಹ್ಮನನ್ನು ಅವರಿಸಬೇಕಾಗುತ್ತದೆ. ೨) ಈ ಅಜ್ಞಾನದ ಸ್ವರೂಪವೆಂತಹದು ? ಅಜ್ಞಾನವೊಂದು ನಿಶ್ಚಿತ ಸಂಗತಿಯೆಂದು ಅರವಿಂದೋರವರು ಹೇಳುತ್ತಾರೆ. ಅದೊಂದು ಬಲವತ್ತರ ಕೃತಿಯು. ಅದೊಂದು ಚಿತ್ ಶಕ್ತಿಯು ಮತ್ತು ಸೃಜನಶೀಲವಾದುದು. ಪ್ರಕೃತಿಯು ಜಡಶಕ್ತಿಯೆಂದೂ ಅದು ಚೈತನ್ಯಕಿಂತ ಬೇರೆಯೆಂದೂ ವೇದಾಂತಿಗಳು ಒಪ್ಪುತ್ತಾರೆ ಆದರೆ ಅರವಿಂದೋರ ಮತದಲ್ಲಿ ಸ್ವರೂಪದಲ್ಲಿ ಚೈತನ್ಯದಕಿಂತ ಬೇರಯಾದ ವಸ್ತುವೇ ಇಲ್ಲದ್ದರಿಂದ ಅಜ್ಞಾನವೂ ಸ್ವರೂಪದಲ್ಲಿ ಚೈತನ್ಯವೆಂದೇ ಹೇಳ ಬೇಕಾಗುತ್ತದೆ. ಅವರು ಒಂದೇ ಚೈತನ್ಯವನ್ನು ಒಪ್ಪುವದರಿಂದ ಅಜ್ಞಾನವು ಬ್ರಹ್ಮ ಸ್ವರೂಪವೇ ಎಂದು ಹೇಳಿದಂತಾಯಿತು. ತನಗೆ ತಾನೇ ಆವರಕನಾಗುವದು ಕಂಡು ಬಂದಿಲ್ಲ. ಆದುದರಿಂದ ಬ್ರಹ್ಮಸ್ವರೂಪನಾದ ಜೀವನಿಗೆ ಬ್ರಹ್ಮಸ್ವರೂಪವಾದ ಅಜ್ಞಾನವು ಆವರಕವಾಗಲಾರದು.

ಮೇಲಾಗಿ ಅರಬಿಂದೋರವರು ಅಜ್ಞಾನವು ಒಂದು ವಸ್ತುವಲ್ಲ, ಅದೊಂದು ಗತಿಯು ಎಂದರೆ ಕ್ರಿಯೆಯು ಎಂದು ಒಂದು ಕಡೆಗೆ ಹೇಳಿದರೆ ಇನ್ನೊಂದು ಕಡೆಗೆ ಅಜ್ಞಾನವು ಒಂದು ಜ್ಞಾನದ ಶಕ್ತಿಯೆಂದು ಮತ್ತೊಂದು ಕಡೆಗೆ ಹೇಳುತ್ತಾರೆ. ಜ್ಞಾನವೇ ತನ್ನನ್ನು ತಾನು ಆವರಿಸುವದೇ ಅಜ್ಞಾನವು. (Power of knowledge to lim t itself ). ಒಂದು ಕಡೆಗೆ ಹೆಚ್ಚಿನ ಲಕ್ಷವನ್ನು ಪೂರೈಸಲಿಕ್ಕೆ ಜ್ಞಾನವು ಬೇಡಾವುದನ್ನು ಮರೆತು ಬಿಡುತ್ತದೆ. ಆದರೆ ತನ್ನ ಹಿಂದೆ ಇರುವ ಅಜ್ಞಾನವು ತನ್ನ ಪೂರ್ಣ ಅರಿವನ್ನು ಉಪಯೋಗಿಸಲಿಕ್ಕೆ ಅದರದೇನೂ ಅಡ್ಡಿಯಿಲ್ಲ. ತರ್ಕಬದ್ಧ ವಿಚಾರಕ್ಕೆ ಇವೆಲ್ಲ ಅಡಗುಲಜ್ಜಿಯ ಕಥೆಯಾಗಿ ಕೇಳುತ್ತದೆ. ಸ್ವಪ್ರಕಾಶವಾದ

ಜ್ಞಾನವು ತನ್ನನ್ನು ತಾನು ಆವರಿಸುವದೆಂದು ಹೇಳುವದು, ಸ್ವಪ್ರಕಾಶವಾದ ಬ್ರಹ ನನ್ನು ಸುಳ್ಳು ಅಜ್ಞಾನವು ಆವರಿಸುತ್ತದೆಂದು ಹೇಳುವದಕ್ಕಿಂತ ಹೆಚ್ಚಿನ ವಿಚಾರ ವಿರೋಧದ ವಿಕ್ರಮವನ್ನು ಸಾಧಿಸಿತು.

Ignorance is considered as a power of manifoldly self-absorbed and self-limiting concentration ಅಜ್ಞಾನವು, ಬಹು ವಿಧ ವಾಗಿ ತನ್ನಲ್ಲಿ ತಾನು ಲಯ ಹೊಂದಿದ ಮತ್ತು ತನ್ನನ್ನು ತಾನು ಮಿತಗೊಳಿಸುವ ಚಿತ್ತೈಕಾಗ್ರತೆಯ ಶಕ್ತಿಯೆಂದು ತಿಳಿಯಲಾಗಿದೆ ಒಂದರ ಮೇಲೆ ಚಿತ್ತವು ಏಕಾಗ್ರವಾ ಗುವದರಿಂದ ಅನ್ಯವಸ್ತುಗಳ ಅರಿವು ನಮಗೆ ಇರುವದಿಲ್ಲ ಆದರೆ ಅಜ್ಞಾನವು ಜೀವನ ವನ್ನು ಆವರಿಸಿದೆ. ಜೀವನ ಚಿತ್ತವು ಎದರ ಮೇಲೆಯೂ ಏಕಾಗ್ರವಾಗಿಲ್ಲ. ಆದರೂ ಅವನಿಗೆ ಗಾಢವಾದ ಅಜ್ಞಾನವು ಆವರಿಸಿದೆ. ಮತ್ತೆ ಇನ್ನೂ ಜಗತ್ತಿನ ವ್ಯವಹಾರ ವನ್ನೆಲ್ಲ ಮಾಡುತ್ತಾನೆ ಆದುದರಿಂದ ಈ ಆವರಣವು ಭಾಗಶಃ ಎಂದು ತೋರುತ್ತದೆ. ಆದರೆ ನಿಜವಾದ ಅಜ್ಞಾನವು ಅವರೇ ಹೇಳುವಂತೆ ನಮ್ಮ ಸ್ವರೂಪವನ್ನು ಮುಚ್ಚಿದೆ ಮತ್ತು ಸಚ್ಚಿದಾನಂದದ ಸ್ವರೂಪವನ್ನು ಮುಚ್ಚಿ ಅಜ್ಞಾನವೇ ನಮಗೆ ತಲೆ ಬೇನೆ ಯಾದದ್ದು. ಈ ಅಜ್ಞಾನವು ಸಚ್ಚಿದಾನಂದನಿಗೆ ಇಲ್ಲವೆಂಬುದು ಎಲ್ಲರೂ ಒಪ್ಪಿದ ಮಾತು ಎಂದ ಮೇಲೆ ಜೀವನಿಗೆ ಈ ಅಜ್ಞಾನ ಎಲ್ಲಿಂದ ಬಂತು ? ಮತ್ತು ಚಿತ್ತೈ ಕಾಗ್ರತೆಯಿಂದ ಬಂದುದೇ ? ಯಾರ ಚಿತ್ತೈಕಾಗ್ರತೆಯಿಂದ ? ಬ್ರಹ್ಮನ ಚಿತ್ತೈ ಕಾಗ್ರತೆಯಿಂದ ಜೀವನಿಗೆ ಅಜ್ಞಾನವೇ ?

ಆದರೂ ಅರಬಿಂದೋರವರು "Ignorance is a natural capacity of variation in his self conscious knowledge, one of the possible poiser of relation of the Absolate in his manifestation" ಇಲ್ಲಿ ಮತ್ತೆ ಅಜ್ಞಾನವನ್ನು ಅತೀತ ಬ್ರಹ್ಮನಿಗೆ ಹೊಂದಿಸಿದ್ದಾರೆ ಅದ್ವಿತೀಯನಾಗಿ ಇರವ ಬ್ರಹ್ಮನು ಬಹುಭಾವ ಹೊಂದುವಾಗ ತಾಳಿದ ಸ್ಥಿತಿಯ ಸಂಬಂಧವು, ಮತ್ತು ಅವನಲ್ಲಿ ಹುದುಗಿದ ಸಹಜ ಶಕ್ತಿಯು ಈ ಅಜ್ಞಾನವಾಗಿದೆ. ಬ್ರಹ್ಮನು ಬಹುಭಾವ ಹೊಂದಲಿಕ್ಕೆ ಬೇಕಾದ ಸಹಜ ಶಕ್ತಿಯೇ ಅದು ಆದ ಮೇಲೆ ಅದು ಅವನನ್ನೇ ಹೊಂದಿಕೊಂಡಿದೆ ಎಂದು ಹೇಳಿದಂತಾಯಿತು ಎಂದ ಮೇಲೆ ಬ್ರಹ್ಮನು ಅಜ್ಞಾನಕ್ಕೆ ಒಳಗಾಗಿ ಜೀವ ಭಾವವನ್ನು ಹೊಂದುತ್ತಾನೆಂದು ಹೇಳುವವರ ಮೇಲೆ ರೇಗುವದು ಯಾಕೆ ?

ಇದು ಅಲ್ಲದೆ ಅರವಿಂದೋರವರು ಬಹುಭಾವಕ್ಕಾಗಿ ಬ್ರಹ್ಮನು ಅಜ್ಞಾನಕ್ಕೆ ಒಳಗಾಗುವದೆಂದರೆ ಒಂದರಮೇಲೆ ಇರುವ ಚಿತ್ತೈಕಾಗ್ರತೆಯಲ್ಲಿ ತನ್ನನ್ನು ಸಹ ತಾನು ಮರೆಯುವಂತೆ ಈಗ ಜೀವನು ತಾನು ಬ್ರಹ್ಮನನ್ನು ಮರೆತುಬಿಟ್ಟಿದ್ದಾನೆ. ಅದು ತನ್ನ

ಇಚ್ಛೆಯಿಂದಲೇ ! ಇದಕ್ಕೆ ದೃಷ್ಟಾಂತವಾಗಿ ಅಜ್ಞರಾದ ಸಾಮಾನ್ಯ ಜನರು ರಂಗಭೂಮಿಯ ಮೇಲೆ ತಮ್ಮನ್ನೆ ತಾವು ಮರೆತು ತಾವು ರಾಮನೋ ಕೃಷ್ಣನೋ ಎಂದು ತಿಳಿದುಕೊಂಡು ಅವರ ಪಾತ್ರವನ್ನು ನಿರ್ವಹಿಸುವಂತೆ ಬ್ರಹ್ಮಸ್ವರೂಪನಾದ ಚೇತನನು ಅಜ್ಞಾನಿಯೆಂದು ತಿಳಿದುಕೊಂಡು ತಾನು ಬ್ರಹ್ಮನೆನ್ನುವದನ್ನು ಬುದ್ಧಿಪೂರ್ವಕವಾಗಿ ಸ್ವೇಚ್ಛೆಯಿಂದ ಮರೆತಿದ್ದಾನೆಂದು ಅರವಿಂದರು ಹೇಳುತ್ತಾರೆ ಸ್ವಪ್ರಕಾಶನಾಗಿ ಜ್ಞಾನಸ್ವರೂಪಿಯಾಗಿ ಇರುವ ಬ್ರಹ್ಮನಿಗೂ ಸ್ವೇಚ್ಛೆಯಿಂದ ಮರುವು ಬರುವದೇ ? ನಮ್ಮ ಜ್ಞಾನದ ಹಾಗೆ ಅವನ ಜ್ಞಾನ ಮಿತವಾದುದೇ ? ಅರವಿಂದರು ಹೇಳುವ ಒಂದೂ ವಿಚಾರವು ಹೀಗೆ ಬುದ್ಧಿಗೆ ತೋಚುವದಿಲ್ಲ ಹೃದಯಕ್ಕೆ ತಟ್ಟುವದಿಲ್ಲ ಅನುಭವಕ್ಕೆ ಹೊಂದುವದಿಲ್ಲ.

## ನಾಲ್ಕು ಸಿದ್ಧಾಂತಗಳು

ಈ ಅಜ್ಞಾನ ಈ ರೀತಿಯಾಗಿ ದುರ್ಘಟವಾದುದರಿಂದ ಜೀವನು ಬ್ರಹ್ಮನ ಸ್ವರೂಪಾಂಶನೆಂದು ಹೇಳಲು ಸಾಧ್ಯವಿಲ್ಲ ಅವನು ಭಿನ್ನಾಂಶನೇ ಇರಬೇಕು ಆದರೆ ಜೀವನಿಗೂ ಪರಮಾತ್ಮನಿಗೂ ಅತ್ಯಂತ ಭೇದವನ್ನು ಒಪ್ಪಲಿಕ್ಕೆ ಅರವಿಂದೊರವರು ಸಿದ್ಧರಿಲ್ಲ ಒಂದು ಅತ್ಯಂತ ನಿರಪೇಕ್ಷ ಸ್ವತಂತ್ರ ಸತ್ಯ, ಬಹುರೂಪದಲ್ಲಿ ಅದರ ಪಾದುರ್ಭಾವವೂ ಸತ್ಯ ಬ್ರಹ್ಮವೇ ಸರ್ವವು ಎಂಬ ಮತ ಅವರದು ಹೀಗೆ ಅವರು ಅಸ್ತಿತ್ವ ವಿಷಯದಲ್ಲಿ ನಾಲ್ಕುಮತಗಳನ್ನು '(ಅದ್ವೈತ, ವಿಶಿಷ್ಟಾದ್ವೈತ ದ್ವೈತ ಮೊದಲಾದ) ನಿರೂಪಿಸುವಾಗ ದ್ವೈತಮತದ ಬ್ರಹ್ಮಸತ್ಯ, ಜಗತ್ತು ಜೀವ ಸತ್ಯ ಮೊದಲಾದ ವಾದವನ್ನೂ ಒಪ್ಪಿಕೊಂಡು ಈ ರೀತಿಯಾಗಿ ಬರೆಯುತ್ತಾರೆ .— "ಸಚ್ಚಿದಾನಂದ ಬ್ರಹ್ಮನು ನಿರಾಕಾರನು ಅಹುದು ಸಾಕಾರನೂ ಅಹದು. ಇವನು ಅತೀತನೂ ಅಹುದು ಅಂತರ್ಯಾಮಿಯೂ ಅಹುದು ಎಲ್ಲದರಲ್ಲಿಯೂ ಪರಮಾತ್ಮನ ಮೇಲೆ ಅವಲಂಬಿಸಿಯೇ ಜಗತ್ತು ಜೀವ ಇರುವದು. ಈ ರೀತಿಯಿಂದ ಈ ಸೇಶ್ವರ ದ್ವೈತವಾದವೂ ಪರಮಾತ್ಮನು ನಿತ್ಯನೂ ಸತ್ಯನೂ ಎಂದೂ ಜೀವನು ಮತ್ತು ಜಗತ್ತು ಸತ್ಯವೆಂದೂ ಹೇಳುವದರಿಂದ ಈ ವಾದವೂ ಅಸ್ತಿತ್ವದ ಬಗ್ಗೆ ಒಂದು ಭಾಗದಿಂದ ಸರಿಯಾಗಿ ಹೇಳಿದರೂ ಇನ್ನೊಂದು ಭಾಗದಿಂದ ಮಾತ್ರ ಅದರಲ್ಲಿ ನ್ಯೂನತೆ ಕಂಡು ಬರುತ್ತದೆ. ಜೀವ ಪರಮಾತ್ಮರು ಅತ್ಯಂತ ಅಭಿನ್ನರು ಎಂದು ಹೇಳದಿರುವದರಿಂದ ಅವರು ಒಂದಾಗುವ ಸಂಭವವೇ ಇಲ್ಲದಂತಾಗಿದೆ ಆತ್ಮನು ಆತ್ಯಂತಿಕ ಭಕ್ತಿಯಿಂದ ಭಗವಂತನಲ್ಲಿ ಬೆರೆತಾಗ ಅವನ ಚಿತ್ತದಲ್ಲಿ ತನ್ನ ಚಿತ್ತವನ್ನು ಅವನ ಸಕ್ತಿಯಲ್ಲಿ ತನ್ನ ಸಕ್ತಿಯನ್ನು ಒಂದು ಗೂಡಿಸುವ ಸಂಭವವೇ ಇಲ್ಲದಂತಾಗಿದೆ" ಎಂದು ಇವರವಾದ ಆದರೆ ಸ್ವಲ್ಪ ವಿಚಾರ ಮಾಡಬೇಕು— ಜೀವನು ಬ್ರಹ್ಮಸ್ವರೂಪನೆಂದು ಒಪ್ಪಿದರೂ ಜೀವನೆಂದೂ ಬ್ರಹ್ಮನಲ್ಲಿ ತನ್ನ ವ್ಯಕ್ತಿತ್ವ

ವನ್ನು ಕಳೆದುಕೊಳ್ಳುವಂತೆ ಲಯ ಹೊಂದುವದಿಲ್ಲವೆಂದು ಇವರ ಮತ. ಜೀವನು ಸಚ್ಚಿದಾನಂದನು, ಅವನು ಬ್ರಹ್ಮನ ಸ್ವರೂಪನು ಎಂದು ಐಕ್ಯವನ್ನು ಅರವಿಂದೋರವರು ಸಾಧಿಸಿದರೆ ಮಧ್ವಾಚಾರ್ಯರು ಜೀವನು ಸಚ್ಚಿದಾನಂದನು; ಬ್ರಹ್ಮನಂತೆ ಇದ್ದಾನೆ ಬ್ರಹ್ಮನು ಬ್ರಹ್ಮನಲ್ಲಿ ಇರುತ್ತಾನೆ. ಇಂಥ ಐಕ್ಯವನ್ನು ಮಧ್ವಾಚಾರ್ಯರು ಸಾಧಿಸುತ್ತಾರೆ. ಐಕ್ಯ ಅಥವಾ Unity ಅನೇಕ ತರಹದ್ದಿದೆ ಶಂಕರಾಚಾರ್ಯರ Unity ಯು Absolute unity ರಾಮಾನುಜಾಚಾರ್ಯರದು Organic Unity ಮಧ್ವಾಚಾರ್ಯರದು Architectonic Unity. ಎಂದರೆ ಪರಮಾತ್ಮನು ಒಬ್ಬ ಸ್ವತಂತ್ರ; ಅಸ್ವತಂತ್ರವಾದ ಜೀವ, ಕಾಲ ಪ್ರಕೃತಿ ಮೊದಲಾದವುಗಳನ್ನು ತೆಗೆದುಕೊಂಡು ಸೃಷ್ಟಿಸಿದ್ದರಿಂದ ಎಲ್ಲವೂ ಅವನ ಆಧೀನವಾದುದರಿಂದ ಸ್ವತಂತ್ರ ಅದ್ವೈತವಾದವು ಆಚಾರ್ಯರಲ್ಲಿ ತೋರುತ್ತದೆ

ಅರವಿಂದೋರವರಲ್ಲಿ ಸಹ ಜೀವನು ಹೊರಗೇ ಉಳಿದರೂ ಅವರಲ್ಲಿ ಅದ್ವೈತವು ಕೆಡುವದಿಲ್ಲ ಜೀವಕ್ಕೆ ಸಚ್ಚಿದಾನಂದ ಸ್ವರೂಪವನ್ನು ಇಬ್ಬರೂ ಒಪ್ಪುತ್ತಾರೆ. ದೊಡ್ಡ ಇದರಲ್ಲಿ ಲಾಭವೆಂದರೆ ಮಧ್ವಾಚಾರ್ಯರಿಗೆ ಅಜ್ಞಾನವನ್ನು ಚೆನ್ನಾಗಿ ಹೊಂದಿಸಲಿಕ್ಕೆ ಬರುತ್ತದೆ. ಯಾಕೆಂದರೆ ಭಿನ್ನರಾದ ಅಧೀನರಾದ ಜೀವರಿಗೆ ತನ್ನ ಅದಮ್ಯ ಇಚ್ಛಾಶಕ್ತಿಯಿಂದ ಅವರ ಸಚ್ಚಿದಾನಂದ ಸ್ವರೂಪಕ್ಕೆ ಅಜ್ಞಾನ ಆವರಕವು ಹೊಂದಿಕೆಯಾಗುತ್ತದೆ. ಉಳಿದ ಮತದಲ್ಲಿ ಅದು ಹೊಂದಿಕೆಯಾಗುವದಿಲ್ಲ. ಆದುದರಿಂದ ಮಧ್ವಾಚಾರ್ಯರ ತತ್ವ ಶಾಸ್ತ್ರವು ಈ ಹೊಸ ತರಹದ ಐಕ್ಯದ ಕಲ್ಪನೆಯಿಂದ ತತ್ವಜ್ಞಾನಕ್ಕೆ ದೊಡ್ಡದಾದ ಕೊಡುಗೆಯನ್ನು ನೀಡಿದೆ. ಗೀತೆಯು ಈ ತರಹದ ಐಕ್ಯ ವನ್ನೇ ಒಪ್ಪುತ್ತದೆಂಬುದು ಆಚಾರ್ಯರ ಅಭಿಪ್ರಾಯ.

ಈ ರೀತಿಯಾಗಿ ಶಂಕರಾಚಾರ್ಯರ ಮೇಲೆ ಹೇಗೆ Macdonell ನಂಥ ವಿಮರ್ಶಕರು "ಶಂಕರಾಚಾರ್ಯರ ಭಾಷ್ಯವು ಸ್ವತಂತ್ರ ತತ್ವ ಪ್ರತಿಪಾದಕವಾದ ಗ್ರಂಥವಿದೆ. ಅದು ಗೀತೆಯ ತಾತ್ಪರ್ಯವನ್ನು ಹೇಳುವ ವ್ಯಾಖ್ಯಾನವಲ್ಲ' ವೆಂದು ಆರೋಪಿಸಿದ್ದಾರೆ. ಹಾಗೆಯೇ ಅರವಿಂದೋರವರ ಮೇಲೆ ಸಹ "ತಮ್ಮ ತತ್ವಜ್ಞಾನ ಪ್ರಣಾಲಿಯ ವಿಸ್ತಾರವೇ (Essays on Gita) ಇದೆಯೇ ಹೊರತು ಗೀತಾದ ಸಂಪೂರ್ಣ ತಾತ್ಪರ್ಯವನ್ನು ಬೋಧಿಸುವ ಪ್ರಬಂಧವಲ್ಲ" ಎಂದು ಹೇಳಬಹುದು.

ಲೋಕಮಾನ್ಯ ಟಿಳಕರು ಸಹ ಗೀತೆಯ ತಾತ್ಪರ್ಯದ ಶೋಧನೆಗೆ ಮಹತ್ವ ಕೊಡದೆ ರಾಷ್ಟ್ರಕ್ಕೆ ಆಗಿನ ಕಾಲಕ್ಕೆ ಬೇಕಾದ ವೀರ್ಯವತ್ತರವಾದ ಕರ್ಮಯೋಗದ ಸಂದೇಶವನ್ನು ಗೀತೆಯು ನೀಡುತ್ತದೆಂದು ಹೇಳಿದ್ದಾರೆ. ಆದರೆ ಆ ಕರ್ಮಯೋಗ ವನ್ನು ಸರಿಯಾದ ತತ್ವಜ್ಞಾನದ ಮೇಲೆ ನಿಲ್ಲಿಸಿಲ್ಲ. ಕರ್ಮಯೋಗ ಒಂದೇ ಗೀತೆಯ ಸಂದೇಶವಲ್ಲ. ಟಿಳಕರು ಗೀತೆಯಲ್ಲಿ ಗೃಹಸ್ಥಾಶ್ರಮಿಯು ಸ್ವೋಚಿತ ಕರ್ಮಾಚರಣೆ

ಯನ್ನು ಮಾಡುತ್ತ ಪರಮಾತ್ಮನನ್ನು ಫಲಸಮರ್ಪಣೆ ಪೂರ್ವಕವಾಗಿ ಆರಾಧಿಸುವದು ಕರ್ಮಯೋಗವೆಂದು ಹೇಳುತ್ತಾರೆ ಆದರೆ ನಿಜವಾಗಿ ಗೀತೆಯ ಅಭಿಪ್ರಾಯದಲ್ಲಿ ಸನ್ಯಾಸಿಗಳು ಸಹ ಕರ್ಮಯೋಗವನ್ನು ಆಚರಿಸಬಹುದು. ಕರ್ಮಜ್ಞಾನ ಭಕ್ತಿಯಿಂದ ಮುಪ್ಪುರಿ ಹೊಸದ ಹಗ್ಗವೆ ಯೋಗವಾದುದರಿಂದ ಕರ್ಮದ ಅಂಶವು ಹೆಚ್ಚಾಗಿದ್ದ ಯೋಗವನ್ನು ಕೆಲವರು, ಭಕ್ತಿಯ ಅಂಶವು ಹೆಚ್ಚಿಗಿದ್ದ ಯೋಗವನ್ನು ಬೇರೆ ಕೆಲವರು, ಜ್ಞಾನವು ಹೆಚ್ಚಿಗಿದ್ದ ಅಂಶವನ್ನು ಮೂರನೆಯವರು, ಅವರಿಗೆ ಯಾವ ಆಶ್ರಮವೇ ಇರಲಿ ಆಚರಿಸುತ್ತಾರೆ

ಸನ್ಯಾಸದ ವಿಷಯದಲ್ಲಿ ಗೀತೆಯ ಮತ ಸ್ಪಷ್ಟವಿದೆ ಸನ್ಯಾಸದ ಯೋಗ್ಯತೆ ಇದ್ದವರು ಸನ್ಯಾಸವನ್ನು ತೆಗೆದುಕೊಳ್ಳಬಹುದು ಆದರೆ ಸನ್ಯಾಸಿಗಳು ಸ್ವವರ್ಣ ಆಶ್ರಮಕ್ಕೆ ಉಚಿತವಾದ ಕರ್ಮಗಳನ್ನು ತಪ್ಪಿಸಿಕೊಳ್ಳಲಾರರು ಸನ್ಯಾಸದಿಂದಲೇ ಮುಕ್ತಿಯೆಂಬ ವಾದವನ್ನು ಗೀತೆಯು ನಿಷೇಧಿಸುತ್ತದೆ ಅದರಂತೆ ಗೀತೆಯು ಕರ್ಮ ಯೋಗವೇ ಶ್ರೇಷ್ಟ ಎಲ್ಲರೂ ಗ್ರಹಸ್ಥಾಶ್ರಮಿಗಳೇ ಆಗಬೇಕೆಂಬ ಟಿಳಕರ ಆಗ್ರಹಕ್ಕೂ ಗೀತೆಯಲ್ಲಿ ಸ್ಥಾನವಿಲ್ಲ. ಆದುದರಿಂದ R. D Ranade ಯವರು ಹೇಳುವಂತೆ In View of Temperamental differences no universel rule of activism can be laid down. ("ಮನುಷ್ಯನ ಮನೋವೃತ್ತಿಗಳು ಭಿನ್ನವಾಗಿರುವದರಿಂದ ಕರ್ಮವಾದವನ್ನು ಸಾಮಾನ್ಯವಾಗಿ ವಿಧಿಸಲಿಕ್ಕೆ ಬರುವದಿಲ್ಲ")

ಒಂದು ವಾದವು ಮಾತ್ರ ಟಿಳಕರದು ಅತ್ಯಂತ ಮಹತ್ವದ್ದು. ಟಿಳಕರು ಅಪರೋಕ್ಷ ಜ್ಞಾನವಾದ ಮೇಲೆ ಸಹ ಲೋಕೋಪಕಾರಕ್ಕಾಗಿ ಭಗವದಾರಾಧನೆಗಾಗಿ ಕರ್ಮವನ್ನು ಮಾಡಬೇಕಾಗುತ್ತದೆಂದು ಶಂಕರಾಚಾರ್ಯರ ಜ್ಞಾನವು ಕರ್ಮಕ್ಕೆ ವಿರೋಧಿಯೆಂಬವಾದದ ನಿರಾಕರಣಪೂರ್ವಕವಾಗಿ ಮಂಡಿಸಿದ್ದಾರೆ. ಇದೇ ಮಾತನ್ನೇ ಮಧ್ವಾಚಾರ್ಯರು ಸಪ್ರಯೋಜನವಾಗಿ ಸ್ಪಷ್ಟವಾಗಿ ಗೀತೆಯ ಮತವು ಇದು ಎಂದು ಸಿದ್ಧಮಾಡಿದ್ದಾರೆ. ಅಪರೋಕ್ಷ ಜ್ಞಾನವಾದ ಮೇಲೆ ಸತ್ಕರ್ಮಗಳನ್ನು ಆಚರಿಸಿದರೆ ಮೋಕ್ಷದಲ್ಲಿ ಆನಂದದ ಅಭಿವೃದ್ಧಿಯಾಗುತ್ತದೆಂದು ಹೇಳಿದ್ದಕ್ಕೆ ತತ್ವಜ್ಞಾನದ ತಳಹದಿಯದೆ ಪ್ರಯೋಜನವದೆ. ಆದರೆ ಟಿಳಕರ ಜ್ಞಾನೋತ್ತರ ಕರ್ಮಕ್ಕೆ ತತ್ವಜ್ಞಾನದ ತಳಹದಿಯಿಲ್ಲ. ಅವರು ಶಂಕರಾಚಾರ್ಯರ ಅದ್ವೈತ ವಾದವನ್ನೊಪ್ಪಿದ್ದರಿಂದ ಐಕ್ಯ ಅಪರೋಕ್ಷವಾದ ಮೇಲೆ ಅಖಂಡ ಚೇತನರೂಪ ಬ್ರಹ್ಮನ ಹೊರತು ಏನೂ ಉಳಿಯದ್ದರಿಂದ ಐಕ್ಯ ಜ್ಞಾನವಾದ ಮೇಲೆ ಕರ್ಮಕ್ಕೆ ಅವಕಾಶವೇ ಇಲ್ಲ, ಜ್ಞಾನಾನಂತರ ಕರ್ಮ ಸ್ವೀಕರಿಸಿದರೆ ದ್ವೈತವಾದವನ್ನು ಒಪ್ಪಬೇಕಾಗುತ್ತದೆ ಜ್ಞಾನಾನಂತರ ಕರ್ಮ ಬಿಟ್ಟರೆ ಅವರ ಕರ್ಮವಾದಕ್ಕೆ ಚ್ಯುತಿ ಬರುವದರಿಂದ ಬಿಸಿ ತುಪ್ಪ ಬಾಯಿಯಲ್ಲಿ ಹಾಕಿ ಅದನ್ನು ನುಂಗಿದರೆ ಗಂಟಲು ಸುಡುತ್ತದೆ; ಚಲ್ಲಿದರೆ ತುಪ್ಪ ಹಾಳಾಗುತ್ತದೆ. ರಹಸ್ಯಕಾರರಿಗೆ ಈ ವಿಪತ್ತು ಬಂದಿದೆ.

ಇದನ್ನು ಚಿಂತಿಸಿ ಜ.ಸ. ಕರಂದಿಕರರು ಜ್ಞಾನವಾದ ಮೇಲೆ ಕರ್ಮಕ್ಕೆ ಹೊಂದುವಂಥ ತತ್ವಜ್ಞಾನವನ್ನು ಗೀತೆ ಒಪ್ಪುತ್ತದೆಂದು ಹೇಳಿ ಶಂಕರಾಚಾರ್ಯರ ಅದ್ವೈತವಾದವನ್ನೂ ಮಾಯಾ ವಾದವನ್ನೂ ನಿರಾಕರಿಸಿದ್ದಾರೆ ಹೀಗೆ ಅವರು ಬಿಸಿ ತುಪ್ಪವನ್ನು ಚೆಲ್ಲಿ ಬದುಕಿದ್ದಾರೆ. ಆದುದರಿಂದ W S Urquhart ರವರು ಹೇಳಿದ ಮಾತು ಸತ್ಯವಿದೆ "Such a work as the Gita would naturally give encouragement to dualistic tendencies''. ಗೀತೆಯಂಥ ಗ್ರಂಥವು ಸ್ವಾಭಾವಿಕವಾಗಿ ದ್ವೈತವಾದದ ಒಲವಿಗೆ ಉತ್ತೇಜನ ಕೊಡುತ್ತಿದೆಂದು ಹೇಳಿದ್ದಾರೆ

ಜ. ಸ. ಕರಂದೀಕರರು ಗೀತೆಯ ತಾತ್ಪರ್ಯ ತೆಗೆಯುವಾಗ ಬಹಳಷ್ಟು ವಿಮರ್ಶೆ ಮಾಡಿ ೧೪ ಅಂಶಗಳುಳ್ಳ ಒಂದು ವಿಮರ್ಶಾತ್ಮಕ ನಿರೂಪಣೆಯನ್ನು ಕೊಟ್ಟಿದ್ದಾರೆ ಅದರ ಸಾರಾಂಶವು ಈ ರೀತಿಯಾಗಿ ಇದೆ—ಭಾರತೀಯ ಯುದ್ಧವು ಐತಿಹಾಸಿಕ ಸತ್ಯ, ಗೀತೆಯಲ್ಲಿ ಪ್ರತಿಯೊಂದು ಪ್ರಾಣಿಗೆ ಮೋಕ್ಷದ ಅನುಕೂಲತೆ ಒದಗಿಸುವದೇ ಅದರ ಧ್ಯೇಯವಾಗಿದೆ ಬ್ರಹ್ಮನಲ್ಲಿ ಸಗುಣ ನಿರ್ಗುಣ ಸವಿಶೇಷ ನಿರ್ವಿಶೇಷ, ಶುದ್ಧ ಶಬಲ, ಎಂಬ ಭೇದವನ್ನು ಕಲ್ಪಿಸುವದರಿಂದ ಬ್ರಹ್ಮನ ಏಕತ್ವಕ್ಕೆ ಹಾನಿ ತಟ್ಟುತ್ತದೆ ಕಾರ್ಯರೂಪದಿಂದ ಬ್ರಹ್ಮನಾನಾ ಆಗಿದ್ದರೂ ಕಾರಣರೂಪದಿಂದ ಅವನು ಅಭಿನ್ನನಾಗಿದ್ದಾನೆ ಬ್ರಹ್ಮ ನಿರ್ಗುಣನಿದ್ದಾನೆ. ಇದರ ಅರ್ಥ ಅವನಲ್ಲಿರುವ ಗುಣಗಳ ಕಲ್ಪನೆ ನಮಗೆ ಬರುವದಿಲ್ಲವೆಂದೂ ಬ್ರಹ್ಮನು ಸರ್ವಧರ್ಮೋಪೇತನು ಸರ್ವಶಕ್ತಿಮಂತನು. ಈ ಬ್ರಹ್ಮನೇ ಉಪಾದಾನ ಕಾರಣನಾಗಿ ಪರಿಣಾಮ ಹೊಂದಿ ಈ ಜಗತ್ತು ಹುಟ್ಟಿತು. ಇವು ಒಂದೇ ಬೀಜದ ವೃಕ್ಷ ಎಲೆ, ಹೂ, ಟೊಂಗಿಗಳೇ ಈ ಜಗತ್ತು. ಮತ್ತು ಇವು ಸ್ವಗತ ಬೇಧಗಳು. ಹೀಗೆ ಕಾರ್ಯರೂಪದಿಂದ ನಾನಾ ಆದರೆ ಕಾರಣ ರೂಪದಿಂದ ಒಂದು ಈ ತರಹದ ಭೇದಾಭೇದವನ್ನು ಹೇಳುತ್ತಾರೆ. ಇದು ಚಿದ್ವಿಲಾಸ; ಪರಮಾತ್ಮನ ಲೀಲೆಯು ಈ ಸಂಸಾರ. ಆದರೆ ಇದು ಭ್ರಾಂತಿ ಅಥವಾ ಮಿಥ್ಯಾ ಅಲ್ಲ. ಸುವರ್ಣದ ಅಲಂಕಾರದಂತೆ ಅವಿಕೃತ ಪರಿಣಾಮವಾದ ಇವರದಾಗಿದೆ (೧೩—೨೨ರಲ್ಲಿ) ಜೀವನು ತಾನೇ ಪರಮಾತ್ಮನು ಇದ್ದರೂ ಸಹ ಉಪಾಧಿ ನಿಮಿತ್ತವಾಗಿ **ಸುಖದುಃಖಗಳಿಗೆ ಈಡಾಗುತ್ತಾನೆಂದು ಇವರ ತಿಳುವಳಿಕೆ.** ಈ ಶ್ಲೋಕದಲ್ಲಿ 'ಜೀವನು ಪರಮಾತ್ಮನು ಇದ್ದರೂ ಸಹ' ಎಂಬುದು ಇವರ ಕೈಗಂಟು. ಜೀವನು ಸಚ್ಚಿದಾನಂದ ರೂಪಿ ಇದ್ದರೂ ಸಹ ಅವನು ಸುಖದುಃಖಾದಿಗಳಿಗೆ ಈಡಾಗಿದ್ದಾನೆಂಬುದು ಗೀತೆಯ ಮತ.

ಮುಂದೆ ಜೀವಾತ್ಮನು ಪರಮಾತ್ಮನ ಅಂಶವಿರುವದರಿಂದ ಅವನು ನಿತ್ಯಸರ್ವಜ್ಞ ಮತ್ತು ವಿಭು ಇರುತ್ತಾನೆ. ಆದರೆ ಉಪಾಧಿಯಲ್ಲಿ ಸಿಲುಕಿದ್ದರಿಂದ ಅವನು ಅಜ್ಞನು ಅಣು ಎಂದು ತಿಳಿಯುತ್ತಾನೆ. ಆ ಮೇಲೆ ಜ್ಞಾನದಿಂದ ಮುಕ್ತಿಯನ್ನು ಹೊಂದು

ತ್ತಾನೆ ಆದರೆ ತಾನೇ ಸರ್ವಜ್ಞ ಮತ್ತು ಪರಮಾತ್ಮನಿರುವವನಿಗೆ ಅಜ್ಞಾನ ಹೇಗೆ ಬಂತೆಂಬುದನ್ನು ಈ ವಾದಿಗಳಿಗೆ ಹೇಳಲು ಶಕ್ಯವಿಲ್ಲ. 'ಜೀವನು ಸಚ್ಚಿದಾನಂದನಿದ್ದಾನೆ. ಆದರೂ ಪರಮಾತ್ಮನಿಂದ ಭಿನ್ನನಾಗಿ ಅವನಿಗೆ ಅಧೀನನಾಗಿದ್ದಾನೆ' ಎಂದು ಒಪ್ಪಿದರೆ ಮಾತ್ರ ಆ ಪರಮಾತ್ಮನ ಇಚ್ಛೆಯಿಂದ ಜೀವನಿಗೆ ಅಜ್ಞಾನ ಬಂದುದನ್ನು ಹೇಳಬಹುದು ಇಲ್ಲವಾದರೆ ಅಜ್ಞಾನವೇ ಕೂಡುವದಿಲ್ಲವೆಂಬುದನ್ನು ಈ ಮೊದಲೇ ವಿಸ್ತಾರವಾಗಿ ಚರ್ಚಿಸಿದ್ದೇವೆ

ಹೀಗೆ ಈ ಕರಂದಿಕರರ ಊಳಿದ ಮಾತುಗಳು ಸರಿ ಇದ್ದರೂ ಮಧ್ವಾಚಾರ್ಯರಿಗೆ ಅನುಕೂಲವಿದ್ದರೂ ಜೀವಬ್ರಹ್ಮ ಅಭೇದವಾದವು ಗೀತೆಗೆ ಸಮ್ಮತವಲ್ಲದ್ದರಿಂದ ಅವರ ಭೇದಾಭೇದವಾದವು ಸರಿ ಹೋಗುವದಿಲ್ಲೆಂಬುದು ಸಿದ್ಧವಾಯಿತು. ಶಂಕರಾಚಾರ್ಯರ ಅದ್ವೈತವಾದವೂ ಕೂಡುವದಿಲ್ಲ, ಈ ಭೇದಾಭೇದ ವಾದವೂ ಕೂಡುವದಿಲ್ಲ. ರಾಮಾನುಜರ ವಿಶಿಷ್ಟಾದ್ವೈತವಾದವೂ ಗೀತೆಗೆ ಸರಿಹೊಂದುವದಿಲ್ಲ. ರಾಮಾನುಜರ ತತ್ವದಲ್ಲಿ ೧) ಜೀವನು ಬ್ರಹ್ಮನ ವಿಶೇಷಣನು ಎಂಬ ವಾದಕ್ಕೆ ಗೀತೆಯಲ್ಲಿ ಎಲ್ಲಿಯೂ ಪುರಸ್ಕಾರವಿಲ್ಲ ೨) ಬ್ರಹ್ಮನು ಜಗತ್ತಿನ ಉಪಾದಾನ ಕಾರಣನೆಂದೂ ಗೀತೆಯಲ್ಲಿ ಹೇಳಿಲ್ಲ. मम योनिः महद्ब्रह्म ಭಗವಂತನು ನಿಮಿತ್ತಕಾರಣನುಮಾತ್ರ ಪ್ರಕೃತಿಯು ಉಪಾದಾನ ಕಾರಣವೆಂದು ಹೇಳುತ್ತಾನೆ. ೩) ಮುಕ್ತಿಯಲ್ಲಿ ಎಲ್ಲರೂ ಪರಮಾತ್ಮನಂತೆ ಆಗುವದಿಲ್ಲ ममसाधर्म्यमागताः ಎಂಬುದು ಕೆಲವು ವಿಷಯಗಳಲ್ಲಿ ಮಾತ್ರ (सर्गेऽपिनोपजायते) ಅವರವರ ಸಾಧನಗಳಂತೆ ಮುಕ್ತಯಲ್ಲಿಯೂ ಆನಂದ ತಾರತಮ್ಯವುಂಟು. ಅದುದರಿಂದ ಗೀತೆಯ ಮತವು ಯಾವದು ಎನ್ನುವದನ್ನು ಚರ್ಚಿಸಿದ್ದೇವೆ.

ಸತ್ಯಭೂತನಾದ ಗುಣಸಂಪನ್ನನಾದ ಪರಮೇಶ್ವರನೇ ಪರಬ್ರಹ್ಮನು; ಅವನೇ ಶ್ರೀಕೃಷ್ಣನು. ಅವನೇ ಸ್ವಾಧೀನವಾದ ಜಡಪ್ರಕೃತಿಯನ್ನು ಅಧೀನರಾದ ಚೇತನರನ್ನೂ ತೆಗೆದುಕೊಂಡು ಸ್ವೇಚ್ಛೆಯಿಂದ ಸತ್ಯವಾದ ಜಗತ್ತನ್ನು ಹುಟ್ಟಿಸಿದ್ದಾನೆ. ಅವನ ಇಚ್ಛೆಯಿಂದಲೇ ಚೇತನರಾದ ಜೀವರು ಅಜ್ಞಾನಕ್ಕೂ ಸುಖ–ದುಃಖಗಳಿಗೂ ಒಳಗಾಗುತ್ತಾರೆ. ಆತನ ಅನುಗ್ರಹದಿಂದಲೇ ಈ ಅಜ್ಞಾನದಿಂದ ಮೋಚನೆ ಹೊಂದುತ್ತಾನೆ. ಈ ಮತವನ್ನು ಕೃಷ್ಣನು ಅನೇಕ ಶ್ಲೋಕಗಳಲ್ಲಿ ಹೇಳಿದ್ದಾನೆ मोक्षयिष्यामिमाशुचः ಆದುದರಿಂದ ಅವನನ್ನು ಮೊದಲು ಸರಿಯಾಗಿ ತಿಳಿದುಕೊಳ್ಳಬೇಕು ಮೂಢತನದಿಂದ ಕೃಷ್ಣನನ್ನು ಸಾಮಾನ್ಯ ಮನುಷ್ಯನೆಂದು (अवजानन्तिमा मूढाः) ತಿಳಿದುಕೊಂಡರೆ ಅವರನ್ನು ನರಕದಲ್ಲಿ ಚಲ್ಲುತ್ತೇನೆಂದು ಅವನೇ ಹೇಳಿದ್ದಾನೆ ಆದುದರಿಂದ ಪರಮಾತ್ಮನ ಸ್ವರೂಪವನ್ನು ಅರಿತುಕೊಂಡು ಮನನದಿಂದ ಅರಗಿಸಿಕೊಂಡು ಭಕ್ತಿಯಿಂದ ಅನನ್ಯಭಾವದಿಂದ ಆತನನ್ನು ಶರಣು ಹೋದರೆ ಅವನು ಪ್ರತ್ಯಕ್ಷನಾಗಿ ಪ್ರಸನ್ನನಾಗು

ತ್ತಾನೆ. ಆದರೆ ಈ ಭಾವೋದ್ರೇಕದಲ್ಲಿ ನಿಮ್ಮ ಸ್ವೋಚಿತ ಕರ್ಮಗಳನ್ನು ಎಂದೂ ಬಿಡಬಾರದು ಆ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಆತನ ಆರಾಧನೆಯೆಂದು ಆಚರಿಸಿದರೆ ಆತನು ಪ್ರಸನ್ನನಾಗಿ ನಮ್ಮನ್ನು ಎಲ್ಲ ಬಂಧನಗಳಿಂದ ಬಿಡುಗಡೆ ಮಾಡುತ್ತಾನೆ

ಈ ತತ್ವವಾದದಲ್ಲಿ ಪರಮೇಶ್ವರನಿಗೆ ಯೋಗ್ಯ ಸ್ಥಾನವಿದೆ. ಜಗತ್ತು ಜೀವನಗಳಿಗೆ ಸಾರ್ಥಕತೆಯಿದೆ, ಜೀವನ ಕರ್ತೃತ್ವಕ್ಕೂ ಹಾನಿಯಿಲ್ಲವೆಂಬುದನ್ನಷ್ಟು ನೋಡಿರಿ ಮೇಲೆ ಮೇಲೆ ಅರ್ಜುನನಿಗೆ ಶ್ರೀಕೃಷ್ಣನು ಅವನಿಗೆ ಕರ್ತೃತ್ವವಿದೆಯೆಂದು ಸ್ಮರಣೆಗೆ ತಂದುಕೊಡುತ್ತಾನೆ. ब्रह्मण्याधाय कर्माणि सग त्य त्यक्त्वा करोतिय· ಎಂದು ಕರ್ತೃತ್ವದ ಕಲ್ಪನೆಯನ್ನು ಶ್ರೀಕೃಷ್ಣನು ಸ್ಪಷ್ಟಪಡಿಸಿದ್ದಾನೆ. ಪರಬ್ರಹ್ಮನೇ ಸ್ವತಂತ್ರ ಪ್ರವರ್ತಕನೆಂದೂ ಭಾವಿಸಿ ಕರ್ಮದ ಫಲವನ್ನು ಅವನಿಗೆ ಸಮರ್ಪಿಸಿ ಕಾರ್ಯ ಮಾಡಬೇಕೆಂದು ಶ್ರೀಕೃಷ್ಣನ ಅಭಿಪ್ರಾಯ. ಶ್ರೀ ಸತ್ಯಧ್ಯಾನ ತೀರ್ಥರು ಶ್ರೀಗೀತಾತತ್ವದಲ್ಲಿ ಹೀಗೆ ಬರೆದಿದ್ದಾರೆ– "ಜೀವನು ಸಂಧ್ಯಾದಿ ಕರ್ಮಗಳನ್ನು ಮಾಡುವದರಲ್ಲಿ **ಸಮರ್ಥನಿರುವನು.** ಹಾಗಿದ್ದರೂ ಈ ಬಲವನ್ನು ಸ್ವತಂತ್ರವಾಗಿ (ಪರಮಾತ್ಮನನ್ನು ಅಪೇಕ್ಷಿಸದೆ) ಉಪಯೋಗಿಸುವದಕ್ಕೆ ಅವನಿಗೆ ಬರುವದಿಲ್ಲ ಆದುದರಿಂದ ಜೀವನು ಒಂದು ವೇಳೆ ಸಂಧ್ಯಾದಿ ಕರ್ಮಗಳನ್ನು ಮಾಡಬೇಕಾದರೆ ಜೀವನು ಪ್ರಯತ್ನಪೂರ್ವಕವಾಗಿ ವ್ಯಾಪಾರ ಮಾಡಬೇಕು. ಅದೇ ಕಾಲದಲ್ಲಿ ಪರಮಾತ್ಮನೂ ನಿಯಾಮಕತನದಿಂದ ಅದೇ ವ್ಯಾಪಾರವನ್ನು ಮಾಡಬೇಕು ಒಂದು ವ್ಯಾಪಾರವನ್ನು ಇಬ್ಬರು ಮಾಡಿದಂತಾಯಿತೆ ಹೊರತು ಜೀವನು ಮಾಡಲಿಲ್ಲವೆಂದಾಗುವದಿಲ್ಲ. ಜೀವನು ಅಸ್ವತಂತ್ರನಾಗಿ ಮಾಡಿದುದರಿಂದ (ರಾಜಾಜ್ಞಾಧಾರಕನಾದ ಭಟನು ದೇಶರಕ್ಷಣೆ ಮಾಡಿದಂತೆ) ಅಲ್ಪ ಪುಣ್ಯವನ್ನು ಹೊಂದುವನು. ಪರಮಾತ್ಮನು ಸ್ವತಂತ್ರನಾಗಿ ಮಾಡಿದುದರಿಂದ ಹೆಚ್ಚು ಫಲವನ್ನು ಹೊಂದುವನು ವಸ್ತುತಃ ಒಂದೊಂದು ಕಾರ್ಯವು ನೆರವೇರಬೇಕಾದರೂ ಐದು ಕಾರಣಗಳಿರುತ್ತವೆ (पंचैतानि महाबाहो कारणानि निबोधमे ಎಂದು ಇತ್ಯಾದಿ ವಾಕ್ಯಗಳಲ್ಲಿ ಶ್ರೀಕೃಷ್ಣನು ಹೇಳಿರುವದರಿಂದ ಜೀವರುಗಳು ಪ್ರಯತ್ನ ಮಾಡದೇ ಸುಮ್ಮನೇ ಮಲಗಿರಲೆಂದು ಹೇಳುವದು ತಾಮಸ ಜನರ ಮಾತು. .. ....... . . ... . कर्ता शास्त्रार्थवत्वात् ಇತ್ಯಾದಿ ಬ್ರಹ್ಮಸೂತ್ರಗಳೂ ("प्रयत्नमेकमता विधाय भूतिमाप्नुवः") ಇತ್ಯಾದಿ ಭೀಮಸೇನ ದೇವರ ವಚನಗಳೂ उद्योगिनं पुरुष सिंहमुपैति लक्ष्मीः ಮುಂತಾದ ಭಾರತ ನೀತಿಗಳೂ ಈ ವಿಷಯದಲ್ಲಿ ಪ್ರಮಾಣಗಳಾಗಿರುವವು. ಸ್ವಾತಂತ್ರ್ಯವು ಮಾತ್ರ, ಪರಮಾತ್ಮ ಮಾತ್ರ ವೃತ್ತಿಯಾದ ಧರ್ಮವು."

ಇದರಿಂದ ಜೀವನಿಗೆ ಕರ್ತೃತ್ವವನ್ನೂ (ಅಸ್ವತಂತ್ರವಾದ) ಗೀತೆಯು ಒಪ್ಪಿದೆ, ಆದುದರಿಂದಲೇ ಯುದ್ಧ ಮಾಡುವದಿಲ್ಲೆಂದು ಮೋಹದಿಂದ ವಾದಿಸುವ ಅರ್ಜುನನಿಗೆ ತನ್ನ ಸ್ವಕರ್ಮವಾದುದರಿಂದ ಪ್ರಯತ್ನಪೂರ್ವಕವಾಗಿ ಫಲದ ಆಸೆಯನ್ನು ಬಿಟ್ಟು

ಯುದ್ಧವನ್ನು ಮಾಡಬೇಕೆಂದು ಆಗ್ರಹದಿಂದ ಹೇಳಿದ್ದು ಸಯುಕ್ತಿಕವಾಗಿ ಹೊಂದಿಕೆಯಾಗುವದರಿಂದ ಈ ತಾತ್ಪರ್ಯವು ತತ್ವಜ್ಞಾನದ ತಳಹದಿಯ ಮೇಲೆ ನಿಂತಿದೆ ಎಂಬುದು ಸ್ಪಷ್ಟವಾಗುತ್ತದೆ

Dr R D Ranade ಯವರು ತಮ್ಮ Bhagavadgita as a philosophy of God realisation ದಲ್ಲಿ "ಗೀತೆಯು ಪರಮಾತ್ಮ ಸಾಕ್ಷಾತ್ಕಾರದಲ್ಲಿ ಪರಮ ತಾತ್ಪರ್ಯವುಳ್ಳದ್ದಾಗಿದೆ ಆದರೆ ಆಧುನಿಕ ವಿಚಕ್ಷಣರು ಭಗವದ್ಗೀತೆಯ ತಾತ್ಪರ್ಯ ಶೋಧದಲ್ಲಿ ಅನೇಕ ದಾರಿಗಳ ಗೊಂದಲವನ್ನೆಬ್ಬಿಸಿ ದಾರಿಗಾಣದಾಗಿದ್ದಾರೆ. ನಿಜವಾಗಿ ಗೀತೆಯು ಭಕ್ತಿಪ್ರಧಾನವಾದ ಅಪರೋಕ್ಷ ಶಾಸ್ತ್ರದ (Mysticism) ಮುಖ್ಯ ಗ್ರಂಥವು ಸಾಮಾನ್ಯ ಮನುಷ್ಯರಿಗೆ ಗೀತೆಯಲ್ಲಿ ವಿರೋಧಗಳು ತೋರಿದರೂ ಅನುಭಾವಿಯು ಅದರಲ್ಲಿ ಸುಸಂಗತ–ಮಾಧುರ್ಯವನ್ನೇ ಕಾಣುತ್ತಾನೆ" ಎಂದು ಪ್ರತಿಪಾದಿಸಿದ್ದಾರೆ

ತತ್ವ ವಿಷಯದಲ್ಲಿ ರಾನಡೆಯವರು ಜ್ಞಾನೇಶ್ವರರ ವಾದವನ್ನೂ ಕಾವ್ಯಮಯವಾದ ಅವರ ಸರಣಿಯನ್ನೂ ಬಹು ಮೆಚ್ಚಿದ್ದಾರೆ ಆದರೆ ಜ್ಞಾನೇಶ್ವರಿಯವರ ಭಕ್ತಿಯು ಮೆಚ್ಚುಗೆಯದಾಗಿದ್ದರೂ ಅವರದು ಅದ್ವೈತ ವಾದ ಆದುದರಿಂದ ಅವರ ವಾದದ ಪ್ರಾರಂಭವು ಕಾವ್ಯಮಯವಾಗಿದ್ದರೂ ಅಂತ್ಯವು ಮಾತ್ರ ನೀರಸವಾದ ಅದ್ವೈತದಲ್ಲಿ ಪರ್ಯವಸಾನ ಹೊಂದುತ್ತದೆ ಅದ್ವೈತ ಬ್ರಹ್ಮನನ್ನು ಸೂರ್ಯನೆಂದು ಜ್ಞಾನೇಶ್ವರರು ಕರೆದಿದ್ದಾರೆ. ಈ ಅಧ್ಯಾತ್ಮಿಕ ಸೂರ್ಯನು ಉದಯಿಸಿದಾಗ ಜೀವರು ತಮ್ಮ ಗೂಡುಗಳನ್ನು ಬಿಟ್ಟು ಆಧ್ಯಾತ್ಮಿಕ ಯಾತ್ರೆಗೆ ಹೊರಡುತ್ತಾರೆಂದು ಹೇಳುತ್ತಾರೆ ಒಳ್ಳೆ ಸುಂದರ ಕಲ್ಪನೆ ಅಹುದು. ಆದರೆ ಪರ್ಯವಸಾನವು ಜೀವನು ಬ್ರಹ್ಮನಲ್ಲಿ ಒಂದಾಗುದನ್ನು ಹೇಳುವದರಿಂದ ಇದು ಗೀತೆಗೆ ಸಮ್ಮತವಾದ ವಿಷಯವಲ್ಲ "ಆಧ್ಯಾತ್ಮಿಕ ಸೂರ್ಯನು ಉದಯಿಸಿದಾಗ ಸೂಕ್ಷ್ಮ ಶರೀರಗಳೆಂಬ ಕಮಲಗಳಲ್ಲಿ ಬಂದಿಯಾಗಿದ್ದ ಜೀವರೆಂಬ ಭ್ರಮರಗಳು ತಮ್ಮ ಬಂದೀವಾಸದಿಂದ ಪಾರಾಗಿ ಶುದ್ಧ ಹವೆಯಲ್ಲಿ ಹಾರಾಡುತ್ತವೆ ಒಳ್ಳೆ ರಮ್ಯವಾದ ದೃಷ್ಟಾಂತ, ಆದರೆ ಕೊನೆಯಲ್ಲಿ ಆಧ್ಯಾತ್ಮ ಸೂರ್ಯನ ಉದಯವಾದಾಗ ಜೀವನೊಬ್ಬನೇ ಉಳಿಯುತ್ತಾನೆ ತಿಳಿಯಲು ಇನ್ನೊಂದು ವಸ್ತುವೇ ಇರುವದಿಲ್ಲ ಕರ್ತೃಕರ್ಮಭಾವವೇ ಅಳಿಯುತ್ತದೆಂದು ಅವರ ಅನುಭವ- ಇದು ಗೀತೆಯಲ್ಲಿ ಇಲ್ಲವೇ ಇಲ್ಲ

ಅದರ ಹಾಗೆಯೇ ಜ್ಞಾನೇಶ್ವರರು -ದೇವನೊಡನೆ ಯೋಗವೆಂದರೆ ಶರಣಾಗತಿಯು Surender philosophically means identification" ಶರಣಾಗತಿಯೆಂದರೆ ಐಕ್ಯವೆಂದು ತತ್ವಜ್ಞಾನದ ಕೋಶವು ಹೇಳುತ್ತದೆ ಅತ್ಯಂತ ಭಿನ್ನರಾದ ಜೀವ ಮತ್ತು ಈಶರು ಶರಣಾಗತಿಯಲ್ಲಿ ಒಂದೇ ಆಗುತ್ತಾರೆನ್ನುವದು ತರ್ಕದ ವಿಧಾನವೇ, ಶಬ್ದದ ಉತ್ಪತ್ತಿಯ ಸರಣಿಯೇ;ಅನುಭವದ ಪ್ರಕಾರವೇ;ಭಕ್ತಿಯ ಉದ್ರೇಕವೇ! ತಿಳಿಯುವದಿಲ್ಲ

ಇಲ್ಲಿ ಇನ್ನೊಂದು ವಿಧಾನವಂತೂ ಅಪಾರ್ಥದ ಸೀಮೆಯನ್ನು ಮುಟ್ಟಿದೆ. When Sanjaya was hearing the sublime conversation between Arjuna and Krishna he was so enraptured that he became mingled with-both In this way in a state of union all difference is annihilated. "ಸಂಜಯನು ಅರ್ಜುನ ಮತ್ತು ಕೃಷ್ಣರ ಗಂಭೀರವಾದ ಸಂಭಾಷಣೆಯನ್ನು ಕೇಳಿದಾಗ ಅತ್ಯಂತ ಹರ್ಷಗೊಂಡನು ಅದರ ಪರಿಣಾಮವಾಗಿ ಅವನು ಇಬ್ಬರಲ್ಲಿಯೂ ಬೆರತು ಹೋದನು. ಇದೇ ರೀತಿಯಾಗಿ ಸಮ್ಮಿಲನದ ಸ್ಥಿತಿಯಲ್ಲಿ ಎಲ್ಲ ಭೇದವೂ ನಾಶವಾಗುತ್ತದೆ.ಮೊದಲನೇದಾಗಿ ಈ ವಿಧಾನಕ್ಕೆ ಗೀತೆಯಲ್ಲಿ ಆಧಾರವೇ ಇಲ್ಲ. हृष्यामिचमुहुर्मुहुः ಮತ್ತೆ ಮತ್ತೆ ಹರ್ಷಗೊಂಡೆನು. विस्मयो मे महान् ಬಹಳ ಚಕಿತನಾದೆನು ಎಂದು ಸಂಜಯ ಹೇಳಿದ್ದಾನೆ, ಅವರೊಡನೆ ಸಮ್ಮಿಲಿತನಾದೆನೆಂದು ಹೇಳಿಲ್ಲ. ಒಮ್ಮೆ ಹರ್ಷಗೊಂಡು ಮತ್ತೊಮ್ಮೆ ಹರ್ಷ ಹೊಂದಲಿಕ್ಕೆ ಅವರಿಂದ ಬೇರೆಯಾಗಿ ಉಳಿದಿದ್ದಾನೆ. ಅಷ್ಟೇ ಅಲ್ಲ; ಸಂಜಯನು ಕೃಷ್ಣಾರ್ಜುನರೊಡನೆ ಪೂರ್ಣ ಬೆರೆತಿದ್ದರೆ ಕೊನೆಯ ಮಂಗಲಶ್ಲೋಕ (यत्रयोगेश्वर. कृष्ण,) ವನ್ನು ಹೇಳಲಿಕ್ಕೆ ಅವನು ಉಳಿಯುತ್ತಿರಲಿಲ್ಲ ಇವು ಬರೀ ಭಾವಾವೇಶದ ಮಾತುಗಳೇ ಹೊರತು ವಿಚಾರಪರಿಪಾಕದಿಂದ ಹುಟ್ಟಿದ ನಿರ್ಣಯಗಳಲ್ಲ.

ಜ್ಞಾನೇಶ್ವರರು ಕೊನೆಯದಾಗಿ ಹೇಳಿರುವ ಒಂದು ಮಾತು ಬಹು ಮಹತ್ವದ್ದು— "Instead of there being a final and perfect identity beetween the mystic and God the mystic moves towards God and so we may say that he meets God at infinity". ಭಕ್ತ ಮತ್ತು ಈಶರಿಬ್ಬರೂ ಪೂರ್ತಿಯಾಗಿ ಕೊನೆಗೆ ಐಕ್ಯಹೊಂದುತ್ತಾರೆಂದು ಹೇಳುವ ಬದಲು, ಭಕ್ತನು ಈಶನ ಕಡೆಗೆ ಚಲಿಸುತ್ತಾನೆ ಮತ್ತು ಆದುದರಿಂದ ಅವನನ್ನು ಅನಂತ ಕಾಲದಲ್ಲಿ ಹೊಂದುತ್ತಾನೆಂದು ನಾವು ಹೇಳಬಹುದು". ಇದರ ಅರ್ಥವೆಂದರೆ ಜೀವನಿಗೂ ಈಶನಿಗೂ ಬಹಳ ಸ್ವಲ್ಪ ಅಂತರವಿರುತ್ತದಂತೆ. ಚತುರ್ದಶಿಗೂ ಪೌರ್ಣಿಮೆಗೂ ಅಂತರವಿದ್ದಷ್ಟು ಮಾತ್ರ ಭಕ್ತನಿಗೂ ಪರಿಪೂರ್ಣತೆಗೂ ಅಂತರವಿರುತ್ತದಂತೆ ಎಲ್ಲಿಯವರೆಗೆ ಭಕ್ತನಿಗೆ ದೇಹವಿದೆ ಅಲ್ಲಿಯವರೆಗೆ ಅವನು ಬ್ರಹ್ಮನಿದ್ದರೂ ಭಕ್ತನೇ. ಪೂರ್ಣತೆಯು ನಿಧಾನವಾಗಿ ಬರುತ್ತದೆ ಇನ್ನೊಂದು ವಿಚಿತ್ರ ಮಾತು - "ದೇವನಾದ ಶಂಕರನೂ ಸಹ ಇನ್ನೂ ಅಧ್ಯಾತ್ಮಮಾರ್ಗದ ಮೇಲಿನ ಪಾಂತಸ್ಥ (जये मार्गींचा कावडी महेश अजुनी) ಶಂಕರನ ಅವಸ್ಥೆಯೇ ಹೀಗಿದ್ದಾಗ ಉಳಿದ ಹೀನ ಮನುಷ್ಯರ ಗತಿಯೇನು ?

ಭಕ್ತನು ಎಂದೋ ಪೂರ್ಣ ಐಕ್ಯವನ್ನು ಹೊಂದಿದರೂ ಅದು ಈಗಲ್ಲ; ಈಗ ಅವನು ಭಕ್ತನೇ ಈಶನು ಈಶನೇ ಅಂತಿನು ಧ್ಯೇಯ ಐಕ್ಯವಾಗಿದ್ದರೂ ಅದು ಇಲ್ಲದಂತೆಯೇ ಭಕ್ತನು ಭಕ್ತನಾಗಿಯೇ ಉಳಿಯುವನು. ಇದರ ಅರ್ಥ ಐಕ್ಯ ಅಸಾಧ್ಯ;

ಭಕ್ತಿ ಮಾತ್ರ ಸಾಧ್ಯ, ಬಹುಕಾಲ ಜ್ಞಾನಿಯು ಸಹ ಭಕ್ತನಾಗಿಯೇ ಉಳಿಯುತ್ತಾನೆ ಬಹುಕಾಲದ ನಂತರ ಐಕ್ಯ ಹೊಂದಬಹುದು; ಇನ್ನೂ ಶಂಕರನೇ ಐಕ್ಯಹೊಂದಿಲ್ಲ. ಇದೇನು ಅದ್ವೈತದ ಮೇಲಿನ ಮೋಹವೇ ಭಕ್ತಿಯಮೇಲಿನ ಅನುರಾಗವೇ? ಇದಕ್ಕಿಂತ ಸ್ಪಷ್ಟವಾಗಿ ಕೊನೆಯವರೆಗೂ ಶುದ್ಧ ಭಕ್ತಿಯೇ ಉಳಿಯುತ್ತದೆಂದು ಒಪ್ಪುವದು ಸರಿಯಲ್ಲವೇ ?

"ವಿಶ್ವಾತ್ಮನಿಗೂ ಜೀವಾತ್ಮನಿಗೂ ಐಕ್ಯವೇ ಎಂದು ಉಪನಿಷತ್ತುಗಳು ಹೇಳಿದರೂ ಈ ವಿಚಾರವು ಗೀತೆಯಲ್ಲಿ ಪ್ರತಿಪಾದಿತವಾಗಿಲ್ಲ ಗೀತೆಯಲ್ಲಿ ಈ ಅದ್ವೈತವಾದವೂ ಅದರ ಭಕ್ತಿಪ್ರಾಧಾನ್ಯತೆಗೆ ಹೊಂದುವದಿಲ್ಲ ಗೀತೆಯಲ್ಲಿ ಜೀವನು ಪರಮಾತ್ಮನ ಅಂಶ ಎಂದರೆ ಭಾಗವೆಂದು ಹೇಳಲಾಗಿದೆ. ಆದರೂ ಭಗವಂತನನ್ನು ಜೀವಾತ್ಮನಿಗಿಂತ ಉತ್ತಮ ಪುರುಷನೆಂದೂ; ಜೀವನಕ್ಕಿಂತ ಅತ್ಯಂತ ಶ್ರೇಷ್ಠನೆಂದೂ ಗೀತೆಯು ಸಾರುತ್ತದೆ." ಎಂದು Edgerton ಹೇಳುತ್ತಾರೆ.

ಡಾ ರಾಧಾಕೃಷ್ಣನ್ನವರು ಈ ರೀತಿಯಾಗಿ ಹೇಳುತ್ತಾರೆ— Liberation is not the isolation of the immortal spirit from the mortal human life but is the transfiguration of the whole man .His body, life and mind are not dissolved but are rendered pure and become the means and mould of Divine Light and he becomes his own master piece ಮಾನವನ ಮರ್ತ್ಯದೇಹದಿಂದ ಅಮರವಾದ ಆತ್ಮನನ್ನು ಬೇರ್ಪಡಿಸುವದು ಮಾತ್ರ ಮೋಚನೆಯಲ್ಲ ಆದರೆ ಇಡಿ ಮನುಷ್ಯನನ್ನೇ ಉತ್ತಮಗೊಳಿಸುವದು ಮೋಚನೆಯು. ಅವನ ಶರೀರ, ಜೀವನ, ಮತ್ತು ಮನಸ್ಸು- ಇವುಗಳನ್ನು ಲಯಗೊಳಿಸುವದಿಲ್ಲ. ಆದರೆ ಅವುಗಳನ್ನು ಶುದ್ಧೀಕರಿಸುತ್ತಾರೆ. ಮತ್ತು ದಿವ್ಯ ಪ್ರಕಾಶಕ್ಕೆ ಸಾಧನ ಮತ್ತು ಪಡಿಯಚ್ಚು ತಯಾರಾಗುವಂತೆ ಮಾಡುತ್ತಾರೆ The devotees dismiss the Advait emphasis on Knowledge as a damnable heresy or Soul killing error, ಭಕ್ತರು ಅದ್ವೈತದ ಜ್ಞಾನದ ಮೇಲಿನ ಆಗ್ರಹವನ್ನು ನರಕಕ್ಕೆ ಗುರಿಮಾಡುವ ಧರ್ಮದ್ರೋಹವೆಂದಾಗಲೀ ಅಥವಾ ಆತ್ಮಘಾತಕ ಪ್ರಮಾದವೆಂದಾಗಲೀ ಹೇಳುತ್ತಾರೆ.

ರಾಧಾಕೃಷ್ಣನ್ನರು ತಮ್ಮ An Idealist View of Life ದಲ್ಲಿ ಸ್ಪಷ್ಟವಾಗಿ ಈ ಮಾತನ್ನು ಹೇಳುತ್ತಾರೆ— We may sink into the bosom of the infinite........ There is only a general enrichment of personality It is more life and not less. ನಾವು ಪರಬ್ರಹ್ಮನ ಹೃದಯದಲ್ಲಿ ಲೀನವಾಗಬಹುದು........ನಾವು ನಮ್ಮ ವ್ಯಕ್ತಿತ್ವವನ್ನು ಸಂಪನ್ನಗೊಳಿಸುತ್ತೇವೆ. (ವ್ಯಕ್ತಿತ್ವವನ್ನು ಕಳೆದುಕೊಳ್ಳುವದಿಲ್ಲ) ಅಲ್ಲಿ ಹೆಚ್ಚು ಜೀವನವದೆ; ಕಡಿಮೆ ಇಲ್ಲ.

K. N Upadhya ಯವರ ಅಭಿಪ್ರಾಯದಲ್ಲಿ "ಭಗವದ್ಗಿತೆಯಲ್ಲಿ ಭಾಗವತ ಧರ್ಮವೂ ಮೂಲವಾಗಿದೆ ಮತ್ತು ಉಪನಿಷತ್ತುಗಳು ಮೂಲವಾಗಿದೆಯಾದುದರಿಂದ ಇವೆರಡಕ್ಕೂ ಸರಿ ಹೋಗುವಂತೆ ಭಕ್ತಿಗೆ ಹೆಚ್ಚಿನ ಪ್ರಾಧಾನ್ಯ ಕೊಡಲಾಗಿದೆ. There is no doubt that Bhagavadgita emphasizes faith and devotion of a monotheistic type ಏಕೇಶ್ವರ ವಾದಕ್ಕೆ ಹೊಂದುವ ಭಕ್ತಿ ಮತ್ತು ಶ್ರದ್ಧೆಗಳಿಗೆ ಗೀತೆಯಲ್ಲಿ ಅಸಂದಿಗ್ಧವಾಗಿ ಮಹತ್ವ ಕೊಡಲಾಗಿದೆ. ಮಾಯೆ ಯನ್ನು ಗೀತೆಯಲ್ಲಿ ಶಂಕರರ ಅರ್ಥದಲ್ಲಿ ಉಪಯೋಗಿಸಿಲ್ಲ. ಭ್ರಮೆ ಹುಟ್ಟಿಸುವ ಆರೋಪವೆಂಬ ಅರ್ಥದಲ್ಲಿ ಅಲ್ಲವೆಂದು ಉಪಾಧ್ಯಾಯರು ತಿಳಿಯುತ್ತಾರೆ.

ಈ ವಿಷಯದಲ್ಲಿ ಅರವಿಂದೋರವರಂತೂ ಅತಿ ನಿಷ್ಠುರವಾಗಿ ಹೇಳಿದ್ದಾರೆ:— "Mark that no where in the Geeta there is any indication that dissolution of the individual spiritual Being into the unmanifest is the true aim of yoga."

ಗೀತೆಯಲ್ಲಿ ಇದರಿಂದ ಸ್ಪಷ್ಟವಾಗಿ ಜೀವರು ಬ್ರಹ್ಮನಿಂದ ಭಿನ್ನರು ಎಂಬ ತತ್ವವು ನಿರ್ಧಾರಿತವಾಗುತ್ತದೆ ಇದರಿಂದ ಗೀತೆಯ ಮತವು ಏನೆಂಬುದು ಸಿದ್ಧವಾಯಿತು:— ಬ್ರಹ್ಮನಲ್ಲಿ ಸಗುಣ ನಿರ್ಗುಣ ಭೇದವಿಲ್ಲ, ಗುಣ ಸಂಪನ್ನನಾದ ಪುರುಷೋತ್ತಮನೇ ಅತೀತ ಬ್ರಹ್ಮನೂ ಅಹುದು, ಅಂತರ್ಯಾಮಿಯಾದ ಬ್ರಹ್ಮನೂ ಅಹುದು ನಿಜವಾದ ಬ್ರಹ್ಮನೇ ನಿಜವಾದ ಜಗತ್ತನ್ನು ಸೃಷ್ಟಿಸಿದ್ದಾನೆ ಈ ಜಗತ್ತು ಚೇತನಾಚೇತನಾತ್ಮಕ ವಾದುದು ಚೇತನ ಜೀವರುಗಳು ಅಜ್ಞರು ಆದರೂ ಸಚ್ಚಿದಾನಂದರು ಇವರ ಅಜ್ಞಾನವು ಹೊಂದಿಕೆಯಾಗಬೇಕಾದರೆ ಅವರು ಬ್ರಹ್ಮನಿಂದ ಅತ್ಯಂತ ಭಿನ್ನರು ಮತ್ತು ಅವನಿಗೆ ಅಧೀನರು ಎಂದು ಒಪ್ಪಬೇಕಾಗುತ್ತದೆ. ಇವರಿಗೆ ಯೋಗ್ಯವಾದ ಸಾಧನವೆಂದರೆ ಅಪರೋಕ್ಷ ಜ್ಞಾನ ಅದಕ್ಕಾಗಿ ಆಂತರಿಕವಾಗಿ ಭಕ್ತಿಪೂರ್ವಕವಾಗಿ ಶ್ರವಣ ಮನನ ನಿದಿ ಧ್ಯಾಸನ; ಮತ್ತು ಬಾಹ್ಯವಾಗಿ ಸ್ವೋಚಿತ ಕರ್ಮಾಚರಣೆ ಅದೂ ಫಲದ ಅಪೇಕ್ಷಾ ಇಲ್ಲದೇ ಪೂಜಾರೂಪವಾದುದು. ಅರ್ಜುನನು ಸ್ವೋಚಿತ ಕರ್ಮವನ್ನು ಸ್ವಜನರ ಮೇಲಿನ ಮೋಹ ದಿಂದ ಪಾಪವೆಂದು ಯುದ್ಧವನ್ನು ಪರಿತ್ಯಾಗ ಮಾಡಿದಾಗ ಮೇಲಿನ ತತ್ವಜ್ಞಾನವನ್ನು ಶ್ರೀ ಕೃಷ್ಣನು ಅವನಿಗೆ ಹೇಳಿ ಅವನು ಅಧಿಕಾರಿಕ ಪುರುಷನಾದುದರಿಂದ ಜ್ಞಾನಪೂರ್ವಕ-ವಾಗಿ ಭಕ್ತಿಯಿಂದ ವಿಜೃಂಭಿತನಾಗಿ ಕರ್ಮಯೋಗವನ್ನು ಆಚರಿಸಬೇಕೆಂದು ಹೇಳಿದನು. ಈ ಕರ್ಮಯೋಗವನ್ನು ಯಾವ ಆಶ್ರಮದವರಾದರೂ ಆಚರಿಸಬಹುದು; ಸನ್ಯಾಸಕ್ಕೆ ಯೋಗ್ಯರಿದ್ದವರು ಸನ್ಯಾಸವನ್ನು ಆಚರಿಸಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳ-ಬಹುದು; ಗೃಹಸ್ಥನೂ ಬ್ರಹ್ಮಚಾರಿಯೂ ಪರಮಾತ್ಮನನ್ನು ಈ ಕರ್ಮಯೋಗದಿಂದಲೆ ಭಗವಂತನನ್ನು ಮೆಚ್ಚಿಸಿ ಅವನ ಅಪರೋಕ್ಷವನ್ನು ಪಡೆಯಬಹುದು. ಜ್ಞಾನ ಕರ್ಮ

ಭಕ್ತಿಗಳಿಗೆ ಪರಸ್ಪರ ವೈರವಿಲ್ಲ; ಅವು ಒಂದನ್ನೊಂದು ಅಳಿಯಬೇಕಾಗಿಲ್ಲ ಅವು ಸಂವಲಿತವಾಗಿಯೇ ಪೂರ್ಣ ಸಾಧನವೆನಿಸುವವು ಯೋಗ್ಯತೆಯಂತೆ ಜ್ಞಾನಾಂಶವು ಹೆಚ್ಚು ಇದ್ದರೆ ಅವನು ಜ್ಞಾನಯೋಗಿ ಎನಿಸುವನು. ಹೀಗೆಯೇ ಕರ್ಮಯೋಗಿ ಭಕ್ತಿಯೋಗಿಗಳು. ಈ ಯೋಗ ಆಚರಿಸಬೇಕಾದರೆ ನಮ್ಮ ಜೀವವನ್ನೇ ಅದಕ್ಕೆ ತಕ್ಕ ಹಾಗೆ ಶಿಸ್ತಿಗೆ ಒಳಪಡಿಸಬೇಕು ಅದಕ್ಕೆ ಇಂದ್ರಿಯ ನಿಗ್ರಹಬೇಕು, ಯುಕ್ತಾಹಾರ-ವಿಹಾರಿಗಳಾಗಬೇಕು ಅನನ್ಯ ಭಾವನೆಯಿಂದ ಮಾಡಿದ ಕೆಲಸಗಳನ್ನೆಲ್ಲ ಭಗವಂತನಿಗೆ ಅರ್ಪಿಸಿ ಮನಸ್ಸಿನ ಪ್ರಸನ್ನತೆಯನ್ನು ಕಾಯ್ದುಕೊಂಡು ನ್ಯೋಚಿತ ಕರ್ಮಗಳನ್ನು ಆಚರಿಸಬೇಕು ಆದುದರಿಂದ ಯಾವ ಕಾರಣದಿಂದಲೂ ಅರ್ಜುನ ! ಯುದ್ಧವನ್ನು ಬಿಡಬೇಡವೆಂದು ಭಗವಂತನು ಅರ್ಜುನನಿಗೆ ೧೮ ಅಧ್ಯಾಯಗಳಲ್ಲಿ ಬಿಡಿಬಿಡಿಯಾಗಿ ಇಡಿಯಾಗಿ ಗೀತೆಯಲ್ಲಿ ಉಪದೇಶಿಸಿದನು. ಇದರಲ್ಲಿ ಒಂದೂ ಅಪಶ್ರುತಿಯಿಲ್ಲ, ಅತಿರೇಕವಿಲ್ಲ, ಅನುಚಿತವಿಲ್ಲ ಎಲ್ಲ ಸ್ವರಗಳೂ ವರ್ಜಾವರ್ಜದ ನಿಯಮವನ್ನು ಅನುಸರಿಸಿ ದಿವ್ಯವಾದ ಸುಮಧುರವಾದ ಸಂಗೀತವನ್ನು ಹೊರಡಿಸಿದವರು ವೇಣುಗೋಪಾಲ ಶ್ರೀ ಕೃಷ್ಣನು ಅದರ ತಾಳಕ್ಕೆ ಹೆಜ್ಜೆಹಾಕಿ ಕುಣಿದವರು ಮಧ್ವಾಚಾರ್ಯರು, ಉಳಿದವರೂ ಕುಣಿದಿದ್ದಾರೆ ಆದರೆ ಅವರ ಲಕ್ಷ್ಯ ಸ್ವಲ್ಪ ಭಗವಂತನ ಲಯಕ್ಕೆ ತಪ್ಪಿದ್ದರಿಂದ, ತಮ್ಮ ಯಾವದೋ ವಿಚಾರದಲ್ಲಿ ಮಗ್ನರಾದುದರಿಂದ ಅದಕ್ಕೆ ಹೊಂದಿಕೆಯಾಗಿಲ್ಲ ಸ್ವಲ್ಪ ಸ್ವಲ್ಪ ವಿರಸವಾಗಿವೆ ಎಂಬುದನ್ನೇ ಇಲ್ಲಿಯವರೆಗೆ ತೋರಿಸಿದ್ದಾಗಿದೆ

ಪಾಶ್ಚಾತ್ಯರು ಈ ಸಂಗೀತದ ಮಾಧುರ್ಯಕ್ಕೆ ಮುಗ್ಧರಾಗಿದ್ದರೂ, ಕೇಳಿ ಆನಂದ ಪಡುತ್ತಿದ್ದರೂ, ಹಾಡಿ ತೋರಿಸುವಷ್ಟು ಕುಶಲತೆ ಅಭ್ಯಾಸ ಪಡೆಯದೇ ಇದ್ದುದರಿಂದ ಬಹುಮಟ್ಟಿಗೆ ಯಶಸ್ವಿಗಳಾಗಿಲ್ಲ ಆದರೆ ಮಧ್ಯೆ ಮಧ್ಯೆ ಅವರು ತೋರಿದ ಮನೋವೈಶಾಲ್ಯ, ವಿಮರ್ಶೆಯಲ್ಲಿ ವಿಚಕ್ಷಣತೆ, ಜೀವನಕ್ಕೆ ಅಪೂರ್ವವಾದ ರೀತಿಯಿಂದ ಅನ್ವಯಿಸುವದು, ಭೌತಶಾಸ್ತ್ರದ ಆಕ್ರಮಣವನ್ನು ತಡೆಗಟ್ಟಿ ಅದಕ್ಕೆ ಲಕ್ಷ್ಮಣ ರೇಖೆಯನ್ನು ಎಳೆಯುವದು ಇವೇ ಮೊದಲಾದವುಗಳನ್ನು ತೋರಿದ್ದರಿಂದ ಅವರ ವಿಮರ್ಶೆ, ವ್ಯಾಖ್ಯೆ, ಟೀಕಾ, ಟಿಪ್ಪಣಿಗಳು ಸಹ ಬಹು ಉಪಕಾರಿಯಾದುದರಿಂದ ಅವುಗಳಿಗೆ ಸಹ 'ಗೀತಾವಲೋಕನ'ದಲ್ಲಿ ಅವಕಾಶ ದೊರೆತಿದೆ ಬೆಳಕು ಯಾವ ಕಿಡಿಕಿಯಿಂದ ಬಂದರೂ ಬಿಟ್ಟು ವಿಷಾರಿ ಗಾಳಿಯನ್ನು ಯಾವ ದ್ವಾರದಿಂದಲೂ ಬಾರದಂತೆ ಜಾಗರೂಕರಾಗ ಲಕ್ಷ್ಯ ಯತ್ನಿಸಿದ್ದೇವೆ.

Garbe (ಗಾರ್ಬೆ)ಯವರು ಹೆಚ್ಚು ಲಕ್ಷವನ್ನು ಗೀತೆಯ ಮೂಲ ಸ್ವರೂಪದ ಶೋಧನೆಗಾಗಿ ಮೀಸಲಾಗಿ ಇಟ್ಟಿದ್ದಾರೆ ವೇದಾಂತಪರವಾದ ಮೀಮಾಂಸಾಪರವಾದ ಶ್ಲೋಕಗಳನ್ನು ಹಿಂದುಗಡೆ ಸೇರಿಸಲಾಗಿದೆಯೆಂದು ಅವರ ಮತ. ವಿಶೇಷವಾಗಿ ಅದರಲ್ಲಿ ಅದ್ವೈತಕ್ಕೆ ಸ್ಥಾನವೇ ಇಲ್ಲವೆಂದು ಸಾಧಿಸಿದ್ದಾರೆ ಈಶ್ವರ ಸರ್ವೋತ್ತಮತ್ವವು ಗೀತೆ

ಯಲ್ಲಿ ಮುಖ್ಯವಾದ ವಿಷಯವೆಂದು ಎತ್ತಿ ಹಿಡಿದಿದ್ದಾರೆ. ತಾತ್ವಿಕ ಭಕ್ತಿಗೆ ಗೀತೆಯಲ್ಲಿ ಪುರಸ್ಕಾರವಿದೆಯೆಂದು ಅವರ ತಾತ್ಪರ್ಯ ಡಾ. ಭಾಂಡಾರಕರರು ಗಾರ್ಬೆಯವರ ಮತವನ್ನು ಮೆಚ್ಚಿದ್ದಾರೆ. ಗಾರ್ಬೆಯವರು ೭೦೦ ಶ್ಲೋಕಗಳಲ್ಲಿ ಹೀಗೆ ವಿಂಗಡಿಸಿದಾಗ ೧೭೦ ಶ್ಲೋಕಗಳನ್ನು ಬಿಡಬೇಕಾಯಿತು. ಇವು ಪ್ರಕ್ಷಿಪ್ತ ಶ್ಲೋಕಗಳೆಂದು ಹೇಳುತ್ತಾರೆ. ಆದುದರಿಂದ ಇವರ ವಾದಕ್ಕೆ ಪ್ರಕ್ಷಿಪ್ತವಾದ (Interpolationism) ಎಂದೇ ಹೆಸರು.

Edgertonರು "ಹೀಗೆ ಪ್ರಕ್ಷಿಪ್ತವೆಂದು ಶ್ಲೋಕಗಳನ್ನು ಬಿಟ್ಟಾಗ ಗ್ರಂಥದಲ್ಲಿ ಸಾತತ್ಯ ಉಳಿಯುವದಿಲ್ಲವೆಂದು ಆಕ್ಷೇಪಿಸುತ್ತಾರೆ

Holtzman ರು ಸರ್ವಬ್ರಹ್ಮವಾದ(Pantheism)ವನ್ನು ಎತ್ತಿ ಹಿಡಿದಿದ್ದಾರೆ. ಎಲ್ಲವೂ ಬ್ರಹ್ಮ ಎಂಬುದೇ ಅದರ ತಾತ್ಪರ್ಯ. ಹರಿಗೀತೆಯಲ್ಲಿ ದ್ರೋಣನು ಕೃಷ್ಣನ ಸ್ಥಳದಲ್ಲಿ ಹೇಳುತ್ತಾನೆ, ಮುಂದಿನ ಗೀತೆಯಲ್ಲಿ ಕೃಷ್ಣನು ಹೇಳುತ್ತಾನೆಂದು ಅವರ ವಾದವಾಗಿದೆ.

Oldenburgರು-- ಮೊದಲಿನ ೧೨ ಅಧ್ಯಾಯಗಳೇ ಮೂಲಗೀತೆ. ಮುಂದಿನ ಆರು ಅಧ್ಯಾಯಗಳನ್ನು ಆಮೇಲೆ ಜೋಡಿಸಿದ್ದಾರೆಂದು ಹೇಳುತ್ತಾರೆ. ೧೨ ಅಧ್ಯಾಯಗಳಲ್ಲಿ ಹೇಳಿದ್ದನ್ನೇ ಕೊನೆ ೬ ಅಧ್ಯಾಯದಲ್ಲಿ ವಿಸ್ತರಿಸುತ್ತಾರೆಂಬ ನಮ್ಮಲ್ಲಿಯ ವಾದವು ಇವರ ಮಾತಿಗೆ ಮೂಲವಾಗಿರಬಹುದು

Shrader ರ ಅಭಿಪ್ರಾಯದಂತೆ ಕೆಲವು ಶ್ಲೋಕಗಳನ್ನು ಒಳಗೆ ಸೇರಿಸಿದಂತೆ ಕೆಲವು ಶ್ಲೋಕಗಳನ್ನು ಹೊರದೂಡಿದ್ದಾರೆ. ಕಾಶ್ಮೀರದ ಪಾಠದಂತೆ ಗೀತೆಯಲ್ಲಿ ೭೧೪॥ ಶ್ಲೋಕಗಳು ಮಾತ್ರ ಇವೆ ೨೮೧ ಪಾಠಾಂತರಗಳುಂಟು. ಆದುದರಿಂದ ಇವರ ವಾದಕ್ಕೆ ಅಷ್ಟು ಮಹತ್ವ ಕೊಟ್ಟಿಲ್ಲ

**Otto** ರು ಗಾರ್ಬೆಯವರ ಶಿಷ್ಯರು; ಇವರ ಅಭಿಪ್ರಾಯದಂತೆ ೧೩೩ ಶ್ಲೋಕಗಳನ್ನಷ್ಟೇ ಮೂಲ ಗೀತೆಯೆಂದು ಹೇಳುತ್ತಾರೆ. ಗೀತೆಯಲ್ಲಿ ಅದ್ವೈತದ ಮೇಲೆ ನಿಂತ ಭಕ್ತಿಯಿದೆ ಎಂದು ಇವರು ವಾದಿಸುತ್ತಾರೆ.

ಡಾ ಭಾಂಡಾರಕರರು ನಾರಾಯಣೀಯ ಧರ್ಮದಲ್ಲಿಯ ಏಕಾಂತಿಕ ಭಕ್ತಿಯೇ ಗೀತೆಯಲ್ಲಿ ಪ್ರಾಧಾನ್ಯತೆ ಪಡೆದಿದೆಂದು ಅಭಿಪ್ರಾಯ ಪಡುತ್ತಾರೆ ಕ್ರಿಶ್ಚನ್ನರ ಬಾಯಿಬಲ್ಲಿನ ವರ್ಚಸ್ಸು ಗೀತೆಯ ಮೇಲೆ ಗಾಢವಾಗಿ ಬಿದ್ದಿದೆಂಬ ವಾದವನ್ನು ನಿಖರವಾಗಿ ಖಂಡಿಸುತ್ತಾರೆ. ಮೂವರು Lorinser, Weber ಮತ್ತು Lassen ರು ಈ

ವಾದವನ್ನು ಎತ್ತಿದ್ದರು ಆದರೆ ಗೀತೆಯಲ್ಲಿರುವ ವಾಸುದೇವಕೃಷ್ಣ ಪೂಜೆಯು ಕ್ರೈಸ್ತಶಕದ ಅನೇಕ ಶತಮಾನಗಳ ಪೂರ್ವದಲ್ಲಿ ಹಿಂದುಸ್ತಾನದಲ್ಲಿ ಬಳಕೆಯಲ್ಲಿದ್ದದ್ದು ಸಂಶೋಧನೆಗಳಿಂದ ಗೊತ್ತಾಗುತ್ತದೆ ಗಾರ್ಬೆಯವರೂ ಭಾಂಡಾರಕರರ ವಾದಕ್ಕೆ ಪುಷ್ಟಿಯನ್ನು ಕೊಡುತ್ತಾರೆ

Farquhar ನು ಕ್ರಿಶ್ಚನ್ ಪಾದ್ರಿಯು; ಅವನಿಗೆ ಹಿಂದೂ ಧರ್ಮದಕ್ಕಿಂತ ಕ್ರಿಶ್ಚನ್ ಧರ್ಮ ಶ್ರೇಷ್ಠವಾದುದೆಂದು ಸಿದ್ಧ ಮಾಡಬೇಕಾಗಿತ್ತು ವಿಶೇಷವಾಗಿ ಕೃಷ್ಣನಕ್ಕಿಂತ ಕ್ರೈಸ್ತನು ದೊಡ್ಡವನೆಂದು ಹೇಳಬೇಕಾಗಿತ್ತು ಆದರೆ ಅವನು ತತ್ವ ಜ್ಞಾನ ಮತ್ತು ಸಾಹಿತ್ಯದಲ್ಲಿ ಪಳಗಿದ್ದನು ಆದುದರಿಂದ ಗೀತೆಯು ಭಕ್ತಿಪ್ರಧಾನ ವಾದ ತಾತ್ವಿಕ ಗ್ರಂಥವೆಂದು ಒಪ್ಪಿದನು ಕ್ರೈಸ್ತನು ಕೃಷ್ಣನಕ್ಕಿಂತ ಹೆಚ್ಚು ಐತಿಹಾಸಿಕ ಪುರುಷನೆಂದು ವಾದಿಸಿದನು ಈಗ ಕೃಷ್ಣನು ಐತಿಹಾಸಿಕ ಪುರುಷನೆಂದು ಡಾ. ಭಾಂಡಾರಕರರು ಮತ್ತು ಅನೇಕ ಯುರೋಪಿನ ವಿದ್ವಾಂಸರೂ ಶಿಲಾಲೇಖಗಳಿಂದಲೂ ಸಂಶೋಧನೆಗಳಿಂದಲೂ ಸಿದ್ಧ ಮಾಡಿದ್ದಾರೆ ಅವನು ಐತಿಹಾಸಿಕನಷ್ಟೇ ಅಲ್ಲ, ದೈವೀ ಪುರುಷನೆಂದು ಪಾಣಿನಿಯ ಕಾಲದಿಂದ ಪ್ರಸಿದ್ಧನಿದ್ದಾನೆ ಫರ್ಕುಹಾರನು ಗೀತೆಯು ಆಧುನಿಕ ಹಿಂದೂ ಧರ್ಮದ ಪವಿತ್ರವಾದ ಶ್ರೇಷ್ಠ ಗ್ರಂಥವೆಂದು ಬಾಯಿತುಂಬ ಹೊಗಳಿದ್ದಾನೆ.

Edgerton ನು ಗೀತೆಯು ಬುದ್ಧಿ ಪ್ರಾಧಾನ್ಯವಾದ ತಾತ್ವಿಕ ಗ್ರಂಥವಲ್ಲ ಸಾಕ್ಷಾತ್ಕಾರ ಪ್ರಾಧಾನ್ಯವಾದ ಭಕ್ತಿನಿರೂಪಣೆಯ ಗ್ರಂಥವೆಂದು ಸಾಧಿಸಿದ್ದಾನೆ ಗೀತೆಯ ಅಂತಿಮ ಧ್ಯೇಯವು ಭಗವಂತನನ್ನು ಹೊಂದಿ ಸುಖಶಾಂತಿಗಳನ್ನು ಅನುಭವಿಸುವದೇ ಆಗಿದೆ

ಬುದ್ಧಿರಾಜಯೆನ್ನುವವರು ಕಾಶ್ಮೀರ ದೇಶದ ಉಚ್ಚ ನ್ಯಾಯಸ್ಥಾನದ ನ್ಯಾಯಾಧೀಶರು. ತಮ್ಮ Bhagavdgita-a study ಎಂಬ ಗ್ರಂಥದಲ್ಲಿ ಗೀತೆಯನ್ನು ಬೌದ್ಧ ಗ್ರಂಥಗಳೊಡನೆ ಹೋಲಿಸಿ ಅಭ್ಯಾಸ ಮಾಡಿ ಗೀತೆಯಲ್ಲಿ ಬೌದ್ಧ ಉಕ್ತಿಗಳಿಗೆ ಸಮಾನ ಉಕ್ತಿಗಳು ತೋರಿ ಬರುತ್ತವೆ; ಅಲ್ಲದೆ ಆ ಗ್ರಂಥಗಳಿಂದ ಕೆಲವು ವಿಚಾರಗಳನ್ನು ಗೀತೆಯು ತೆಗೆದುಕೊಂಡಿದೆಯೆಂದು ವಾದಿಸಿದ್ದಾರೆ. ಆದರೆ ವಿಮರ್ಶಕರು ಗೀತೆಯಕ್ಕಿಂತ ಬೌದ್ಧವು ಪ್ರಾಚೀನವಾದುದೆಂದು ಸಿದ್ಧ ಮಾಡಲಿಕ್ಕೆ ಏನೂ ಆಧಾರಗಳಿಲ್ಲಇದ್ದರಿಂದ ಇವರ ಮಾತಿಗೆ ಪ್ರಾಶಸ್ತ್ಯ ಕೊಟ್ಟಿಲ್ಲ. Nietzche (ನಿಶ್ಶೆಯು ಕ್ರಿಶ್ಚನ್ನ ಧರ್ಮದ ನೀತಿಯಲ್ಲಿ ಅವಮಾನದ ಶರಣಾಗತಿಯು ಸೋಲೊಪ್ಪುವದು ಮೊದಲಾದವುಗಳಿಗೆ ಪ್ರಾಶಸ್ತ್ಯವನ್ನು ಕೊಡುವದರಿಂದ ಅದು ತ್ಯಾಜ್ಯವೆಂದು ಸಾರಿದರು ಅವರು ಬಲದ ನೀತಿಯನ್ನು ಎತ್ತಿಹಿಡಿದರು. ಆದುದರಿಂದ ಅಸಮರ್ಥರನ್ನು ಅಳಿದು ಸಮರ್ಥರನ್ನು ಬೆಳಸಬೇಕೆಂದು ಅವರ ಮತ ಅವರ ನೀತಿಶಾಸ್ತ್ರದಲ್ಲಿ ಗುಲಾಮಗಿರಿಗೆ ಒಂದು

ನೀತಿ ಯಜಮಾನರಿಗೆ ಒಂದು ನೀತಿ— ಇದನ್ನು ಓದಿದಾಗ ಗೀತೆಯಲ್ಲಿಯ ಆಸುರೀ ಸಂಪತ್ತು ಸ್ಮರಣೆಗೆ ಬರುತ್ತದೆ. ಇವನಿಗೆ ಕೆಂಡ ಕಾರುವ ತತ್ವಜ್ಞಾನಿಯೆಂದೂ Schopenhaeur ನಿಗೆ ಶೋಕಾಸಕ್ತ ತತ್ವಜ್ಞಾನಿಯೆಂದೂ ಕರೆಯುತ್ತಾರೆ ಈ ನಿಶ್ಚನ ತತ್ವಜ್ಞಾನದ ಫಲವೇ ಜರ್ಮನಿ ಸಾರಿದ ಎರಡು ಮಹಾಯುದ್ಧಗಳು ಆದರೆ Martineau and Green ರು ಶಾಂತಿ ಪ್ರಿಯರಾದುದರಿಂದ ಗೀತೆಗೆ ಸಮೀಪ ಬರುತ್ತಾರೆ. ಆದರೂ ಮಾರ್ಟಿನ್ಯೂ ಗೀತೆಗೆ ಹಿಂದೆ ಉಳಿಯುತ್ತಾನೆ. ಮಾರ್ಟಿನ್ಯೂನು ಕೃತಿಯ ಉತ್ಪತ್ತಿ ಸ್ಥಾನವನ್ನು ವಿವೇಕ ಬುದ್ಧಿಯೆಂದು ನಿರೂಪಿಸುತ್ತಾನೆ ಎಲ್ಲ ವಿವೇಕಗಳೂ ಪರಿಣತವಾದಾಗ 'ಮಹಾವಿವೇಕದ' ಭಿನ್ನಭಿನ್ನ ರೂಪಗಳೆನಿಸುತ್ತವೆಂದು ಅಭಿಪ್ರಾಯಪಡುತ್ತಾನೆ. ಗ್ರೀನನು ಜೀವನಲ್ಲಿ ಹೊರಗೆ ನಿಸರ್ಗದಲ್ಲಿ ಚೈತನ್ಯವಿದೆ ಎಂದು ಹೇಳುತ್ತಾನೆ ಈ ಚೈತನ್ಯವು ಭಗವದ್ಗೀತೆಯ ಆತ್ಮತತ್ವವನ್ನು ಹೋಲುತ್ತದೆ ಈ ಆತ್ಮದ ಪ್ರೇರಣೆಯಿಂದ ಮನುಷ್ಯನು ಸಮಾಜವನ್ನು ಕಟ್ಟುತ್ತಾನೆ, ಮತ್ತು ಸಮಾಜದಲ್ಲಿ ಆತನಿಗೆ ಪ್ರಾಧಾನ್ಯ ದೊರೆಯಬೇಕೆಂದು ಹಂಬಲಿಸುತ್ತಾನೆ. ಹೀಗೆ ವಿಚಾರ ಮಾಡುತ್ತ ಒಂದು ದೈವೀಚೈತನ್ಯವನ್ನು ಕಾಣುತ್ತಾನೆ ಸಾಯುವಾಗ ಅವನು ಸುತ್ತಲೂ ಕುಳಿತವರಿಗೆ ಬಾಯಿಬಲ್ಲನಿಂದ ಕೆಲವು ಭಾಗಗಳನ್ನು ಓದಲಿಕ್ಕೆ ಹೇಳಿದನಂತೆ ಇದು ओमित्ये का क्षरब्रम्ह व्याहरन् मामनुस्मरन् ಎಂಬ ಗೀತೆಯ ಶ್ಲೋಕವನು ನೆನೆಪಿಗೆ ತರುತ್ತದೆ

Dr Aldus Huxley ಯವರು ತಮ್ಮ Perennial Philosophy ಎಂಬ ಗ್ರಂಥದಲ್ಲಿ ಮೂರು ಸ್ವಭಾವದ ಜನರನ್ನು ವಿಂಗಡಿಸುತ್ತಾರೆ ಇವು ದೇಹ ಬುದಿ ಗಳೆರಡಕ್ಕೂ ಸಂಬಂಧಪಟ್ಟವು ೧) Cerebraltype- ಬುದ್ಧಿ ಪ್ರಧಾನರು- ಅವರಿಗೆ ಜ್ಞಾನ ಯೋಗವು ಹಿಡಿಸುವದು. ೨) Cordial type ಹೃದಯ ಪ್ರಧಾನರು, ಅವರಿಗೆ ಭಕ್ತಿ ಯೋಗವು ಹಿಡಿಸುವದು ೩) Mascular type ಸ್ನಾಯು ಪ್ರಧಾನರು ಅವರಿಗೆ ಕರ್ಮಯೋಗವು ಹಿಡಿಸುವದು Dr Belvalkar ರು ಮಾತ್ರ ಈ ಮೂರು ಕೂಡಿದ ಮಾರ್ಗಕ್ಕೆ ज्ञान भक्ति कर्म समुच्चय ವೆಂದು ಕರೆದಿದ್ದಾರೆ. ಡಾ ಅನ್ನಿ-ಬೆಸೆಂಟಮ್ಮನವರು ಮೂರರ ಸಂಮಲನವನ್ನು ಒಪ್ಪಿದ್ದಾರೆ. W D P.Hill ರು ಗೀತೆಯಲ್ಲಿರುವ ಪರಮಾತ್ಮನ ಸೃಷ್ಟಿಯು ಪೂರ್ತಿ ಅಸತ್ಯವಲ್ಲ, ಅದಕ್ಕೆ ಅಂಶತಃ ಸತ್ಯತ್ವವಾದರೂ ಒಪ್ಪಬೇಕೆಂದು ವಾದಿಸುತ್ತಾನೆ

Dr Annie Besant ಳು ಐಕ್ಯದ (one ness) ಕಲ್ಪನೆಯನ್ನು ಸ್ಪಷ್ಟಪಡಿಸಿದ್ದಾಳೆ — "But one Lord is the object of all devotion. One Lord is the Subject of wisdom. But one Lord is the source of al devotion, one Lord, therefore oneness through entire body of the Lord. One Lord, one world, one brotherhood, that is the

outcome of our study Thus on, from age to age from universe to universe, and where, I say again where is grief where is delusion when we have thus seen oneness " ( तत्र को मोहः कः शोकः एकत्व मनुपश्यतः ಎಂಬ ಶ್ಲೋಕದ ಮೇಲೆ ಹೀಗೆ ಬರೆದಿದ್ದಾರೆ ) "ಎಲ್ಲ ಭಕ್ತಿಗೆ ವಿಷಯನೂ ಒಬ್ಬನೇ ಪ್ರಭು. ಆ ಒಬ್ಬನೇ ಪ್ರಭು ಎಲ್ಲ ಜ್ಞಾನಕ್ಕೂ ವಿಷಯನಾಗಿನ್ನಾನೆ ಒಬ್ಬನೇ ದೇವರೇ ಎಲ್ಲ ಚಲನವಲನಕ್ಕೆ ಪ್ರೇರಕನಾಗಿದ್ದಾನೆ ಒಬ್ಬನೇ ಪ್ರಭು ಆದುದರಿಂದ ಒಂದು ಮಾನವ ಜನಾಂಗ ಒಬ್ಬ ಪ್ರಭು ಆದುದರಿಂದ ಪ್ರಭುವಿನ ಒಂದು ಸಣ್ಣ ಶರೀರದಿಂದ ಐಕ್ಯ ಒಬ್ಬ ಪ್ರಭು, ಒಂದು ಜಗತ್ತು, ಒಂದು ಬಾಂಧವ್ಯ- ಇದು ನಮ್ಮ ಅಭ್ಯಾಸದ ಫಲ ಹೀಗೆ ಯುಗದಿಂದ ಯುಗಕ್ಕೆ ವಿಶ್ವದಿಂದ ವಿಶ್ವಕ್ಕೆ, ನಾನು ಹೇಳುವದು ಎಂದರೆ, ಎಲ್ಲಿದೆ ದುಃಖ ಎಲ್ಲಿದೆ ಅಜ್ಞಾನ, ಈ ತರಹದ ಐಕ್ಯವನ್ನು ಕಂಡಾಗ "

ಶಬ್ದಗಳಲ್ಲಿ ಸ್ಪಷ್ಟವಿಲ್ಲದಿದ್ದರೂ, "ಎಲ್ಲ ವಸ್ತುಗಳನ್ನು ಕಾಯ್ದುಕೊಂಡು ಮಹಾಮಹಿಮನಾದ ಎಲ್ಲೆಡೆಯಲ್ಲೂ ವ್ಯಾಪಕನಾದ ಪ್ರಭು ಒಬ್ಬನೇ" ಎಂದು ಹೇಳುವದೇ ಇದರ ತಾತ್ಪರ್ಯ. ಈ ತರಹದ ಐಕ್ಯ ಜ್ಞಾನದಿಂದ ನಾವು ದುಃಖ ವನ್ನೂ ಅಜ್ಞಾನವನ್ನೂ ನೀಗುತ್ತೇವೆ ಎನ್ನುವದು ಇದರ ಮಥಿತಾರ್ಥ.

Dr R D. ರಾನಡೆಯವರು ಒಂದು ತಾರತಮ್ಯದ ಶ್ರೇಣಿಯನ್ನು ನಿರ್ಮಿಸಿದ್ದಾರೆ.

ಸೌಖ್ಯ ಅಥವಾ ಆನಂದದ ವಿಷಯದಲ್ಲಿ ವಿಚಾರ ಮಾಡುವಾಗ ಹೀಗೆ ಬರೆಯುತ್ತಾರೆ :— "ಸಾಕ್ರೇಟಿಸನ ಆನಂದವು, ಒಂದು ಹಂದಿಯ ಆನಂದಕ್ಕಿಂತ ಹೆಚ್ಚು ಎತ್ತರಕ್ಕೆ ಮುಟ್ಟುತ್ತದೆ ಅದೇ ರೀತಿಯಾಗಿ ಒಬ್ಬ ಸತ್ಪುರುಷನ ಆನಂದವು ಸಾಕ್ರೇಟಿಸನ ಆನಂದದಕ್ಕಿಂತ ಮತ್ತೆ ಎತ್ತರಕ್ಕೆ ಏರುತ್ತದೆ ಇದೇ ಉಪನಿಷತ್ತಿನಲ್ಲಿ ಹೇಳಿದ ಆನಂದದ ತಾರತಮ್ಯವು " ಗೀತೆಯು ಈ ಆನಂದವು ಬ್ರಹ್ಮಸಂಸ್ಪರ್ಶದಿಂದ ಹುಟ್ಟಿದ್ದು ಎಂದು ಹೇಳುತ್ತದೆ

ಮತ್ತೆ ಇವರು ಸಾಧಕರಲ್ಲಿ ಆರುವರ್ಗಗಳನ್ನು ಮಾಡಿದ್ದಾರೆ (Levels of God aspiration) Dante ನ ಹಾಗೆ ಗೀತೆಯೂ Divire Comedy ಬರೆದಿದೆ ಡಾಂಟೆನು Inferno (ನರಕ) Pargatorio (ಪಾಪವಮಾರ್ಜನ) ಮತ್ತು Paradise (ಸ್ವರ್ಗ) ಎಂದು ಮೂರು ಲೋಕಗಳನ್ನು ಹೇಳಿದಂತೆ, ಗೀತಾಕಾರನೂ ಡಾಂಟೆಯೂ ಪಶ್ಚಾತ್ತಾಪ ಪಡದ ಪಾಪಿಗಳನ್ನು ನರಕಕ್ಕೆ ಅಟ್ಟುತ್ತಾರೆ क्षिपाम्यजस्र अशुभान्.... आसुरीष्वे योनिषु—नरकेऽशुचौ (XVI-೧೯—೨೦) ಅವರು ಮೇಲೆ ಏಳುವಂತಿಲ್ಲ.

(मा अत्राष्यैव ... महाजन्मनिजन्मनि) ೧) ಇವರು ಮೊದಲಿನ ವರ್ಗದವರು. ೨) ಈ ವರ್ಗದಲ್ಲಿ ದುಃಖ ವ್ಯಗ್ರರು ಬರುತ್ತಾರೆ ಮತ್ತೆ ಮುಪ್ಪಿಗೂ ಮರಣಕ್ಕೂ ಅಂಜಿದವರು. ೩) ತಮ್ಮ ಇಚ್ಛೆಯನ್ನು ಪೂರ್ತಿಗೊಳಿಸುವದಕ್ಕಾಗಿ ಪುರುಷಾರ್ಥಗಳನ್ನು ಇಚ್ಛಿಸುವವರು ೪)ಪಾಪಕ್ಕಾಗಿ ಪಶ್ಚಾತ್ತಾಪ ಪಡುವವರು अपिचेत् सुदुराचारो IX–30), ೫-೬) ಜಿಜ್ಞಾಸುಗಳು ಮತ್ತು ಜ್ಞಾನಿಗಳು ಇವನ್ನೆಲ್ಲ ಗೀತೆಯ ಆಧಾರದ ಮೇಲೆ ಮಾಡಿದ್ದಾರೆ.

ಅರಬಿಂದೋರ ತತ್ವಜ್ಞಾನದಲ್ಲಿ ವಿಕಾಸವಾದಕ್ಕೆ (Evolution) ದೊಡ್ಡಸ್ಥಾನವಿದೆ. ಅಂತರ್ನಿಹಿತವಾದುದೇ (involve) ಹೊರಬೀಳುತ್ತದೆ. ಅದೇ ವಿಕಾಸವೆಂದು ಅವರ ಅಭಿಪ್ರಾಯ ಜಡಪದಾರ್ಥದಲ್ಲಿ ಜೀವ, ಚೈತನ್ಯ, ಮನಸು ಎಲ್ಲ ಅಂತರ್ನಿಹಿತವಾಗಿದೆ ಆದರೆ ಅವುಗಳ ಆವಿರ್ಭಾವಕ್ಕೆ ಅವಕಾಶವಿಲ್ಲ. ಆದುದರಿಂದ ಅವರು ಪರಮಾಣುಗಳು ನಿತ್ಯನಿದ್ರಾಸಕ್ತವಾಗಿರುತ್ತವೆಂದು ಹೇಳುತ್ತಾರೆ. ಸಸ್ಯದಲ್ಲಿ ಚೈತನ್ಯವನ್ನು ಕಾಣುತ್ತೇವೆ ಆದರೆ ಅದು ಕನಸು ಕಾಣುತ್ತಿರುತ್ತದೆ. ಎಚ್ಚರಿಕೆ ಹೊಂದುವ ಸ್ಥಿತಿಯಲ್ಲಿದ್ದರೂ ಎಂದೂ ಎಚ್ಚರಿಸುವದಿಲ್ಲ. ಸಸ್ಯವು ಜೀವಂತವಿರುವದರಿಂದ ಹೊರಗಿನ ಅಸ್ತಿತ್ವಕ್ಕೆ ಪ್ರತಿಕಾರ ನೀಡುತ್ತದೆ. ಆದರೆ ಅದಕ್ಕೆ ಮನೋಜಾಗ್ರತಿಯಿಲ್ಲ. ಪ್ರಾಣಿಗೆ ಮನೋಜಾಗ್ರತಿಯಿದೆ ; ಮನುಷ್ಯನಿಗೆ ಸ್ವಪ್ರತಿಜ್ಞೆಯಿದೆ ವಿಚಾರವಿದೆ. ಇದೊಂದು ಚೈತನ್ಯದ ಆರೋಹಕ್ರಮ (Libnitze) ಲಿಬ್ನಿಝನು ತನ್ನ ಜೀವಾಣುವಾದದಲ್ಲಿ (monodology) ಇದೇ ತರಹದ ಚೈತನ್ಯ ತಾರತಮ್ಯವನ್ನು ಒಪ್ಪಿದ್ದಾನೆ (Monods form a hierarchy.) ಅದರಲ್ಲಿ ಒಂದಕ್ಕೆ Monos monadum ಎಂದು ಕರೆಯುತ್ತಾನೆ ಅದು ನಮ್ಮ ಈಶ್ವರ ಇದ್ದ ಹಾಗೆ

ಹೀಗೆ ಮಧ್ವಾಚಾರ್ಯರು ಜ್ಞಾನ ಮತ್ತು ಆನಂದ ತತ್ವಗಳ ಮೇಲೆ ಗೀತೆಯ ಆಧಾರದಿಂದಲೇ आब्रह्मस्तम्बपर्यंत ವಾಗಿ ತಾರತಮ್ಯವನ್ನು ಒಪ್ಪಿದ್ದಾರೆ ಅವರು ಹೆಚ್ಚಿನದು ಮಾಡಿದ್ದೆಂದರೆ ಚೇತನದಲ್ಲಿ ಕೆಲವರು ಉಚ್ಚರು ಕೆಲವರು ನೀಚರು ಎಂದು ಹೇಳಿದ್ದಾರೆ ಗೀತೆಯಲ್ಲಿ ಶ್ರೀಕೃಷ್ಣ ಅರ್ಜುನನಿಗೆ दैवी अभिजातासि ಎಂದು ಹೇಳಿ ಕೆಲವರು ದೈವೀಸಂಪತ್ತುಳ್ಳವರೆಂದೂ ಇನ್ನು ಕೆಲವರು ಆಸುರೀಸಂಪತ್ತುಳ್ಳವರೆಂದೂ ಎರಡು ಭಾಗಮಾಡಿದೆ ಆಸುರೀಸಂಪತ್ತು ಉಳ್ಳವರು ದೇವನನ್ನು ದ್ವೇಷಿಸುತ್ತಾರೆ ಅಂಥವರನ್ನು ನಿರ್ದಯದಿಂದ ನರಕದಲ್ಲಿ ಭಗವಂತನು ಒಗೆಯುತ್ತಾನೆ ದೈವೀಸಂಪತ್ತುಳ್ಳವರು ಆಸೂರಿ ಸಂಪತ್ತುಳ್ಳವರು ಸ್ವಭಾವದಿಂದಲೆ ಅಂದರೆ ಹುಟ್ಟಿ ಸೃಷ್ಟಿಯಲ್ಲಿ ಎರಡು ತರಹದ ಜನರಿದ್ದಾರೆ द्वौ भूत सर्गौ लोकेऽस्मिन् ಎಂದು ಶ್ರೀ ಕೃಷ್ಣನು ಹೇಳಿದ್ದಾನೆಂಬುದನ್ನು ಈ ಮೊದಲು ತಿಳಿಸಿದ್ದಾಗಿದೆ.

Alexander ಎಂಬ ತತ್ವಜ್ಞಾನಿಯು ನಿಷ್ಕ್ರಾಮನಶೀಲವಿಕಾಸ (Emergent Evolution) ವಾದವನ್ನು ಪುರಸ್ಕರಿಸಿದ್ದಾನೆ ಅವನು ಸಹ ತಾರತಮ್ಯವನ್ನು

ಒಪ್ಪಿದ್ದಾನೆ ಅತಿ ಕೆಳಗಿನ ಮೆಟ್ಟಿಲು ದೇಶ, ಕಾಲ (Space time) ಸಾಕ್ಷಿಗೆ ಗೋಚರವಾಗುತ್ತವೆ ಅದರ ಮೇಲಿನ ಮೆಟ್ಟಿಲು ಪ್ರಕೃತಿ (Matter) ಇದನ್ನು ಇಂದ್ರಿಯಗಳಿಂದ ನೋಡುತ್ತೇವೆ. ಮೂರನೇ ಮೆಟ್ಟಿಲು ಗೌಣಗುಣಗಳು (Seconadry qualities) ಬಣ್ಣ, ಶಬ್ದ, ವಾಸನೆ, ಉಷ್ಣತೆ ಮೊದಲಾದವು ನಾಲ್ಕನೇ ಮೆಟ್ಟಿಲು ಜೀವ (life) ಐದನೇದು (Mind) ಮನಸು ಇದನ್ನು ಒಳಗಿನಿಂದ ಅನುಭವಿಸುತ್ತೇವೆ ಆರನೇ ಮೆಟ್ಟಿಲನ್ನು ನಾವಿನ್ನೂ ಮುಟ್ಟಿಲ್ಲ ಅದಕ್ಕೆ ಅವನು Deity ಎಂದು ಕರೆಯುತ್ತಾನೆ ಅದೇ ದೇವತಾ (Deity) ಇದು ಸೃಷ್ಟಿಯಲ್ಲಿ ಬಂದ ಮೇಲೆ ಈ ವರ್ಗಕ್ಕೆ ಸೇರಿದವರು ಅನೇಕರು ಬರುತ್ತಾರೆ ಈ ಕೆಳಗಿನ ಮಾನವನ ಮುಂದಿನ ಹೆಜ್ಜೆಯೇ ದೇವತಾ ಎನಿಸುತ್ತಿದೆ. ದೇವರು (God) ಈ ವಿಕಾಸವನ್ನು ನಿಯಂತ್ರಿಸುತ್ತಾನೆ ಈ ದೇವನು ಅನಂತನು ಸರ್ವಾಂತರ್ಯಾಮಿಯು, ಮತ್ತು ನಿತ್ಯನು ದೇವರು ನಿಶ್ಚಯವಾಗಿ ಈ ವಿಶ್ವದಲ್ಲಿದ್ದಾನೆ. ಅವನ ಅಸ್ತಿತ್ವಕ್ಕೆ ನಮ್ಮ ಮನಸೇನೂ ಕಾರಣವಲ್ಲ ನಾವು ಮಿತವಾದ ಆತ್ಮರು, ನಾವು ಅವನನ್ನು ಚಿಂತಿಸಿದರೂ ಅವನು ನಮ್ಮಿಂದ ಬೇರೆಯಾಗಿದ್ದಾನೆ.

ಈ ತರಹದಿಂದ ಸೃಷ್ಟಿಯಲ್ಲಿ ಒಂದು ತಾರತಮ್ಯ ನೆಲೆಗೊಂಡಿದೆ ಗೀತೆಯು ಅದನ್ನು ತನ್ನದೇ ಆದ ರೀತಿಯಲ್ಲಿ ಒಪ್ಪಿಕೊಂಡಿದೆ. ದೈವೀ ಸಂಪತ್ತುಳ್ಳವರು ಆಸುರಿ-ಸಂಪತ್ತುಳ್ಳವರು ಮಧ್ಯದಲ್ಲಿ ನಿತ್ಯ ಸಂಸಾರಿಗಳು— ಎಂದು ಗೀತೆಯು ಹೇಳುತ್ತದೆ. ಅವರನ್ನು ಕೃಷ್ಣನು ತ್ರೈವಿದ್ಯರೆಂದು ಕರೆಯುತ್ತಾನೆ त्रैविद्या मा सोमपाः ಇವರು ಯಾವಾಗಲೂ ಯಜ್ಞಯಾಗಾದಿಗಳನ್ನು ಮಾಡುತ್ತ ಭೋಗ ಐಶ್ವರ್ಯಗಳಲ್ಲಿ ಆಸಕ್ತರಾಗಿ ಮತ್ತೆ ಸ್ವರ್ಗ ಮತ್ತೆ ಭೂಮಿಗೆ ಓಡಾಡುತ್ತಾರೆ XVII - ಇರಲ್ಲಿ ಈ ಮೂವರ ಸ್ವಭಾವವು ವರ್ಣಿಸಲಾಗಿದೆ (यजते सा त्त्विका देव न् ಮೊದಲಾಗಿ) ಆದುದರಿಂದಲೇ ಸುಖ ಶ್ರದ್ಧೆ ಮೊದಲಾದವುಗಳನ್ನು ಮೂರು ವಿಭಾಗವಾಗಿ ಮಾಡಲಾಗಿದೆ C K M· ಮುನಷಿಯವರು ಸ್ವಭಾವವು ವ್ಯಕ್ತಿತ್ವದ ತಳಹದಿಯೆಂದು ತಮ್ಮ Bhagvadgita and modern life ದಲ್ಲಿ ಹೇಳಿದ್ದಾರೆ ಆದರೆ ಅವರ ಸ್ವಭಾವದ ಕಲ್ಪನೆ ಬೇರೆ. His Swabhava comprises his capacity temperament and the whole Content of the subconscious Individual gifts, heredity education-all play their Part in producing every man's swabhava which makes what he is ಆದರೆ ಗೀತೆಯು ಇದಕ್ಕೂ ಆಳದಲ್ಲಿ ಇಳಿದು ಮನುಷ್ಯನ ಸ್ವಭಾವ ಅಥವಾ ಯೋಗ್ಯತೆ ಜೀವನಿಗೆ ಅಂಟಿಕೊಂಡಿರುತ್ತದೆ ಅದು ಹುಟ್ಟಿದ್ದಲ್ಲ ಅದು ಕೂಡ ಜೀವನಂತೆ ನಿತ್ಯ ಎಂದು ಗೀತೆಯು ಮತ )

Prometheus— What is mine they cannot take away
What is theirs let them preserve
This's mine that is Theirs, that is the difference

ನನ್ನದನ್ನು ಅವರು ಕಿತ್ತುಕೊಳ್ಳಲಾರರು
ತಮ್ಮದನ್ನು ತಾವು ಸುರಕ್ಷಿತವಾಗಿ ಇಟ್ಟುಕೊಳ್ಳಲಿ
ಇದು ನನ್ನದು ಅದು ಅವರದು— ಇದೇ ಅಂತರ.

ಬುದ್ಧಿರಾಜನು ತಮ್ಮ Shrimad Bhag adgita ದಲ್ಲಿ ಹೀಗೆ ಹೇಳಿದ್ದಾರೆ:— Gita wanted to demolish the atheistical Sankhya and Budhism on the strength of the upanishads and to propound the Bhakti doctrine basing it also on upanis' adic thought, though there's was no direct mention of the cult in the ancient classical upanishads and the swetaswatara upanished which mentions Bhakti by name seems to have been written not much earlier than the Gita itself

ಹೀಗೆ ಭಗವಂತನು ಒಂದು ನಿರ್ದಿಷ್ಟವಾದ ತನ್ನ ಮತವನ್ನು ಅರ್ಜುನನಿಗೆ ಉಪದೇಶಿಸಿದ್ದಾನೆ ಅದಕ್ಕೆ ಕವೀಶ್ವರರು ಹೇಳುತ್ತಾರೆ. (ತಮ್ಮ Ethics of Gita ದಲ್ಲಿ) "There is one definite theme running through this sublime philosophical discourse" ಈ ಗಂಭೀರವಾದ ಆಧ್ಯಾತ್ಮಿಕ ಸಂಭಾಷಣೆಯಲ್ಲಿ ಒಂದು ನಿರ್ದಿಷ್ಟವಾದ ಮತವಿದೆ ಅದನ್ನು ನಾವು ತಿಳಿಸಿದ್ದೇವೆ

ಸೀತಾನಾಥ ತತ್ವಭೂಷಣರು ತಮ್ಮ Krishna and the Gita ದಲ್ಲಿ ಹೀಗೆ ಬರೆಯುತ್ತಾರೆ.The doctvine of plurality of Purushas is not incompatible with a higher unity The doctrine of अन्तर्यामित्व emphasized by Ramanuja (and Madhva also) brings out the higher unity

ಇನ್ನು ಪಾಶ್ಚಾತ್ಯರ ಸಂಸ್ಕೃತಿಗೆ ಕಳಶವಿಡಿಯಾದ ಭೌತವಿಜ್ಞಾನ ಮತ್ತು ಗೀತೆ ಇವುಗಳ ಸಂಬಂಧದಲ್ಲಿ ಸ್ವಲ್ಪ ವಿಚಾರಿಸಿ ಈ ದೀರ್ಘವಾದ ವಿವೇಚನೆಯನ್ನು ನಿಲ್ಲಿಸೋಣ ಇದೇ K M ಮುನಷಿಯವರು ತಮ್ಮ Bhagavadgita and Modern lifeದಲ್ಲಿ ಪಾಶ್ಚಾತ್ಯರ ಸಂಸ್ಕೃತಿ ವಿಷಯದಲ್ಲಿ ಈ ರೀತಿಯಾಗಿ ಬರೆಯುತ್ತಾರೆ· The west has created a very subtle philosophy of life out of this demonic restlessness To call this Karma yoga, is a lie It is a challenge to all that Gita stands for

The godless philosophy of the modern west - which is called westernism denies that man possesses any faculty of a Supra sensory order or any higher organ of perception than reason. प्रज्ञा or बुद्धि is labelled genius Knowledge according to these people is a limited order It consists of an emperical and analytical study of facts often uncoordinated by a Synthesis His form of action is mere external activity His devotion is restricted to increasing his capacity for eating reproduction and self indulgence, Satisfying self attraction is his only and ultimate reality.

According to westernists Knowledge is subservient to immediate practical ends Thus man must limit his Knowledge within the boundaries of his own ignorance According to it there is no mind but the conscious mind Creative Concentration is nonsense Action that does not end in unending changes or ever in creasing speed is waste

According to westernism purposive unification of facts by the application of higher principle is not Scientific Science is analysis division and endless Subdivision God is not Knowable or unKnowable As a result through the lack of unifying intuitive perception action degenerates into mere unending agitation vain and sterile Emotions and faculty of turning inwords are blunted Humility is ruled out Man has been reduced to the lowest level

(K M ಮುನಷಿಯುವರು ತಮ್ಮ ಭಗವದ್ಗೀತೆ ಮತ್ತು ಆಧುನಿಕ ಜೀವನವೆಂಬ ಗ್ರಂಥದಲ್ಲಿ ಹೀಗೆ ಬರೆಯುತ್ತಾರೆ — "ಈ ಆಸೂರೀ ಅಶಾಂತಿಯಿಂದ ಜೀವನದ ಸೂಕ್ಷ್ಮ ತತ್ವಜ್ಞಾನವನ್ನು ಪಾಶ್ಚಾತ್ಯರು ರಚಿಸಿದ್ದಾರೆ ಈ ತತ್ವಜ್ಞಾನಕ್ಕೆ ಕರ್ಮ ಯೋಗವೆಂದು ಕರೆಯುವದು ತಪ್ಪು ಗೀತೆಯ ಉಪದೇಶಕ್ಕೆ ಇದೊಂದು ಅಪ್ವಾನವು ನಿರೀಶ್ವರವಾದಿಗಳಾದ ಆಧುನಿಕ ಪಾಶ್ಚಾತ್ಯರು ಇದಕ್ಕೆ ಪಾಶ್ಚಾತ್ಯವಾದವೆಂದು ಕರೆಯುತ್ತಾರೆ— ಮನುಷ್ಯನಿಗೆ ಇಂದ್ರಿಯಾತೀತವಾದ ಒಂದು ಇಂದ್ರಿಯುವದೆ ಎಂದು ಒಪ್ಪುವದಿಲ್ಲ ಅಥವಾ ಬುದ್ಧಿಯಕಿಂತ ಬೇರ ಯಾವದೂ ಹೆಚ್ಚಿನದು ಪ್ರತ್ಯಕ್ಷಕ್ಕೆ ಕಾರಣವೆಂದು ಒಪ್ಪುವದಿಲ್ಲ. ಪ್ರಜ್ಞೆ ಅಥವಾ ಬುದ್ಧಿಗೇ ಪ್ರತಿಭೆಯೆಂದು ಕರೆಯುತ್ತಾರೆ ಇವರ ಮತದಲ್ಲಿ ಜ್ಞಾನವು ಬಹಳ ಮಿತವಾದುದು ಜ್ಞಾನವೆಂದರೆ ಸಂಗತಿಗಳನ್ನು ಸಂಶ್ಲೇಷಣೆಯಿಂದ ಸಮನ್ವಯಗೊಳಿಸದೆ ಸುಮ್ಮನೇ ವ್ಯಾವಹಾರಿಕ ವಿಶ್ಲೇಷಣಪೂರ್ವಕ ವಾದ ಅಭ್ಯಾಸ ಮಾತ್ರ ಅವನ ಕೃತಿಯೆಂದರ ಹೊರಗಿನ ಸ್ಪಂದನವು ಮಾತ್ರ ಅವನ ಭಕ್ತಿ ಅಥವಾ ಆಸಕ್ತಿಯು ತಿನ್ನುವಲ್ಲಿ ಪ್ರಜೋತ್ಪಾದನೆಯಲ್ಲಿ ವಿಷಯಾಸಕ್ತಿ ಯಲ್ಲಿ ತನ್ನ ಸಾಮರ್ಥ್ಯವನ್ನು ಹೆಚ್ಚಿಸುವವಕ್ಕ ಮಾತ್ರ ಸೀಮಿತವಾಗಿದೆ ತನ್ನ ಆಕರ್ಷಣೆ ಆಕಾಂಕ್ಷಗಳನ್ನು ತೃಪ್ತಿಗೊಳಿಸುವದು ಮಾತ್ರ ಅವನ ಕೊನೆಯ ತತ್ವ )

ಈ ಪಾಶ್ಚಾತ್ಯವಾದದ ಪ್ರಕಾರ ಜ್ಞಾನವು ಸಧ್ಯಕ್ಕೆ ಕೃತಿಯಲ್ಲಿ ಬರುವ ಫಲಗಳಿಗೆ ಅಧೀನವಾಗಿದೆ ಹೀಗೆ ಮನುಷ್ಯ ತನ್ನ ಜ್ಞಾನವನ್ನು ತನ್ನ ಅಜ್ಞಾನದ ಸೀಮಾರೇಖಾ ಗಳಿಗೆ ಮಿತಗೊಳಿಸಿದ್ದಾನೆ. ಈ ವಾದದಲ್ಲಿ ಜಾಗ್ರತ ಮನಸ್ಸನ್ನುಳಿದು ಬೇರೆ ಮನಸ್ಸಿಲ್ಲ ರಚನಾತ್ಮಕ ಮನಸಿನ ಏಕಾಗ್ರತೆಯು ಮೂರ್ಖತನದ್ದು ಯಾವ ಕೃತಿಯೂ ಎಂದೂ

ಮುಗಿಯದ ಬದಲಾವಣೆಗಳನ್ನಾಗಲಿ ಅಥವಾ ಸತತವಾಗಿ ಹೆಚ್ಚುತ್ತಿರುವ ವೇಗವನ್ನಾಗಲಿ ಹುಟ್ಟಿಸುವದಿಲ್ಲ ಅದು ವ್ಯರ್ಥ.

ಈ ವಾದದಂತೆ ಸಂಗತಿಗಳನ್ನು ಪ್ರಯೋಜನೋದ್ದೇಶದಿಂದ ಉಚ್ಚ ತತ್ವವನ್ನನು ಸರಿಸಿ ಸಂಘಟಿಸುವದು ಅಶಾಸ್ತ್ರೀಯವಾದುದು. ಶಾಸ್ತ್ರವೆಂದರೆ ವಿಶ್ಲೇಷಣೆ ವಿಭಾಗ ಅನಂತ ಉಪವಿಭಾಗಗಳು ಈಶ್ವರನು ಜ್ಞೇಯನೂ ಅಲ್ಲ ಅಜ್ಞೇಯನೂ ಅಲ್ಲ. ಇದರ ಪರಿಣಾಮವಾಗಿ ಸಂಘಟಿಸುವ ಸಾಕ್ಷಿಜ್ಞಾನದ ಅಭಾವದಿಂದ ಕೃತಿಗಳೆಲ್ಲ ಅನಂತಮನ ಕ್ಷೋಭೆಗಳಲ್ಲಿ ಕೊಳೆತು ಹೋಗಿವೆ. ಅವೆಲ್ಲ ವ್ಯರ್ಥ ಮತ್ತು ಬಂಜರುಗಳು ಭಾವನೆ ಮತ್ತು ಅಂತರ್ಮುಖವಾಗುವದು ಮೊಂಡಾಗಿವೆ. ವಿನಯವನ್ನು ನಿಷೇಧಿಸಲಾಗಿದೆ. ಮನುಷ್ಯನು ಅತ್ಯಂತ ಅಧೋಗತಿಗೆ ಇಳಿದಿದ್ದಾನೆ.

ಇದು ಪಾಶ್ಚಾತ್ಯ ಸಂಸ್ಕೃತಿಯ ವಿಚಿತ್ರ ಚಿತ್ರ. ದಿವಾಟಿಯಾರವರು ಇದಕ್ಕೂ ಶಾಸ್ತ್ರೀಯವಾಗಿ ನಿರ್ವಿಕಾರ ಮನಸ್ಸಿನಿಂದ ಪಾಶ್ಚಾತ್ಯ ಸಂಸ್ಕೃತಿಯನ್ನು ವರ್ಣಿಸಿ ಅದನ್ನು ಗೀತೆಯ ಸಂಸ್ಕೃತಿಗೆ ಹೋಲಿಸಿದ್ದಾರೆ. ಅವರು ತಮ್ಮ Art of Life in the Bhagavadgita ದಲ್ಲಿ ಪ್ರತ್ಯೇಕ ಪ್ರಕರಣದಲ್ಲಿ ಗೀತಾ ಮತ್ತು ಆಧುನಿಕ ಭೌತವಿಜ್ಞಾನ (Science) ವೆಂಬ ವಿಷಯವನ್ನು ಚರ್ಚಿಸಿದ್ದಾರೆ—

"ಧರ್ಮಕ್ಕೆ ಎರಡು ವಿಪತ್ತುಗಳು ಕೆಲವರು ಇದೊಂದು ಬುದ್ಧಿ ಮಾಂದ್ಯದ ಗುಳಿಗೆಯೆಂದು ತಿರಸ್ಕರಿಸುವರು. ಇದು ಧರ್ಮಗಳ ತಿಕ್ಕಾಟದಿಂದ ಹುಟ್ಟಿದ ನಿಷ್ಫಲತೆಯ ಪರಿಣಾಮ ಎಂದು ಹೇಳುವರು ಆದರೆ ಇದರಿಂದ ಧರ್ಮಕ್ಕೆ ಚ್ಯುತಿಯಿಲ್ಲ, ಅದು ರೂಪಾಂತರವನ್ನು ಬೇಡುತ್ತದೆ ಇಷ್ಟೇ! ವಿಶ್ವದ ಯಾವ ವಿವೇಚನೆಯಲ್ಲಿ ಆಗಲಿ ಜಗತ್ತಿನಲ್ಲಿ ಜೀವಿಗಳನ್ನು ನಿಯಂತ್ರಿಸುವ ಒಂದು ಅಗಾಧ ಶಕ್ತಿಯನ್ನು ಒಪ್ಪಲೇಬೇಕು. ಅದು ಆತ್ಮಶಕ್ತಿ ಇರಬಹುದು ಇಲ್ಲವೆ ಭೌತಶಕ್ತಿ ಇರಬಹುದು

ಈ ಭೌತಶಕ್ತಿವಾದಿಗಳು ಈಶ್ವರನನ್ನು ಒಪ್ಪುವದಿಲ್ಲ. ಈ ವಿಜ್ಞಾನ ಶಾಸ್ತ್ರದ ಪ್ರಕಾರ ನಿಸರ್ಗದಲ್ಲಿ ಜೀವನದ ಹೀನ ರೂಪದಿಂದ ಉಚ್ಚರೂಪವು ಪ್ರಕಟವಾಗುತ್ತ (evolve) ಹೋಗುತ್ತದೆ ಶರೀರದಲ್ಲಿಯ ಬದಲಾವಣೆಯಿಂದ ಜೀವನವು ಬದಲಾಗುತ್ತಿ ನಿಸರ್ಗಬಲದಿಂದ ಮನುಷ್ಯನು ನಿಯಂತ್ರಿತನಾದನು. ಅವನಿಗೆ ಇಚ್ಛಾ-ಸ್ವಾತಂತ್ರವಿರಲಿಲ್ಲ ಹೀಗೆ ಜಡಶಕ್ತಿಯೇ ಆತ್ಮಶಕ್ತಿಗಿಂತ ಪ್ರಬಲವಾಗಿತ್ತು. ಆದರೆ ಮುಂದೆ ಬಂದ ವಿಜ್ಞಾನಿಗಳು (Oliver Lodge, Rutherford, Thomson) ಈ ತತ್ವವನ್ನು ವಿಪರೀತಗೊಳಿಸಿದರು. ಶರೀರವು ಮನಸ್ಸನ್ನು ಬದಲಾಯಿಸಲಿಲ್ಲ; ಆದರೆ ಮನಸ್ಸು ಈ ಜಡವಾದ ಶರೀರವನ್ನು ಬದಲಾಯಿಸಿತು. ಚೈತ್ಯವೇ ನಿಸರ್ಗದ ಮೊಗ್ಗೆಗಳನ್ನು ಒಡೆದು ತನ್ನ ರೂಪದಿಂದ ಪ್ರಕಟವಾಗುತ್ತದೆಂದು ಅವರ ವಾದ.

ಅತ್ಯಂತ ಆಧುನಿಕ ಭೌತವಾದದಲ್ಲಿ ಸಾಪೇಕ್ಷವಾದ ಮತ್ತು ಅಣುವಿಸರಣವಾದಗಳು ಮಹತ್ವವನ್ನು ಪಡೆದಿವೆ ಪ್ರಾಕೃತ ಪರಮಾಣುವಿನಲ್ಲಿ ಅಗಾಧ ಶಕ್ತಿಯು ಹುದುಗಿದೆ ಅದೊಂದು ಚಿಕ್ಕದಾದ ಸೂರ್ಯಮಾಲೆಯೇ ! ಅದರ ಅಂಶಗಳು ಸದಾ ತಿರಗುತ್ತಿವೆ ಕೊನೆಯಲ್ಲಿ ಪ್ರಕೃತಿಯೆಂದರೆ ಶುದ್ಧವಾದ ಶಕ್ತಿಯು. ಹೀಗೆ ಗತಿ, ಜೀವನ, ಚೈತನ್ಯ ಅಥವಾ ಪ್ರಜ್ಞೆ, ಸ್ವಪ್ರಜ್ಞೆ ಇವು ಈ ಶಕ್ತಿಯ ಆರೋಹ ಶ್ರೇಣಿಯು. ಆದುದರಿಂದ ಚೈತನ್ಯಯುಕ್ತ ಜೀವನಿಗೂ ಅಚೇತನವಾದ ಜಡಕ್ಕೂ ಗುಣದಲ್ಲಿ ವ್ಯತ್ಯಾಸ ಮಾತ್ರ ವಸ್ತುವಿನಲ್ಲಿ ವ್ಯತ್ಯಾಸವಿಲ್ಲ ಒಂದು ಶಕ್ತಿ- ಅದಕ್ಕೆ ಶಕ್ತಿಯೆನ್ನಿರಿ ಆತ್ಮವೆನ್ನಿರಿ- ವಿಶ್ವದಲ್ಲಿ ವ್ಯಾಪ್ತವಾಗಿದೆ.

ಹೀಗೆ ಡಾರ್ವಿನ್ನನ ಕಾಲದ ಭೌತವಿಜ್ಞಾನವು ಈಗ ಅಭೌತ ವಿಜ್ಞಾನವಾಗಿದೆ. ಅದಕ್ಕೆ ನಾವು ಅಧ್ಯಾತ್ಮವೆಂದು ಕರೆಯಲಾರೆವು. ಆತ್ಮವು ತತ್ವಜ್ಞಾನದ ವಿಷಯ, ವಿಜ್ಞಾನದ ವಿಷಯುವಲ್ಲ. ಆದರೆ ಇತ್ತೀಚೆಗೆ ವಿಜ್ಞಾನವು ಇದಕ್ಕೂ ಮುಂದೆ ಹೆಜ್ಜೆ ಇಟ್ಟಿದೆ. Sir Richard Gregory ಯವರು ಆಧುನಿಕ ವಿಜ್ಞಾನದ ಮುಂದಾಳುಗಳೆಂದು ಹೇಳುತ್ತಾರೆ ಅವರು ಹೀಗೆ ಹೇಳುತ್ತಾರೆ.— "ತತ್ವಜ್ಞಾನವು ವಿಜ್ಞಾನದ ಒಂದು ಭಾಗವಾಗಿದೆ ಯಾಕೆಂದರೆ ತತ್ವಜ್ಞಾನದ ವಿವೇಚನೆಗಳು ಭೌತಶಾಸ್ತ್ರದ ಕೃತಿಗಳಲ್ಲಿ ಸಹಾಯವಾಗುತ್ತವೆ. ಪರಮಾಣು ಭೌತಶಾಸ್ತ್ರವು ವೇದಾಂತದ ಪೂರ್ವ ನಿರ್ಧಾರಿತವಾದವನ್ನು ದೂರೀಕರಿಸಿ ಸಂಕಲ್ಪ ಸ್ವಾತಂತ್ರ್ಯಕ್ಕೆ ಪುಷ್ಟಿಯನ್ನು ಕೊಟ್ಟಿದೆ. ವಿಜ್ಞಾನವು ಹೊಸ ವಸ್ತುಗಳನ್ನು ಸಂಶೋಧಿಸಿದಂತೆ ಧರ್ಮವು ಈ ಭೌತಪದಾರ್ಥಗಳ ಮೂಲ ಮತ್ತು ಅವುಗಳ ಕೊನೆ ವಿಷಯದಲ್ಲಿ ಇರುವ ಆಸಕ್ತಿಯನ್ನು ಕಾಯಲಿ ಬೆಳಸಲಿ. ಇಷ್ಟು ತಿಳದು ಗೀತೆಯನ್ನು ಓದಿದಾಗ ಎಷ್ಟೋ ವಿಚಾರಗಳು ಗೀತೆಗೂ ಆಧುನಿಕ ವಿಜ್ಞಾನಕ್ಕೂ ಸಾಧಾರಣವಾಗಿ ತೋರಬಹುದು. R. B. Lal ರು ಗೀತೆಗೆ ವೈಜ್ಞಾನಿಕ ದೃಷ್ಟಿಯಿದೆ ಎಂದು ಹೇಳುತ್ತಾರೆ "When we study the Gita we are led by the fact that in its teachings and its general approach to the problems of life it anticipated long ago the methods and thoughts of modern science." ಕೃಷ್ಣನು ಸಾರಥ್ಯವನ್ನು ವಹಿಸಿದ್ದು ಅವನು ಅಧಿಕಾರದ ದರ್ಪದಿಂದ ಉಪದೇಶಿಸುವವನಲ್ಲ. ತಾನು ವಿವೇಚಿಸುತ್ತಾನೆ. ಅರ್ಜುನನಿಗೆ ವಿಚಾರ ಮಾಡಲಿಕ್ಕೆ ಹೇಳುತ್ತಾನೆ (विमृश्यैतदशेषेण यथेच्छसितथाकुरु) II-೩೦ರಲ್ಲಿ ಬುದ್ಧಿಯೋಗವನ್ನು ಉಪದೇಶಿಸಿದ್ದಾನೆ II-೪೬ ರಲ್ಲಿ ವೇದಗಳನ್ನು ಮತ್ತು ಜ್ಞಾನಿಗಳನ್ನೂ ತನ್ನ ಬುದ್ಧಿಗೆ ಬೆಳಕುಕೊಡಲಿಕ್ಕೆ ಆಶ್ರಯಿಸು ಎಂದು ಅರ್ಜುನನಿಗೆ ಹೇಳುತ್ತಾನೆ ಲೋಕ ಸಂಗ್ರಹಕ್ಕಾಗಿ ಅರ್ಜುನನಿಗೆ ದುಡಿಯಲಿಕ್ಕೆ ಉಪದೇಶಿಸಿದ್ದಾನೆ.

ಗೀತೆಯು ಸತ್ಯಸಂಗತಿಗಳನ್ನು ಸಂಕಲನ ಮಾಡಿ ಅವುಗಳ ಸಹಾಯದಿಂದ ಜೀವನದ ಸಮಸ್ಯೆಯನ್ನು ಬಿಡಿಸುತ್ತದೆ. ಜಗತ್ತನ್ನು ಮಿಥ್ಯಾ ಎಂದು ಹೇಳಿಲ್ಲ. ಅದು

ಪರಮಾತ್ಮನಿಂದ ವ್ಯಾಪ್ತವಾಗಿದೆ ಎಂದು ಹೇಳುತ್ತಾನೆ. "Life is the greatest gift of God, an opportunity to seek and find God." ಗೀತೆಯು ಹೇಳುತ್ತದೆ – "ಜೀವನವು ದೇವದತ್ತ ಕೊಡುಗೆಯು, ಅದು ದೇವನನ್ನು ಹುಡುಕಿ ದೊರಕಿಸಲಿಕ್ಕೆ ಒಂದು ಅವಕಾಶವು.

ಗೀತೆಯಲ್ಲಿ ಕರ್ಮವು ಮನುಷ್ಯನ ಹಕ್ಕು. ಜಗತ್ತಿನಲ್ಲಿ ಸದಾಚರಣೆಯು ಯೋಗ್ಯವಾದುದು. ಕೃಷ್ಣನು ಯುದ್ಧದ ವಿಷಯದಲ್ಲಿ ವಾಸ್ತವ ದೃಷ್ಟಿಕೋನವನ್ನು ಇಟ್ಟುಕೊಂಡಿದ್ದಾನೆ. ಅಸತ್ಯವನ್ನೂ ಅಧರ್ಮವನ್ನೂ ಎದುರಿಸಿ ಯುದ್ಧ ಮಾಡಲೇ ಬೇಕೆಂದು ಶ್ರೀ ಕೃಷ್ಣನು ಅರ್ಜುನನನ್ನು ಹುರಿದುಂಬಿಸುತ್ತಾನೆ. ಈ ಸಂಗತಿಗಳೆಲ್ಲ ವಿಜ್ಞಾನಕ್ಕೆ ವಿಚಾರಕ್ಕೆ ಸಮ್ಮತವಾದ ವಿಷಯಗಳು

ಕರ್ಮದ ನಿಯಮವು ಶಾಸ್ತ್ರೀಯವಾಗಿದೆ. ಮಾಡಿದ ಕೆಲಸದ ಫಲವನ್ನು ನಾವು ಉಣ್ಣಲೇಬೇಕೆಂದು ಗೀತೆಯು ಸಾರವಾಗಿದೆ ನಮ್ಮ ಪ್ರಯತ್ನದಿಂದ ದೇವರ ಅನುಗ್ರಹ ದಿಂದ ನಾವು ಫಲವನ್ನು ಹೊಂದಬಹುದು. ಕರ್ಮದ ತತ್ವದ ಮೇಲೆಯೇ ವೈಜ್ಞಾನಿಕ ವಾಗಿ ಗೀತೆಯು ಪುನರ್ಜನ್ಮವನ್ನು ನಿಲ್ಲಿಸದೆ ದೇವರನ್ನು ಭಜಿಸುವದು ಪ್ರಾರ್ಥಿಸುವದು ವೈಜ್ಞಾನಿಕ ಸತ್ಯ. Alexis careel ರು Prayer is the most powerful form of energy one Can gernerte. It is a force as real as terzistrial gravity. As a physician I have seen men after all therapy had failed, lifted out of disease and melancholy by the serene effort of prayer.

ಇದರಿಂದ ಪ್ರಕೃತಿಯಾಗಲಿ ಶಕ್ತಿಯಾಗಲಿ (energy) ವಿಚಾರ, ಭಾವನೆ, ಜೀವನಶಕ್ತಿ. ಯಾಂತ್ರಿಕಶಕ್ತಿ ಅವೆಲ್ಲ ಒಂದು ಸತ್ಯದ ನಾನಾ ಅವಿರ್ಭಾವಗಳೇ !! ಗೀತೆಯಲ್ಲಿ ಶ್ರೀ ಕೃಷ್ಣನು ಜಗತ್ತಿನಲ್ಲಿ ಪದಾರ್ಥಗಳನ್ನು ಹುಟ್ಟಿಸಿ ಅಂತರ್ಯಾಮಿಯಾಗಿ ಎಲ್ಲ ಕಡೆಗೆ ವ್ಯಾಪಿಸಿಸ್ದಾನೆ. ಹೀಗೆ ಜಗತ್ತು ಭೌತವೂ ಅಹುದು ಚೈತನ್ಯ ರೂಪವೂ ಅಹುದು.

ಪ್ರೊ॥ Rensch ರು ಪ್ರಾಣಿ ಸಂಗ್ರಹಾಲಯದ ಗೋಡೆಯ ಮೇಲೆ 'ಶಶ ಶಶಿ' ಎಂದು ಬರೆಸಿದ್ದಾರೆ. ದೇವರು ಭೂಮಿಯಲ್ಲಿ ವ್ಯಾಪಿಸಿದ್ದಾನೆ. ಅವನ ಸಾನಿಧ್ಯವನ್ನು ನಾವು ಹೊಂದಬೇಕು. ಜಗತ್ತಿನಲ್ಲಿ ದುಃಖವಿದ್ದರೂ ಅದು ಕೆಟ್ಟದ್ದಲ್ಲ. ಅದು ಭಗವಂತನ ಲೀಲಾ ಭೂಮಿಯು. ಭಗವಂತನು ಎಲ್ಲರ ಹೃದಯದಲ್ಲಿದ್ದಾನೆ. ಆದುದರಿಂದ ಎಲ್ಲರ ಸೇವೆಯಿಂದ, ನಾವು ಅವನನ್ನು ಪೂಜಿಸಬೇಕು. ಯಾವನನ್ನು ನೋಯಿಸಿದರೂ ದೇವನನ್ನು ನೋಯಿಸುತ್ತೀರಿ. ಆದುದರಿಂದ ನಮ್ಮ ಕರ್ತವ್ಯ ನಾವು

ನಿರ್ವಹಿಸಬೇಕು. ದೇವನು ಸಂತೋಷಿಸುತ್ತಾನೆ ಇದೇ ಲೋಕ ಸಂಗ್ರಹ; ಗೀತೆಯು ಇದನ್ನು ಉಪದೇಶಿಸಿದೆ. ಇದೇ ತತ್ವಮಸಿಯ ಅರ್ಥ ಎಂದು ಸಾರಿದ್ದಾರೆ.

ಈ ಭಗವಂತನನ್ನು ಪೂರ್ತಿ ತಿಳಿಯುವದು ಸಾಧ್ಯವಿಲ್ಲ, ವಿಜ್ಞಾನವು ತತ್ವದ ಅಂಶವನ್ನು ಮಾತ್ರ ತಿಳಿಯುತ್ತದೆ. ಪೂರ್ತಿಯನ್ನು ತಿಳಿಯುವದು ಶಕ್ಯವಿಲ್ಲವೆಂದು ಹೇಳುತ್ತದೆ ಆದರೆ ಈ ಅಂಶಗಳು ಸುಳ್ಳಲ್ಲ ಸತ್ಯವಾದವುಗಳು. ಇಡೀ ವಿಶ್ವವೆಲ್ಲ ಪರಮಾತ್ಮನ ಒಂದು ಅಂಶ ಮಾತ್ರ; ವಿಶ್ವವನ್ನು ವ್ಯಾಪಿಸಿದವನೇ ಪುರುಷೋತ್ತಮನು.

ಹೀಗೆ ಆಧುನಿಕ ವಿಜ್ಞಾನಿಗಳು ವೇದಾಂತದ ಅತ್ಯಂತ ಸಮೀಪಕ್ಕೆ ಬಂದಿದ್ದಾರೆ. ಇದರಿಂದ ವಿಜ್ಞಾನಿಗಳು ವೇದಾಂತದ ಎಲ್ಲ ತತ್ವಗಳನ್ನೂ ಒಪ್ಪುತ್ತಾರೆಂದಲ್ಲ ಆದರಂತೆ ವೇದಾಂತದ ಬ್ರಹ್ಮನ ವಿಚಾರ ಜನ್ಮಾಂತರ ವಿಚಾರ– ಇವುಗಳೆಲ್ಲ ಅಡುಗಲಜ್ಜಿಯ ಕಥೆಗಳೆಂದೂ ವಿಜ್ಞಾನಿಗಳು ತಿಳಿಯಬಾರದು

ಈ ಪ್ರಾಚೀನ ಋಷಿಗಳು ತಮ್ಮ ಅನುಭವಗಳನ್ನು ಆಧುನಿಕ ಯುಗದ ವೈಜ್ಞಾನಿಕ ಪರಿಭಾಷೆಯಲ್ಲಿ ಇಡಲಿಕ್ಕೆ ಆಗಿಲ್ಲ. ಅವರು ಒಂದು ಕಾವ್ಯಮಯ ಆಲಂಕಾರಿಕ ರೀತಿಯಲ್ಲಿ ಅವುಗಳನ್ನು ಪ್ರಕಟಿಸಿದ್ದಾರೆ ಆದರೆ ಅವು ಜೀವನದ ನಿತ್ಯ ತತ್ವಗಳು ಅವನ್ನೇ ಆಧುನಿಕ ವಿಜ್ಞಾನವು ನಿರ್ದಿಷ್ಟ ಭಾಷೆಯಲ್ಲಿ ಬೋಧಿಸುತ್ತಿದೆ· ಯಾರಾದರೂ ಬಿಚ್ಚು ಮನಸ್ಸಿನಿಂದ ಗೀತೆಯನ್ನು ಓದಿದರೆ ಅವನಿಗೆ ಇವೆರಡರಲ್ಲಿರತಕ್ಕ ಸಾಮಾನ್ಯ ವಿಚಾರಗಳ ಪರಿಚಯವು ತಪ್ಪದೆ ಆಗುತ್ತದೆ. ಇಡೀ ಮಾನವ ಕುಲಕ್ಕೆ ಯೋಗ್ಯವಾದ ಮಾನವ ಜ್ಞಾನವನ್ನು ಕಟ್ಟಲಿಕ್ಕೆ ಗೀತೆಯು ಸಮರ್ಥವದೆನ್ನುವದು ಗೊತ್ತಾಗುತ್ತದೆ ಮಾನಸ ತತ್ವಜ್ಞಾನದಲ್ಲಿ ಪಾಶ್ಚಾತ್ಯರು ಮುಂದುವರೆಯುತ್ತಿದ್ದರೂ ಅವರಲ್ಲಿ Yeats, Brown, Paul Brunton, Shaw Desemond ಮೊದಲಾದವರು ಯೋಗಾಭ್ಯಾಸ, ಪೂನರ್ಜನ್ಮ ಮೊದಲಾದ ವಿಷಯಗಳಲ್ಲಿ ಎಷ್ಟು ಆಸ್ಥೆವಹಿಸಿದ್ದಾರೆಂಬುದು ಗೊತ್ತಾಗುತ್ತದೆ. ಭಕ್ತಿಮಾರ್ಗ ಅನುಭಾವ, ಸಾಕ್ಷಾತ್ಕಾರ ಈ ವಿಷಯಗಳು ಸ್ವಾಭಾವಿಕವಾಗಿ ವಿಜ್ಞಾನಿಗಳ ತಲೆಯಲ್ಲಿ ಸೇರುವದಿಲ್ಲ. ಆದರೆ ನನಗೆ ಯಾವದರಿಂದ ಜ್ಞಾನವಾಗುತ್ತದೆ, ಅದರ ವಿಷಯ ತಿಳಿಯಬೇಕಾಗಿದೆ. ಆಗ ನಾನು ಹೊರಗಿನಿಂದ ಒಳಗೆ ಪ್ರವೇಶಿಸುತ್ತೇನೆ ಭೌತವಿಜ್ಞಾನಿಯೂ ಈ ತರಹದ ಅಂತರ್ಜ್ಞಾನದಲ್ಲಿ ಆಸಕ್ತನಾಗುತ್ತಾನೆ. ಇದು ಭಾವನಾ ಪ್ರಧಾನವಾದ ಭಕ್ತಿವಾದವಲ್ಲ; ಇದು ವಿಚಾರ ಪ್ರಧಾನವಾದ ಸಂಶೋಧನೆಯು ಇದಕ್ಕೆ ಪ್ರಾಯೋಗಿಕ ವಿಜ್ಞಾನದ ಎಲ್ಲ ಪದ್ಧತಿಗಳನ್ನೂ ಹಚ್ಚಿ ಮಾನಸಿಕ ತತ್ವವನ್ನು ತಿಳಿಯಬಹುದು. ಗೀತೆಯು ಕರ್ಮಕುಶಲವಾದ ಯೋಗವನ್ನು ಕಲಿಸುತ್ತದೆ.

ಆದರೆ ವಿಜ್ಞಾನವು ವಿಚಾರಕ್ಕೆ ಸೀಮಿತವಾಗಿದೆ. ವಿಚಾರದ ಆಚೆಗಿರುವದನ್ನು ವಿಚಾರ ಬಿಟ್ಟು ಉಳಿದ ಅತಿ ಆಂತರಿಕ ಪ್ರಮಾಣಗಳಿಂದ ತಿಳಿಯಲಿಕ್ಕೆ ಒಪ್ಪುವದಿಲ್ಲ ವಿಜ್ಞಾನದ ಪದ್ಧತಿಯಿಂದ ವಿಭಾಗಶಃ ಜ್ಞಾನವು ಮಾತ್ರ ದೊರೆಯುತ್ತದೆ ತತ್ವದ ಸಮಗ್ರ ಜ್ಞಾನಕ್ಕೆ ಬೇರೆ ಅಗಾಧ ಶಕ್ತಿಯುಳ್ಳ ಆಂತರಿಕ ಚಕ್ಷುಸ್ಸನ್ನು ಒಪ್ಪಬೇಕಾಗುತ್ತದೆ (दिव ददामितेचक्षुः). ಅದರ ಸಹಾಯದಿಂದ ನಮಗೆ ಎಲ್ಲದರ ಹಿಂದೆ ಇರುವ ನಿತ್ಯತತ್ವವನ್ನು ತಿಳಿಯಲು ಸಾಧ್ಯವಾಗುತ್ತದೆ. ಇದು ಆತ್ಮತತ್ವವು (XVIII-೨೦) ಇದೇ ಎಲ್ಲದರ ಹುಟ್ಟು ಬಾಳು ಸಾವಿಗೆ ಕಾರಣವೆನಿಸುವದು. ಈ ಜ್ಞಾನದಿಂದ ವಿಜ್ಞಾನಿಯ ತುಂಡು ಜ್ಞಾನವು ಪೂರ್ಣವಾಗುವದು. ಹೀಗೆ ವಿಜ್ಞಾನಿಯ ಪ್ರಾಯೋಗಿಕ ಅಥವಾ ವಿಚಾರಪ್ರಧಾನ ಜ್ಞಾನವು ಆಂತರಿಕ ಜ್ಞಾನಕ್ಕೆ ಸಹಾಯಕವಾದರೆ, ಆಂತರಿಕ ಜ್ಞಾನವು ಅಪೂರ್ಣವಾಗಿದ್ದ ವೈಜ್ಞಾನಿಕ ಜ್ಞಾನಕ್ಕೆ ಬೆಳಕು ನೀಡಿದರೆ ಮಾನವನ ಜನ್ಮವು ಸಫಲವಾಗುವದು ಇದನ್ನೇ ಕೃಷ್ಣನು ಪ್ರಾಚೀನ ಕಾಲದಲ್ಲಿ ವಿವಸ್ವತನಿಗೆ ಹೇಳಿದನು. ಅದು ಕಳೆದುಹೋಯಿತು. ಕೃಷ್ಣನು ಅದಕ್ಕೆ ಪುನಃ ಚಾಲನೆಯನ್ನು ಕೊಡುತ್ತಾನೆ

ಶ್ರೀ ಕೃಷ್ಣನ ಮತವನ್ನು ಅನುಸರಿಸುವವರು ನಿತ್ಯ ತತ್ವದ ಜ್ಞಾನವನ್ನು ಆಗಾಗ ಬೆಳೆದು ಬಂದ ವಿಚಾರಗಳೊಡನೆ ಆಲೋಚಿಸಿ ಮತ್ತೆ ಮತ್ತೆ ವಿಮರ್ಶಿಸಿ ಹೊಸ ತೇಜಸ್ಸಿನಿಂದ ಅದನ್ನು ಬೆಳಗಿಸಬೇಕು ಆಧುನಿಕ ಹೊಸ ವಿಚಾರಗಳಿಂದ ಸನಾತನ ತತ್ವಜ್ಞಾನಕ್ಕೆ ಹೆಚ್ಚಿನ ಲಾಭವೇನೂ ಇಲ್ಲದಿದ್ದರೂ ಹೊಸ ವಿಚಾರಗಳನ್ನು ಅದು ಅರಗಿಸಿಕೊಂಡು ಹೊಸ ರೂಪದಲ್ಲಿ ನಿಲ್ಲದಿದ್ದರೆ ಅದು ಹೊಸ ಜೀವನಕ್ಕೆ ಫಲದಾಯಕವಾಗುವದಿಲ್ಲ. ಆದುದರಿಂದ ಗೀತೆಯ ಹೊಸ ತಾತ್ಪರ್ಯಗಳನ್ನು ಪರಿಶೋಧಿಸಿ ವಿಮರ್ಶಿಸಿ ವಿಚಾರಿಸಿ ನಿರ್ಣಯಕ್ಕೆ ಬಂದಾಗ ಅದರಲ್ಲಿರುವ ಜೊಳ್ಳು ಪೊಳ್ಳು ಚಲ್ಲಿಕೊಟ್ಟು ಹೊಸದನ್ನು ಹೊಟ್ಟೆಯೊಳಗೆ ಹಾಕಿಕೊಂಡು ಸಮರ್ಥವಾದರೆ ಹೊಸ ಜೀವನದ ಹೊಸ ಸಮಸ್ಯೆಗಳಿಗೂ ಸಮರ್ಥವಾದ ಅಧಿಕಾರಯುಕ್ತವಾದ ವಾಣಿಯಿಂದ ಯೋಗ್ಯ ಉತ್ತರಕೊಟ್ಟು ಮಾರ್ಗದರ್ಶನ ಮಾಡಬಹುದು. ಇಲ್ಲವಾದರೆ ಈಗಿನ ಜೀವನಕ್ಕೂ ಹಳೇ ತತ್ವವಿಚಾರಕ್ಕೂ ಸರಿಯಾದ ಮಾಧ್ಯಮವಿಲ್ಲದ್ದರಿಂದ ತೇಜಸ್ವಿ ತತ್ವಜ್ಞಾನಕ್ಕೂ ಈಗಿನ ಜೀವನದೊಡನೆ ಸಂಪರ್ಕ ಬೆಳಸಿ ಪ್ರಯೋಜನಕಾರಿಯಾಗಲಿಕ್ಕೆ ಶಕ್ಯವಾಗುವದಿಲ್ಲ. ಸಹೃದಯ ಓದುಗರು ಇದರ ಸ್ವಲ್ಪಾದರೂ ಪ್ರಯೋಜನ ಪಡೆದರೆ ನನ್ನ ಪ್ರಯತ್ನ ಸಾರ್ಥಕವೆಂದು ಭಾವಿಸುತ್ತೇನೆ.

ಎಲ್ಲ ಭಾವನೆಗಳು ಯಾವನಿಂದ ಹುಟ್ಟುತ್ತವೆಯೋ ಆ ಭಗವಂತನಿಗೆ
ಈ ನನ್ನ ಶ್ರಮವನ್ನು ಅರ್ಪಿಸಿ ವಿರಮಿಸುತ್ತೇನೆ.

ಗುರುರಾಜ. ಭೀ. ಜೋಶಿ

॥ ಗೀತಾವಲೋಕನ ॥

## ಭಾಗ ೧

# ಗೀತಾ ಗ್ರಂಥ ವಿವರಣೆ

## ೧ ನೆಯ ಅಧ್ಯಾಯ–ಅರ್ಜುನ ವಿಷಾದ ಯೋಗ

**धृतराष्ट्र उवाच :** ಧೃತರಾಷ್ಟ್ರನು ಸಂಜಯನನ್ನು ಕುರಿತು ಎಂದನು.

**धर्मक्षेत्रे कुरुक्षेत्रे समवेता युयुत्सवः ।**
**मामकाः पांडवाश्चैव किमकुर्वत संजय ॥ १ ॥**

ಧರ್ಮ (ಸಾಧನ) ಭೂಮಿಯಾದ ಕುರುಕ್ಷೇತ್ರದಲ್ಲಿ ಯುದ್ಧವನ್ನೇ ಇಚ್ಛಿಸುವ ನನ್ನವರು (ದುರ್ಯೋಧನಾದಿಗಳು) ಮತ್ತು ಪಾಂಡವರು, ಸಂಜಯನೇ, ಏನು ಮಾಡಿದರು ?

**ವಿಶೇಷ ವಿವರಣೆ :** ಮೊದಲ ಅಧ್ಯಾಯ ಮತ್ತು ಎರಡನೆಯ ಅಧ್ಯಾಯದ ಕೆಲವು ಶ್ಲೋಕಗಳಲ್ಲಿ ಕೃಷ್ಣನು, ಮುಂದೆ, ಅರ್ಜುನನಿಗೆ ಮಾಡುವ ಉಪದೇಶಕ್ಕೆ ಯೋಗ್ಯವಾದ ಪ್ರಸಂಗವನ್ನು ಗೀತಾಕಾರರು ಒದಗಿಸುತ್ತಾರೆ. ಗೀತೆಯನ್ನು ಆರಾರು ಅಧ್ಯಾಯದ ಮೂರು ಮೂರು ಷಟ್ಕಗಳಲ್ಲಿ ವಿಭಾಗಿಸಿದ್ದಾರೆ. ಮೊದಲನೆಯ ಷಟ್ಕವು ಜ್ಞಾನದ ಉಪಾಯಗಳಿಗೆ ಮೀಸಲಾಗಿದೆ ಎರಡನೆಯ ಷಟ್ಕದಲ್ಲಿ ಸಾಧನೆಗಳನ್ನು ನಿರೂಪಿಸುತ್ತಾರೆ. ಮೂರನೆಯದರಲ್ಲಿ ಮೊದಲು ಹೇಳಿದ್ದರ ವಿಸ್ತಾರವನ್ನು ಕಾಣುತ್ತೀರಿ.

ಗೀತೆಯಲ್ಲಿ ಒಟ್ಟು ೭೦೦ ಶ್ಲೋಕಗಳು ೧೮ ಅಧ್ಯಾಯಗಳಲ್ಲಿ ವಿಭಕ್ತವಾಗಿವೆ ಇದು ಮಹಾಭಾರತ ಪಾರಿಜಾತದ ಮಧುವಾಗಿರುವದು ಇದನ್ನು ಭೀಷ್ಮಪರ್ವ ದಲ್ಲಿ (೨೫ ರಿಂದ ೪೨ ಅಧ್ಯಾಯಗಳಲ್ಲಿ) ಸೇರಿಸಲಾಗಿದೆ ಇದು ಕೃಷ್ಣಾರ್ಜುನರ ಸಂವಾದರೂಪದಲ್ಲಿದೆ. ಶ್ರೀವೇದವ್ಯಾಸರು ಇದರ ಗ್ರಂಥಕರ್ತರು ಇವರು ಮಹಾಭಾರತದ ಗ್ರಂಥಕರ್ತರೂ ಅಹುದು

ಶ್ರೀ ವೇದವ್ಯಾಸರು ವಿಷ್ಣುವಿನ ಅವತಾರ. ಆದುದರಿಂದ ಮಧ್ವಾಚಾರ್ಯರು ಶ್ರೀ ಬಾದರಾಯಣರ ಮತ್ತು ಮಹಾಭಾರತದ ಮಹಿಮೆಯನ್ನು ಕೊಂಡಾಡುತ್ತ, ಗೀತೆಯನ್ನು ಪ್ರಸ್ತಾಪಿಸಿದ್ದಾರೆ ಆದರೆ ಶಂಕರಾಚಾರ್ಯರು, ರಾಮಾನುಜಾಚಾರ್ಯರು ಶ್ರೀಕೃಷ್ಣನ ಮಹಿಮೆಯನ್ನು ಕೊಂಡಾಡುತ್ತಾ ಗೀತೆಯ ಪ್ರಸ್ತಾಪವನ್ನು ಬರೆದಿದ್ದಾರೆ C M. ಪದ್ಮನಾಭಾಚಾರ್ಯರು (A critical survey of Bhagavad Geeta ದಲ್ಲಿ) ಈ ಮತಭೇದವು ಅರ್ಥವುಳ್ಳದ್ದೆಂದು ಹೇಳುತ್ತಾರೆ ವೇದವ್ಯಾಸರು ವಿಷ್ಣುವಿನ ಅವತಾರವೆನ್ನುವ ವಿಷಯದಲ್ಲಿರುವ ಮತಭೇದವೇ ಈ ಅರ್ಥ ರಾಮಾನುಜರ ಶಿಷ್ಯರಾದ ವೇದಾಂತದೇಶಿಕರು ಸ್ಪಷ್ಟವಾಗಿ ವೇದವ್ಯಾಸರು ಪರಮಾತ್ಮನ ಅವತಾರವಲ್ಲವೆಂದೂ ಅವರು ಒಬ್ಬ ಮಹರ್ಷಿಯೆಂದೂ ಅವರು ಸಾಮಾನ್ಯ ಮನುಷ್ಯನ ಹಾಗೆ ಗುಣ ದೋಷಗಳಿಗೆ ಒಳಗಾಗಿದ್ದಾರೆಂದೂ ಮತ್ತು ಅವರಿಗೂ ಪ್ರಾರಬ್ಧವು ಬೆನ್ನುಹತ್ತಿದೆಂದೂ ಅಭಿಪ್ರಾಯ ಪಡುತ್ತಾರೆ

ಇವಕ್ಕ ವಿರುದ್ಧವಾಗಿ ಮಧ್ವರು ವೇದವ್ಯಾಸರು ಪರಮಾತ್ಮನ ಅವತಾರವೆನ್ನುವದಕ್ಕೆ ಪ್ರಮಾಣಗಳನ್ನು ಉದಾಹರಿಸುತ್ತಾರೆ. (**ततः प्रसन्नो भगवान् व्यासो ज्ञात्वा च तेन च** — ನಾರಾಯಣ ಕಲ್ಪ) ಇದಕ್ಕೆ ಶಂಕರರ ಬಹುಜನ ಅನುಯಾಯಿಗಳು ಒಪ್ಪಿದ್ದಾರೆ (**श्रीमन्नारायण. श्रीकृष्णद्वैपायनः . . . अतिकृपया — शंकरानंदी**) ರಾಮಾನುಜೀಯರಲ್ಲಿಯೂ ಈ ವಿಷಯದಲ್ಲಿ ಐಕಮತ್ಯವಿಲ್ಲ

ಆದುದರಿಂದ ಭಗವದ್ಗೀತೆಯ ಮಹಿಮೆಯನ್ನು ಸಾರುವಾಗ ವೇದವ್ಯಾಸರ ಮತ್ತು ಮಹಾಭಾರತದ ಮಹಿಮೆಯನ್ನೂ ನಿರೂಪಿಸಲು ಮರೆಯಬಾರದು ಇದರ ಮುಂದೆ “ ಈಗ ಇದ್ದ ಹಾಗೆ ಶ್ಲೋಕಬದ್ಧವಾದ ಗೀತೆಯೇ ಕೃಷ್ಣನ ಬಾಯಿಂದ ರಣಭೂಮಿಯ ಮೇಲೆ ಹೊರಬಿದ್ದಿರಬಹುದೆ ? ” ಎಂಬ ಪ್ರಶ್ನೆಯು ಉದ್ಭವಿಸುತ್ತದೆ ಈ ಏಳುನೂರು ಶ್ಲೋಕಗಳನ್ನು ಕೃಷ್ಣನೇ ರಚಿಸಿದ್ದಾನೆಂದೂ ವೇದವ್ಯಾಸರು ತಮ್ಮ ಮಹಾಭಾರತದಲ್ಲಿ ಅದಕ್ಕೊಂದು ಸ್ಥಾನವನ್ನು ಮಾತ್ರ ಕಲ್ಪಿಸಿದರೆಂದೂ ಕೆಲವರ ಅಭಿಪ್ರಾಯ. ಆದರೆ ಉಳಿದವರು ಕೃಷ್ಣನು ಅರ್ಜುನನಿಗೆ ಈ ತತ್ವಗಳನ್ನು ಉಪದೇಶಿಸಿದನು ವೇದವ್ಯಾಸರು ಕೃಷ್ಣಾರ್ಜುನರ ಸಂವಾದವನ್ನು ಸಾಕ್ಷಾತ್ ಕೇಳಿದ್ದರಿಂದ ಕೃಷ್ಣನ ಅಭಿಪ್ರಾಯವನ್ನು ಒಳಗೊಂಡ ಶ್ಲೋಕಗಳ ರಚನೆಯನ್ನು ಯೋಗ್ಯ ಸಂದರ್ಭದಲ್ಲಿ ಮಹಾಭಾರತದಲ್ಲಿ ಸೇರಿಸಿದರೆಂದೂ ಅಭಿಪ್ರಾಯ ಪಡುತ್ತಾರೆ. * ಮಹಾಭಾರತದಲ್ಲಿ ಎರಡೂ ಪಕ್ಷಗಳನ್ನು ಸಮರ್ಥಿಸುವ ಶ್ಲೋಕ

* ವೇದವ್ಯಾಸರ ವಿಷಯದಲ್ಲಿ K. M ಮುನಿಷಿಯವರು ತಮ್ಮ Bhagavadgeeta

ಗಳನ್ನು ಶೋಧಿಸಿದ್ದಾರೆ. ಯಾರಿಗೆ ಕೃಷ್ಣಬಾದರಾಯಣರು ಒಬ್ಬರೇ ಎಂಬ ಭಾವನೆ ಇದೆಯೋ ಅವರಿಗೆ ಈ ವಾದದಲ್ಲಿ ಹುರಳಿಲ್ಲವೆಂದು ಎನಿಸುತ್ತದೆ. ಹಾಗೆಯೇ "ಕೃಷ್ಣನು ಗೀತೆಯನ್ನು ಬೇರೆ ಪ್ರಾಕೃತಭಾಷೆಯಲ್ಲಾಗಲೀ, ಗದ್ಯದಲ್ಲಾಗಲೀ ಅರ್ಜುನನಿಗೆ ಉಪದೇಶಿಸಿದ್ದನ್ನು ವ್ಯಾಸರು ಶ್ಲೋಕರೂಪದಿಂದ ನಮಗೆ ಕೊಟ್ಟಿದ್ದಾರೆ" ಎನ್ನುವದೂ ಸಮಂಜಸವಾಗಿ ತೋರುತ್ತದೆ.

ಆದರೆ ಕೆಲವರು "ಇದಕ್ಕೆ ಭಗವದ್ಗೀತೆಯೆಂದು ಕರೆಯುವದರಿಂದ ಭಗವಂತನಾದ ಕೃಷ್ಣನೇ ಗ್ರಂಥಕಾರನಿರಬೇಕು" ಎಂದು ವಾದಿಸುತ್ತಾರೆ ಇದರಲ್ಲಿ ಅರ್ಥವಿಲ್ಲ. ಯಾಕೆಂದರೆ "ಭ್ರಮರಗೀತೆ, ಶ್ರುತಿ ಗೀತೆ, ಅಷ್ಟಾವಕ್ರಗೀತೆಗಳು" ಗ್ರಂಥಕಾರರನ್ನು ನಿರ್ದೇಶಿಸುವದಿಲ್ಲ.

ಮಧ್ವರು, ಗೀತೆಯ ಗ್ರಂಥಕಾರರು ವೇದವ್ಯಾಸರೆಂದು ಅಭಿಪ್ರಾಯಪಡುತ್ತಾರೆ, ಮತ್ತು ವ್ಯಾಸರೇ ಶ್ರೀಕೃಷ್ಣನೆಂದು ಒತ್ತಿ ಹೇಳುತ್ತಾರೆ.

ಶ್ರೀ ಶಂಕರರು ಪ್ರಥಮಷಟ್ಕವು ಕರ್ಮಕಾಂಡವೆಂದೂ ದ್ವಿತೀಯ ಷಟ್ಕವು ಉಪಾಸನಾಕಾಂಡವೆಂದೂ ತೃತೀಯ ಷಟ್ಕವು ಜ್ಞಾನಕಾಂಡವೆಂದೂ ಗೀತೆಯ ೧೮ ಅಧ್ಯಾಯಗಳನ್ನು ವಿಭಾಗಿಸಿದ್ದಾರೆ ಹಾಗೆಯೇ ಇನ್ನೊಂದು ವಿಧವಾಗಿ ಕಾಂಡತ್ರಯ ವಿಭಾಗವನ್ನು ಅದ್ವೈತಮತದಲ್ಲಿ ಹೇಳುತ್ತಾರೆ "ಸದಾನಂದೀಭಾವಪ್ರಕಾಶದಲ್ಲಿ ಆದ್ಯಕಾಂಡವು ತ್ವಂ ಪದಾರ್ಥದ ಶೋಧವೆಂದು ಹೇಳುತ್ತಾರೆ. ತ್ವಂ ಪದಾರ್ಥದ ಜ್ಞಾನದಿಂದ ಮಧ್ಯಮ ಷಟ್ಕದಲ್ಲಿ ತತ್ ಪದಾರ್ಥವು ಧ್ಯೇಯವೆಂಬುದನ್ನು ಸಾರುತ್ತಾರೆ. ಮೂರನೇ ಷಟ್ಕದಲ್ಲಿ 'ತ್ವಂ' ಮತ್ತು ತತ್ ಪದಾರ್ಥಗಳ ಐಕ್ಯವನ್ನು ಹೇಳುತ್ತಾರೆ."

---

and modern Life ದಲ್ಲಿ ಒಂದು ಪ್ರಕರಣವನ್ನೇ ಬರೆದಿದ್ದಾರೆ —' In the course of the Epic the master described how in his time different streems of life had mingled; how the wicked had fought and lost how the righteous had struggled and won As the theme grew upon him he saw the role and mission of Shri Krishna as God incarnate and gave us a living portrait of him In the section called Bhagavadgeeta he also conveyed his message and he left us in Vivid matchless phrases the Apocalypse in which Arjuna with wondering awe beheld in Shri Krishna the omnipotent and heard his mandate. Thus the master made him live in immortal words so that he might survive in our hearts for ever "

**ಪೂರ್ವ ಸಂಗತಿಯು :** ಯುದ್ಧವು ನಿಶ್ಚಿತವಾಯಿತು. ಪಾಂಡವರು ಧಾರ್ಮಿಕರು ಪಾಪಭೀರುಗಳು ಕೌರವರು ಉನ್ಮತ್ತರು; ಸ್ವಾರ್ಥಕ್ಕಾಗಿ ಧರ್ಮವನ್ನೂ ಬದಿಗೆ ಸರಿಸಲು ಸಿದ್ಧರು. ಸಂಧಾನ ಕೃಷ್ಣನಿಗೂ ಸಾಧ್ಯವಾಗಲಿಲ್ಲ. ಉಭಯ ಸೇನೆಗಳು ಕುರುಕ್ಷೇತ್ರದ ಮೇಲೆ ಯುದ್ಧಕ್ಕೆ ಅಣಿಯಾದವು. ಕುರುಡನಾದ ಧೃತರಾಷ್ಟ್ರನು ಮನೆಯಲ್ಲಿ ಉಳಿದನು. ಸಂಜಯನು ಅವನಿಗೆ ಯುದ್ಧವಾರ್ತೆಯನ್ನು ಮುಟ್ಟಿಸಬೇಕೆಂದು ವ್ಯಾಸರು ವ್ಯವಸ್ಥೆ ಮಾಡಿದರು. ಅವನಿಗೆ ಯಾವಾಗಲೂ ಎಲ್ಲ ಕಡೆಗೂ ಹೋಗುವ ಸೌಕರ್ಯವನ್ನೂ ಸುರಕ್ಷಿತತೆಯನ್ನೂ ನೀಡಿದರು. ಅದರಂತೆ ಸಂಜಯನು ಭೀಷ್ಮನು ಬಿದ್ದಮೇಲೆ ಮೊದಲು ಬಾರಿಗೆ ಧೃತರಾಷ್ಟ್ರನ ಕಡೆಗೆ ಹೋದನು. ಆಗ ಧೃತರಾಷ್ಟ್ರನು ತನಗೆ ಯುದ್ಧಪ್ರಾರಂಭದಿಂದ ಎಲ್ಲ ವಾರ್ತೆಯನ್ನು ಕ್ರಮವಾಗಿ ಮತ್ತು ವಿವರವಾಗಿ ವರ್ಣಿಸಬೇಕೆಂದು ಸಂಜಯನಿಗೆ ಆಜ್ಞಾಪಿಸಿದನು ಈ ಆಜ್ಞೆಯನ್ನು ಮಾಡುವ ಶ್ಲೋಕವೇ ಇದು.

**ಕುರುಕ್ಷೇತ್ರ** . ಹಸ್ತಿನಾಪುರದ ಸುತ್ತುಮುತ್ತಲಿನ ಮೈದಾನಕ್ಕೆ ಕುರು-ಕ್ಷೇತ್ರವೆಂದು ಹೆಸರು. ಈಗಿನ ದಿಲ್ಲಿ ಪಟ್ಟಣವು ಈ ಕ್ಷೇತ್ರದಲ್ಲಿಯೇ ಇದೆ. ಕೌರವ ಪಾಂಡವರ ಪೂರ್ವಜನಾದ ಕುರು ಎಂಬ ರಾಜನಿದ್ದನು. ಅವನು ಈ ಬಯಲಲ್ಲಿ ರಂಟೆ ಹೊಡೆಯುತ್ತಿದ್ದನು. ಆದುದರಿಂದ ಈ ಸ್ಥಳಕ್ಕೆ ಕ್ಷೇತ್ರವೆಂದು (ಹೊಲ) ಕರೆಯುತ್ತಾರೆ ಮುಂದೆ ಇಲ್ಲಿ ಯಾರು ಯುದ್ಧದಲ್ಲಿ ಸಾಯುತ್ತಾರೆ ಮತ್ತು ತಪಸ್ಸು ಮಾಡುತ್ತಾರೆ ಅವರಿಗೆ ಸ್ವರ್ಗ ದೊರೆಯುವದೆಂದು ಕುರುರಾಜನಿಗೆ ಇಂದ್ರನು ವರ ನೀಡಿದನು. ಆಗ ರಾಜನು ಅಲ್ಲಿ ನೇಗಿಲು ಹೊಡೆಯುವದನ್ನು ಬಿಟ್ಟುಕೊಟ್ಟನು ಎಂದು ಶಲ್ಯಪರ್ವದಲ್ಲಿ ಹೇಳಿದ್ದಾರೆ. ಅಲ್ಲಿ ಅನೇಕ ಜನರು ತಪವನ್ನು ಆಚರಿಸಿದ್ದರಿಂದ ಅದಕ್ಕೆ ಧರ್ಮಕ್ಷೇತ್ರವೆಂದು ಕರೆಯುತ್ತಾರೆ.

ವೇದಾಂತ ದೇಶಿಕರು **ಧರ್ಮಕ್ಷೇತ್ರ** ಎಂಬುದರ ಅರ್ಥವನ್ನು ದೊಡ್ಡಯಾಗ (**ಧರ್ಮ**) ವಾಗತಕ್ಕ ಕ್ಷೇತ್ರವೆಂದು ಹೇಳುತ್ತಾರೆ.

ಇದರ ಸೂಕ್ಷ್ಮವಾದ ಅರ್ಥವನ್ನು 'ಪಾಂಡವರು ಇಂಥ ಪವಿತ್ರಕ್ಷೇತ್ರದಲ್ಲಿ ಭೀಷ್ಮನನ್ನು ಕೊಂದು ದೊಡ್ಡ ಅನ್ಯಾಯವನ್ನು ಮಾಡಿದರು' ಎಂದು ಹೇಳುತ್ತಾರೆ. ಇದು ಅಲ್ಲದೆ ಪಾಂಡವರು ಈ ಪುಣ್ಯಭೂಮಿಯ ಪ್ರಭಾವದಿಂದ ಪಶ್ಚಾತ್ತಾಪಬಟ್ಟು ತಾವಾಗಿಯೇ ಯುದ್ಧದಿಂದ ತಿರುಗಿ ಹೋಗಬಹುದೆಂಬ ಮನೋಥಕಲ್ಪನೆಗೆ ಧೃತರಾಷ್ಟ್ರನು ಆಸ್ಪದ ಕೊಡುತ್ತಾನೆಂದು ಕೆಲವರು ಹೇಳುತ್ತಾರೆ. ಆ ಪ್ರಸಂಗದಲ್ಲಿ ತನಗೆ ರಾಜ್ಯವನ್ನು ಅಪಹರಿಸಿದರೆಂಬ ಅಪವಾದವೇ ಬರುವದಿಲ್ಲ. ಈ ಹುಚ್ಚು ಭಾವನೆಯಿಂದ ಧೃತರಾಷ್ಟ್ರನು ಈ ಪ್ರಶ್ನೆ ಮಾಡುತ್ತಾನೆ. (The Bhagavad-Gita by Chidbhavananda). ಆದರೆ ಧೃತರಾಷ್ಟ್ರನು ದುರ್ಯೋಧನನ ಛಲ

ವನ್ನು ಅರಿತಿರಬೇಕು. ಈ ಸಾಮಾನ್ಯವಾದ ತಪಸ್ಸಿನ ಪ್ರಭಾವಕ್ಕೆ ಅವನು ಒಳಗಾಗುವದು ಶಕ್ಯವಿಲ್ಲ. ಯಾಕೆಂದರೆ ಭೀಷ್ಮ, ದ್ರೋಣ, ವಿದುರ ಮೊದಲಾದವರ ಉಪದೇಶವೇ ಇವನ ಮನಸ್ಸಿನ ಮೇಲೆ ಪರಿಣಮಿಸಲಿಲ್ಲ. ಕೃಷ್ಣನ ಉಪದೇಶವೂ ನಾಟಲಿಲ್ಲ ಆದರೂ ತನ್ನ ಮಗನ ಮನಸ್ಸು ಕೊನೆ ಗಳಿಗೆಯಲ್ಲಿ ಯಾಕೆ ಬದಲಾಗಬಾರದೆಂದು ಅಂಧ ವೃದ್ಧನ ಆಶೆ. (ಸೋಮನಾಥಾನಂದ). ಯಾಕೆಂದರೆ ಧರ್ಮವು ಯಾವುದೆಂದು ವಿವೇಚಿಸುವವನು ಮನುಷ್ಯನು ಮಾತ್ರ ಆಹಾರ ನಿದ್ರಾ ಭಯ ಮೈಥುನಗಳು, ಮಾನವ ಮತ್ತು ಪಶುಗಳಿಗೆ ಸಮಾನವಾಗಿರುತ್ತವೆ. *

ರಾಧಾಕೃಷ್ಣನ್ನರು ಇದರಲ್ಲಿ ಒಂದು ನೈತಿಕ ರೂಪಕವನ್ನು ಕಾಣುತ್ತಾರೆ — 'The world is Dharma Kshetra the battle ground for a moral struggle. The decisive issue lies in the hearts of men where the battles are fought daily and hourly.' ಜಗತ್ತೇ ಒಂದು ಧರ್ಮಕ್ಷೇತ್ರವು, ನೈತಿಕ ಹೋರಾಟವೇ ಯುದ್ಧಭೂಮಿಯು. ಜನರ ಹೃದಯಗಳಲ್ಲಿ ಪ್ರತಿದಿನ ಪ್ರತಿತಾಸು ಯುದ್ಧಗಳು ನಡದೇ ಇರುತ್ತವೆ. ಅಲ್ಲಿಯೇ ಅವುಗಳ ನಿರ್ದಿಷ್ಟ ನಿರ್ಣಯವು ಇರುತ್ತದೆ.' ಧರ್ಮಸಂರಕ್ಷಕನಾದ ಭಗವಾನ್‌ಶ್ರೀಕೃಷ್ಣನೇ ಈ ಯುದ್ಧಭೂಮಿಯ ಮೇಲೆ ಇದ್ದುದರಿಂದ ಇದಕ್ಕೆ ಧರ್ಮ ಕ್ಷೇತ್ರವೆಂದು ಕರೆಯಬಹುದೆಂದೂ ಅವರು ಅಭಿಪ್ರಾಯಪಡುತ್ತಾರೆ.

ಕುರುಕ್ಷೇತ್ರಕ್ಕೆ ಮನುಸ್ಮೃತಿಯಲ್ಲಿ (II - 19 ) ತಪಃ ಕ್ಷೇತ್ರವೆಂದೂ ಕರೆದಿದ್ದಾರೆ. ಯಾಕೆಂದರೆ ಯುದ್ಧವು ಒಂದು ಶಿಕ್ಷೆಯೂ ಅಹುದು ಹಾಗೂ ಶುದ್ಧೀಕರಣವೂ ಅಹುದು.

**ಮಾಮಕಾ :** ನನ್ನವರು. ಧೃತರಾಷ್ಟ್ರನು ತನ್ನವರು ಪಾಂಡವರು ಎಂದು ಭೇದಮಾಡುತ್ತಾನೆ. ಹೀಗೆ ಅವನು ತನ್ನ ಮಕ್ಕಳಾದ ದುರ್ಯೋಧನ ಮೊದಲಾದವರ ವಿಷಯದಲ್ಲಿ ಪಕ್ಷಪಾತ ಮಾಡುತ್ತಾನೆ. ಇದಕ್ಕೆ ಇನ್ನೊಂದು ಅರ್ಥವನ್ನೂ ಹೇಳುತ್ತಾರೆ. **मामेन नीताः मामकाः** ಶಕುನಿಮಾಮನ ಕುಟಿಲ ಕೃತ್ಯದಿಂದ ಒಯ್ಯಲ್ಪಟ್ಟವರು (ಅಡ್ಡದಾರಿಗೆ).

ಒಬ್ಬ ಮುಂಬಯಿ ವಿಮರ್ಶಕರು ಇದರಿಂದ ಒಂದು ವಿಚಿತ್ರ ಪ್ರಭೇದವನ್ನು ಕೌರವ ಪಾಂಡವರಲ್ಲಿ ಕಂಡಿದ್ದಾರೆ. ಪಾಂಡವರು ಒಂದು ಬೇರೆ ಕುಲಕ್ಕೆ ಸೇರಿದವರೆಂದು ಅವರ ಅಭಿಪ್ರಾಯ ದ್ರೌಪದಿಯನ್ನು ಐದು ಜನ ಪಾಂಡವರು ಮದುವೆಯಾದುದರಿಂದ ಇವರು ಹಿಮಾಲಯದಿಂದ ಬಂದ ಕಾಡುಕುಲದವರು. ಆದುದರಿಂದ

* ಈ ಮೊದಲು ಧೃತರಾಷ್ಟ್ರನು ಸಂಜಯನನ್ನು ಪಾಂಡವರ ಕಡೆಗೆ ಕಳುಹಿದ್ದನು

ಇವರು ಸ್ವಲ್ಪ ಕಪ್ಪು ಬಣ್ಣದವರಿದ್ದರು. ದುರ್ಯೋಧನ ಮೊದಲಾದ ಕೌರವರು ಶುದ್ಧ ಆರ್ಯರಾದುದರಿಂದ ಅವರು ಬೆಳ್ಳಗಿದ್ದರು. ಈ ಪಂಥದ ವಿಮರ್ಶಕರು ಮಹಾಭಾರತ ಯುದ್ಧವು ಕುಲಕುಲಗಳ ದ್ವೇಷದಿಂದ ಪ್ರೇರಿತವಾದುದೆಂದು ವಾದಿಸುತ್ತಾರೆ.

ಗಾಂಧಿಯವರು ಒಂದೆಡೆಗೆ "ಗೀತೆಯು ಐತಿಹಾಸಿಕ ಸಂಪಾದವಲ್ಲ. ಒಂದು ಆಧ್ಯಾತ್ಮಿಕ ಪಾಠವನ್ನು ಪರಿಣಾಮಕಾರಿಯಾಗಿ ಕಲಿಸುವಾಗ ಉದಾಹರಿಸಲು ಒಂದು ವ್ಯಾವಹಾರಿಕ ಸಂಗತಿಯು ಬೇಕಾಗುತ್ತದೆ ಇದು ದಾಯಾದಿಗಳ ಮಧ್ಯ ನಡೆದ ಯುದ್ಧದ ವರ್ಣನೆಯಲ್ಲ. ಆದರೆ ಅದು ನಮ್ಮಲ್ಲಿರುವ ಎರಡು ಸ್ವಭಾವಗಳ ಮಧ್ಯ ನಡೆದ ಹೋರಾಟವು — ಒಳ್ಳೆಯದು ಮತ್ತು ಕೆಟ್ಟದ್ದು, ಹಾಗೆಯೇ ನಾನು ದುರ್ಯೋಧನ ಮೊದಲಾದವರು ಮನುಷ್ಯನಲ್ಲಿರುವ ಅಸದ್ವೃತ್ತಿಗಳೆಂದು ಭಾವಿಸುತ್ತೇನೆ; ಮತ್ತು ಅರ್ಜುನ ಮೊದಲಾದವರು ಸದ್ವೃತ್ತಿಗಳೆಂದು ತಿಳಿಯುತ್ತೇನೆ. ಯುದ್ಧಭೂಮಿಯು ನಮ್ಮ ದೇಹವೇ. ನಿತ್ಯವಾದ ಯುದ್ಧವು ಇವೆರದು ಬಣಗಳ ನಡುವೆ ನಡದೇ ಇರುತ್ತದೆ ಕವಿದರ್ಶಿಯು ಅದನ್ನು ಸ್ಪಷ್ಟವಾಗಿ ವರ್ಣಿಸುತ್ತಾನೆ. ಕೃಷ್ಣನು ಅಂತರ್ವಾಸಿಯಾಗಿ ಶುದ್ಧವಾದ ಹೃದಯಕ್ಕೆ ಮೆಲುದನಿಯಲ್ಲಿ ಯಾವಾಗಲೂ ಮಾತನಾಡುತ್ತಾನೆ" ಎಂದು ಹೇಳಿದ್ದಾರೆ. *

---

* ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಮಧ್ವರು ಮಹಾಭಾರತಕ್ಕೆ ಮೂರು ಅರ್ಥಗಳನ್ನು ಹೇಳುತ್ತಾರೆ (೨-೧೪೫), ಮನ್ವಾದಿ, ಅಸ್ತೀಕಾದಿ ಮತ್ತು ಉಪರಿಚರಾದಿ, ಅರ್ಥಗಳನ್ನು ಉದಾಹರಿಸುವಾಗ ಯುಧಿಷ್ಠಿರ ಮೊದಲಾದವರು ಧರ್ಮಭಕ್ತಿ ಮೊದಲಾದ ಹತ್ತುಗುಣಗಳಿಗೆ ಅಭಿಮಾನಿಗಳು ಭಕ್ತಿ, ಜ್ಞಾನ, ವೈರಾಗ್ಯ ಪ್ರಜ್ಞಾ ಮೊದಲಾದ ಹತ್ತು ಗುಣಗಳಿಗೆ ಭೀಮನು ಪ್ರತೀಕನು ಶ್ರುತ್ಯಾದಿ ಅಭಿಮಾನಿಯು ಅರ್ಜುನನು, ಶೀಲ ವಿನಯಾಭಿಮಾನಿಗಳು ನಕುಲ-ಸಹದೇವರು ಸರ್ವವಿದ್ಯಾಭಿಮಾನಿಯು ದ್ರೌಪದಿಯು. ಇದಕ್ಕೆ ವಿಪರೀತವಾಗಿ ಅಜ್ಞಾನ ಸ್ವರೂಪನಾದ ಕಲಿಯೇ ದುರ್ಯೋಧನನು. ವಿಪರೀತ ಜ್ಞಾನವೇ ದುಶ್ಶಾಸನನು. ನಾಸ್ತಿಕ್ಯಕ್ಕೆ ಅಭಿಮಾನಿಯು ಶಕುನಿಯು. ಉಳಿದವರೆಲ್ಲ ಎಲ್ಲ ದೋಷಗಳಿಗೆ ಅಭಿಮಾನಿಗಳು." ಇನ್ನೊಂದು ವಿಧವಾಗಿ ನೋಡಿದರೆ "ಧಾರ್ತರಾಷ್ಟ್ರರು ಅಹಂಕಾರಕ್ಕೆ ಅಭಿಮಾನಿಗಳು ದ್ರೋಣ ಮೊದಲಾದವರೆಲ್ಲ ಇಂದ್ರಿಯಗಳಿಗೆ ಅಭಿಮಾನಿಗಳು ಉಳಿದ ಸೈನಿಕರು ಪಾಪಗಳ ಮೂರ್ತಿಗಳು. ಪಾಂಡವರ ಸೈನಿಕರು ಪುಣ್ಯದ ಪ್ರತಿನಿಧಿಗಳು. ಇವರಿಗೆಲ್ಲ ವಿಷ್ಣು ನಿಯಾಮಕನಾಗಿರುತ್ತಾನೆ" ಆದರೆ ಅಧ್ಯಾತ್ಮಪರವಾದ ಅರ್ಥವು ಐತಿಹಾಸಿಕ ಅರ್ಥವನ್ನು ಅಲ್ಲಗಳೆಯುವದಿಲ್ಲ.

W D. P. Hillರು ಬರೆಯುತ್ತಾರೆ. "Some lay greater stress upon its value as allegory. While such interpretations are often fanciful, it cannot be denied that the author broadly identified the Kauravas with Adharma or evil and the Pandavas with dharma or good". ಇದಕ್ಕೆ ಈ ಎರಡು ಶಬ್ದಗಳು **धर्मक्षेत्रे कुरुक्षेत्रे** ಉತ್ತೇಜನ ಕೊಡುತ್ತವೆಂದು ಅವರ ಅಭಿಪ್ರಾಯ.

**संजय उवाच–**

**दृष्ट्वा तु पांडवानीकं व्यूढं दुर्योधनस्तदा**
**आचार्यमुपसंगम्य राजा वचनमब्रवीत् ।। २ ।।**

ಸಂಜಯನು ಹೇಳಿದನು :

ಒಂದು ವ್ಯೂಹದ ಆಕಾರದಲ್ಲಿ ನಿಂತಿರುವ ಪಾಂಡವರ ಸೈನ್ಯವನ್ನು ನೋಡಿ ರಾಜನಾದ ದುರ್ಯೋಧನನು (ದ್ರೋಣ) ಆಚಾರ್ಯರ ಹತ್ತಿರ ಹೋಗಿ ಈ ಮಾತು ಹೇಳಿದನು

**ವಿಶೇಷ ವಿವರಣೆ :** ಧೃತರಾಷ್ಟ್ರನ ಪ್ರಶ್ನೆಗೆ ಸಂಜಯನು ಉತ್ತರ ಹೇಳಿದನೆಂದು ವೈಶಂಪಾಯನನು ಜನಮೇಜಯನಿಗೆ ಒಂಭತ್ತು ಶ್ಲೋಕಗಳಲ್ಲಿ ದುರ್ಯೋಧನನು ಮಾಡಿದ ಕೆಲಸವನ್ನು ವರ್ಣಿಸುತ್ತಾನೆ.

**ಆಚಾರ್ಯ :** ಧನುರ್ವಿದ್ಯೆಯಲ್ಲಿ ಪಾರಂಗತರಾದ ದ್ರೋಣಾಚಾರ್ಯರು **उपनीय तु यः शिष्यं वेदं अध्यापयेत् द्विजः । सकल्पं सरहस्यं च तमाचार्यं प्रचक्षते ।।** ದ್ರೋಣಾಚಾರ್ಯರು ಅರ್ಜುನನಿಗೂ ಕೌರವರಿಗೂ ಧನುರ್ವಿದ್ಯೆಯನ್ನು ಕಲಿಸಿದ್ದರು ಇಷ್ಟೇ ಅಲ್ಲ. ಅರ್ಜುನ ಅವರ ನೆಚ್ಚಿನ ಶಿಷ್ಯ ಅರ್ಜುನನನ್ನು ಲೋಕೈಕಬಿಲ್ಲುಗಾರನನ್ನಾಗಿ ಮಾಡಲು ಏಕಲವ್ಯನ ಬೆರಳನ್ನು ಸಹ ದಾನವಾಗಿ ಪಡೆದರು. ತಮ್ಮ ಸ್ವಂತ ಮಗನಾದ ಅಶ್ವತ್ಥಾಮನಗಿಂತಲೂ ಅರ್ಜುನನಿಗೆ ಧನುರ್ವಿದ್ಯೆಯ ಹೆಚ್ಚಿನ ರಹಸ್ಯವನ್ನು ತಿಳಿಸಿದ್ದರು ಆದುದರಿಂದ ಅವರಿಗೆ ಪಾಂಡವರ ಮೇಲೆ ಹೆಚ್ಚಿನ ಮಮತೆ. ಅವರ ಪಕ್ಷವು ನ್ಯಾಯವಾದುದೆಂಬ ಅಂಶವೂ ಅದಕ್ಕೆ ಕಾರಣವಾಗಿತ್ತು.

**ದೃಷ್ಟ್ವಾ ತು :** ದುರ್ಯೋಧನನು ಪಾಂಡವಸೈನ್ಯವು ನಿಂತ ರೀತಿಯನ್ನೂ ರಚನೆಯನ್ನೂ ಸೂಕ್ಷ್ಮದೃಷ್ಟಿಯಿಂದ ನೋಡಿದನು. ಅವನ ಉಕ್ಕಿನ ಎದೆಯು ಸಹ ಒಮ್ಮೆ ನಡುಗಿತು. ಭೀತಿಯಿಂದ ನಡುಗುತ್ತಲೇ ಅವನು ಆಚಾರ್ಯರ ಕಡೆಗೆ ಧಾವಿಸಿದನು

**ವ್ಯೂಢಂ :** ವ್ಯೂಹವೆಂದರೆ ಸೈನ್ಯ ರಚನೆ. ಈ ಹೊತ್ತಿನ ಸೈನ್ಯ ರಚನೆಗೆ ವಜ್ರವ್ಯೂಹವೆಂದು ಕರೆದರು. ಅಲ್ಪಸಂಖ್ಯಾಕ ಸೈನಿಕರು ಸಹ ವಿಶಿಷ್ಟವಾದ ಸೈನ್ಯ ರಚನೆಯಿಂದ ಮಹಾಸೈನ್ಯದ ದಾಳಿಯನ್ನು ವಿಫಲಗೊಳಿಸಬಲ್ಲರು. ದುರ್ಯೋಧನನು ಈ ಅಭೇದ್ಯ ಸೈನ್ಯವನ್ನು ನೋಡಿಯೇ ನಡುಗಿದನು

ದೃಷ್ಟದ್ಯುಮ್ನನು ಅಂದು ಪಾಂಡವರ ಸೈನ್ಯದ ಸೇನಾಪತಿಯು ಅವನು ದ್ರೋಣನ ಕಡುವೈರಿಯು. ದ್ರೋಣನನ್ನು ತಾನೇ ಕೊಲ್ಲಬೇಕೆಂದು ದೃಷ್ಟದ್ಯುಮ್ನನ ಪ್ರತಿಜ್ಞೆಯು. ಆದುದರಿಂದ ದುರ್ಯೋಧನನು ಮೊದಲು ದ್ರೋಣನ ಕಡೆಗೆ ಬಂದನು. ದ್ರೋಣನನ್ನು ರೊಚ್ಚಿಗೆಬ್ಬಿಸಿ ದೃಷ್ಟದ್ಯುಮ್ನನ ದ್ವೇಷಕ್ಕಾಗಿ ಪಾಂಡವರನ್ನು ಸದೆಬಡೆಯುವಂತೆ ಅವರನ್ನು ಪ್ರೇರೇಪಿಸುವದೇ ದುರ್ಯೋಧನನ ಉದ್ದೇಶವಾಗಿತ್ತು.

ದುರ್ಯೋಧನನು ಭೀಷ್ಮನಿಗೆ ಸೇನಾಪತ್ಯದ ಪಟ್ಟಗಟ್ಟಿ ಅದೇ ತಿರುಗಿ ಹೊರಟಿದ್ದನು. ಆದುದರಿಂದ ದ್ರೋಣಾಚಾರ್ಯರನ್ನೂ ಸಾಕಷ್ಟು ಬಡಿದೆಬ್ಬಿಸಿ ಯುದ್ಧಕ್ಕೆ ಅಣಿ ಮಾಡಬೇಕೆಂದು ಹವಣಿಸಿದನು. ದ್ರೋಣಾಚಾರ್ಯರಿಗೆ ಮುಂದೆ ಹೋಗದೆ ಭೀಷ್ಮರನ್ನು ಅವರ ಹಿಂದಿನಿಂದ ಮತ್ತು ಎರಡೂ ಮಗ್ಗಲುಗಳಿಂದ ರಕ್ಷಿಸಬೇಕೆಂದು ವಿನಂತಿಸಿದನು

**ರಾಜಾ :** ದುರ್ಯೋಧನನು ರಾಜನು. ಯಾಕೆಂದರೆ ತಂದೆಯಾದ ಧೃತರಾಷ್ಟ್ರನು ಕುರುಡನಾದುದರಿಂದ ಕಾಯದೆಯಿಂದ ಅರಸನೆನಿಸಲಾರನು ದುರ್ಯೋಧನನು ಈಗ ಹದಿಮೂರು ವರ್ಷಗಳ ಕಾಲ ತಾನೇ ರಾಜ್ಯವಾಳುತ್ತಿದ್ದಾನೆ. ಆದರೆ ದುರ್ಯೋಧನನ ಸೇವೆಯಲ್ಲಿದ್ದು ಯುದ್ಧಭೂಮಿಯ ಮೇಲೆ ನಿಂತ ಭೀಷ್ಮ-ದ್ರೋಣರಿಗೆ ಅವನು ರಾಜನು ಅಹುದೋ ಅಲ್ಲವೋ ಎಂಬ ಪ್ರಶ್ನೆಯೇ ಉದ್ಭವಿಸುವದಿಲ್ಲ ದುರ್ಯೋಧನನು **(दुःखेन युध्यते अनेन)** ಎಂದರೆ ಯಾವನಗೂಡ ಯುದ್ಧ ಮಾಡುವದು ಕಠಿಣ ಅವನು. ಇವನು ಪಾಂಡವರ ಪಕ್ಷಕ್ಕೆ ಹೇಳಿಕೊಳ್ಳುವಷ್ಟು ಸೈನ್ಯವೇ ಕೂಡುವದಿಲ್ಲೆಂದು ನಿರೀಕ್ಷಿಸಿದ್ದನು. ತನ್ನ ದರ್ಪಕ್ಕೆ ಬೆದರಿ ಎಲ್ಲರೂ ತನ್ನ ಪಕ್ಷಕ್ಕೇ ಸೇರುವರೆಂದು ಅವನು ಆಶಿಸಿದ್ದನು. ಆದರೂ ಪಾಂಡವರ ಪಕ್ಷಕ್ಕೆ ಏಳು ಅಕ್ಷೋಹಿಣಿ ಸೈನ್ಯ ಕೂಡಿದ್ದನ್ನು ನೋಡಿ ಗಾಬರಿಯಾದನು. ಅಪರಾಧೀ ಮನಸ್ಸು ಈಗಾಗಲೆ ಅವನಲ್ಲಿ ನೈತಿಕ ಅಧೀರತೆಯನ್ನುಂಟುಮಾಡಿತ್ತು. ಈ ಮಾನಸಿಕ ಅಪಜಯವೇ ಅವನ ವಾಸ್ತವವಾದ ಅಪಜಯಕ್ಕೆ ಕಾರಣವಾಗುತ್ತದೆ.

**पश्यैतां पांडुपुत्राणां आचार्य महतीं चमूम् ।**
**व्यूढां द्रुपदपुत्रेण तव शिष्येण धीमता ।। ३ ।।**

ಆಚಾರ್ಯರೇ ! ಬುದ್ಧಿವಂತನಾದ ನಿಮ್ಮ ಶಿಷ್ಯ. ದ್ರುಪದನ ಮಗನಾದ ದೃಷ್ಟದ್ಯುಮ್ನನಿಂದ ವ್ಯೂಹದಲ್ಲಿ ನಿಲ್ಲಿಸಲ್ಪಟ್ಟ ಪಾಂಡವರ ಮಹಾಸೇನೆಯನ್ನು ನೋಡಿರಿ.

**ವಿಶೇಷ ವಿವರಣೆ : तव शिष्येण——** ದುರ್ಯೋಧನನು ಆಚಾರ್ಯರಿಗೆ ಹಿಂದಿನ ವೈರವನ್ನು ನೆನಪಿಗೆ ತಂದುಕೊಟ್ಟು ಅವರನ್ನು ಹೆಚ್ಚು ರೊಚ್ಚಿಗೆಬ್ಬಿಸಿ

ಪಾಂಡವರ ವಿಷಯಕ್ಕಿದ್ದ ಅವನ ಅಭಿಮಾನ ಮತ್ತು ಪ್ರೀತಿಗಳನ್ನು ಕಡಿಮೆ ಮಾಡುತ್ತಾನೆ. ಹಿಂದಿನ ಕಥೆಯು ಹೀಗಿದೆ ದ್ರುಪದ ಮತ್ತು ದ್ರೋಣರು ಒಬ್ಬ ಗುರುಗಳ ಹತ್ತಿರ ಅಭ್ಯಾಸ ಮಾಡಿದ ಗುರು ಬಂಧುಗಳು. ಆದುದರಿಂದ ದ್ರುಪದನು ರಾಜನಾದ ಮೇಲೆ ದ್ರೋಣನು ಅವನ ಸ್ನೇಹಿತನೆಂದು ಹೇಳಿಕೊಂಡು ದ್ರುಪದನ ಹತ್ತಿರ ಹೋಗಿ ಅವಮಾನಿತನಾಗಿ 'ನಿನ್ನನ್ನು ಮಣ್ಣು ಮುಕ್ಕಿಸುವ ಶಿಷ್ಯನನ್ನು ಪಡೆಯುತ್ತೇನೆಂದು ಪ್ರತಿಜ್ಞೆ ಮಾಡಿ ಅರ್ಜುನನನ್ನು ಅಣಿಗೊಳಿಸುತ್ತಾನೆ. ಅರ್ಜುನನು ದ್ರುಪದನನ್ನು ಸೋಲಿಸಿ ಅವರ ಮಂಚದ ಕಾಲಿಗೆ ಕಟ್ಟುತ್ತಾನೆ. ಈ ಅವಮಾನದಿಂದ ರುಷ್ಟನಾದ ದ್ರುಪದನು ದ್ರೋಣನನ್ನು ಕೊಲ್ಲುವ ಮಗನನ್ನು ಪಡೆಯುತ್ತೇನೆಂದು ಪ್ರತಿಜ್ಞೆಮಾಡಿ ದೃಷ್ಟದ್ಯುಮ್ನನನ್ನು ಪಡೆಯುತ್ತಾನೆ. ಈ ದೃಷ್ಟದ್ಯುಮ್ನನೇ ಮುಂದೆ ದ್ರೋಣರ ಶಿರಸ್ಸನ್ನು ಕತ್ತರಿಸುತ್ತಾನೆ

ಮತ್ತೊಬ್ಬರು ಸೂಚಿಸುವಂತೆ ಸದ್ಯದ ಅನರ್ಥಕ್ಕೆ ದ್ರೋಣರೇ ಕಾರಣ. ಯಾಕೆಂದರೆ ಅವರು ಪಾಂಡವರಿಗೆ ಧನುರ್ವಿದ್ಯೆಯನ್ನು ಕಲಿಸಿದ್ದರಿಂದ ಈಗ ಅವರ ಗುರುಗಳಾದ ದ್ರೋಣರಿಗೆ ಎದುರು ಹೂಡಿದರು. ಜೀವ ಉಳಿಸಿದವನೆಂದು ಚೇಳು ಅವನನ್ನು ಕಚ್ಚುವದನ್ನು ಬಿಡುವದಿಲ್ಲ. ಈ ಶ್ಲೋಕದಲ್ಲಿ ದುರ್ಯೋಧನನ ಈ ಕಟೂಕ್ತಿಯಿದೆ.

**ದ್ರುಪದಪುತ್ರೇಣ** ಪಾಂಚಾಲದೇಶದ ಅರಸನಾದ ದ್ರುಪದನು ದ್ರೌಪದಿಯ ಜನಕನು ಆದುದರಿಂದ ಪಾಂಡವರಿಗೆ ಹೆಣ್ಣು ಕೊಟ್ಟ ಮಾವನು ದೃಷ್ಟದ್ಯುಮ್ನನು ದ್ರುಪದರಾಜನ ಮಗನು. ಈಗ ಅವನು ಪಾಂಡವರ ಸೇನಾನಾಯಕನು ಆದರೆ ಪಾಂಡವರ ನಿಜವಾದ ಸೇನಾನಾಯಕನು ಭೀಮನು (**बलं भीमाभिरक्षितं** ೧–೧೦) 'ದ್ರುಪದಪುತ್ರೇಣ' ಎಂದು ಹೇಳಿದುದಕ್ಕೆ ಕಾರಣವೆಂದರೆ ದ್ರೋಣರಿಗೆ ಹಿಂದಿನ ದ್ರುಪದನ ಕಥೆಯನ್ನು ನೆನಪಿಗೆ ತಂದುಕೊಟ್ಟು ಅವರ ಸಿಟ್ಟನ್ನು ಹೆಚ್ಚಿಸುವದಕ್ಕಾಗಿ ಹೀಗೆ ಆದರಲ್ಲಿ ಸೂಚ್ಯವಾದ ಅರ್ಥವನ್ನು ಕಾಣುತ್ತಾರೆ.

**अत्र शूरा महेष्वासा भीमार्जुनसमा युधि**
**युयुधानो विराटश्च द्रुपदश्च महारथः ।। ४ ।।**
**धृष्टकेतुश्चेकितानः काशिराजश्च वीर्यवान्**
**पुरजित् कुंतिभोजश्च शैब्यश्च नरपुंगवः ।। ५ ।।**
**युधामन्युश्च विक्रांत उत्तमौजाश्च वीर्यवान्**
**सौभद्रो द्रौपदेयाश्च सर्व एव महारथाः ।। ६ ।।**

ಇಲ್ಲಿ ಶೂರರೂ, ದೊಡ್ಡ ಬಿಲ್ಲಾಳುಗಳೂ, ಯುದ್ಧದಲ್ಲಿ ಭೀಮಾರ್ಜುನರಿಗೆ ಸಮರಾದವರೂ ಇದ್ದಾರೆ. ಯುಯುಧಾನನು (ಸಾತ್ಯಕಿ) ವಿರಾಟ ಮತ್ತು ಮಹಾರಥಿ

ದ್ರುಪದ, (೪) ದೃಷ್ಟಕೇತು, ಶೂರನಾದ ಚೇಕಿತಾನ, ಕಾಶಿರಾಜ, ಪುರಜಿತ್ತು, ಕುಂತಿ-ಭೋಜ, ಮತ್ತು ನರಶ್ರೇಷ್ಠನಾದ ಶೈಬ್ಯನು (೫) ಪರಾಕ್ರಮಿಯಾದ ಯುಧಾ-ಮನ್ಯು, ಶೂರನಾದ ಉತ್ತಮೌಜನು ಸುಭದ್ರೆಯ ಮಗನು (ಅಭಿಮನ್ಯು) ಮತ್ತು ದ್ರೌಪದಿಯ (೫ ಜನ) ಮಕ್ಕಳು – ಇವರೆಲ್ಲರೂ ಮಹಾರಥರು. (೬)

**ವಿಶೇಷ ವಿವರಣೆ :**

**ಮಹಾರಥಾ :** 'ಮಹಾರಥ' ಇದು ಒಂದು ಸೈನಿಕ ಬಿರುದು. ಒಬ್ಬನೇ ೧೦,೦೦೦ ಬಿಲ್ಲಾಳುಗಳೊಡನೆ ಹೋರಾಡುವ ಸಾಮರ್ಥ್ಯವಿದ್ದವನಿಗೆ ಮಹಾರಥ-ನೆಂದು ಕರೆಯುತ್ತಾರೆ. **एको दशसहस्राणां योधयेद्यः सधन्विनां । शस्त्र शास्त्र-प्रवीणश्च महारथ इति स्मृतः ।।** ಯುಯುಧಾನನು–ಸಾತ್ಯಕಿಯು (ರಹಸ್ಯ). ಎರಡೂ ಸೈನ್ಯದಲ್ಲಿರತಕ್ಕ ರಥಿಗಳು ಮಹಾರಥಿಗಳು ಅತಿರಥಿಗಳು ಯಾರೆಂಬುದರ ವರ್ಣನೆಯು ಉದ್ಯೋಗಪರ್ವದಲ್ಲಿ ದೊರೆಯುತ್ತದೆ. ಅಲ್ಲಿ ದೃಷ್ಟಕೇತುವು ಶಿಶುಪಾಲನ ಮಗನೆಂದು ಹೇಳಿದ್ದಾರೆ. ಪುರಜಿತ್ ಮತ್ತು ಕುಂತಿಭೋಜ ಇವು ಎರಡು ಹೆಸರುಗಳಲ್ಲ. ಪುರಜಿತ್ ಅರಸನು ಕುಂತಿ ಭೋಜನ ಔರಸಪುತ್ರನು. ಇವನೇ ಕುಂತಿಯನ್ನು ದತ್ತುತೆಗೆದುಕೊಂಡಿದ್ದನು. ಕುಂತಿಭೋಜ ಇದು ಕುಲದ ಹೆಸರು ಇವನು ಧರ್ಮ, ಭೀಮ ಮತ್ತು ಅರ್ಜುನನ ಮಾವನೆಂದು ಹೇಳುತ್ತಾರೆ ಯುಧಾಮನ್ಯು ಮತ್ತು ಉತ್ತಮೌಜರು ಪಾಂಚಾಲ್ಯರೆಂದು ವರ್ಣಿಸಿದ್ದಾರೆ ಚೇಕಿತಾನನು ಒಬ್ಬ ಯಾದವನು ಯುಧಾಮನ್ಯು ಮತ್ತು ಚೇಕಿತಾನರು ಅರ್ಜುನನ ರಥವನ್ನು ರಕ್ಷಿಸುತ್ತಿದ್ದರು ಶೈಬ್ಯನು ಶಿಬಿದೇಶದ ಅರಸನು; ವಿರಾಟನು ಮತ್ಸ್ಯದೇಶದ ಅರಸನು. ಅರ್ಜುನನಿಂದ ಸುಭದ್ರೆಯಲ್ಲಿ ಜನಿಸಿದ ಅಭಿಮನ್ಯುವೇ ಸೌಭದ್ರನು. ದ್ರೌಪದಿಗೆ ಪ್ರತಿಯೊಬ್ಬ ಪಾಂಡವನಿಂದ ಒಬ್ಬೊಬ್ಬನಂತೆ ಐವರು ಮಕ್ಕಳು. ಅವರೇ ದ್ರೌಪದೇಯರು. ಪ್ರತಿವಿಂಧ್ಯ, ಸುತಸೋಮ, ಶ್ರುತಕೀರ್ತಿ, ಶತಾನೀಕ, ಶುಕ್ರವರ್ಮರೇ ಆ ಐವರು ಮಕ್ಕಳು ಇವರನ್ನೆಲ್ಲ ಅಶ್ವತ್ಥಾಮನು ಕೊಂದನು.

ಇದು ಹಿಂದಿನ ಕಾಲದ ಯುದ್ಧದ ಚಿತ್ರ. ಅದೊಂದು ಭಯಾನಕ ಕ್ರೀಡೆ. ಯೋಧರೆಲ್ಲ ಬಹುನಿಯಮಗಳಿಂದ ಬದ್ಧರಾಗಿರುತ್ತಿದ್ದರು. ದುರ್ಯೋಧನನು ದ್ರೋಣರಿಗೆ ವೈರಿಸೈನ್ಯದ ಮುಖ್ಯನಾಯಕರ ಪರಿಚಯಮಾಡಿಕೊಡುತ್ತಾನೆ. ಅವರು ಯುದ್ಧದಲ್ಲಿ ಜಾಗರೂಕರಾಗಿರಬೇಕೆಂದು ಹೇಳಲಿಕ್ಕೆ ದುರ್ಯೋಧನನು ಸ್ವಲ್ಪ ಪಾಂಡವಸೈನ್ಯದ ಅತಿಶಯೋಕ್ತಿಯನ್ನು ಮಾಡುತ್ತಾನೆ. ವಿರಾಟ ಮೊದ-ಲಾದವರನ್ನು ಭೀಮಾರ್ಜುನಸಮರೆಂದು ವರ್ಣಿಸುತ್ತಾನೆ.

**अस्माकं तु विशिष्टा ये तान्निबोध द्विजोत्तम ।**
**नायका मम सैन्यस्य संज्ञार्थं तान्ब्रवीमि ते ।। ७ ।।**

ಬ್ರಾಹ್ಮಣ ಶ್ರೇಷ್ಠರೇ ! ಯಾರು ಯಾರು ನಮ್ಮ ಸೈನ್ಯದ ಮುಖ್ಯರೋ ಅವರನ್ನು ತಿಳಿದುಕೊಳ್ಳಿ. ನಿಮಗೆ ತಿಳಿಯಬೇಕೆಂದು ಅವರ ಹೆಸರುಗಳನ್ನು ಹೇಳುತ್ತೇನೆ

**ವಿಶೇಷ ಟಿಪ್ಪಣಿ** · ತು ಎಂಬುದು (ಆದರೆ) ಒಂದೇ ಅಕ್ಷರದ ಶಬ್ದವಾಗಿದ್ದು ಬಹು ಅರ್ಥಗರ್ಭಿತವಾಗಿದೆ. ಪಾಂಡವರನ್ನು ಬಿಟ್ಟು ನಮ್ಮ ಕಡೆಗೆ ಹೊರಳು ಎಂದು ದುರ್ಯೋಧನನು ಹೇಳುತ್ತಾನೆ. ದುರ್ಯೋಧನನು ಭಯಪಟ್ಟಿದ್ದಾನೆ. ಆದರೂ ಅದನ್ನು ಬಚ್ಚಿಟ್ಟಿದ್ದಾನೆನ್ನುವದು ಈ ತು ಶಬ್ದದಿಂದ ಅಭಿಪ್ರೇತವಾಗಿದೆ. C M. Padmanabhacharya ರು ಇದೇ ಅಭಿಪ್ರಾಯದಿಂದ He feels a tremour and Conceals it ಎಂದು ಬರೆಯುತ್ತಾರೆ ಆನಂದಗಿರಿಯುವರು ತಮ್ಮ ಟೀಕೆಯಲ್ಲಿ— **तु शद्बेन अंतः उत्पन्नमपि स्वकीयं भयं तिरोदधानो धृष्टतामात्मनो द्योतयति** ಎಂದು ಹೇಳುತ್ತಾರೆ. ಈ ಸಂಗತಿಯು ಮುಂದಿನ ಅರ್ಥಯೋಜನೆಯಲ್ಲಿ ಬಹಳ ಪ್ರಯೋಜನಕಾರಿಯಾಗಿದೆ.

**द्विजोत्तम :** ಬ್ರಾಹ್ಮಣನು ದ್ವಿಜನೆನಿಸಿಕೊಳ್ಳುತ್ತಾನೆ. ಮೊದಲನೆಯದು ತಂದೆ–ತಾಯಿಗಳಿಂದ ಜನ್ಮ. ಎರಡನೆಯದು (**माता सावित्री पितातु आचार्यः**) ಗಾಯತ್ರೀ ಮತ್ತು ಗುರುಗಳಿಂದ ಬ್ರಾಹ್ಮಣನಾಗಿ ಜನ್ಮವು. ಹೀಗೆ ಎರಡು ಜನ್ಮವುಳ್ಳವನು ಬ್ರಾಹ್ಮಣ ಶ್ರೇಷ್ಠನೇ ಎಂಬಸಂಬೋಧನವೂ ಸೂಚ್ಯಾರ್ಥವುಳ್ಳದ್ದಾಗಿದೆ ಇದು ದುರ್ಯೋಧನನ ಅಣಕಮಾತೆಂಬುದು ಸ್ಪಷ್ಟವಾಗಿದೆ. ಮಧುಸೂದನ ಸರಸ್ವತಿಯವರು ಇದರಲ್ಲಿ ಹೆಚ್ಚಿನ ಗೂಢಾರ್ಥವನ್ನು ಕಾಣುತ್ತಾರೆ. ದ್ವಿಜೋತ್ತಮನೆಂಬ ಅಣಕ ಮಾತಿನಲ್ಲಿ ' ನೀನು ಬ್ರಾಹ್ಮಣನಾದುದರಿಂದ ಯುದ್ಧದಲ್ಲಿ ಬೇಗನೆ ಸೋಲಬಹುದು. ಆದರೂ ಭೀಷ್ಮರಂಥ ಅನೇಕ ಶೂರ ಕ್ಷತ್ರಿಯರಿರುವದರಿಂದ ಅಂಜುವ ಕಾರಣವಿಲ್ಲ. ' ಇದಕ್ಕಾಗಿ ದುರ್ಯೋಧನನು ತನ್ನ ಸೈನ್ಯದಲ್ಲಿರುವ ಮುಖ್ಯ ಮುಖ್ಯ ವೀರರ ಹೆಸರನ್ನು ಹೇಳಿ ಪಾಂಡವರ ಪಕ್ಷಪಾತದಿಂದ ತಮ್ಮನ್ನು ತೆಗಳಿಕೊಳ್ಳುವ ಕಾರಣವಿಲ್ಲೆಂದು ಸೂಚಿಸುತ್ತಾನೆ.

**भवान् भीष्मश्च कर्णश्च कृपश्च समितिंजयः ।**
**अश्वत्थामा विकर्णश्च सौमदत्तिस्तथैव च ॥ ८ ॥**

ತಾವು, ಭೀಷ್ಮರು, ಕರ್ಣನು, ಸಮರದಲ್ಲಿ ಜಯಶೀಲನಾದ ಕೃಪನು, ಅಶ್ವತ್ಥಾಮನು ವಿಕರ್ಣನು ಮತ್ತು ಹಾಗೆಯೆ ಸೋಮದತ್ತನ ಮಗನಾದ ಭೂರಿಶ್ರವನು.

( ಸೋಮನಾಥಾನಂದ ಎನ್ನುವವರು ತಮ್ಮ ಗೀತಾಭಾವಧಾರೆ ಎಂಬ ಗ್ರಂಥದಲ್ಲಿ **सौमदत्तिस्तथैवच** ಇದರ ಬದಲು **सौमदत्तिर्जयद्रथ** ಎಂದು ಪಾಠಾಂತರವನ್ನು ಸ್ವೀಕರಿಸಿದ್ದಾರೆ )

**ವಿಶೇಷ ಟಿಪ್ಪಣಿ :** ಹಿಂದಿನ ಶ್ಲೋಕದಲ್ಲಿ ಹೇಳಿದಂತೆ **विशिष्ट** ರು ನಾಲ್ವರು, ಮೊದಲು ಸಾಲಿನಲ್ಲಿ ಉಕ್ತರಾದ ಸೇನಾಪತಿಗಳು ಎರಡನೇ ಸಾಲಿನಲ್ಲಿ ಉಕ್ತರಾದ ಮೂವರು ನಾಯಕರು ಮೊದಲಿನ ನಾಲ್ವರಕ್ಕಿಂತ ಸೈನಿಕ ದರ್ಜೆಯಲ್ಲಿ ಕಡಿಮೆಯವರು.

**समितिंजय** ಎಂಬ ವಿಶೇಷಣವು ಕೃಪನಿಗೆ ಕರ್ಣನ ತರುವಾಯ ಸೇನಾ-ಪತಿಯ ಪಟ್ಟಕ್ಕೆ ಅರ್ಹನೆಂಬುದನ್ನು ಸೂಚಿಸುತ್ತದೆಯೆಂದು ಮಧುಸೂದನ ಸರಸ್ವತಿಯವರು ನಿವೇದಿಸುತ್ತಾರೆ.

ಇನ್ನೊಂದು ಮಾತನ್ನು ಇಲ್ಲಿ ಲಕ್ಷಿಸಬೇಕು. ದುರ್ಯೋಧನನು ದ್ರೋಣನ ಹೆಸರನ್ನು ಮೊದಲಿಗೆ ತೆಗೆದುಕೊಂಡದ್ದು ಮುಖಸ್ತುತಿಯ ಸಲುವಾಗಿ. ಹಾಗೆಯೇ ತನ್ನ ತಮ್ಮನಾದ ವಿಕರ್ಣನ ಮೊದಲು ಅಶ್ವತ್ಥಾಮನನ್ನು ತೆಗೆದುಕೊಂಡದ್ದೂ ದ್ರೋಣನ ಸಂತೋಷಕ್ಕಾಗಿಯೇ

**भीष्म**ನು ಹೆಸರಿನಂತೆ ಯುದ್ಧದಲ್ಲಿ ಭಯಾನಕನೇ. ಅವನಿಗೆ ಪಾಂಡವರು ಕೌರವರು ಮೊಮ್ಮಕ್ಕಳು **कर्ण**ನು ಕುಂತಿಯಿಂದ ಅವಳ ಮದುವೆಯ ಮೊದಲು ಹುಟ್ಟಿದವನು ಧರ್ಮ ಮೊದಲಾದವರಿಗೆ ಮಲ ಅಣ್ಣನು ಅವನು ಕೌರವ ಪಕ್ಷ ಪಾತಿಯು. **कृप**ನು ದ್ರೋಣನ ತಂಗಿಯ ಗಂಡನು **अश्वत्थाम**ನು ದ್ರೋಣನ ಮಗನು. **विकर्ण**ನು ದುರ್ಯೋಧನನ ತಮ್ಮನು. **सोमदत्त**ನು ಬಾಲ್ಹೀಕ ದೇಶದ ಅರಸನು

ಈ ಎಲ್ಲ ಹೆಸರುಗಳಿಂದ ಈ ಯುದ್ಧವು ಬರೀ ದಾಯಾದಿಗಳ ಯುದ್ಧವಲ್ಲ. ಆದರೆ ಇಡೀ ಭರತದೇಶವನ್ನು ಆವರಿಸಿದ ಯುದ್ಧವೆಂದು ಗೊತ್ತಾಗುತ್ತದೆ. ನರ್ಮದಾನದಿಯ ದಂಡೆಯಿಂದ ಪಂಜಾಬದ ಅಂಚಿನ ವರೆಗೆ ಇಡೀ ಉತ್ತರ ಭಾರತ ದಿಂದ ಆಯಾ ದೇಶದ ರಾಜರು ತಮ್ಮ ಸೈನ್ಯದೊಡನೆ ಆ ಯುದ್ಧದಲ್ಲಿ ಭಾಗ ವಹಿಸಿದ್ದರು.

**अन्ये च बहवः शूरा मदर्थे त्यक्तजीविताः ।**
**नानाशस्त्रप्रहरणाः सर्वे युद्धविशारदाः ।। ९ ।।**

ಮತ್ತು ಬೇರೆ ಅನೇಕ ಶೂರರು ನನ್ನಗೋಸ್ಕರ ಪ್ರಾಣವನ್ನು ಬಿಡುವದಕ್ಕೆ ಸಿದ್ಧ-ರಾದವರು ಬೇರೆ ಬೇರೆ ತರಹದ ಶಸ್ತ್ರಾಸ್ತ್ರಗಳಿಂದ ಯುಕ್ತರಾದವರು ಮತ್ತು ಯುದ್ಧದಲ್ಲಿ ಪಂಡಿತರಾದವರು ಇದ್ದಾರೆ.

**ವಿಶೇಷ ಟಿಪ್ಪಣಿ :** ಈ ಶ್ಲೋಕವು ದುರ್ಯೋಧನನ ಶೀಲದ ಮೇಲೆ ಬೆಳಕನ್ನು ಚೆಲ್ಲುತ್ತದೆ. ದುರ್ಯೋಧನನು ಮೊಂಡತನ, ಛಲ, ದುರಭಿಮಾನ ಮುಂತಾದ ದುರ್ಗುಣಗಳಿಗಾಗಿ ಪ್ರಸಿದ್ಧನು. ಆದರೆ ಅವನು ಜನರ ಸ್ನೇಹವನ್ನು ಸಂಪಾದಿಸುವದರಲ್ಲಿ ಪಳಗಿದವನು ಆದುದರಿಂದ ಅವನ ಸೈನ್ಯವು ಹನ್ನೊಂದು ಅಕ್ಷೌಹಿಣಿಯಾಗಿತ್ತು. ಅವನ ಸ್ನೇಹಿತರು ಪ್ರಾಣತೆತ್ತಲು ಸಿದ್ಧರಾಗಿ ಬಂದಿದ್ದರು ಅವರೆಲ್ಲ ಬೇರೆ ಬೇರೆ ಶಸ್ತ್ರಗಳಲ್ಲಿ ನಿಷ್ಣಾತರಾಗಿದ್ದರು.

**त्यक्तजीविता:** 'ಪ್ರಾಣಗಳನ್ನು ಅರ್ಪಿಸಲಿಕ್ಕೆ ಸಿದ್ಧರಾದವರು' ಇದು ದುರ್ಯೋಧನನ ಯುದ್ಧ ಮಿತ್ರರ ಗುಣೋತ್ಕರ್ಷವನ್ನು ತೋರಿಸುತ್ತದೆ. ಆದರೆ ಅದರಲ್ಲಿ ಅಶುಭ ಚಿನ್ಹವು ಅಡಕವಾದುದನ್ನು ಸೂಕ್ಷ್ಮದರ್ಶಿಗಳು ಕಾಣಬಹುದು ಇದರ ಶಬ್ದಶಃ ಅರ್ಥವು 'ಪ್ರಾಣವನ್ನು ಈಗಾಗಲೆ ಬಿಟ್ಟವರು' ಎಂದು ಆಗುತ್ತದೆ ಇವರೆಲ್ಲ ಯುದ್ಧದಲ್ಲಿ ಪೂರ್ತಿಯಾಗಿ ಸಾಯತಕ್ಕವರೆಂಬುದನ್ನು ದುರ್ಯೋಧನನು ಇದರಿಂದ ಮೊದಲೇ ಸೂಚಿಸುತ್ತಾನೆ.

**अपर्याप्तं तदस्माकं बलं भीष्माभिरक्षितम् ।**
**पर्याप्तं त्विदमेतेषां बलं भीमाभिरक्षितम् ।। १० ।।**

ಭೀಷ್ಮಾಚಾರ್ಯರಿಂದ ರಕ್ಷಿತವಾದ ನಮ್ಮ ಸೈನ್ಯವು (ಪಾಂಡವರನ್ನು ಜಯಿಸುವದಕ್ಕೆ) ಅಸಮರ್ಥವಾದುದು. ಆದರೆ ಭೀಮಸೇನನಿಂದ ಸಂರಕ್ಷಿತವಾದ ಆ ಸೈನ್ಯವು (ನಮ್ಮ ಸೈನ್ಯವನ್ನು ಜಯಿಸುವದಕ್ಕೆ) ಸಮರ್ಥವಾದುದು.

**ವಿಶೇಷ ಟಿಪ್ಪಣಿ :** ಈ ಶ್ಲೋಕದಲ್ಲಿರುವ **अपर्याप्त** ಮತ್ತು **पर्याप्त** ಶಬ್ದಗಳ ಅರ್ಥದ ವಿಷಯದಲ್ಲಿ ತೀಕ್ಷ್ಣವಾದ ಭಿನ್ನಾಭಿಪ್ರಾಯವಿದೆ. **पर्याप्त** ಶಬ್ದದ ಕೋಶದಲ್ಲಿರುವ ಅರ್ಥವು 'ಸಮರ್ಥ, ಸಾಕಷ್ಟು, ಪೂರ್ಣ, ಸಂತೋಷಕ್ಕೆ ಯೋಗ್ಯ' ಎಂದು ಇದೆ. ಎಂದಮೇಲೆ ಇದಕ್ಕೆ ವಿರುದ್ಧವಾದ **अपर्याप्तं** ಎಂಬುದರ ಅರ್ಥವು 'ಅಸಮರ್ಥ, ಸಾಕಷ್ಟು ಅಲ್ಲದ, ಅಪೂರ್ಣ, ಸಂತೋಷಕ್ಕೆ ಅಯೋಗ್ಯ ಮುಂತಾಗಿ ಆಗುತ್ತದೆ ದುರ್ಯೋಧನನು ತನ್ನ ಸೈನ್ಯವು ಭೀಷ್ಮರಿಂದ ರಕ್ಷಿತವಾಗಿದ್ದರೂ ಅಸಮರ್ಥವಾಗಿದೆ. ಅದೇ ಭೀಮನಿಂದ ರಕ್ಷಿತವಾದ ಪಾಂಡವರ ಸೈನ್ಯವು ಪರ್ಯಾಪ್ತ ಎಂದರೆ ಸಮರ್ಥವಾಗಿದೆಯೆಂದು ಹೇಳುತ್ತಾನೆ ಇದರಿಂದ ದುರ್ಯೋಧನನು ಗಾಬರಿಯಾಗಿದ್ದಾನೆಂದು ಹೇಳಬೇಕಾಗುತ್ತದೆ

ಇದು ಅವನ ಸ್ವಭಾವಕ್ಕೆ ಹೊಂದಿಕೆಯಾಗುವದಿಲ್ಲ ಯಾಕೆಂದರೆ ಅವನು ಛಲವಾದಿಯು, ಅವನು ನಿಜವಾಗಿ ಗಾಬರಿಯಾಗಿದ್ದರೆ ಮೊದಲೇ 'ಯುದ್ಧಕ್ಕೆ

ಕೈಹಾಕುತ್ತಿರಲಿಲ್ಲ. ಅವನು ಯುದ್ಧದ ಪ್ರಾರಂಭದಲ್ಲಿ ಉತ್ಸಾಹದಿಂದಲೇ ಇದ್ದಾನೆ. ಅದಕ್ಕೆ ಕಾರಣವೆಂದರೆ ಭೀಷ್ಮ-ದ್ರೋಣರಂಥ ನುರಿತ ಸೈನಿಕರು; ಪಾಂಡವರಕಿಂತ ಬಹುದೊಡ್ಡ ಹನ್ನೊಂದು ಅಕ್ಷೌಹಿಣಿ ಸೈನ್ಯ, ಕರ್ಣ ಮೊದಲಾದ ನಿಷ್ಠಾವಂತ-ಸ್ನೇಹಿತರು, ಎಲ್ಲಕ್ಕಿಂತಲೂ ಹೆಚ್ಚಾಗಿ ಅವನ ಕೆಚ್ಚೆದೆ ಮತ್ತು ಛಲ, ಭಯ ಅವನ ಸಮೀಪಕ್ಕೆ ಹಾಯದು.

ಆದರೂ ಸಹ ದುರ್ಯೋಧನನಿಗೆ ಯಾವಾಗಲೂ ಭೀಮನೆಂದರೆ ನಡಕು ಪಾಂಡುವರ ಸಾಮರ್ಥ್ಯದ ನೆಲೆ ಭೀಮನೆಂಬುದು ಅವನ ಒಳಮನಸ್ಸಿಗೆ ಚೆನ್ನಾಗಿ ಖಾತ್ರಿಯಾಗಿತ್ತು. ಕೃಷ್ಣನ ಕೃಪೆ ಪಾಂಡವರ ಮೇಲೆಂಬುದೂ ಅವನ ಒಳ ಭಯಕ್ಕೆ ಕಾರಣವಾಗಿತ್ತು. ಈ ಮೊದಲೇ ನಾವು ದುರ್ಯೋಧನನು ಹೇಗೆ ತನ್ನ ಒಳಗಿನ ಭಯ ಮುಚ್ಚಿಕೊಳ್ಳಲಿಕ್ಕೆ ದ್ರೋಣರನ್ನು ಕುರಿತು ಅಬ್ಬರದ ಮಾತನಾಡುತ್ತಾ-ನೆಂಬುದನ್ನು ನೋಡಿದ್ದೇವೆ.

ಮೊದಲಿಗೆ ಪಾಂಡವರ ಸೈನ್ಯವನ್ನು **महतीं चमूं** ಎಂದು ಕರೆಯುತ್ತಾನೆ. ಮುಂದೆ ಎಲ್ಲರನ್ನೂ ಭೀಮಾರ್ಜುನರಿಗೆ ಸಮರೆಂದು ಆ ಸೈನ್ಯವನ್ನು ವರ್ಣಿಸು ತ್ತಾನೆ. ಇದು ಅಲ್ಲದೇ 'ಎಲ್ಲರೂ ಭೀಷ್ಮನನ್ನೇ ರಕ್ಷಿಸಿರಿ' ಎಂದು ನಿರ್ಣಯ ಕೊಡು ವದರಿಂದ ತನ್ನ ಸೈನ್ಯವು ಅಸಮರ್ಥವೆಂಬುದು ಅವನಿಗೆ ನಿಶ್ಚಿತವಾಗಿದೆ.

ಪರ್ಯಾಪ್ತ ಮೊದಲಾದ ಶಬ್ದಗಳ ಸಹಜವಾದ ಅರ್ಥ, ದುರ್ಯೋಧನನ ದೃಷ್ಟಿಯಲ್ಲಿ ಅವನ ಸೈನ್ಯವು ಅಸಮರ್ಥವೆಂಬ ಹೆದರಿಕೆಯ ಚಿನ್ಹಗಳು, ಆ ಕಾರಣ ಗಳಿಂದ ಅವನು ಇವುಗಳಿಂದ ತೆಗೆದ ನಿರ್ಣಯವೆಲ್ಲವೂ 'ಪರ್ಯಾಪ್ತ' ವೆಂದರೆ ಸಮರ್ಥ ಮತ್ತು ಅಪರ್ಯಾಪ್ತವೆಂದರ ಅಸಮರ್ಥವೆಂಬ ಅರ್ಥವನ್ನೇ ದೃಢೀ ಕರಿಸುತ್ತವೆ.

ಶ್ರೀಧರನು ಸಹ ಇದೇ ಅರ್ಥವನ್ನೇ ಹೇಳಿದ್ದಾನೆ. ಡಿ. ವ್ಹಿ. ಜಿ. ಯವರೂ ಇದೇ ಅರ್ಥವನ್ನೇ ಒಪ್ಪಿದ್ದಾರೆ. "ಗುರುವೆ ! ಎರಡು ಪಕ್ಷಗಳಲ್ಲಿಯೂ ಮಹಾ-ಮಹಾ ಶೂರರುಗಳಿದ್ದಾರೆ ಆದರೆ ಭೀಷ್ಮನ ನಾಯಕತ್ವದಲ್ಲಿರುವ ನಮ್ಮ **ಬಲ ಸಾಲದು.** ಭೀಮನ ನಾಯಕತ್ವದಲ್ಲಿ ಶತ್ರು ಬಲ ಬೇಕಾದಷ್ಟಿದೆ. ಆದ್ದರಿಂದ ನಮ್ಮವರಾದ ನೀವೆಲ್ಲ ಭೀಷ್ಮನ ಸಂರಕ್ಷಣೆಯನ್ನು ನೋಡಿಕೊಳ್ಳಬೇಕಾದದ್ದು" ಎಂದು ಅವರೇ ತಾತ್ಪರ್ಯ ತೆಗೆದಿದ್ದಾರೆ.

ಈ ಸ್ವಾಭಾವಿಕ ಅರ್ಥವನ್ನು ಬದಲಿಸಲಿಕ್ಕೆ ಭೀಮ–ಭೀಷ್ಮರನ್ನು ಅದಲು ಬದಲು ಮಾಡುವದನ್ನು ಕೆಲವರು ಸೂಚಿಸುತ್ತಾರೆ. ಆದರೆ ಈಗ ತೆಗೆದುಕೊಂಡ ಪಾಠವನ್ನು ಎಲ್ಲರೂ ಒಪ್ಪಿದ್ದಾರೆ. ಉಳಿದವರು **पर्याप्त** ಇದಕ್ಕೆ 'ಮಿತವಾದ'

ಎಂದೂ '**अपर्याप्त**' ಇದಕ್ಕೆ 'ಅಮಿತವಾದ' ಎಂದೂ ಅರ್ಥಮಾಡಿದ್ದಾರೆ ನೀಲಕಂಠರರು **पर्याप्त** ಎಂದರೆ 'ಸುತ್ತುವರೆಯಲ್ಪಡುವ' **अपर्याप्त** ಎಂದರೆ 'ಸುತ್ತುವರೆಯಲಿಕ್ಕೆ ಅಸಾಧ್ಯವಾದ' ಎಂದು ಅರ್ಥ ಹೇಳುತ್ತಾರೆ.

ಇದೆಲ್ಲ ಗೊಂದಲ ಅವಶ್ಯವಿಲ್ಲ. ಮೇಲೆ ನಾವು ಹೇಳಿದಂತೆ ಸ್ವಾಭಾವಿಕ ಅರ್ಥ, ಸಂದರ್ಭಕ್ಕೆ ಅನುಗುಣವಾಗಿದೆ ಆದರಿಂದ ತೆಗೆದ ನಿರ್ಣಯವೂ ಇದೇ ಅರ್ಥಕ್ಕೆ ಪುಷ್ಟಿಯನ್ನು ಕೊಡುತ್ತಿದೆ. ಮತ್ತು ದುರ್ಯೋಧನನ ಈ ಅಧೈರ್ಯ-ವನ್ನು ಹೋಗಲಾಡಿಸಲಿಕ್ಕೆ ಭೀಷ್ಮರು ಶಂಖವನ್ನು ಊದಿ ಉತ್ಸಾಹ ತುಂಬಿಸಿದ್ದರ ಔಚಿತ್ಯವನ್ನು ಎತ್ತಿ ತೋರಿಸುತ್ತಿದೆ.

ಶ್ರೀಧರರೂ ವೇದಾಂತಾಚಾರ್ಯರೂ ಈ ಅರ್ಥವನ್ನೇ ಎತ್ತಿಹಿಡಿದಿದ್ದಾರೆ ಆನಂದಗಿರಿಯವರಂತೂ ಭೀಷ್ಮರ ಸಿಂಹನಾದಕ್ಕೆ ಸಂಗತಿ ಕೊಡುವಾಗ **तमेवं आचार्यं प्रति संवादं कुर्वंतं भयाविष्ठं राजानं दृष्ट्वा** (ಭಯದಿಂದ ಕೂಡಿದ ರಾಜನನ್ನು ನೋಡಿ) ಎಂದು ಹೇಳಿದ್ದಾರೆ.

ದುರ್ಯೋಧನನ ಹೆದರಿಕೆಗೆ ಇನ್ನೊಂದು ಮಹತ್ವದ ಕಾರಣವದೆ. ಅದೆಂದರೆ ಭೀಮ; ಭೀಮನಿಗೆ ಅಧ್ಯಾತ್ಮದಲ್ಲಿ ಮಹತ್ವದ ಸ್ಥಾನವದೆ.ಯಾಕೆಂದರೆ ಅವನು ವಾಯು ಪುತ್ರ. ಅವನಿಗೆ ಹರಿ ಮತ್ತು ಲಕ್ಷ್ಮಿಯನ್ನು ಬಿಟ್ಟು ಅತ್ಯಂತ ಶ್ರೇಷ್ಠವಾದ ಸ್ಥಾನ ಕೆಲವರು ಭೀಮನಕಿಂತ ಭೀಷ್ಮರು ಶ್ರೇಷ್ಠರೆಂದೂ ಅದಕ್ಕೆ ಅವನಿಂದ ರಕ್ಷಿತವಾದ ಕೌರವ ಸೈನ್ಯವು ಭೀಮನಿಂದ ರಕ್ಷಿತವಾದ ಪಾಂಡವ ಸೈನ್ಯಕಿಂತ ಶ್ರೇಷ್ಠವೆಂದೂ ಹೇಳು ತ್ತಾರೆ, ಇದು ಸತ್ಯದಿಂದ ದೂರವಾಗಿದೆ. ದುರ್ಯೋಧನನು ಕಲಿಯಾದುದರಿಂದ ಭೀಮನಿಗೆ ಅಂಜಿ ನಡಗುತ್ತಾನೆ. ಕೊನೆಗೆ ಭೀಮನೇ ಅವನಿಗೆ ಮೃತ್ಯು. ಈ ಕಾರಣ ದಿಂದಲೂ ಭೀಮನಿಂದ ರಕ್ಷಿತವಾದ ಸೈನ್ಯವು ಸಮರ್ಥವಾದುದು. ಭೀಷ್ಮರಿಂದ ರಕ್ಷಿತವಾದುದು ಅಸಮರ್ಥವೆನ್ನುವದೇ ಸರಿಯಾದ ಅರ್ಥ. *

ವಾಕ್ಯ ರಚನೆಯಲ್ಲಿ ನಾವು ಇನ್ನೊಂದು ತೊಂದರೆಯನ್ನು ಎದುರಿಸುತ್ತೇವೆ ಅದೆಂದರೆ **तत्** ಮತ್ತು **इदं** ಎಂಬ ಜೋಡಿ ವಿಶೇಷಣಗಳು. **तत्** ( ಅದು ) ದೂರದರ್ಶಕ ವಿಶೇಷಣ. **इदं** ( ಇದು ) ಸಮೀಪದರ್ಶಕ ವಿಶೇಷಣ. ಈಗ

---

* ಗಾಂಧೀಜಿಯವರೂ ಪರ್ಯಾಪ್ತವೆಂದರೆ 'ಸಾಕಷ್ಟು' ಎಂದೂ 'ಅಪರ್ಯಾಪ್ತ' ವೆಂದರೆ 'ಸಾಕಷ್ಟು ಇಲ್ಲದ್ದು' ಎಂದೂ ಹೇಳುತ್ತಾರೆ. ಆದರ ಮೇಲೆ ಮಹದೇವದೇಸಾಯಿಯವರು ಬರೆಯುತ್ತ ದುರ್ಯೋಧನನು ತನ್ನ ಸೈನ್ಯವು ಬಲಿಷ್ಠವೆಂದು ಜಂಭಕೊಚ್ಚಿದ್ದು ಅಸಂಗತವಾಗಿದೆ ಅವನು ಭೀಷ್ಮರನ್ನು ಎಲ್ಲರೂ ರಕ್ಷಿಸಬೇಕಂದು ಹೇಳಿದ್ದರಿಂದ ತನ್ನ ಸೈನ್ಯ ಅಸಮರ್ಥವೆಂಬ ಅಭಿಪ್ರಾಯವೇ ಹೆಚ್ಚು ಸಂಗತವಾಗುವದೆಂದು ಬರೆದಿದ್ದಾರೆ

ದುರ್ಯೋಧನನು ಕೌರವ ಎಂದರೆ ಭೀಷ್ಮರಕ್ಷಿತ ಸೈನ್ಯದಲ್ಲಿ ನಿಂತುದರಿಂದ ಅವನಿಗೆ ಸಮೀಪದಲ್ಲಿದೆ. ಆದುದರಿಂದ ಆ ಸೈನ್ಯಕ್ಕೆ **तत्** ಎಂದು ಹೇಳುವದು ಶಕ್ಯವಿಲ್ಲ ಈ ತೊಂದರೆಯನ್ನು ನೀಗಲಿಕ್ಕೆ ವೇದಾಂತ ದೇಶಿಕರು **तत्** ಎಂದರೆ 'ಆದುದರಿಂದ' ಎಂದು ಅರ್ಥಮಾಡಿದ್ದಾರೆ. ಶ್ರೀ ರಾಘವೇಂದ್ರರು ವಿವೃತಿಯಲ್ಲಿ **तत्** ಎಂದರೆ 'ಪೂರ್ವೋಕ್ತವಾದ' ಎಂದು ಅರ್ಥಮಾಡಿದ್ದು ಎಲ್ಲಕ್ಕಿಂತ ಸಯುಕ್ತಿಕವಾಗಿದೆ.

ಇನ್ನು ಕೆಲವರು ಮೂರನೇ ಹಾದಿಯನ್ನು ಹುಡುಕಿದ್ದಾರೆ. ಪಾಂಡವರ ಸೈನ್ಯ 'ಮಿತ'ವಾದರೂ ಅದರಲ್ಲಿ 'ಶಿಸ್ತು' ಇದೆ. **पर्याप्त** ಎಂದರೆ 'ಶಿಸ್ತುಳ್ಳ' ಎಂದರ್ಥ. **अपर्याप्त** ವೆಂದರೆ 'ಅಮಿತವಾದರೂ' 'ಅಶಿಸ್ತುವುಳ್ಳದ್ದು' ಎಂದು ಹೇಳಿ ಆದರೂ ದುರ್ಯೋಧನನು ಜಂಭಕೊಚ್ಚುತ್ತಾನೆಂದು ವಾದಿಸುತ್ತಾನೆ *

**अयनेषु च सर्वेषु यथा भागमवस्थिताः**
**भीष्ममेवाऽभिरक्षंतु भवंतः सर्व एव हि ॥ ११ ॥**

ಪಾಂಡವರ ಸೇನೆಯು ಬಲಿಷ್ಠವಾದ ಕಾರಣ ಸೇನೆಯ ವ್ಯೂಹ ದ್ವಾರಗಳಲ್ಲಿ ನೀವೆಲ್ಲ ನಿಮ್ಮ ನಿಮ್ಮ ಭಾಗಗಳಲ್ಲಿ ಇದ್ದುಕೊಂಡು ಭೀಷ್ಮರನ್ನೇ ಎಲ್ಲ ಕಡೆಯಿಂದ ರಕ್ಷಿಸಬೇಕು.

**ವಿಶೇಷ ಟಿಪ್ಪಣಿಗಳು :**

**अयनेषु** ವ್ಯೂಹಪ್ರವೇಶ ಮಾರ್ಗಗಳಲ್ಲಿ, ಇದೊಂದು ಸೈನ್ಯದಲ್ಲಿಯು ಪಾರಿಭಾಷಿಕ ಶಬ್ದವು, ವ್ಯೂಹ ರಚನೆಯ ಪ್ರವೇಶದ್ವಾರಕ್ಕೆ **अयन** ವೆನ್ನುತ್ತಾರೆ. **(व्यूह प्रवेशमार्गेषु)** [1]

---

* ರಾಜಾಜಿಯವರು "ನಮ್ಮ ಸೈನ್ಯವು ಚೆನ್ನಾಗಿ ಪೋಷಿತವಾಗಿ ಅಪಾರವಾಗಿರುವದು. ನಿಜವೇ, ಆದರೂ ಭೀಮನ ನಾಯಕತ್ವದಲ್ಲಿ ಆ ಸೈನ್ಯವು (ಪಾಂಡವರ) ಬೇಕಾದಷ್ಟು ಬಲವನ್ನು ಪಡೆದೇ ಇದೆ "

Hill in his Bhagavad Geeta says - **अपर्याप्त** – For weak **पर्याप्त** strong "This translation is the more natural; and is supported by the special command to guard Bhishma; and thus to encourage Duryodhana '' ಸಾತವಳೇಕರರೂ ಹೀಗೆ **अपर्याप्तं** ಎಂದರೆ ಅಸಮರ್ಥ **पर्याप्तं** ಎಂದರೆ ಸಮರ್ಥವೆಂದೇ ಅರ್ಥ ಮಾಡಿದ್ದಾರೆ.

[1] ಮಧುಸೂದನ ಸರಸ್ವತಿಯವರು **अयनेषु तु सर्वेषु** ಎಂಬ ಪಾಠಾಂತರವನ್ನು ಇಟ್ಟುಕೊಂಡಿದ್ದಾರೆ. ಮೋದಿಯವರು ತಮ್ಮ ಭಗವದ್ಗೀತೆಯಲ್ಲಿ (Notes) ಈ ಶ್ಲೋಕದ ಮೇಲೆ ಹೀಗೆ ಬರೆಯುತ್ತಾರೆ·— " ಭೀಷ್ಮರು ಸಂರಕ್ಷಿಸುವ ಸೈನ್ಯ ಅಪರ್ಯಾಪ್ತ ಎಂದರೆ ಸಾಕಷ್ಟಿಲ್ಲ; ಭೀಮನಿಂದ ರಕ್ಷಿತವಾದ ಸೈನ್ಯವು ಸಾಕಷ್ಟಿದೆ. " ಈ ಅರ್ಥಕ್ಕೆ ಪೋಷಕವಾಗಿ तु ಎಂಬ ಪಾಠಾಂತರವು ಸರಿಯಾಗಿದೆ.

ಟಿಳಕರು ರಹಸ್ಯದಲ್ಲಿ ಹೀಗೆ ಹೇಳುತ್ತಾರೆ : 'ಶಿಖಂಡಿಯ ಮೇಲೆ ಭೀಷ್ಮರು ಶಸ್ತ್ರವನ್ನು ಎತ್ತುವದಿಲ್ಲವೆಂದು ನಿರ್ಧಾರ ಮಾಡಿದ್ದರಿಂದ ಶಿಖಂಡಿಯಿಂದ ಭೀಷ್ಮರಿಗೆ ಘಾತವಾಗುವ ಸಂಭವವದೆ. ಆದುದರಿಂದ ಎಲ್ಲರೂ ಎಚ್ಚರಿಕೆ ವಹಿಸಬೇಕು' ಎಂದು ದುರ್ಯೋಧನನ ಅಭಿಪ್ರಾಯ. (**अरक्ष्यमाणंहिवृकः हन्यात् सिंहंमहाबलम्** ಮಹಾ ಬಲಶಾಲಿಯಾದ ಸಿಂಹವನ್ನು ಒಂದು ತೋಳವು ಸಹ ಕೊಲ್ಲಬಹುದು).

C. M. ಪದ್ಮನಾಭಾಚಾರ್ಯರು— 'ಇದು ರಾಜಾಜ್ಞೆಯು. ಎಲ್ಲರಿಗೂ ಅನ್ವಯಿಸುತ್ತಿದೆ. ಸೈನ್ಯದಲ್ಲಿಯ ಎಲ್ಲ ದುರ್ಬಲ ಸ್ಥಾನಗಳನ್ನು ಜಾಗರೂಕತೆ ಯಿಂದ ರಕ್ಷಿಸಿ ಭೀಷ್ಮರನ್ನು ಸಂರಕ್ಷಿಸಬೇಕು' ಎಂದು ದುರ್ಯೋಧನನು ಘೋಷಿಸಿ ದನು. ಆಗಿನ ಯುದ್ಧದಲ್ಲಿ ವ್ಯಕ್ತಿಯ ಸಾಹಸವೀರ್ಯಗಳಿಗೆ ಬಹಳ ಮಹತ್ವ ವಿತ್ತು. ಆದುದರಿಂದ ಯಾರೂ ತಮ್ಮ ಸ್ಥಾನದಿಂದ ಹಿಂಜರಿಯಬಾರದೆಂದು ಅದರ ಭಾವ.'

ಮೇಲಾಗಿ ಭೀಷ್ಮರು ಪ್ರತಿನಿತ್ಯ ಒಂದು ಸಾವಿರ ರಥಿಗಳನ್ನೂ ೧೦,೦೦೦ ಪದಾತಿಗಳನ್ನೂ ಕೊಲ್ಲುವದಾಗಿ ಪ್ರತಿಜ್ಞೆ ಮಾಡಿದ್ದರು. ಹೀಗೆ ದುರ್ಯೋಧನನಿಗೆ ಭೀಷ್ಮರ ಜೀವನವು ಬಹಳ ಬೆಲೆಯುಳ್ಳದ್ದೆಂದು ಗೊತ್ತಾಗಿತ್ತು. ಸೈನ್ಯದಲ್ಲಿ ಏಕ ಮುಖ ಪ್ರಯತ್ನಕ್ಕೆ ದೊಡ್ಡ ಬೆಲೆ ಆದುದರಿಂದ ಎಲ್ಲರೂ ಒಕ್ಕಟ್ಟಿನಿಂದ ಕಾರ್ಯ ಮಾಡಬೇಕೆಂದು ದುರ್ಯೋಧನನ ಅಭಿಪ್ರಾಯ.

**सर्व एव** ಹನ್ನೆರಡು ಜನರನ್ನು (ದುಶ್ಶಾಸನ, ದುರ್ವಿಷಹ, ದುರ್ಮುಖ, ದುಸ್ಸಹ, ವಿವಿಂಶಿತಿ, ಚಿತ್ರಸೇನ, ವಿಕರ್ಣ, ಸತ್ಯವ್ರತ, ಪುರುಮಿತ್ರ, ಜಯ, ಭೂರಿಶ್ರವಸ್ ಮತ್ತು ಸಾಲ) ೭೦,೦೦೦ ರಥಗಳೊಡನೆ ಭೀಷ್ಮನನ್ನು ಸಂರಕ್ಷಿಸಲಿಕ್ಕೆ ನಿಯಮಿಸಿದ್ದರು. ಈಗಿನ ಆಜ್ಞೆಯು ಈ ಹಿಂದಿನ ಆಜ್ಞೆಯನ್ನು ರದ್ದುಗೊಳಿಸುವದಿಲ್ಲ. 'ಈ ಸಂರಕ್ಷಕ'ರಲ್ಲದೇ ಎಲ್ಲರೂ ಭೀಷ್ಮರನ್ನು ರಕ್ಷಿಸಬೇಕೆಂದು ದುರ್ಯೋಧನನ ತಾತ್ಪರ್ಯ.

**यथा भागमवस्थिताः —** ಭೀಷ್ಮರು ಸೈನ್ಯದ ವ್ಯವಸ್ಥೆ ಮಾಡುವಾಗ ಯಾರ್ಯಾರು ಎಲ್ಲೆಲ್ಲಿ ನಿಲ್ಲಲು ಆಜ್ಞೆ ಮಾಡಿದ್ದಾರೋ ಅದರಂತೆ ತಮ್ಮ ತಮ್ಮ ಸ್ಥಳದಲ್ಲಿ ನಿಂತೇ ಪಾಲಿಸಬೇಕೆಂದು ತಾತ್ಪರ್ಯ. ಒಟ್ಟಾರೆ ಭೀಷ್ಮರ ಆಜ್ಞೆಯನ್ನು ಪಾಲಿಸಿ ಭೀಷ್ಮರನ್ನು ರಕ್ಷಿಸಬೇಕೆಂಬುದೇ ಅರಸನ ಮಾತಿನ ತಾತ್ಪರ್ಯ. ಎರಡನೆ ಯವರೊಡನೆ ಭೀಷ್ಮರು ಯುದ್ಧಮಾಡುವಾಗ ಹಿಂದಿನಿಂದ ವೈರಿಗಳು ಬಂದು ಅವರನ್ನು ಕೊಲ್ಲದ ಹಾಗೆ ಎಲ್ಲರೂ ರಕ್ಷಿಸಬೇಕೆಂದು ದ್ರೋಣಾಚಾರ್ಯರಿಗೆ ಹೇಳಿ ಅವನು ವಿಷಾದಿಸಿದನು

**तस्य संजनयन् हर्षं कुरुवृद्धः पितामहः**
**सिंहनादं विनद्योच्चैः शंखंदध्मौ प्रतापवान् ॥ १२ ॥**

ಕುರುಕುಲಕ್ಕೆ ಪಿತಾಮಹನೂ ಪರಾಕ್ರಮಿಯೂ ಆದ ಭೀಷ್ಮನು ದುರ್ಯೋಧನನಿಗೆ ಹರ್ಷವನ್ನು ಉಂಟುಮಾಡಲು ಸಿಂಹಗರ್ಜನೆಯನ್ನು ಮಾಡಿ ಶಂಖವನ್ನು ಊದಿದನು.

**ವಿಶೇಷ ಟಿಪ್ಪಣಿಗಳು :**

**सिंहनादं विनद्य** – ಸಿಂಹದ ಶಬ್ದ (**नाद**) ವನ್ನು ಶಬ್ದಮಾಡಿ(**विनद्य**) ಇಂಥ ಪ್ರಯೋಗಗಳು ಸಂಸ್ಕೃತದಲ್ಲಿ ಬಹಳ. **ओदनपाकं पचति। नादं** ಇದು **णमुल्** ರೂಪವೂ ಅಹುದು.

**संजनयन्** ಇದು ಶತೃಂತ (ವರ್ತಮಾನ ಧಾತು ಸಾಧಿತ). **लक्षणहेत्वोः क्रियायाः** ಹೇತ್ವರ್ಥದಲ್ಲಿ ಶತೃಂತವು. (ಹರ್ಷವನ್ನು ಉಂಟುಮಾಡಲು).

ದುರ್ಯೋಧನನು ಸ್ಪಷ್ಟವಾಗಿ ವಿಷಣ್ಣನಾಗಿದ್ದನು. ಈ ಮಾತನ್ನು ಎಲ್ಲ ಟಿಪ್ಪಣಿಕಾರರೂ ಒಪ್ಪಿದ್ದಾರೆ. ಪಾಂಡವ ಸೈನ್ಯದೊಡನೆ ತನ್ನ ಸೈನ್ಯವನ್ನು ತುಲನೆ ಮಾಡಿ ಹತಾಶನಾಗಿದ್ದನು. ಭೀಷ್ಮನು ಸೇನಾಧಿಪತ್ಯವನ್ನು ವಹಿಸಿದ್ದರಿಂದ ಚಿಕ್ಕವನಾದ ದುರ್ಯೋಧನನು ಹೀಗೆ ವಿಷಣ್ಣನಾದುದನ್ನು ಸಹಿಸದೆ ಸಿಂಹದಂತೆ ಗರ್ಜಿಸಿದನು. ಮತ್ತು ಖಿನ್ನವಾದ ಅವನ ಮನಸ್ಸು ಪ್ರಫುಲ್ಲಿತವಾಗಬೇಕೆಂದು ಗಟ್ಟಿಯಾಗಿ ಶಂಖವನ್ನು ಊದಿದನು.

ಭೀಷ್ಮ ಮತ್ತು ದ್ರೋಣರಿಗೆ ತಾವು ಪಾಂಡವ ಪಕ್ಷಪಾತಿಗಳೆಂಬುದನ್ನು ದುರ್ಯೋಧನ ಬಲ್ಲನೆಂಬುದು ತಿಳಿದಿತ್ತು. ಯಾಕೆಂದರೆ

**अहन्यहनि पार्थानां वृद्धः कुरुपितामहः**
**भरद्वाजात्मजश्चैव प्रातरुत्थाय संयतौ**
**जयोस्तु पांडुपुत्राणां ईत्यूचतुः अरिंदमौ**
**युयुधाते तवार्थाय यथा स समयः कृतः ॥ (भीम.प.१२६)**

ಪ್ರತಿ ದಿವಸ ಭೀಷ್ಮನೂ ದ್ರೋಣನೂ ಪಾಂಡವರಿಗೆ ಜಯವಾಗಲೆಂದು ತಪ್ಪದೆ ಸ್ನಾನವಾದಕೂಡಲೇ ಪ್ರಾರ್ಥಿಸುವರು. ಆದರೆ ನಿನ್ನ ಪಕ್ಷದಿಂದ ಅವರು **ಸಮಯಮಾಡಿಕೊಂಡಂತೆ** ನಿನ್ನ ಸಲುವಾಗಿ ಯುದ್ಧಮಾಡುವರು. **कुरुवृद्धः**

**पितामहः** ಭೀಷ್ಮನು ನಿಜವಾಗಿ ವೃದ್ಧನು. ಆದುದರಿಂದಲೇ ಕರ್ಣನು ಅವನಿಗೆ ಸೇನಾಪತ್ಯ ಕೊಡುವದನ್ನು ವಿರೋಧಿಸಿದನು. ಆಗ ಕರ್ಣನು ಹೇಳಿದಮಾತು— **श्रोतव्यं खलु वृद्धानां इति शास्त्रनिदर्शनम् । नत्वेवं ह्यातिवृद्धानां पुनर्बाला हि ते मताः ॥** ಉದ್ಯೋಗ ೨೬. "ಮುದುಕರ ಮಾತನ್ನು ಕೇಳಬೇಕೆಂದು ಶಾಸ್ತ್ರವು ಹೇಳುತ್ತದೆ. ಆದರೆ ಅತಿ ಮುದುಕರ ಮಾತನ್ನಲ್ಲ. ಯಾಕೆಂದರೆ ಅವರು ಎರಡನೆ ಬಾರಿಗೆ ಮಕ್ಕಳಂತೆ ಇರುತ್ತಾರೆ." ಆದರೆ ಭೀಷ್ಮನು ತಾನು ಅತಿ ಮುದುಕನಲ್ಲವೆಂದು ತೋರಿಸಲಿಕ್ಕೆ ಸಿಂಹದಂತೆ ಗರ್ಜಿಸಿ ಶಂಖವನ್ನು ಗಟ್ಟಿಯಾಗಿ ಊದಿದನು.

**तस्य** ಎಂದರೆ ೧) ದುರ್ಯೋಧನನಿಗೆ; ಅಥವಾ ಸ್ವಲ್ಪೇ ದೂರದಲ್ಲಿರುವ ೨) 'ತನ್ನ ಸೈನ್ಯಕ್ಕೆ' ಅಥವಾ ೩) ವೈರಿಗಳ ಸೈನ್ಯಕ್ಕೆ ಉತ್ಸಾಹ ತುಂಬಲು ಭೀಷ್ಮನು ಶಂಖ ಊದಿದನು. ಅಥವಾ ಎಲ್ಲರಕ್ಕಿಂತ ಹೆಚ್ಚಾಗಿ ಭೀಮನು ಯುದ್ಧಕ್ಕಾಗಿ ಅತ್ಯಂತ ಆತುರನಾಗಿದ್ದನು. ೪) ಭೀಮನನ್ನು ಉತ್ಸಾಹಿಸಲಿಕ್ಕೆ ಎಂದೂ ಆಗ ಬಹುದು.

ಭೀಷ್ಮನಿಗೆ ಭೀಮನು ವಾಯುವೆಂಬುದು ಗೊತ್ತು. ಮೋಕ್ಷಧರ್ಮದಲ್ಲಿ ಭೀಷ್ಮನೇ ಹೇಳಿದ್ದಾನೆ— **वायुर्भीमः भीमनादो महौजाः** ಎಂದು. ಆದುದರಿಂದ ಈಗ ಭೀಷ್ಮನು ಶಂಖನಾದದಿಂದ ಭೀಮನನ್ನು ಉತ್ಸಾಹಿಸಿ ಯುದ್ಧದಲ್ಲಿ ವಾಯು ತನಗೆ ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತಾನೆ ೫) ಕೊನೆಗೆ **तस्य** ಇದು ಭಗವಾನ್ ಕೃಷ್ಣನಿಗೂ ಸಂಬಂಧಿಸಬಹುದು. ಶ್ರೀಕೃಷ್ಣನು ಅನುಗ್ರಹಿಸಬೇಕೆಂದೇ ಭೀಷ್ಮನು ಯುದ್ಧದಲ್ಲಿ ಭಾಗವಹಿಸಿದನು. **तस्य (तद्)** ಇದೊಂದು ಭಗವಂತನ ಹೆಸರೇ ಆಗಿದೆ. **ओं तत् सत् इति निर्देशो ब्रह्मणः त्रिविधः स्मृतः** (೧೭—೨೩ ಗೀತಾ). ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುವ ಕರ್ಮಯೋಗವು ಭೀಷ್ಮರಿಗೆ ಗೊತ್ತಿತ್ತು. ಆದುದರಿಂದ ಅವನು ಯುದ್ಧವನ್ನು ಕೈಕೊಂಡದ್ದು ಜಯಕ್ಕಾಗಿ ರಾಜ್ಯಕ್ಕಾಗಿ ಅಲ್ಲ, ಮತ್ತೆ ಯಾವ ಫಲಕ್ಕಾಗಿಯೂ ಅಲ್ಲ. ಕೇವಲ ಪರಮಾತ್ಮನ ಪ್ರೀತಿಗಾಗಿ ಮಾತ್ರ. ಈ ಅರ್ಥವನ್ನು ಕೃಷ್ಣನಿಗೆ ತಿಳಿಸುವದಕ್ಕಾಗಿಯೇ ಭೀಷ್ಮನು ಶಂಖವನ್ನು ಊದಿದನು

ಈ ಸಂದರ್ಭದಲ್ಲಿ ಕೆಲವು ಟೀಕಾಕಾರರು ತಮ್ಮ ಕಲ್ಪನೆಗೆ ಅವಕಾಶಕೊಟ್ಟು ದುರ್ಯೋಧನನ ಮಾತುಗಳಿಗೆ ಇಲ್ಲದ ಬಣ್ಣ ಬಳಿಯಲಿಕ್ಕೆ ಯತ್ನಿಸಿದ್ದಾರೆ. ದುರ್ಯೋಧನನ ಮಾತುಗಳು ಉನ್ಮತ್ತತನದ ಅತಿರೇಕವಾದುದರಿಂದ ಅವನ ಸೈನ್ಯವೆಲ್ಲ ನಿರುತ್ಸಾಹಗೊಂಡಿತು ಆದುದರಿಂದ ಭೀಷ್ಮಾಚಾರ್ಯರು ಅವರೆಲ್ಲರನ್ನೂ ಪ್ರೋತ್ಸಾಹಿಸುವಂತೆ ಸಿಂಹನಾದ ಮಾಡಿದರು. ಆದರೆ ದುರ್ಯೋಧನನ ವಿಷಯದಲ್ಲಿ ಈ ಅಭಿಪ್ರಾಯಕ್ಕೆ ಹಿಂದಿನ ಶ್ಲೋಕಗಳು ಬಲವನ್ನು ನೀಡುವದಿಲ್ಲ

ಒಟ್ಟಾರೆ ನಿರುತ್ಸಾಹಿಯಾದ ದುರ್ಯೋಧನನಿಗೆ ಉತ್ಸಾಹ ತುಂಬಲು ಈ ಸಿಂಹಗರ್ಜನೆ. ಆದರೂ ಜಯವು ಪಾಂಡವರಿಗೆಂಬುದು ಭೀಷ್ಮರಿಗೆ ತಿಳಿದಿತ್ತು. ಆದರೂ ಸೈನಿಕನಂತೆ ತಮ್ಮ ಕರ್ತವ್ಯವನ್ನು ನಿರ್ವಹಿಸುವ ಭರವಸೆ ನೀಡಿದರು.

**ततः शंखाश्च भेर्यश्च पणवानकगोमुखाः ।**
**सहसैवाऽभ्यहन्यन्त स शब्दस्तुमुलोऽभवत् ॥ १३ ॥**

ಆ ಮೇಲೆ ಶಂಖಗಳು, ನಗಾರಿಗಳು, ಡೋಲು, ಮೃದಂಗ, ಗೋಮುಖಾದಿ ವಾದ್ಯಗಳು ಒಮ್ಮೆಲೇ ಮೊಳಗಿದವು. ಈ ರಣಶಬ್ದವು ಎಲ್ಲೆಡೆಗೆ ತುಂಬಿತು.

**ವಿಶೇಷ ಟಿಪ್ಪಣಿಗಳು :**

ಭೀಷ್ಮಾಚಾರ್ಯರು ತಾವು ಸಿದ್ಧವಿದ್ದುದನ್ನು ಶಂಖವನ್ನು ಊದಿ ತಿಳಿಸಿದ ಕೂಡಲೆ ಅವರ ಕಡೆಯ ಪ್ರಮುಖ ವೀರರೆಲ್ಲ ತಮ್ಮ ಸಿದ್ಧತೆಯನ್ನೂ ರಣೋತ್ಸಾಹವನ್ನೂ ತಮ್ಮ ತಮ್ಮ ಶಂಖಗಳನ್ನು ಊದಿ ಪ್ರದರ್ಶಿಸಿದರು. ಉಳಿದ ರಣವಾದ್ಯಗಳೂ ಮೊಳಗಿ ರಣೋತ್ಸಾಹವನ್ನು ಹೆಚ್ಚಿಸಿದವು.

**ततः श्वेतैर्हयैर्युक्ते महतिस्यंदने स्थितौ ।**
**माधवः पांडवश्चैव दिव्यौ शंखौ प्रदध्मतुः ॥ १४ ॥**

ಆ ಮೇಲೆ ಶ್ರೀಕೃಷ್ಣನು ಮತ್ತು ಅರ್ಜುನನು ಇವರಿಬ್ಬರೂ ಬೆಳ್ಳಗಿರುವ ಕುದುರೆಗಳನ್ನು ಹೂಡಿದ ಉತ್ತಮವಾದ ರಥದಲ್ಲಿ ಕುಳಿತುಕೊಂಡೇ ತಮ್ಮ ಶ್ರೇಷ್ಠವಾದ ಶಂಖಗಳನ್ನು ಊದಿದರು.

**ವಿಶೇಷ ಟಿಪ್ಪಣಿಗಳು :**

**स्थितौ एव** ರಾಘವೇಂದ್ರರು ಮೊದಲಿನ ಸಾಲಿನಲ್ಲಿರುವ **स्थितौ** ದೊಡನೆ ಎರಡನೆ ಸಾಲಿನಲ್ಲಿರುವ **एव** ಶಬ್ದವನ್ನು ಜೋಡಿಸಿ 'ಕುಳಿತುಕೊಂಡೇ' ಶಂಖಗಳನ್ನು ಊದಿದರು ಎಂದು ಅರ್ಥಮಾಡಿದ್ದಾರೆ. ತಮಗೆ ಯಾವ ಭಯವೂ ಇಲ್ಲವೆಂದು ಪ್ರಕಟಿಸಲಿಕ್ಕೆ ಹೀಗೆ ಮಾಡಿರಬಹುದು. **महति स्यंदने** ಈ ರಥವನ್ನು ಅಗ್ನಿಯು ಕೊಟ್ಟಿದ್ದಾನೆ.

ಈ ಶ್ಲೋಕ ಮತ್ತು ಮುಂದಿನ ಕೆಲವು ಶ್ಲೋಕಗಳಲ್ಲಿ ನಮಗೆ ಯಾರು ಯಾವ ಕ್ರಮದಲ್ಲಿ ಶಂಖಗಳನ್ನು ಊದಿದರು ಎನ್ನುವದು ದೊರೆಯುತ್ತಿದೆ. ಶ್ರೀಕೃಷ್ಣನು ಮುಂದಾದನು; ಆ ಮೇಲೆ ಅರ್ಜುನ, ಭೀಮ, ಧರ್ಮ, ನಕುಲ. ಸಹದೇವರು ಕ್ರಮ

ವಾಗಿ ಮುಂದುವರೆದರು. ಈ ಕ್ರಮದಲ್ಲಿ ಒಂದು ಅರ್ಥವಿರಬೇಕು !! ಮಾಧವನು ಮೊದಲು ಕೌರವರ ಆಹ್ವಾನವನ್ನು ಎದುರಿಸಿ ಯುದ್ಧದ ಪರಿಣಾಮವನ್ನು ನಿಶ್ಚೈಸಿದನು. ಆ ಮೇಲೆ ಶಂಖ ಊದಿದ ಕ್ರಮವು ಸ್ವರೂಪ ಯೋಗ್ಯತೆಯ ಕ್ರಮವನ್ನು ಸೂಚಿಸಬಹುದೇ !!

**पांचजन्यं हृषीकेशो देवदत्तं धनंजयः ।**
**पौंड्रं दध्मौ महाशंखं भीमकर्मा वृकोदरः ।। १५ ।।**

ಶ್ರೀಕೃಷ್ಣನು ಪಾಂಚಜನ್ಯ (**पांचजन्यं–पंचजन** ಎಂದರೆ ಅಸುರನು; ಅವನ ಎಲುವಿನಿಂದ ತಯಾರಿಸಿದ್ದು. **देवदत्त** ಎಂದರೆ ಅಗ್ನಿಯಿಂದ ಕೊಡಲ್ಪಟ್ಟ) ವೆಂಬ ಶಂಖವನ್ನೂ ಧನಂಜಯನು ದೇವದತ್ತವೆಂಬ ಶಂಖವನ್ನೂ ಭಯಂಕರ ಕಾರ್ಯಗಳನ್ನು ಮಾಡುವ ಭೀಮನು ಪೌಂಡ್ರವೆಂಬ ಶಂಖವನ್ನೂ ಊದಿದರು.

**ವಿಶೇಷ ಟಿಪ್ಪಣಿಗಳು :**

**हृषीकेश** ಇದು ಶ್ರೀಕೃಷ್ಣನ ಹೆಸರು. ಇದರಂತೆ ಮಧುಸೂದನ, ಮಾಧವ, ಕೇಶವ ಮೊದಲಾದ ಅನೇಕ ಹೆಸರುಗಳನ್ನು ಗೀತೆಯಲ್ಲಿ ಉಪಯೋಗಿಸಿದ್ದಾರೆ. ಈ ಹೆಸರುಗಳ ಯೌಗಿಕ ಅರ್ಥವು ವಾಕ್ಯಾನ್ವಯದಲ್ಲಿ ಸಾರ್ಥಕವಾಗಿ ಹೊಂದುತ್ತದೆಂಬ ಅಭಿಪ್ರಾಯದಿಂದ ಪ್ರತಿಯೊಂದು ಹೆಸರನ್ನು ಯೌಗಿಕವಾಗಿ ಅರ್ಥೈಸುತ್ತಾರೆ. ಹಿಂದಿನ ಶ್ಲೋಕದಲ್ಲಿ **माधव** ಎಂದು ಕೃಷ್ಣನನ್ನು ಕರೆದಿದ್ದಾರೆ. **माया: धव: पति:** ಲಕ್ಷ್ಮೀಪತಿಯೆಂದು ಅರ್ಥ. ಮಾಧವನು ಶಂಖವನ್ನು ಊದಿದ್ದರಿಂದ ವಿಜಯಲಕ್ಷ್ಮಿಯು ನಿಶ್ಚಿತವಾಗಿ ಪಾಂಡವರಿಗೆ !! ಯಾಕೆಂದರೆ ಲಕ್ಷ್ಮೀಪತಿಯೇ ಶಂಖ ಊದಿದನು. ಹಾಗೆಯೇ ಹೃಷಿಕೇಶಃ **हृषीकाणां ईशः** ಇಂದ್ರಿಯಗಳ ಒಡೆಯನು ಎಂದರ್ಥ. ಎಲ್ಲ ಇಂದ್ರಿಯಗಳ ಒಡೆಯನೇ ಕೃಷ್ಣನಿರುವಾಗ ವೈರಿಗಳ ಇಂದ್ರಿಯಗಳನ್ನು ಸ್ವಾಧೀನಪಡೆಸಿಕೊಂಡು ಅವರನ್ನು ಸೋಲಿನತ್ತ ಒಯ್ಯುವನು ಎಂದರ್ಥ.

ಇಲ್ಲಿ ಅರ್ಜುನನನ್ನು ಧನಂಜಯನೆಂದು ಕರೆದಿದ್ದಾರೆ. ಯುಧಿಷ್ಠಿರನು ಯಜ್ಞವನ್ನು ಮಾಡುವಾಗ ದ್ರವ್ಯ ಬೇಕಾಯಿತು. ಆಗ ಅರ್ಜುನನು ದ್ರವ್ಯವನ್ನು ಒದಗಿಸಿದನು. ಆದುದರಿಂದ ಅವನಿಗೆ ಧನಂಜಯನೆಂದು ಹೆಸರು. (ಧನವನ್ನು ಗೆದ್ದು ತರುತ್ತಾನೆ.)

**अनतविजयं राजा कुंतीपुत्रो युधिष्ठिरः ।**
**नकुलः सहदेवश्च सुघोषमणिष्पकौ ।। १६ ।।**

ಕುಂತಿಯ ಮಗನಾದ ಧರ್ಮರಾಜನು ಅನಂತವಿಜಯವೆಂಬ (ಶಂಖವನ್ನು ಊದಿದನು) ನಕುಲ ಮತ್ತು ಸಹದೇವರು ಸುಘೋಷ ಮತ್ತು ಮಣಿಪುಷ್ಪಕ ಗಳನ್ನು ಊದಿದರು.

**ವಿಶೇಷ ಟಿಪ್ಪಣಿಗಳು :**

**राजा** ಕುಂತೀ ಪುತ್ರನಾದ ಯುಧಿಷ್ಠಿರನು ಯಾವಾಗಲೂ ರಾಜನೇ ಅವನ ನೀತಿ–ಧೈರ್ಯ, ಔದಾರ್ಯಗಳಿಂದ ಧರ್ಮರಾಜನು ರಾಜ್ಯ ಕಳಕೊಂಡಿದ್ದರೂ ರಾಜ ನಾಗಿಯೇ ವರ್ತಿಸಿದನು.

**कुंतीपुत्र:** ಧರ್ಮರಾಜನು ವೀರಮಾತೆಯಾದ ಕುಂತಿಯ ಮಗನು ಎನ್ನುವದು ನಿಜ. ಯಾಕೆಂದರೆ ಧರ್ಮರಾಜನನ್ನು ಯುದ್ಧಕ್ಕೆ ಬೀಳ್ಕೊಡುವಾಗ 'ಮಗನೇ ಕೊನೆಯವರೆಗೆ ಹೋರಾಡುವದೊಂದೇ ಕ್ಷತ್ರಿಯನಿಗೆ ತೆರೆದ ದಾರಿ. ನನ್ನ ಅವ ಮಾನ ದಾರಿದ್ರ್ಯಗಳನ್ನು ನೋಡು. 'ಯುದ್ಧ ಒಂದೇ ಉಪಾಯ'ವೆಂದು ಅವನಿಗೆ ಆಶೀರ್ವದಿಸಿದ ವೀರಮಾತೆ ಇವಳು.

**काश्यश्च परमेष्वासः शिखंडी च महारथः ।**
**धृष्टद्युम्नो विराटश्च सात्यकिश्चाऽपराजितः ॥ १७ ॥**

**द्रुपदो द्रौपदेयाश्च सर्वशः पृथिवीपते ।**
**सौभद्रश्च महाबाहुः शंखान् दध्मुः पृथक् पृथक् ॥ १८ ॥**

**सघोषोधार्तराष्ट्राणां हृदयानि व्यदारयत् ।**
**नभश्च पृथिवीं चैव तुमुलो व्यनुनादयन् ॥ १९ ॥**

ಶ್ರೇಷ್ಠವಾದ ಧನುಸ್ಸುಳ್ಳ ಕಾಶೀರಾಜನು ಮತ್ತು ಮಹಾರಥಿಕನಾದ ಶಿಖಂಡಿಯು ಮತ್ತು ಧೃಷ್ಟದ್ಯುಮ್ನ ವಿರಾಟರು ಮತ್ತು ಅನ್ಯರಿಂದ ಜಯಿಸಲು ಸಾಧ್ಯವಾಗದ ಸಾತ್ಯಕಿಯು ॥ ೧೭ ॥

ಹೇ ಧೃತರಾಷ್ಟ್ರನೇ ! ದ್ರುಪದ ಮಹಾರಾಜನು, ಸಮಸ್ತರಾದ ದ್ರೌಪದಿಯ ಮಕ್ಕಳು ಮತ್ತು ಮಹಾ ಬಾಹುಶಾಲಿಯಾದ ಸುಭದ್ರಾಪುತ್ರನಾದ ಅಭಿಮನ್ಯುವು ಬೇರೆ ಬೇರೆ ಶಂಖಗಳನ್ನು ಊದಿದರು. ॥ ೧೮ ॥ ಮತ್ತು ಆ ವ್ಯಾಪ್ತವಾದ ಶಬ್ದವು (ಶಂಖಧ್ವನಿಯು) ಭೂಮಿ ಆಕಾಶಗಳಲ್ಲಿ ಅನುರಣಿತವಾಗಿ ಕೌರವರ ಹೃದಯ ವನ್ನು ಬಿರಿಯುವಂತೆ ಮಾಡಿತು. ॥ ೧೯ ॥

**ವಿಶೇಷ ಟಿಪ್ಪಣಿಗಳು :**

ಕೌರವರ ಶಂಖಧ್ವನಿಗೆ ಉತ್ತರವಾಗಿ ಊದಿದ ಪಾಂಡವರ ಶಂಖಧ್ವನಿಯು ಕೃಷ್ಣನ ಮಹಾತ್ಮೆಯಿಂದ ಘೋರ ರೂಪವನ್ನು ತಾಳಿತು. ಇನ್ನೊಂದು ಮಾತನ್ನು ಇಲ್ಲಿ ನೆನಿಸಿಕೊಳ್ಳಬೇಕು. ವನಪರ್ವದಲ್ಲಿ ಭೀಮನು ಸೌಗಂಧಿಕ ಪುಷ್ಪವನ್ನು ತರಲಿಕ್ಕೆ ಹೋದಾಗ ಹನಮಂತನೊಡನೆ ಯುದ್ಧ ಮಾಡಬೇಕಾಯಿತು. ಆದರೆ ಬೇಗನೇ ಒಪ್ಪಂದವಾಯಿತು. ಇದಕ್ಕೆ ಮೆಚ್ಚಿದ ಹನುಮಂತನು ಭೀಮಾರ್ಜುನರಿಗೆ ಒಂದೊಂದು ವರವನ್ನು ಕೊಟ್ಟನು. ಭೀಮನು ಶಂಖವನ್ನು ಊದಿದಾಗ ಆ ಧ್ವನಿಯು ಪ್ರತಿಧ್ವನಿಸುವಂತೆ ಹನುಮಂತನು ವರ ನೀಡಿದನು ಅರ್ಜುನನ ರಥದ ಮೇಲಿರುವ ಧ್ವಜದ ಮೇಲೆ ಕುಳಿತುಕೊಂಡು, ಹನುಮಂತನು ಅರ್ಜುನನ ಶಂಖ ಧ್ವನಿಯಗೂಡ ತಾನೂ ಸಿಂಹನಾದವನ್ನು ಮಾಡಿ ಅದನ್ನು ಹೆಚ್ಚು ಭಯಂಕರಗೊಳಿಸುವನು. ಈ ಕಾರಣದಿಂದಲೂ ಪಾಂಡವರ ಶಂಖಧ್ವನಿಯು ಮತ್ತಿಷ್ಟು ಘೋರವಾಗಿ ಕೌರವರ ಎದೆಯನ್ನು ಒಡೆಯಿತು. ಶಿಖಂಡಿಯು– ಇವನ ಬಾಣದಿಂದ ಭೀಷ್ಮರು ಮರಣಹೊಂದಿದರು. ಹೀಗೆ ಶಿಖಂಡಿಯು ತಾನು ಹುಡುಗಿಯಾಗಿದ್ದಾಗ ತನ್ನನ್ನು ಮದುವೆಯಾಗಲಿಕ್ಕೆ ಒಪ್ಪದ್ದರಿಂದ ಈ ಜನ್ಮದಲ್ಲಿ ಆ ಸೇಡನ್ನು ತೀರಿಸಿಕೊಂಡನು.

**द्रौपदेयाश्च**– ದ್ರೌಪದಿಯ ಐದು ಜನ ಮಕ್ಕಳು : ೧) ಪ್ರತಿವಿಂಧ್ಯ ೨) ಶ್ರುತಸೋಮ ೩) ಶ್ರುತಕೀರ್ತಿ ೪) ಶತಾನೀಕ ಮತ್ತು ೫) ಶ್ರುತಕರ್ಮ

**अथव्यवस्थितान् दृष्ट्वा धार्तराष्ट्रान् कपिध्वजः ।**
**प्रवृत्ते शस्त्रसंपाते धनुरुद्यम्य पांडवः ।। २० ।।**
**हृषीकेशं तदा वाक्यं इदमाह महीपते ।**

ಆ ಮೇಲೆ ಹೇ ಧೃತರಾಷ್ಟ್ರನೇ ರಥದ ಧ್ವಜದಲ್ಲಿ ಕಪಿಯುಳ್ಳ ಅರ್ಜುನನು ಯುದ್ಧಮಾಡಲಿಕ್ಕೆ ಸಿದ್ಧರಾಗಿ ನಿಂತಿರುವ ಧೃತರಾಷ್ಟ್ರರಾಜನ ಮಕ್ಕಳನ್ನು ನೋಡಿ, ಆಗ ಬಾಣಗಳನ್ನು ಬಿಡುವ ಕಾಲವು ಸಮೀಪಿಸುತ್ತಿರಲಾಗಿ ಧನುಸ್ಸನ್ನು ಎತ್ತಿ ಶ್ರೀಕೃಷ್ಣನನ್ನು ಉದ್ದೇಶಿಸಿ ಮುಂದೆ ಈ ರೀತಿಯಾಗಿ ಹೇಳಿದನು.

**ವಿಶೇಷ ಟಿಪ್ಪಣಿಗಳು :**

**प्रवृत्ते शस्त्रसंपाते** ಕೆಲವರು 'ಶಸ್ತ್ರಗಳನ್ನು ಒಗೆಯುವದಕ್ಕೆ ಪ್ರಾರಂಭವಾಗಲು' ಎಂದು ಭಾಷಾಂತರಿಸಿದ್ದಾರೆ. ಆದರೆ ಇನ್ನೂ ಶಸ್ತ್ರಗಳನ್ನು ಎಸೆಯುವದು ಪ್ರಾರಂಭವಾಗಿಲ್ಲ. ಆದುದರಿಂದ 'ಶಸ್ತ್ರಗಳನ್ನು ಎಸೆಯುವ ಕಾಲವು ಸಮೀಪಿಸುತ್ತಿರಲಾಗಿ' ಎಂದು ಭಾಷಾಂತರಿಸಿದೆ.

**ಕಪಿಧ್ವಜಃ** – ಧ್ವಜದಲ್ಲಿ ಕಪಿಯುಳ್ಳವನು. ಪಾಂಡವರಿಗೆ ಜಯವು ನಿಶ್ಚಯ ವಾಯಿತು. ಶ್ರೀರಾಮನು ಕೃಷ್ಣನ ರೂಪದಲ್ಲಿದ್ದಾನೆ. ಸೀತಾಮಾತೆಯು ಲಕ್ಷ್ಮೀ ರೂಪದಲ್ಲಿದ್ದಾಳೆ ಶ್ರೀರಾಮನ ಪರಮಭಕ್ತನಾದ ಹನುಮಂತನು ಅರ್ಜುನನ ಧ್ವಜದಲ್ಲಿದ್ದಾನೆ. ಆದುದರಿಂದ ಪಾಂಡವರಿಗೆ ಜಯ ನಿಶ್ಚಿತ.

**ಹೃಷೀಕೇಶ** ದ ಮೇಲೆ ರಹಸ್ಯಕಾರರು ದೊಡ್ಡ ಟಿಪ್ಪಣಿಯನ್ನು ಬರೆದಿದ್ದಾರೆ. ''ನಾರದ ಪಂಚರಾತ್ರದಲ್ಲಿ **ಹೃಷೀಕ** ಎಂದರೆ ಇಂದ್ರಿಯ ಮತ್ತು **ಈಶ** ಎಂದರೆ ಸ್ವಾಮಿ ಎಂದು ನಿರ್ವಚನ ಮಾಡಿದ್ದಾರೆ; ಮತ್ತು ಅಮರಕೋಶದ ಕ್ಷೀರಸ್ವಾಮಿಯ ಟೀಕೆಯಲ್ಲಿ **ಹೃಷೀಕ** ಎಂದರೆ ಇಂದ್ರಿಯ. ಇದರ ವ್ಯುತ್ಪತ್ತಿಯನ್ನು **ಹೃಷ್** ಆನಂದ ಕೊಡು ಈ ಧಾತುವಿನಿಂದ ಇಂದ್ರಿಯಗಳು ಮನುಷ್ಯನಿಗೆ ಆನಂದ ಕೊಡುತ್ತವೆಂದು ಹೇಳಿ ದ್ದಾರೆ. ಹೀಗಿದ್ದರೂ **ಹೃಷೀಕೇಶ** ಮತ್ತು **ಗುಡಾಕೇಶ** ಎಂಬುದರ ಅರ್ಥದ ವಿಷಯ ದಲ್ಲಿ ಸಂಶಯ ಬರುತ್ತದೆ. ಯಾಕೆಂದರೆ **ಹೃಷೀಕ** ಎಂದರೆ ಇಂದ್ರಿಯ. **ಗುಡಾಕಾ** ಎಂದರೆ ನಿದ್ರೆ ಇವು ಪ್ರಚಾರದಲ್ಲಿದ್ದ ಶಬ್ದಗಳಲ್ಲ. ಇವುಗಳಿಗೆ ಎರಡನೆ ರೀತಿಯಿಂದ ವ್ಯುತ್ಪತ್ತಿಯನ್ನು ಕೊಡಬಹುದು. **ಹೃಷಿ** + **ಕೇಶ** ಮತ್ತು **ಗುಡಾ** + **ಕೇಶ** ಹೀಗೂ ಪದಚ್ಛೇದ ಮಾಡಬಹುದು. ಆಗ **ಹೃಷಿ** ಯೆಂದರೆ ಹರ್ಷದಿಂದ ನಿಂತ ಅಥವಾ ಪ್ರಶಸ್ತ ಕೂದಲುಗಳುಳ್ಳ. **ಗುಡಾ** ಎಂದರೆ ದಟ್ಟವಾದ ಕೇಶ ಎಂದರೆ ಕೂದಲುಗಳುಳ್ಳ ಎಂದು ಅರ್ಥಮಾಡಬಹುದು.'' ಈ ರೀತಿ ಅರ್ಥೈಸಲಿಕ್ಕೆ ಬೇರೆ ಪ್ರಮಾಣಗಳಿದ್ದರೂ ಇದು ಜಗ್ಗಿ ಹಚ್ಚಿದ ಅರ್ಥ; ಮತ್ತು ಅದರಲ್ಲಿ ಅಂಥ ಚಮತ್ಕಾರವೂ ಇಲ್ಲ. ಮೊದಲಿನ ಅರ್ಥ ಕೃಷ್ಣನಿಗೆ ಇಂದ್ರಿಯಗಳ ಮೇಲೆ ಪ್ರಭುತ್ವವುಳ್ಳವನೆನ್ನುವದು ಅವನ ಚರಿತ್ರೆಯ ರಹಸ್ಯವನ್ನೇ ಹೊರಗೆಡವುತ್ತದೆ. ಹಾಗೆ ಅರ್ಜುನನಲ್ಲಿಯ ನಿದ್ರೆಯ ಮೇಲಿನ ನಿಯಂತ್ರಣ ವಿಚಿತ್ರವಾಗಿದ್ದರೂ ನಿಶ್ಚಯವಿದ್ದರೆ ಅವನ ಸಾಮರ್ಥ್ಯವನ್ನು ತೋರಿಸುತ್ತದೆ ನಿದ್ರೆಯ ಮೇಲಿನ ನಿಯಂತ್ರಣಕ್ಕಾಗಿ ನೆಪೋಲಿಯನ್ನನೂ ಪ್ರಸಿದ್ಧಿ ಯನ್ನು ಪಡೆದಿದ್ದನೆಂದು ಗೊತ್ತಾಗುತ್ತದೆ. ಅವನು ಬೇಕಾದಾಗ ಯುದ್ಧಭೂಮಿಯ ಮೇಲೆ ಒಮ್ಮೊಮ್ಮೆ ನಿದ್ರೆಹೋಗುತ್ತಿದ್ದನೆಂದೂ ಮತ್ತು ಎಷ್ಟೋ ಹೊತ್ತಿನವರೆಗೆ ನಿದ್ರೆ ಇಲ್ಲದೇ ಇರುತ್ತಿದ್ದನೆಂದೂ ಅವನ ಚರಿತ್ರೆಯಿಂದ ಗೊತ್ತಾಗುತ್ತದೆ.

**ವ್ಯವಸ್ಥಿತಾನ್** ಇದೊಂದು ಮಹತ್ವದ ಸಂಗತಿಯನ್ನು ಸೂಚಿಸುತ್ತದೆ. ಅರ್ಜುನನು ಕೊನೆಯುಗಳಿಗೆಯ ವರೆಗೂ ಯುದ್ಧದ ವಿಷಯದಲ್ಲಿ ನಿರ್ಧಾರವುಳ್ಳವ ನಾಗಿದ್ದನು. ಆದರೆ ಭಯಚಕಿತರಾಗಿ ಹಂಗುದೊರೆದು ಯುದ್ಧಕ್ಕೆ ಅಣಿಯಾದ ಕೌರವರನ್ನು ಕಂಡು ಅರ್ಜುನನ ಮನಸ್ಸಿನಲ್ಲಿ ಕನಿಕರ ಹುಟ್ಟಿತು.

**ಅಥ** ಇದರ ಅರ್ಥವು 'ಆಮೇಲೆ' ಎಂದು ಇದ್ದರೂ ಆದರಗೂಡ ಅನೇಕ ವಿಚಾರಗಳು ಮೇಲೆ ಏಳುತ್ತವೆ.

೧) ಸೈನ್ಯ ವ್ಯವಸ್ಥೆಯನ್ನು ನೋಡಿ; ಯುದ್ಧವು ಸಮೀಪಿಸಿದ್ದನ್ನು ಬಗೆದು. ಆಮೇಲೆ.

೨) ಇದು ಹೊಸ ವಿಷಯವನ್ನು ಪ್ರಸ್ತಾಪಿಸುತ್ತದೆ. ಯುದ್ಧಪ್ರಾರಂಭ, ಅದರ ಭಯಾನಕ ದೃಶ್ಯ ಬಿಟ್ಟು ಬೇರೆ ವಿಷಯದ ಪ್ರಸ್ತಾಪ.

೩) **ಅಥ** ಶಬ್ದವು ಭಗವದ್ಗೀತೆಯ ನಿಜವಾದ ಪ್ರಾರಂಭವನ್ನು ಸೂಚಿಸುತ್ತಿದೆ. ಅರ್ಜುನನ ವಿಷಾದದಿಂದ ಗೀತೆಯ ಪ್ರಾರಂಭ.

೪) **ಅಥ** ಇದರ ಉಚ್ಚಾರಣೆಯೇ ಮಂಗಳಕರವಾಗಿದೆ. ಆದುದರಿಂದ ಪಾಂಡವರಿಗೆ ಇದು ಮಂಗಳಕರವಾದುದೆಂದು ಸೂಚಿಸುತ್ತಿದೆ.

೫) **ಅಥ** ಮನಸಿನಲ್ಲಿಯ ನಾಟಕೀಯ ಪರಿವರ್ತನೆಯನ್ನು ಸೂಚಿಸುತ್ತಿದೆ

ಶ್ರೀ ರಾಘವೇಂದ್ರ ಸ್ವಾಮಿಗಳು ಈ ಶ್ಲೋಕವು ತತ್ವೋಪದೇಶಕ್ಕೆ ಸಂಗತಿಯನ್ನು ಕೊಡುತ್ತದೆಂದು ಹೇಳುತ್ತಾರೆ ಉಪದೇಶವು ಪರಿಣಾಮಕಾರಿಯಾಗಲಿಕ್ಕೆ ಮೂರು ಸಂಗತಿಗಳು ಅವಶ್ಯವೆಂದು ಹೇಳುತ್ತಾರೆ. ೧) ಒಂದು ಯೋಗ್ಯವಾದ ಪ್ರಸಂಗ (**प्रसंगानुकूल्य**): ಅರ್ಜುನನು ಬಹುಸಂಖ್ಯಾಕರ ಹತ್ಯ ಸಮೀಪಿಸಿರುವದನ್ನು ನೋಡುತ್ತಾನೆ. ೨) **श्रोत्रानुकूल्य** ಉಪದೇಶ ಕೇಳುವವನು ಅಧಿಕಾರ ಸಂಪನ್ನನೂ ಆತುರನೂ ಇರಬೇಕು. ಅರ್ಜುನನು ಯೋಗ್ಯನಾದ ಶಿಷ್ಯನು (**कपिध्वज**)ನು. ಮೂರನೇದಾಗಿ ಉಪದೇಶಕನು ಸಮರ್ಥನಾಗಿರಬೇಕು (**वक्त्रानुकूल्य**). ಅವನು **हृषीकेश** ಎಲ್ಲ ಇಂದ್ರಿಯಗಳ ಸ್ವಾಮಿಯು. ಇದೆಲ್ಲವೂ ಈ ಶ್ಲೋಕದಿಂದ ಗೊತ್ತಾಗುತ್ತದೆ.

**वाक्यमाह महीपते** ಮಧುಸೂದನ ಸರಸ್ವತಿಯವರು ತಮ್ಮ ಟೀಕೆಯಲ್ಲಿ ಹೀಗೆ ಹೇಳುತ್ತಾರೆ—"ಸಂಜಯನು ಧೃತರಾಷ್ಟ್ರನಿಗೆ **महीपते** ಎಂದು ಕರೆಯುವದರಿಂದ ಅವನ ಮಹೀಪತಿತ್ವವು ಅನೀತಿಯಿಂದ ನಾಶಹೊಂದುವದೆಂದು ಸೂಚ್ಯವಾಗಿ ಪರಿಹಾಸ ಮಾಡುತ್ತಾನೆ. ಅರ್ಜುನನು ಮಾತ್ರ ತನ್ನ ಮಾತಿನಲ್ಲಿ, ತನ್ನ ಹೃದಯದಲ್ಲಿದ್ದುದನ್ನೇ ಕೃಷ್ಣನೆದುರಿಗೆ ಬಿಚ್ಚಿಡುತ್ತಾನೆ. ಕೌರವರ ಹಾಗೆ ತಮ್ಮ ನಾಶಕ್ಕೆ ಕಾರಣವಾದ ರಭಸಾಚರಿತವನ್ನು ಅರ್ಜುನನು ಮುಂದುವರಿಸುವದಿಲ್ಲ.

**अर्जुन उवाच : –**

**सेनयोरुभयोर्मध्ये रथं स्थापय मेऽच्युत ॥ २१ ॥**

**यावदेतान्निरीक्षेऽहं योद्धुकामानवस्थितान् ।**
**कैर्मया सह योद्धव्यं अस्मिन् रणसमुद्यमे ॥ २२ ॥**

**योत्स्यमानानवेक्षेऽहं य एते त्र समागताः ।**
**धार्तराष्ट्रस्य दुर्बुद्धे र्युद्धेप्रियचिकीर्षवः ॥ २३ ॥**

ಎಲೈ ಶ್ರೀಕೃಷ್ಣನೇ ! ಯುದ್ಧವನ್ನು ಮಾಡುವ ಅಪೇಕ್ಷೆಯಿಂದ ಸಿದ್ಧರಾಗಿ ನಿಂತಿರುವವರನ್ನು ಎಲ್ಲಿಯವರೆಗೆ ನೋಡುವೆನೋ ಅಲ್ಲಿಯವರೆಗೆ ಎರಡೂ ಸೈನ್ಯಗಳ ಮಧ್ಯದಲ್ಲಿ ನನ್ನ ರಥವನ್ನು ನಿಲ್ಲಿಸು (೨೨). ಯುದ್ಧದಲ್ಲಿ ದುಷ್ಟಬುದ್ಧಿಯುಳ್ಳ ದುರ್ಯೋಧನನಿಗೆ ಹಿತವನ್ನು ಮಾಡುವ ಇಚ್ಛೆಯುಳ್ಳವರಾಗಿ ಈ ಸೈನ್ಯದಲ್ಲಿ ಯಾರು ಯಾರು ಬಂದಿರುವರೋ, ಈ ಯುದ್ಧ ರೂಪ ಕ್ರಿಯೆಯು ನಡೆಯುತ್ತಿರಲು ನಾನು ಯಾರ ಯಾರೊಡನೆ ಯುದ್ಧ ಮಾಡಬೇಕಾಗಿದೆಯೋ, ಅಂಥ ಯುದ್ಧ ಮಾಡತಕ್ಕವರನ್ನು ನಾನು ನೋಡುತ್ತೇನೆ (೨೩).

**ವಿಶೇಷ ಟಿಪ್ಪಣಿಗಳು :**

ಡಾ. ರಾಧಾಕೃಷ್ಣನ್ನರು ಈ ಸಂದರ್ಭದಲ್ಲಿ ಒಳ್ಳೇ ಸಮಯೋಚಿತವಾದ ಹಿಂದಿನ ಕೆಲವು ಸಂಗತಿಗಳನ್ನು ಉದಾಹರಿಸುತ್ತಾರೆ— "ಅದೇ ದಿನ ಬೆಳಿಗ್ಗೆ ಧರ್ಮರಾಜನು, ಭೀಷ್ಮನು ರಚಿಸಿದ ವ್ಯೂಹವನ್ನು ನೋಡಿ ಗಾಬರಿಯಾಗಿ ಅರ್ಜುನನಿಗೆ ಪ್ರಶ್ನಿಸುತ್ತಾನೆ– **धनंजय कथं शक्यं अस्माभिर्योद्धुमाहवे** (ಭೀ. ೨೧–೩೧). (ಇಂಥ ಅಭೇದ್ಯ ವ್ಯೂಹವನ್ನು ಎದುರಿಸಿ) "ನಾವು ಯುದ್ಧ ಮಾಡುವದು ಹೇಗೆ ಶಕ್ಯ ?" ಎಂದು. ಅರ್ಜುನನು ಉತ್ತರವಾಗಿ— **युध्यध्वं अनहंकारः यतो धर्मः ततो जयः** (ಭೀ. ೨೧–೧೧–೧೨). "ಅಹಂಕಾರವನ್ನು ಬಿಟ್ಟು ಯುದ್ಧ ಮಾಡು" ಎಂದು ಹೇಳುತ್ತಾನೆ. ಹಾಗೆಯೇ ಕೃಷ್ಣನು ಅರ್ಜುನನಿಗೆ ಪವಿತ್ರನಾಗಿ ದುರ್ಗಾದೇವಿಗೆ ಸ್ತೋತ್ರಮಾಡಲಿಕ್ಕೆ ಹೇಳುತ್ತಾನೆ. ಅರ್ಜುನನು ರಥದಿಂದ ಇಳಿದು ದುರ್ಗಾದೇವಿಯ ಸ್ತೋತ್ರಮಾಡುತ್ತಾನೆ. ಆ ದೇವಿಯು ಪ್ರೀತಳಾಗಿ– 'ಅರ್ಜುನನೇ ಕೃಷ್ಣನು ನಿನ್ನ ಪಕ್ಷಕ್ಕೆ ಇರುವದರಿಂದ ನಿನಗೆ ಜಯವು ಸಿದ್ಧವಾಗಿದೆ' ಎಂದು ಆಶೀರ್ವದಿಸುತ್ತಾಳೆ. ಕರ್ತವ್ಯವನ್ನೇ ಮುಂದೆ ಇಟ್ಟುಕೊಂಡ ಅರ್ಜುನನು ಯುದ್ಧದ ಪರಿಣಾಮವನ್ನು ಎಳ್ಳಷ್ಟೂ ಯೋಚಿಸಲಿಲ್ಲ. ನ್ಯಾಯಸಂಪಾದನೆಗೆ

ದುಷ್ಟರ ದಮನಕ್ಕೆ ಸ್ವಜನರ ಹತ್ಯೆಮಾಡಬೇಕಾಗುತ್ತದೆಂಬುದರ ಕಲ್ಪನೆ ಅವನಿಗೆ ಬರಲಿಲ್ಲ. ದೇವಮಾನವರ ಸಹಕಾರದಿಂದ, ನ್ಯಾಯ ಮತ್ತು ಶಾಂತಿಗಳು ಭೂಮಿಯ ಮೇಲೆ ನೆಲಿಸುತ್ತಿವೆ.''

ಇಲ್ಲಿ ಅರ್ಜುನನು ಕೃಷ್ಣನಿಗೆ ರಥವನ್ನು ಎರಡು ಸೈನ್ಯಗಳ ಮಧ್ಯದಲ್ಲಿ ನಿಲ್ಲಿಸಲು ಆಜ್ಞೆಮಾಡುತ್ತಾನೆ. ಅರ್ಜುನನು ರಥಿಯು, ಕೃಷ್ಣನು ಸಾರಥಿಯು ಭಕ್ತರ ಮೇಲಿನ ಪ್ರೇಮದಿಂದ ಭಕ್ತರಿಗೆ ಪರಾಧೀನನಾಗುವದು ಕೃಷ್ಣನಿಗೆ ಬಹು ಮೆಚ್ಚಿಗೆಯ ಮಾತು.

ಮಧುಸೂದನ ಸರಸ್ವತಿಯು ಇಲ್ಲಿ **यावत्** ಎನ್ನುವದು 'ದೇಶಕ್ಕೂ ಕಾಲಕ್ಕೂ ಎರಡಕ್ಕೂ ಅನ್ವಯಿಸುತ್ತದೆಂದು ಹೇಳುತ್ತಾರೆ. ಆದುದರಿಂದ ಅರ್ಜುನನು, ಯಾವ ಪ್ರದೇಶದಿಂದ ವೈರಿಗಳ ಸೈನ್ಯವು ಚೆನ್ನಾಗಿ ಕಾಣುತ್ತದೆ, ರಥವನ್ನು ಅಂಥ ಪ್ರದೇಶದಲ್ಲಿ ನಿಲ್ಲಿಸಬೇಕೆಂದು ಇಚ್ಛಿಸುತ್ತಾನೆ. ಮತ್ತು ತಾನು ಪೂರ್ತಿಯಾಗಿ ಸೈನ್ಯವನ್ನು ನೋಡುವಷ್ಟು ಕಾಲದ ವರೆಗೆ ನಿಲ್ಲಿಸಬೇಕೆಂದು ಅಭಿಪ್ರಾಯಪಡುತ್ತಾನೆ **निरीक्षे** 'ನಾನು ನೋಡುವೆನು' ಎಂದು. ನಾನು ಇದರಲ್ಲಿ ಸಮಾವೇಶವಾಗಿದ್ದರೂ ಮತ್ತೆ **'अहं'** ಎಂದು ಪ್ರಯೋಗಿಸಿದ್ದು 'ನಾನೇ ಸ್ವತಃ ನೋಡಬೇಕಾಗಿದೆ' ಎಂದು ತಾತ್ಪರ್ಯ ತರುತ್ತದೆ.

**योद्धुकामान् अवस्थितान्** 'ಯುದ್ಧ ಮಾಡಬೇಕೆಂದು ಇಚ್ಛಿಸುತ್ತ ನಿಂತಿರುವ.' ೧೯ ನೇ ಶ್ಲೋಕದಲ್ಲಿ ಪಾಂಡವರ ಸೈನ್ಯದಲ್ಲಿಯ ರಣೋತ್ಸಾಹದ ಗರ್ಜನೆಯು ಕೌರವರ ಹೃದಯವನ್ನು ಸೀಳಿತು ಎಂದು ಹೇಳಿದೆ. ಕೌರವರ ಸೈನ್ಯವು ಭೀತಿಯಿಂದ ಓಡಿ ಹೋಗಬೇಕಿತ್ತು ಎಂದು ಅರ್ಜುನನು ನಿರೀಕ್ಷಿಸಿದ್ದನು ಇನ್ನೂ ಕೌರವ ಸೈನ್ಯ ನಿಂತದ್ದನ್ನು ನೋಡಿ ಅರ್ಜುನನು ಅವರೆಂಥವರಿದ್ದಾರೆಂದು ನೋಡುವ ಕುತೂಹಲವುಳ್ಳವನಾದನು.

**रणसमुद्यमे** – ಯುದ್ಧಾರಂಭದಲ್ಲಿ; ಪ್ರಾರಂಭವಾಗತಕ್ಕ .ಯುದ್ಧದಲ್ಲಿ (ರಾಘವೇಂದ್ರರು ಗೀತಾವಿವೃತ್ತಿಯಲ್ಲಿ) **समुद्यम** ಎಂದರೆ ಪ್ರಯತ್ನವೆಂಬ ಅರ್ಥಕ್ಕೆ ಇಲ್ಲಿ ಪ್ರಾಶಸ್ತ್ಯ ದೊರೆಯುವದಿಲ್ಲ. **योत्स्यमानान्** ಯುದ್ಧಮಾಡತಕ್ಕವರನ್ನು . ಕೌರವ ಸೈನಿಕರನ್ನು ಪಾಂಡವಸೈನಿಕರಿಬ್ಬರನ್ನೂ ನೋಡಬೇಕೆಂದು ಅರ್ಜುನನು ಬಯಸುತ್ತಾನೆ. **योद्धुकामान् अवस्थितान्** ಇವು ಇಬ್ಬರಿಗೂ ಅನ್ವಯಿಸುತ್ತವೆ ಆದರೆ **युद्धे प्रियचिकीर्षवः** ಧಾರ್ತರಾಷ್ಟ್ರರಿಗೆ ಹಿತವನ್ನು ಬಯಸುವವರು ಪಾಂಡವರಾಗಲಾರರು. ಆದುದರಿಂದ ಅದರ ಸಂಧಿಯನ್ನು, **युद्धे अप्रियचिकीर्षवः**

ಎಂದು ಬಿಡಿಸಿ ಕೌರವರಿಗೆ ಅಹಿತವನ್ನು ಬಯಸುವವರು ಎಂದು ಅರ್ಥಮಾಡಿದಾಗ ಸರಿಹೋಗುತ್ತದೆ. ಈಗ ಅರ್ಜುನನು ತನ್ನ ಸೈನಿಕರನ್ನೂ ಕೌರವರ ಸೈನಿಕರನ್ನೂ ಕೂಡಿಯೇ ನೋಡಬೇಕೆಂದು ಇಚ್ಛಿಸುತ್ತಾನೆಂಬುದನ್ನು ನಾವು ಗಮನಿಸಬೇಕು. **कैः सह** ಎಂದರೆ ಯಾರ ಸಹಾಯದಿಂದ ನಾನು ಕೌರವರೊಡನೆ ಹೋರಾಡಬೇಕು ಎನ್ನುವದು ಪಾಂಡವರಿಗೆ ಅನ್ವಯಿಸುತ್ತದೆ.*

ಇಲ್ಲಿ ಕೆಲವು ಮಾತುಗಳನ್ನು ಲಕ್ಷ್ಯದಲ್ಲಿಡಬೇಕಾಗಿದೆ :—

೧) **ಅರ್ಜುನನ ಅಹಂಕಾರ—**

ವ್ಯಾಕದಲ್ಲಿ ಈ ಪ್ರಥಮ ಪುರುಷದ ಪ್ರಯೋಗದಿಂದ ಅರ್ಜುನನ ಮನೋಭೂಮಿಕೆಯ ಹಿನ್ನೆಲೆ ಗೊತ್ತಾಗುತ್ತದೆ. ನಾನು ಸ್ವತಂತ್ರವಾಗಿ ಯುದ್ಧ ಹೂಡಿದ್ದೇನೆ ಮತ್ತು ಅದನ್ನು ನಡೆಸುತ್ತೇನೆ. ಇದರಲ್ಲಿ ಅವನು ಶ್ರೀ ಕೃಷ್ಣನ ಪಾತ್ರವನ್ನು ಪೂರ್ಣಮರೆತಿದ್ದಾನೆ. ಇದು ಮೋಹದ ಪರಿಣಾಮ. ಪೂರ್ಣ ಸ್ವತಂತ್ರನಾದ ಸರ್ವಕರ್ತನಾದ ಶ್ರೀ ಕೃಷ್ಣನನ್ನು ಮರೆಯುವದೇ ಮುಂದಿನ ವಿಷಾದಕ್ಕೆ ಕಾರಣ.

**संजय उवाच –**

**एवमुक्तो हृषीकेशो गुडाकेशेन भारत ।**
**सेनयोरुभयोर्मध्ये स्थापयित्वा रथोत्तमम् ।। २४ ।।**
**भीष्मद्रोणप्रमुखतः सर्वेषांच महीक्षितां ।**
**उवाच पार्थ पश्यैतान् समवेतान् कुरूनिति ।। २५ ।।**

ಸಂಜಯನು ಹೇಳಿದನು—

ಧೃತರಾಷ್ಟ್ರನೇ ! ಅರ್ಜುನನು ಹಾಗೆ ಹೇಳಿದ ಮೇಲೆ ಶ್ರೀ ಕೃಷ್ಣನು ಆ ಉತ್ತಮವಾದ ರಥವನ್ನು ಎರಡೂ ಸೈನ್ಯಗಳ ಮಧ್ಯದಲ್ಲಿ ಭೀಷ್ಮ–ದ್ರೋಣರ ಮತ್ತು ಎಲ್ಲ ರಾಜರ ಎದುರಿಗೆ ನಿಲ್ಲಿಸಿ, 'ಅರ್ಜುನ! ಸಮ್ಮಿಲಿತರಾದ ಕೌರವರನ್ನು ನೋಡು' ಎಂದನು.

**ವಿಶೇಷ ಟಿಪ್ಪಣಿಗಳು :**

ಶ್ರೀಕೃಷ್ಣನು ಅಂಜದೇ ಅಳುಕದೇ ಅರ್ಜುನನ ರಥವನ್ನು ವೈರಿಗಳ ಎದುರಿಗೆ ನಿಲ್ಲಿಸಿದನು. ಮತ್ತು ಆ ವೈರಿಗಳನ್ನು ನೋಡಲಿಕ್ಕೆ ಹೇಳಿದನು. ಸನ್ನದ್ಧವಾಗಿ

* **अवेक्षेऽहं** ಎಂಬಲ್ಲಿ **निरीक्षेऽहं** ಎಂಬ ಪಾಠಾಂತರವೂ ಇದೆ.

ನಿಂತ ವೈರಿಸೈನ್ಯದ ಎದುರಿಗೆ ಎದೆಗಾರಿಕೆಯಿಂದ ನಿಂತ ರೀವಿ, ಭೀಷ್ಮ–ದ್ರೋಣರ ಎದುರಿಗೆ ನಡೆದ ಅಮರವಾದ ಸಂಭಾಷಣೆ, ವೈರಿಸೈನ್ಯದ ಪ್ರಾಣವನ್ನೇ ಸೆಳೆಯುವ ಶ್ರೀಕೃಷ್ಣನ ವಿಚಿತ್ರನೋಟ— ಇವೆಲ್ಲವನ್ನೂ ಭೀಷ್ಮರು ಮರಣಕಾಲದಲ್ಲಿ ವರ್ಣಿಸುವದನ್ನು ಭಾಗವತದಲ್ಲಿ ಎಷ್ಟು ಸುಂದರವಾಗಿ ಹೇಳಿದ್ದಾರೆಂಬುದನ್ನು ನೋಡಬೇಕು.

**सपदि सखिवचोनिशम्य मध्ये निजपरयोर्बलयो रथं निवेश्य ।**
**स्थितवति परसैनिकायुरक्ष्णा हृतवति पार्थसखे मतिर्ममास्तु ।।**

"ತನ್ನ ಗೆಳೆಯನ ಮಾತಿನಂತೆ ಕೂಡಲೆ ತಮ್ಮ ಮತ್ತು ವೈರಿಗಳ ಸೈನ್ಯಗಳ ಮಧ್ಯದಲ್ಲಿ ರಥವನ್ನು ನಿಲ್ಲಿಸಿ, ತಾನೂ ನಿಂತು ವೈರಿ ಸೈನಿಕರ ಆಯುಷ್ಯವನ್ನೇ ತನ್ನ ತೀಕ್ಷ್ಣ ನೋಟದಿಂದ ಅಪಹರಿಸುವ ಪಾರ್ಥಸಖನಾದ ಶ್ರೀಕೃಷ್ಣನ ಮನೋಹರ ಮೂರ್ತಿಯನ್ನು ನನ್ನ ಮನಸ್ಸು (ಮರಣ ಸಮಯದಲ್ಲಿ) ಚಿಂತಿಸಲಿ."*

**तत्रापश्यत् स्थितान्पार्थः पितॄनथ पितामहान् ।**
**आचार्यान् मातुलान् भ्रातॄन् पुत्रान् पौत्रान् सखींस्तथा ।। २६ ।।**
**श्वशुरान् सुहृदश्चैव सेनयोरुभयोरपि ।**
**तान्समीक्ष्य स कौंतेयः सर्वान् बंधूनवस्थितान् ।। २७ ।।**
**कृपया परयाविष्टो विषीदन्निदमब्रवीत् ।।**

ಆ ಎರಡೂ ಸೈನ್ಯಗಳಲ್ಲಿಯೂ ಇದ್ದ ಪಿತೃ ಸಮಾನರನ್ನು (ಭೂರಿಶ್ರವ ಮೊದಲಾದವರು) ಭೀಷ್ಮಾದಿಗಳನ್ನೂ ಗುರುಗಳಾದ ದ್ರೋಣಾಚಾರ್ಯ ಮೊದಲಾದವರನ್ನೂ ಶಲ್ಯಮೊದಲಾದ ಮಾವಂದಿರನ್ನೂ ಭೀಮ–ದುರ್ಯೋಧನಾದಿ ಅಣ್ಣ–ತಮ್ಮಂದಿರನ್ನೂ ಅಭಿಮನ್ಯು ಲಕ್ಷಣಾದಿ ಮಕ್ಕಳನ್ನೂ ಘಟೋತ್ಕಜನ

---

* ಲೋಕಮಾನ್ಯರು "ರಹಸ್ಯ"ದಲ್ಲಿ ಕೊಟ್ಟ **गुडाकेश** ಮತ್ತು **हृषीकेश**ಗಳ ಮೇಲಿನ ಟಿಪ್ಪಣಿಗಳು ಅಭ್ಯಾಸಪೂರ್ಣವಾಗಿವೆ. ಇವೆರಡೂ ಶಬ್ದಗಳ ಪದಚ್ಛೇದವನ್ನು **गुडा + केश, हृषी + केश** ಎಂದು ಮಾಡುತ್ತಾರೆ. ಆಗ ಹೃಷೀ ಎಂದರೆ ಪ್ರಶಸ್ತವಾದ ಕೇಶವುಳ್ಳವ; ಅಥವಾ ಕೇಶ ಎಂದರೆ ಕಿರಣ ಎಂದಾಗ ಆದಂದದಾಯಕ ಕಿರಣವುಳ್ಳವ ಎಂದು ಅರ್ಥ. **गुडा** ಎಂದರೆ ವಟ್ಟವಾದ ಕೂದಲುಳ್ಳವ ಎಂದು ಅರ್ಥ.

Hillರು ಈ ವಿಷಯದಲ್ಲಿ ಹೀಗೆ ಬರೆಯುತ್ತಾರೆ— "This word is obscure, so **गुडा** means twisted, so a man with twisted hair"

ಪುತ್ರರೇ ಮೊದಲಾದ ಮೊಮ್ಮಕ್ಕಳನ್ನೂ ಹಾಗೂ ಶ್ರೇಷ್ಠ ಅಶ್ವತ್ಥಾಮಾದಿ ಸ್ನೇಹಿತರನ್ನೂ (೨೬) ದ್ರುಪದ ಮೊದಲಾದ ಮಾವಂದಿರನ್ನೂ ವಿರಾಟ ಮೊದಲಾದ ಸ್ನೇಹಿತರನ್ನೂ ಅರ್ಜುನನು ನೋಡಿದನು ಆ ಅರ್ಜುನನು ಯುದ್ಧದಲ್ಲಿ ನಿಂತ ಆ ಸಮಸ್ತ ಬಾಂಧವರನ್ನೂ ನೋಡಿದ ಕೊಡಲೆ ಅಧಿಕವಾದ ದಯೆಯಿಂದ ಕೂಡಿದವನಾಗಿ ವಿಷಾದದಿಂದ ಈ ಮಾತನ್ನು ಹೇಳುತ್ತಾನೆ (೨೭).

## ವಿಶೇಷ ಟಿಪ್ಪಣಿಗಳು :

**'कृपया परया'** ಅತ್ಯಂತ ದಯೆ. ಇದಕ್ಕೆ ಒಳಗಾದ ಅರ್ಜುನನು ತನ್ನ ಮತ್ತು ವೈರಿಗಳ ಸೈನ್ಯದಲ್ಲಿ ನಿಂತವರನ್ನು ಇವರು ದ್ವೇಷಿಗಳು ಇವರು ಸ್ನೇಹಿತರು ಎನ್ನುವದನ್ನು ಮರೆತು ಅವರೆಲ್ಲರೂ ತನಗೆ ಹೊಂದಿದವರು, ಆಪ್ತರು, ಇಷ್ಟರು, ಪ್ರೀತಿಪಾತ್ರರು ಎಂದು ಭಾವಿಸಿದನು. ಈ ಕಾರಣದಿಂದಲೇ ಅವನು ದಯೆಗೆ ಪರವಶನಾದನು ಅದು ವಿಷಾದದಲ್ಲಿ ಪರ್ಯವಸಾನ ಹೊಂದಿತು. ಯಾಕಂದರೆ ಯುದ್ಧವು ಪರಮ ಹಿಂಸೆಯು. ಈ ಯುದ್ಧವು ಅಲ್ಪ ಸುಖವಾದ ರಾಜ್ಯಕ್ಕಾಗಿ ಎಂದು ಮಿಡುಕಿದನು. ಇದೇ ವಿಷಾದವು ರಾಘವೇಂದ್ರರು ವಿಷಾದಲಕ್ಷಣವನ್ನು ಹೀಗೆ ಹೇಳಿದ್ದಾರೆ. **विषादो नाममोहनिमित्तकात् शोकात् यन्मनोदौर्बल्यं यस्मिन् । तस्मिन् सतिसर्वव्यापारोपमो भवति स इति ज्ञेयम्-** ಅಜ್ಞಾನ ನಿಮಿತ್ತಕವಾದ ಶೋಕವೇ; ಈ ಮನೋ ದೌರ್ಬಲ್ಯಕ್ಕೆ ಕಾರಣವು. ಇದರಿಂದ ಮನುಸ್ಸು ಕುಗ್ಗಿತೆಂದರೆ ಮನುಷ್ಯನ ಎಲ್ಲ ಚಟುವಟಿಕೆಗಳು ಸ್ಥಗಿತವಾಗುತ್ತವೆ.

ಈ ವಿಷಾದವು ಬಹಳ ಮಹತ್ವದ್ದು ಆದುದರಿಂದ ಇದಕ್ಕೆ ವಿಷಾದ ಯೋಗವೆಂದು ಕರೆದಿದ್ದಾರೆ. ಈ ಅರ್ಜುನನ ವಿಷಾದದಲ್ಲಿ ಗೀತೋಪದೇಶದ ಬೀಜವದೆ. ಗೀತೋಪದೇಶವನ್ನು ತಿಳಿಯುವದು ಎಷ್ಟು ಮಹತ್ವವೋ ಈ ವಿಷಾದವನ್ನು ತಿಳಿಯುವದು ಅಷ್ಟೇ ಮಹತ್ವದ್ದು ಶ್ರೀ ರಾಘವೇಂದ್ರರು ಇದರ ವಿಶ್ಲೇಷಣೆಯನ್ನು ಮಾಡಿ ಇದರಲ್ಲಿ, ಮೋಹ, ಶೋಕ, ಮನೋದೌರ್ಬಲ್ಯ, ಸರ್ವವ್ಯಾಪಾರ ಉಪರಮವೆಂಬ ನಾಲ್ಕು ಅಂಶಗಳನ್ನು ಕಂಡುಹಿಡಿದಿದ್ದಾರೆ.

ಆಧುನಿಕ ಮಾನಸಶಾಸ್ತ್ರದಲ್ಲಿ ಸಹ ಈ ಮನೋದೌರ್ಬಲ್ಯಕ್ಕೆ ಒಂದಾದ ಕಾರಣವನ್ನು ಮೋಹ (ಅಜ್ಞಾನ) ತಪ್ಪು ತಿಳುವಳಿಕೆ (Delusion) ಎಂದು ಎಣಿಸಿದ್ದಾರೆ ಈ ಮೋಹದಿಂದ ಯುದ್ಧವು ಪಾಪಕರವಾದ ಹಿಂಸೆ ಎಂಬ ಕಲ್ಪನೆಯನ್ನು ತಂದು ಕೊಟ್ಟಿತು. ಆದ್ದರಿಂದ ಅರ್ಜುನನಲ್ಲಿ ಅಂಜಿಕೆ ಹುಟ್ಟಿತು. (Fear) ಅದು ಮನೋದೌರ್ಬಲ್ಯದಲ್ಲಿ (Psycho neurosis) ಪರಿಣಮಿಸಿತು.

ಡಾ. ರಿಳೆಯವರು ತಮ್ಮ ಭಗವದ್ಗೀತಾಯೆಂಬ ಚಿಕ್ಕಹೊತ್ತಿಗೆಯಲ್ಲಿ— The liberated energy of Arjuna's subjcetive conseiousness had not taken the channel it should normally have done, and was manifesting it self in inaction and grief with associated physical symptoms, ಎಂದು ಅರ್ಜುನನ ವಿಷಾದವನ್ನು ವರ್ಣಿಸಿದ್ದಾರೆ. "ಅರ್ಜುನನ ಸುಪ್ತಮನಸ್ಸಿನಲ್ಲಿದ್ದ ಉತ್ಸಾಹವು ಬಿಡುಗಡೆಹೊಂದಿ ಸಾಮಾನ್ಯವಾಗಿ ಹರಿಯಬಹುದಾದ ದಾರಿಯಲ್ಲಿ ಹರಿಯಲಿಲ್ಲ. ಈಗ ಆ ಉತ್ಸಾಹವು ಎಲ್ಲ ವ್ಯಾಪಾರದ ಉಪರತಿಯಲ್ಲಿ ಮತ್ತು ದುಃಖದಲ್ಲಿ ಅದರ ಅನುಚರ ಚಿನ್ಹಗಳೊಡನೆ ಪ್ರಕಟವಾಯಿತು. ಆದುದರಿಂದ ಇದೊಂದು ಮನೋದೌರ್ಬಲ್ಯದ ಪ್ರಕರಣವೆಂದೂ ಶ್ರೀ ಕೃಷ್ಣನು ಈ "ಮನೋದೌರ್ಬಲ್ಯ ರೋಗದ ವಿಜ್ಞಾನಿ"ಯೆಂದೂ ವರ್ಣಿಸಿದ್ದಾರೆ.

ಪ್ರಸಕ್ತವಾದ ಭಾರತ ಯುದ್ಧದಲ್ಲಿ ಭಾಗವಹಿಸುವದು ಅರ್ಜುನನಿಗೆ ಪಾಪವನ್ನು ತರುತ್ತದೆಯೋ ಎಂಬುದನ್ನು ವಿಚಾರಿಸಬೇಕು ಅದಕ್ಕೆ ಅಹಿಂಸಾ ಮೀಮಾಂಸೆ ಮತ್ತು ಅಪರಾಧಶಾಸ್ತ್ರವನ್ನು ಅಭ್ಯಸಿಸಬೇಕು ಅದರ ನಿರ್ಣಯಗಳು ಈ ಪ್ರಶ್ನೆಯನ್ನು ಬಿಡಿಸಲಿಕ್ಕೆ ಸಹಾಯವಾಗುವವು ಅಹಿಂಸೆಯು ಎಷ್ಟರ ಮಟ್ಟಿಗೆ ಸಾಧ್ಯ ? ಅದು ವ್ಯಕ್ತಿಯಲ್ಲಿ ಒಂದು ಗುಣವಾದರೂ ರಾಷ್ಟ್ರದ ಮಟ್ಟದಲ್ಲಿ ದೋಷವೆನಿಸುವದು. ಯಾಕೆಂದರೆ ಯುದ್ಧವನ್ನು ನಮ್ಮ ಮೇಲೆ ಹೇರಿದಾಗ ರಾಷ್ಟ್ರವು ಯುದ್ಧಕ್ಕೆ ಅಣಿಯಾಗಲೇಬೇಕು ಬೇರೆ ಉಪಾಯಗಳಿಗೆ ಬಗ್ಗದ ರಾಷ್ಟ್ರದ್ರೋಹಿಗಳನ್ನು ಅಧಿಕಾರಿಗಳು ದಂಡಿಸಲೇಬೇಕು ಇಡೀ ಜಗತ್ತು ದಂಡದ ಮೇಲೆ ನಿಂತಿದೆ.

**राजदंडभयादेके पापाः पापं न कुर्वते ।**
**यमदंडभायादेके परलोकभयादपि ॥**
**परस्परभयादेके पापाः पापं न कुर्वते ।**
**एवंसांसिद्धिके लोके सर्वं दंडे प्रतिष्ठितं ॥**

"ಕೆಲವರು ರಾಜದಂಡಕ್ಕೆ ಅಂಜಿ ಪಾಪದಿಂದ ನಿವೃತ್ತರಾಗುತ್ತಾರೆ; ಕೆಲವರು ಯಮನ ಶಿಕ್ಷೆಗೆ, ಕೆಲವರು ನರಕದ ಭಯಾನಕ ಯಾತನೆಗೆ, ಕೆಲವರು ಪರಸ್ಪರ ಹೆದರಿಕೆಗೆ ಅಂಜಿ ಪಾಪವನ್ನು ಮಾಡುವದಿಲ್ಲ ಹೀಗೆ ಈ ಜಗತ್ತು ದಂಡದ ಭಯದಿಂದ ನಿಂತಿದೆ " ಆದುದರಿಂದ ದುಷ್ಟರ ನಿಗ್ರಹವು ಒಂದಿಲ್ಲ ಒಂದು ರೂಪದಲ್ಲಿ ಇರದೇ ಜಗತ್ತು ನಡೆಯುವದಿಲ್ಲ.

ಜಗತ್ತಿನಲ್ಲಿ ಎಲ್ಲಿಯವರೆಗೆ ಸಾತ್ವಿಕ ರಾಜಸ ತಾಮಸ ಜನರು ಇರುತ್ತಾರೋ

ಅಲ್ಲಿಯವರೆಗೆ ಒಂದಿಲ್ಲೊಂದು ರೀತಿಯಿಂದ ದುಷ್ಟನಿಗ್ರಹವಿಲ್ಲದ ಜಗತ್ತಿಗೆ ಶಾಂತಿಯು ದೊರೆಯಲಾರದು. ಅರ್ಜುನನ ಮೋಹ ಅಥವಾ ಭ್ರಮೆ ಎಲ್ಲಿ ಅದೆ ? ಮುಂದೆ ನಿಂತವರು ಬರೀ ಆಪ್ತರಲ್ಲ, ಬರೀ ವೈರಿಗಳಲ್ಲ. ಅವರು ಜಗತ್ತಿನ ಶಾಂತಿಯನ್ನು ಭಂಗಮಾಡಿ ಅದನ್ನು ನಾನಾರೀತಿಯಿಂದ ಹಿಂಸೆಗೊಳಿಸುವ ದ್ರೋಹಿಗಳು. ಉಳಿದ ಯಾವ ಉಪಾಯಗಳಿಗೂ ಅವರು ದಾರಿಗೆ ಬಾರದೆ ಇದ್ದುದರಿಂದ ಯುದ್ಧ ಹೂಡ ಬೇಕಾಯಿತು. ಇಂಥ ಯುದ್ಧದಲ್ಲಿ ಭಾಗವಹಿಸುವದು ಕ್ಷತ್ರಿಯಧರ್ಮ. ದುಷ್ಟ ನಿಗ್ರಹ ಅವರ ಕರ್ತವ್ಯ. ಆದುದರಿಂದ ಅರ್ಜುನನ ಕರುಣೆಯು ಅಪಾತ್ರದಲ್ಲಿ ತೋರಿದ್ದು; ಅಕಾಲಿಕವಾದುದು ಆದುದರಿಂದ **कृपया परया** ಅಲ್ಲ. **कृपया अपरया** ಕೀಳಾದ ಕರುಣೆ ಎಂದು ಹೇಳುವದು ಹೆಚ್ಚು ಯೋಗ್ಯ.

ಆದರೆ ಈ ಸಂದರ್ಭದಲ್ಲಿ ಇನ್ನೊಂದು ಮಾತು ಮರೆಯುವಂತಿಲ್ಲ. ಎದರು ನಿಂತವರಿಗೆಲ್ಲ ಯುದ್ಧಬೇಕಾಗಿದೆಯೇ ? ಯುದ್ಧ ಬೇಕಾದದ್ದು ದುರ್ಯೋಧನಾದಿ ಗಳಿಗೆ ಸ್ವಲ್ಪ ಜನರಿಗೆ ಮಾತ್ರ. ಉಳಿದ ಜನರು ದರ್ಯೋಧನಾದಿಗಳ ಋಣದಲ್ಲಿ ಯಾವದೋ ಒಂದು ರೀತಿಯಿಂದ ಬಿದ್ದುದರಿಂದ ಆ ಋಣದ ಹಿಡಿತದಲ್ಲಿ ಸಿಕ್ಕು ಅವನ ಪಕ್ಷ ಅನ್ಯಾಯವೆಂದು ಗೊತ್ತಿದ್ದರೂ ಅವನ ಪಕ್ಷವನ್ನು ವಹಿಸಿದ್ದಾರೆ. ಅರ್ಜುನನ ಕರುಣೆಗೆ ಪಾತ್ರರಾದವರು ಈ ನಿರಪರಾಧಿಗಳು. ದ್ರೋಹಿಗಳಾದ ದುರ್ಯೋಧನಾದಿಗಳ ಕೂಡ ಈ ನಿರಪರಾಧಿಗಳೂ ಸಾಯುತ್ತಾರೆಂದು ಅರ್ಜುನನು ಬಳಲುತ್ತಾನೆ. **ಆದುದರಿಂದ ನಿಂತವರೆಲ್ಲರನ್ನೂ ನಿರಪರಾಧಿಗಳಲ್ಲದವರೆಂದು** ವರ್ಗೀಕರಿಸಿದ್ದಾನೆ.

ಒಂದು ಪ್ರಶ್ನೆ · ಅವರು ಪೂರ್ಣನಿರಪರಾಧಿಗಳೇ ? ಅಲ್ಲ. ಭೀಷ್ಮ–ದ್ರೋಣರು ಬುದ್ಧಿಯುಳ್ಳವರಾದುದರಿಂದ ಪಾಂಡವರನ್ನು ಬಿಟ್ಟು ದುರ್ಯೋಧನನ ಪಕ್ಷವಹಿಸಿ ದ್ದರಿಂದ, ಭಗವಂತನ ಸಂಕಲ್ಪಕ್ಕೆ ಅಡ್ಡಬಂದುದರಿಂದ ದೇವರಿಗೂ ಧರ್ಮಕ್ಕೂ ದ್ರೋಹಿಗಳೇ!! ಅವರು ನಿರಪರಾಧಿಗಳಲ್ಲ. ಆದುದರಿಂದ ಅರ್ಜುನನ ಕೃಪೆಯು ಅಪಾತ್ರದಲ್ಲಿ ಮತ್ತು ಅಕಾಲಿಕವಾದುದು.

ಜ್ಞಾನೇಶ್ವರರು ಅರ್ಜುನನಂಥ ವೀರನು ಕೃಪಾಪರವಶನಾದುದಕ್ಕೆ ಒಂದು ಸೊಗಸಾದ ಉದಾಹರಣೆಯನ್ನು ಕೊಟ್ಟಿದ್ದಾರೆ. ಗುಂಗೀಹುಳವು ತನ್ನ ಹದನವಾದ ಅಸ್ತ್ರದಿಂದ ಕಠಿಣವಾದ ಕಟ್ಟಿಗೆಗೆ ತೂತುಕೊರೆದು ಪಾರಾಗುತ್ತದೆ. ಅಂಥ ಗುಂಗೀ ಹುಳವು ಸಾಯಂಕಾಲದಲ್ಲಿ ಮೃದುವಾದ ಕಮಲದ ಪಕಳಿಗಳಲ್ಲಿ ಸಿಕ್ಕು ಒದ್ದಾಡುತ್ತದೆ. ತನ್ನ ಜೀವ ಹೋದರೂ ಆ ಕೋಮಲವಾದ ಪಕಳಿಗಳನ್ನೂ ಕತ್ತರಿಸುವದಿಲ್ಲ. ಅದರಲ್ಲಿ ಬಂದಿಯಾಗಿ ಬೆಳತನಕ ಬೀಳುತ್ತದೆ. ಮೋಹದಲ್ಲಿ ಸಿಕ್ಕ ಅರ್ಜುನನ ಸ್ಥಿತಿಯೂ ಹೀಗೇ ಆಗಿತ್ತು.

**अर्जुन उवाच –**

**दृष्ट्वेमं स्वजनं कृष्ण युयुत्सुं समुपस्थितं ।**
**सीदंति मम गात्राणि मुखं च परिशुष्यति ॥ २८ ॥**
**वेपथुश्च शरीरे मे रोमहर्षश्च जायते ।**
**गांडीवं स्रवते हस्तात्त्वक् चैव परिदह्यते ॥ २९ ॥**

ಅರ್ಜುನನು ಹೀಗೆ ಹೇಳುತ್ತಾನೆ—

ಶ್ರೀ ಕೃಷ್ಣ ! ಯುದ್ಧಮಾಡಬೇಕೆಂದು ನಿಂತಿರುವ ಈ ನನ್ನವರನ್ನು ನೋಡಿ ನನ್ನ ಶರೀರವು ಶಿಥಿಲವಾಗುತ್ತಿದೆ, ಬಾಯಿ ಒಣಗುತ್ತಿದೆ (೨೮). ನನ್ನ ದೇಹದಲ್ಲಿ ನಡಕು ಹುಟ್ಟುತ್ತಿದೆ ; ಮತ್ತು ರೋಮಾಂಚನವಾಗುತ್ತಿದೆ. ಗಾಂಡೀವಧನುಸ್ಸು ಕೈಯಿಂದ ಜಾರಿ ಬೀಳುತ್ತಿದೆ. ದೇಹದ ಚರ್ಮವು ಸುಡುತ್ತಿದೆ.

**ವಿಶೇಷ ಟಿಪ್ಪಣಿಗಳು—**

ಇದೊಂದು ಹೃದಯ ದೌರ್ಬಲ್ಯದ ಉದಾಹರಣೆಯು ಯುದ್ಧೋನ್ಮಾದದಲ್ಲಿದ್ದ ಅರ್ಜುನ ಒಮ್ಮೆಂದೊಮ್ಮೆ ಪರಿಸ್ಥಿತಿಯ ಭಾರಕ್ಕೆ ಕುಸಿಯುತ್ತಾನೆ. ೧) ಪರಿಸರವನ್ನು ಅರ್ಥೈಸುವದರಲ್ಲಿ ಅವನ ಮನೋದೌರ್ಬಲ್ಯ ಪ್ರಕಟವಾಗುತ್ತದೆ. ೨) ಅಸಂತೃಪ್ತಿಯು ಮನಸಿನಲ್ಲಿ ಪ್ರಬಲವಾಗುತ್ತದೆ. ೩) ಮನಸು ಬರಬರುತ್ತಾ ವಾಸ್ತವತೆಯಿಂದ ದೂರಾಗುತ್ತದೆ. ೪) ಈ ಮನಸ್ಥಿತಿಯು ವಿಚಿತ್ರ ನೋವನ್ನು ಉಂಟುಮಾಡುತ್ತಿದ್ದರೂ ಯಾವದೋ ವಿಧದಿಂದ ಕಾಲ್ಪನಿಕ ಚಿಂತೆಯನ್ನು ಕಡಿಮೆ ಮಾಡುತ್ತಿದೆ ೫) ತಾನು ಎಲ್ಲಿಯೋ ಮೋಸ ಹೋಗಿ ತಪ್ಪು ತಿಳುವಳಿಕೆಯಿಂದ ಅನರ್ಥಕ್ಕೆ ಗುರಿಯಾಗುತ್ತಿದ್ದೇನೆಂಬ ಭಾವನೆ ಬಲವತ್ತರವಾಗಿ ಬೆಳೆಯುತ್ತಾ ಹೋಗುತ್ತದೆ. ೬) ಪಾಶ್ಚಾತ್ಯ ಮನೋವಿಜ್ಞಾನಿಗಳಲ್ಲಿ ಮನೋವಿಶ್ಲೇಷಣವಾದಿಗಳು ಮನಸಿನ ಎರಡು ಥರಗಳನ್ನು ಒಪ್ಪುತ್ತಾರೆ. ಒಂದು ಬೋಧ ಮನಸು, ಇನ್ನೊಂದು ಅಬೋಧ ಮನಸು. ಅತಿ ನಿಗ್ರಹದಿಂದ ಅಬೋಧ ಮನಸಿನಲ್ಲಿದ್ದ ವಿಕೃತಿಗಳು ಬೋಧಮನಸಿನಗೂಡ ಹೋರಾಟವನ್ನೆಬ್ಬಿಸುತ್ತವೆ ಅಬೋಧದಲ್ಲಿರುವ ಈ ವಿಕೃತಿಗಳಿಗೆ ದೈತ್ಯಾಕಾರದ ಶಕ್ತಿ ಬಂದಿರುತ್ತದೆ. ೭) ಅವಕಾಶ ಸಿಕ್ಕಾಗ ಹೊರಬಿದ್ದ ಈ ಶಕ್ತಿಯು ಯುದ್ಧ ಪ್ರೇರಣೆಯನ್ನು ಬಿಟ್ಟು ಅದಕ್ಕೆ ವಿರುದ್ಧವಾಗಿ ಮನಸ್ಸನ್ನು ವಿಷಾದದಲ್ಲಿ ಕೆಡವಿ ವೀರಾಧಿವೀರನಾದ ಅರ್ಜುನನನ್ನು ಹಣ್ಣುಹಣ್ಣು ನೀರುನೀರುಮಾಡಿ ಬಿಡುತ್ತದೆ. ೮) ಯುದ್ಧ ಬೇಡವೆಂಬ ವಿಪರೀತ ಸಂಕಲ್ಪ ದೃಢವಾಗುತ್ತದೆ ಈ ಸಂಕಲ್ಪವನ್ನು ಬದಲಾಯಿಸಲಿಕ್ಕೆ ಎಂದೂ ಒಪ್ಪುವದಿಲ್ಲ.

ಇದಕ್ಕೆ ಹೃದಯ ದೌರ್ಬಲ್ಯವೆಂದು ಹೆಸರು ಇದು ಸೌಮ್ಯವಾದ ಮನೋರೋಗ (Noaurosis). ಇದರ ಮುಂದಿನ ಹೆಜ್ಜೆಯೇ (Poyehosis) ಹುಚ್ಚು. ಈ ಹೃದಯ ದೌರ್ಬಲ್ಯದ ಮೂಲಕಾರಣ ಆತ್ಮಾನ್ವೇಷಣೆಯನಕ್ಕೆ ಸಾಕಷ್ಟು ಅವಕಾಶ ಸಿಕ್ಕದಿರುವದು ಯಾವಾಗ ಆತ್ಮಾನುಭವಕ್ಕೆ ತಕ್ಕ ಆದರ್ಶವು ಹಸ್ತಗತವಾಗುವದರ ದ್ವಾರದಿಂದ, ಅವಕಾಶ ದೊರೆಯುವದರಿಂದ ಈ ದೌರ್ಬಲ್ಯವು ದೂರಾಗುವದು ಅರ್ಜುನನು ತನ್ನ ಪುರುಷಾರ್ಥವನ್ನು ಕಳೆದುಕೊಂಡು ಪಾಪದಲ್ಲಿ ಬೀಳುತ್ತೇನೆಂದು ಹೆದರಿದಾಗ ಶ್ರೀ ಕೃಷ್ಣನು ಅರ್ಜುನನ ಆದರ್ಶವನ್ನು ಅನುಭವಕ್ಕೆ ತಂದು ಅವನ ಆತ್ಮೋದ್ಧಾರಕ್ಕೆ ಸಹಾಯ ಮಾಡುತ್ತಾನೆ.

ಎರಡು ಮನಸಿನ ಕಲ್ಪನೆಯನ್ನು ಬಿಟ್ಟರೆ ಹೃದಯ ದೌರ್ಬಲ್ಯದ ಚರಿತ್ರೆಯು ಈ ಅಧ್ಯಾಯದಲ್ಲಿ ಹೃದಯಂಗಮವಾಗಿ ವರ್ಣಿತವಾಗಿದೆ

ತಾನು ತಪ್ಪುದಾರಿಯನ್ನು ಹಿಡಿದಿದ್ದೇನೆಂಬ ಚಿಂತೆ ಮನಸನ್ನು ಆವರಿಸಿ ಎಲ್ಲಿಗೋ ಅನರ್ಥಕ್ಕೆ ತಾನು ಹೋಗುತ್ತಿದ್ದೇನೆಂಬ ಭಾವನೆಯು ಗಟ್ಟಿಯಾಗಿ ದೈಹಿಕ ಪರಿಣಾಮಗಳಲ್ಲಿ ಅದು ಪ್ರಕಟವಾಗುತ್ತದೆ ಮೈನಡಕು, ಕಣ್ಣುಕತ್ತಲೆಗೂಡುವದು, ಕೂದಲು ನೆಟ್ಟಗೆ ನಿಲ್ಲುವದು ಮೊದಲಾದವುಗಳಿಂದ ಪ್ರಾರಂಭವಾಗಿ ದೇಹದ ಮೇಲಿನ ನಿಯಂತ್ರಣವೇ ತಪ್ಪಿಹೋಗುತ್ತದೆ ಹೃದಯ ಬಡಿತ ಜೋರಾಗಿ ಉಸುರಾಡಿಸುವದೂ ಕಷ್ಟವಾಗುತ್ತದೆ.

ಹೆಚ್ಚಿನ ಸಂಸ್ಕೃತಿಯುಳ್ಳ ಅರ್ಜುನನಿಗೆ ಎಲ್ಲ ವಿಕಾರಗಳೂ ಹೆಚ್ಚಿನ ತರಗತಿಯಲ್ಲಿ ನಡೆಯುತ್ತಿವೆ.

ಈ ಅಂಜಿಕೆ ಈ ಚಿಂತೆ ಈ ಪ್ರವೃತ್ತಿಗಳ ಹೋರಾಟದಲ್ಲಿ ಮನುಷ್ಯನು ಇವುಗಳನ್ನು ಹೊರಗಿನ ಪರಿಸರಕ್ಕೆ ಅನ್ವಯಿಸುತ್ತಾನೆ. ಇದಕ್ಕೆ (Phobic reactions) ಭಯವಿಪರಿಣಾಮವೆಂದು ಹೆಸರು. ಅರ್ಜುನನು ತನ್ನ ಪಾಪ ಭಯದಿಂದ ಪ್ರೇರಿತನಾಗಿ ಯುದ್ಧಬೇಡವೆಂಬ ವಿರಕ್ತಿಯಲ್ಲಿ (Renunciation) ಇಳಿಯುತ್ತಾನೆ. ಕೊನಗೆ ಅದು ಅವಿಚಾರಪೂರಿತ ಹಟವಾದದಲ್ಲಿ ಪರಿಣಮಿಸುತ್ತಿದೆ (Obsession).

ಈ ಹೃದಯ ದೌರ್ಬಲ್ಯ ಅಥವಾ ನಸವಿಕೃತಿ (Neuroses) ಯನ್ನು ಪ್ರಾಚೀನರು ಚನ್ನಾಗಿ ಬಲ್ಲರೆಂಬುದು ಅರ್ಜುನನ ವರ್ಣನೆಯಿಂದ ಸಿದ್ಧವಾಗುತ್ತದೆ. ( नसा ಎಂದರೆ ಸಂಸ್ಕೃತದಲ್ಲಿ ನಾಡಿಯೆಂದು ಅರ್ಥವಾಗುತ್ತದೆ).

ಇಂಥ ಶಾರೀರಿಕ ಪರಿವರ್ತನೆಗಳು ಉನ್ನತವಾದ ಆಧ್ಯಾತ್ಮಿಕ ಸ್ಥಿತಿಯಲ್ಲಿಯೂ ಜರಗುತ್ತವೆಂದು ಹೇಳುತ್ತಾರೆ. ಆದರೆ ಅರ್ಜುನನಿಗೆ ಬಂದ ಈ ಸ್ಥಿತಿಯು ಆಧ್ಯಾ

ತ್ಮಿಕ ಉನ್ನತ ಸ್ಥಿತಿಯ ನಿಮಿತ್ತಕವಾಗಿ ಬಂದದು ಅಲ್ಲ ಇದು ಹೃದಯ ದೌರ್ಬಲ್ಯ ಅಥವಾ ನಸವಿಕೃತಿಯಿಂದ ತೋರಿದದು. ಇದು ಮನಸ್ಸಿನ ಹೀನಸ್ಥಿತಿಯಿಂದ ಬಂದ ಪ್ರಸಂಗವು

**ಗಾಂಡೀವ: –** ಇದು ಅರ್ಜುನನ ದಿವ್ಯವಾದ ಧನುಷ್ಯವು. ಇದನ್ನು ಅಗ್ನಿಯು ಅವನಿಗೆ ಕೊಟ್ಟಿದ್ದನು. ಇದರಿಂದ ಏಕ ಕಾಲಕ್ಕೆ ಎಂಟು ಅಸ್ತ್ರಗಳನ್ನು ಬಿಡಲಿಕ್ಕೆ ಬರುತ್ತಿತ್ತೆಂದು ಹೇಳುತ್ತಾರೆ ಉದ್ಯೋಗಪರ್ವದ ೯೫ ನೆ ಅಧ್ಯಾಯದಲ್ಲಿ ಈ ಗಾಂಡೀವದ ಗೂಢ ಮಹಾತ್ಮೆಯನ್ನು ವರ್ಣಿಸಿದ್ದಾರೆ. ಈ ಎಂಟು ಅಸ್ತ್ರಗಳೆಂದರೆ ಮನುಷ್ಯನನ್ನು ಮನೋವಿಕಾರಕ್ಕೆ ಎಳೆಯುವ ಅರಿವರ್ಗಗಳು. ಕಾಮ, ಕ್ರೋಧ, ಲೋಭ, ಮೋಹ, ಮದ, ಅಹಂಕಾರ, ಅಸೂಯೆ ಮತ್ತು ಸ್ವಾರ್ಥತೆ ಇವೇ ಆ ಅಸ್ತ್ರಗಳು ಜಮದಗ್ನಿಯು, ದುರ್ಯೋಧನನಿಗೆ ನಾರಾಯಣನ ಆಶ್ರಯದಲ್ಲಿದ್ದ ನರನು ಈ ಅಸ್ತ್ರಗಳನ್ನು ಎಸೆದನೆಂದು ಹೇಳುತ್ತಾನೆ. ಇದರಿಂದ ಮನೋವಿಕಾರಗಳಿಗೆ ಸಿಕ್ಕ ಮನುಷ್ಯನು ಹೇಗೆ ಘಾಸಿಯಾಗುತ್ತಾನೆಂದು ಸ್ಪಷ್ಟವಾಗುತ್ತದೆ. ಆದುದರಿಂದ ಅರ್ಜುನನು ತಾನೇ ರಾಗದ್ವೇಷಗಳಿಗೆ ಒಳಗಾಗಿದ್ದರಿಂದ ಆ ಗಾಂಡೀವವು ಅವನ ಕೈಯೊಳಗಿಂದ ಕೆಳಗೆ ಬಿತ್ತು. ಆ ಮನೋವಿಕಾರಗಳನ್ನು ಗೆದ್ದು ದೃಢಮನಸ್ಸಿನವನಾದಾಗ ಅವನು ಗಾಂಡೀವ ಧನುಸ್ಸನ್ನು ಉಪಯೋಗಿಸಬಲ್ಲನು. **(कामक्रोधौ लोभमोहौ मदमानौ तथैवच । मात्सर्याहंकृती चैव क्रमादेते उदाहृता:) उद्योग–९५.**

**न च शक्नोम्यवस्थातुं भ्रमतीव च मे मन: ॥ ३० ॥**
**निमित्तानि च पश्यामि विपरीतानि केशव ।**
**न च श्रेयोनुपश्यामि हत्वा स्वजनमाहवे ॥ ३१ ॥**

ನನ್ನ ಮನಸ್ಸಾದರೂ ಭ್ರಮದಿಂದ ತಿರುಗುತ್ತಿದೆ ಆದುದರಿಂದ ನಿಲ್ಲುವದಕ್ಕೆ ಸಮರ್ಥನಾಗುವದಿಲ್ಲ (೩೦). ಎಲೈ ಶ್ರೀಕೃಷ್ಣನೇ ! ಅನಿಷ್ಟ ಸೂಚಕಗಳಾದ ಶಕುನಗಳನ್ನು ನೋಡುತ್ತೇನೆ. ಯುದ್ಧದಲ್ಲಿ ಬಾಂಧವರನ್ನು ಕೊಂದು ಶ್ರೇಯಸ್ಸನ್ನಾದರೂ ನಾನು ಕಾಣುವದಿಲ್ಲ (೩೧).

**ವಿಶೇಷ ಟಿಪ್ಪಣಿಗಳು :**

**भ्रमति इव मे मन –** (೧) ಮನಸ್ಸಿನಲ್ಲಿ ದೊಡ್ಡ ಗೊಂದಲವೆದ್ದಿತು. ಇದು ಹೆದರಿಕೆಯಿಂದ ಎದ್ದುದಲ್ಲ. ಇದು ಕೃಪಾಪಾರವಶ್ಯದಿಂದ ಹುಟ್ಟಿದ ಮನಸ್ಸಿನ ಗ್ಲಾನಿ ಇದರಿಂದ ಮನಸ್ಸು ವಿವೇಕ ಶಕ್ತಿಯನ್ನು ಕಳೆದುಕೊಳ್ಳುತ್ತದೆ. (೨) ರಾಘ

ವೇಂದ್ರರು— ಮವಸ್ಸು ಕೊಲ್ಲಲ್ಪಡಲಿಕ್ಕೆ ಯೋಗ್ಯವಾದವರನ್ನು **(वध्य)** ಕೊಲ್ಲಲ್ಪಡಲಿಕ್ಕೆ ಯೋಗ್ಯವಲ್ಲದವರೆಂದು ತಿಳಿಯುತ್ತಿದೆ. **(अवध्य)** ಅವರು **इव** ದಿಂದ ಈ ಅರ್ಥವನ್ನು ಕಾಣುತ್ತಾರೆ **(संशये सदृशे तथा । इवशब्दः)**

**निमित्तानि** ಅರ್ಜುನನು ಅನೇಕ ಅಶುಭವಾದ ಅಪಶಕುನಗಳನ್ನು ಕಂಡನು. ಭೀಷ್ಮಪರ್ವದ ಪ್ರಾರಂಭದಲ್ಲಿ ಕೆಲವು ಅಪಶಕುನಗಳನ್ನು ವರ್ಣಿಸಿದ್ದಾರೆ. "ಏಳು ಗ್ರಹಗಳು ಆಕಾಶದಿಂದ ಕೆಳಕ್ಕೆ ಬಿದ್ದವು ಸೂರ್ಯನು ಉದಯಿಸಿದಾಗ ಇಬ್ಬರು ಉದಯಿಸಿದಂತೆ ಕಂಡನು. ಅವನು ಅಗ್ನಿಜ್ವಾಲೆಗಳನ್ನು ಹೊರಚಿಮ್ಮುತ್ತಿದ್ದನು. ನರಿಗಳು **ಕಾಗೆಗಳು** ಹಗಲಿನಲ್ಲಿಯೇ ಕೂಗುತ್ತಿದ್ದವು. ಮತ್ತು ಬೇಗನೇ ಮಾಂಸ ತಿನ್ನುವ ಆಶೆಯಿಂದ ತಮ್ಮ ದೇಹಗಳನ್ನು ನೆಕ್ಕುತ್ತಿದ್ದವು." ಈ ಅಪಶಕುನಗಳು ಕೌರವರಿಗಿದ್ದರೂ ಅರ್ಜುನನು ಇವು ತನಗೆ ಎಂದು ಭಾವಿಸಿದನು. **पश्यामि** ಅರ್ಜುನನು ತಾನು ಅನುಭವಿಸಿದಂತೆ ಹೇಳುತ್ತಾನೆ. ಎಡಗಣ್ಣು ಹಾರುವದು ಮೊದಲಾದವು ಜನಸಾಮಾನ್ಯರಿಗೆ ಅಪಶಕುನವಾದರೂ ಅರ್ಜುನನಿಗೆ ಅವು ಅಪಶಕುನಗಳಲ್ಲ. ಯಾಕೆಂದರೆ ಅವನು ಸವ್ಯಸಾಚಿಯಾದುದರಿಂದ ಅವನಿಗೆ ಎಡಬಲ ಅನ್ವಯಿಸುವದಿಲ್ಲ ಆದರೆ ರಾಘವೇಂದ್ರರು ಹೇಳಿದಂತೆ— **(ममतासुरवेगवशात्)** 'ನನ್ನವರು' ಎಂಬ ಅಸುರಾವೇಶವು ಸೇರಿದ್ದರಿಂದ ಶುಭಚಿನ್ಹಗಳು ಸಹ ಅಶುಭಚಿನ್ಹಗಳಾಗಿ ತೋರಿದವು. **आहवे** – ಯುದ್ಧದಲ್ಲಿ ಎದುರು ಬಂದವರನ್ನು ಕೊಲ್ಲುವದು ಕ್ಷತ್ರಿಯ ನೀತಿಯಲ್ಲಿ ಪಾಪವೆನಿಸುವದಿಲ್ಲ. ಅರ್ಜುನನಿಗೆ ಇಂಥ ಯುದ್ಧದಲ್ಲಿಯೂ ಬಾಂಧವರನ್ನು ಕೊಲ್ಲುವದರಿಂದ ಒಳಿತಾಗುವದಿಲ್ಲೆಂದು ಎನಿಸಿದೆ.

**केशव** – ರಾಘವೇಂದ್ರರು ಇದರ ಯೌಗಿಕ ಅರ್ಥಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ. " **हिरण्यगर्भः कः प्रोक्तः ईशः शंकर एव च । सृष्ट्यादिना वर्तयति तौ यतः केशवो भवान्** " 'ಕ' ಎಂದರೆ ಬ್ರಹ್ಮನು. 'ಈಶ' ಎಂದರೆ ಶಂಕರನು. ಇವರಿಬ್ಬರನ್ನು ಸೃಷ್ಟಿಕಾರ್ಯದಲ್ಲಿ **वर्तयति** ಪ್ರೇರಿಸುವವನು ವಿಷ್ಣುವು. ಮತ್ತೆ ಕೆಲವರು ಒಳ್ಳೇ ಕೂದಲಗಳುಳ್ಳವನೆಂದೂ ಇನ್ನೊಬ್ಬರು ಕೇಶಿ ಎಂಬ ದೈತ್ಯನ ಸಂಹಾರಕನೆಂದೂ ಹೇಳುತ್ತಾರೆ.

**श्रेयः** ಒಳಿತು. ಆದರೆ ಪಾರಿಭಾಷಿಕವಾಗಿ ಶ್ರೇಯಸ್ಸು ಪಾರಲೌಕಿಕವಾದುದು. **प्रेयः** ಇದು ಈ ಲೋಕದ ಸುಖಕ್ಕೆ ಸಂಬಂಧಪಟ್ಟದ್ದು. ಈ ಶ್ಲೋಕದಲ್ಲಿ ಶ್ರೇಯಸ್ಸಿಗೆ ಸಾಮಾನ್ಯವಾದ 'ಕಲ್ಯಾಣ' ಅಥವಾ 'ಒಳಿತು' ಎಂದು ಬಹುಜನರು ಅರ್ಥ ಬರೆದಿದ್ದಾರೆ. ಒಬ್ಬ ಟೀಕಾಕಾರರು **श्रेयः ऐहलौकिकं पारलौकिकं वा**

ಎರಡೂ ಅರ್ಥವನ್ನು ಸೂಚಿಸಿದ್ದಾರೆ. ಅದು ಸಾಮಾನ್ಯವಾದ ಹಿತದಲ್ಲಿಯೇ ಪರ್ಯವಸಾನ ಹೊಂದುತ್ತದೆ. ಒಬ್ಬರು ಮಾತ್ರ (ಸೋಮನಾಥಾನಂದರು) ಶ್ರೇಯಸ್ಸಿಗೆ ಪಾರಲೌಕಿಕ ಸುಖ, ಕಷ್ಟಸಾಧ್ಯವಾದ ಸುಖ ಎಂದು ಅದರ ಭಾಷಿಕ ಅರ್ಥವನ್ನೇ ಸ್ವೀಕರಿಸಿದ್ದಾರೆ. ಧರ್ಮಕ್ಕಾಗಿ ಕರ್ತವ್ಯಕ್ಕಾಗಿ ಬಂಧುಗಳೊಡನಾದರೂ ಯುದ್ಧಮಾಡುವದು ಶ್ರೇಯಸ್ಸಿನ ದೃಷ್ಟಿಯೆಂದು ಹೇಳುತ್ತಾರೆ. ಯುದ್ಧವನ್ನು ಬಿಡುವದು ಸುಲಭ; ಅದು ಶ್ರೇಯಸ್ಸಿನ ದೃಷ್ಟಿ. ಮೊದಲು ಸುಖ; ಆದರೆ ಪರಿಣಾಮದಲ್ಲಿ ಕಷ್ಟವೆಂದು ಹೇಳಿದ್ದಾರೆ.

**न कांक्षे विजयं कृष्ण न च राज्यं सुखानि च ।**
**किं नो राज्येन गोविंद किं भोगैर्जीवितेन वा ।। ३२ ।।**
**येषामर्थे कांक्षितं नो राज्यं भोगा सुखानि च ।**
**ते इशमेऽवस्थिता युद्धे प्राणांस्त्यक्त्वा धनानि च ।।३३।।**

ಎಲೈ ಕೃಷ್ಣನೇ ! ನಾನು ಜಯವನ್ನು ಇಚ್ಛಿಸುವದಿಲ್ಲ. ರಾಜ್ಯವನ್ನೂ ಸುಖಗಳನ್ನೂ ಕೂಡ ಇಚ್ಛಿಸುವದಿಲ್ಲ. ಎಲೈ ಗೋವಿಂದನೇ ! ನಮಗೆ ರಾಜ್ಯದಿಂದ ಏನು ಪ್ರಯೋಜನ ? ಭೋಗಗಳಿಂದ ಬದುಕುವದರಿಂದ ಕೂಡ ಏನು ಪ್ರಯೋಜನ ? ॥ ೩೨ ॥ ನಮಗೆ ರಾಜ್ಯವು ಭೋಗಗಳು ಸುಖಗಳು ಕೂಡ ಯಾರ ಸಲುವಾಗಿ ಅಪೇಕ್ಷಿತವಾಗಬಹುದೋ ಆ ಎಲ್ಲ ಬಂಧುಗಳು ಜೀವದಾಸೆಯನ್ನು ತೊರೆದು ದ್ರವ್ಯವನ್ನು ಕೂಡಾ ಬಿಟ್ಟು ಈ ಯುದ್ಧದಲ್ಲಿ ನಿಂತಿದ್ದಾರೆ (೩೩).

## ವಿಶೇಷ ಟಿಪ್ಪಣಿಗಳು

**येषामर्थे कांक्षितन्नो** ಎಂಬ ಚರಣದ ಅರ್ಥದ ಮೇಲೆ ಕೆಲವರು ಆಕ್ಷೇಪವನ್ನು ಎತ್ತಿದ್ದಾರೆ. ಅವರು ಈ ಚರಣಕ್ಕೆ ಹೀಗೆ ಅರ್ಥ ಮಾಡಿದ್ದಾರೆ— "ಯಾರು ಉಪಭೋಗವನ್ನು ತೆಗೆದುಕೊಳ್ಳಬೇಕೆಂದು ನಾವು ರಾಜ್ಯಭೋಗವನ್ನೂ ಸುಖೋಪಭೋಗವನ್ನೂ ಸಂಪಾದಿಸುತ್ತೇವೋ" ಆದರೆ ಅರ್ಜುನನ ಎದುರಿಗೆ ನಿಂತ ಯೋಧರಲ್ಲಿ ಇಂಥವರು ಯಾರೂ ಇಲ್ಲ. ಅವರು ರಾಜ್ಯಸುಖ ಅನುಭವಿಸಬೇಕೆಂದು ಅರ್ಜುನನು ರಾಜ್ಯವನ್ನು ಸಂಪಾದಿಸಲಿಕ್ಕೆ ಹೊರಟಿಲ್ಲ. ಆದುದರಿಂದ ಆ ಚರಣದ ಅರ್ಥವನ್ನು ಹೀಗೆ ಮಾಡಬೇಕು— "ಯಾರು ನೋಡಿ ಆಶ್ಚರ್ಯಪಡಬೇಕೆಂದು ನಾವು ರಾಜ್ಯ ಮೊದಲಾದ ಸುಖಸಾಧನಗಳನ್ನು ಸಂಪಾದಿಸುತ್ತೇವೋ" ಆದರೆ ಸಾಮಾನ್ಯವಾಗಿ ಎಲ್ಲರೂ 'ಯಾರ ಸಲುವಾಗಿ' ಎಂದೇ ಮಾಡಿದ್ದಾರೆ. ಇದರ ಅರ್ಥ ಅವರು ಉಪಭೋಗಿಸುತ್ತಾರೆಂದಲ್ಲ; ಅವರು ಇರುವದರಿಂದ ನಮಗೆ ಸುಖವೆನಿಸುತ್ತದೆ ಎಂದೇ ಅರ್ಥ. ಆದರೆ ಶಂಕರಾನಂದರು **एतेन अधर्मप्राप्तं ऐहिकसुखं**

**अस्माकं मास्तु इत्युक्तं भवति.** "ಅಧರ್ಮದಿಂದ ಬಂದ ಐಹಿಕ ಸುಖವು ನಮಗೆ ಬೇಡ ಎಂದು ಇದರಿಂದ ಹೇಳಿದಂತೆ ಆಗುತ್ತದೆ." ಆದರೆ ಇದರಿಂದ ಅರ್ಜುನನು ಐಹಿಕ ಸುಖವು ಅಧರ್ಮದಿಂದಲೇ ದೊರೆಯುತ್ತಿದೆಂದು ಹೊರಟಿದ್ದಾನೆಂದು ಶಂಕರಾನಂದರು ಹೇಳುತ್ತಾರೆಂಬ ಈ ಮಾತು ಸರಿಯಲ್ಲ. Padmanabhachar—"According to him (Shankarananda) Arjuna proceeds as if on the established position that Kingdom pleasures and life itself will if earned at all be ill-gotten acquisitions secured by and through breach of Dharma" ಆದುದರಿಂದ ಧರ್ಮವನ್ನು ಕಳೆದುಕೊಂಡು ಇವುಗಳನ್ನು ಏಕೆ ಸಂಪಾದಿಸಬೇಕೆಂದು ಅರ್ಜುನನು ಪ್ರಶ್ನಿಸುತ್ತಾನೆ. ಧರ್ಮ ಅಧರ್ಮಗಳೆರಡರಿಂದಲೂ ಐಹಿಕ ಸುಖ ದೊರೆತರೂ ಅಧರ್ಮದಿಂದ ದೊರಕಿಸಿದ ಐಹಿಕ ಸುಖ ಬೇಡವೆನ್ನುವದು ಅರ್ಜುನನ ಮತವೆಂದು ಶಂಕರಾನಂದರ ಅಭಿಪ್ರಾಯ ವಿದ್ದಂತೆ ತೋರುತ್ತದೆ.

ಆದರೆ ಈ ಯುದ್ಧವು ಅಧರ್ಮಕ್ಕೆ ಕಾರಣವಾದರೂ ಸಹ ಈ ಯುದ್ಧವನ್ನು ಮಾಡಬಹುದು. ಯಾಕೆಂದರೆ ಮನು ತನ್ನ ಸ್ಮೃತಿಯಲ್ಲಿ ಹೇಳುತ್ತಾನೆ—**"अप्यकार्यशतं कृत्वा भर्तव्या मनुरब्रवीत्"** ಪಿತೃಗಳ ಪಾಲನಕ್ಕಾಗಿ ಇಂಥ ನೂರು ಅಧರ್ಮಗಳನ್ನು ಮಾಡಿದರೂ ಅಡ್ಡಿಯಿಲ್ಲ ಎಂದು ಮನು ಹೇಳುತ್ತಾನೆ. ಅದಕ್ಕೆ ಅರ್ಜುನನ ಉತ್ತರವೆಂದರೆ ಇಂಥ ಗುರುಹಿರಿಯರನ್ನೇ ನಾವು ಸಂಹಾರಮಾಡಲಿಕ್ಕೆ ನಿಂತಿದ್ದೇವೆ ಆದುದರಿಂದ ಅಧರ್ಮದಿಂದ ಯುದ್ಧವನ್ನೇಕೆ ಮಾಡಬೇಕೆಂಬುದೇ ಅರ್ಜುನನ ಪ್ರಶ್ನೆ.

ಮೇಲಾಗಿ ಈ ಯುದ್ಧದಿಂದ ಏನೂ ಪ್ರಯೋಜನವಿಲ್ಲವೆಂದು ಅರ್ಜುನನ ಮತ. ಯಾಕೆಂದರೆ ಯುದ್ಧಮಾಡುವದು ಧರ್ಮವಾಗಲಿ ಅಧರ್ಮವಾಗಲಿ ಅದರ ಉದ್ದೇಶವು. ಜಯಸಂಪಾದಿಸಿ ರಾಜ್ಯವನ್ನೂ ದೊರಕಿಸುವದು. ಅದರಿಂದ ಸುಖಕರವಾದ ಜೀವನ. ಆದರೆ ಜೀವನದ ಸುಖವು ಸವಿಯಾಗಲಿಕ್ಕೆ ದುಃಖವು ಕಡಿಮೆಯಾಗಲಿಕ್ಕೆ ಜೊತೆಗೆ ಬಂಧು–ಬಾಂಧವರು ಬೇಕು. ಏಕಾಂಗಿಯಾಗಿ ಇದ್ದವನಿಗೆ ಇವೆಲ್ಲ ಏನು ಪ್ರಯೋಜನಕಾರಿಯಾಗುತ್ತವೆ ? ಇದರಿಂದ ಅರ್ಜುನನು ತೆಗೆದ ನಿರ್ಣಯವೆಂದರೆ ಈ ಯುದ್ಧದಿಂದ ಏನೂ ಪ್ರಯೋಜನವಿಲ್ಲ.

ವಿಜಯಿಯಾಗುವ ಅರ್ಜುನನ ದೃಷ್ಟಿಯಿಂದಲೂ ಯುದ್ಧವು ಲಾಭದಾಯಕವಲ್ಲ. ಯಾಕೆಂದರೆ ವಿಜಯಗಳಿಸಿದ ಸುಖವನ್ನು ಉಣ್ಣಲಿಕ್ಕೆ ಸ್ವಜನರು ಇಲ್ಲದಿದ್ದರೆ ಆ ಸುಖಕ್ಕೆ ಸವಿಯೆಲ್ಲಿಂದ ಬರುವದು ?

**किं नो राज्येन गोविंद** – "ನನಗೆ ರಾಜ್ಯವೂ ಬೇಡ, ಸುಖಗಳೂ ಬೇಡ ಜೀವನವಲ್ಲಿಯೇ ಏನು ಪ್ರಯೋಜನವಿದೆ ?" ಈ ಅರ್ಜುನನ ಮಾತು ಜೀವನದಲ್ಲಿ ವಿರಕ್ತಿ ಹುಟ್ಟಿದಂತೆ ತೋರಿಸುತ್ತದೆ. ಆದರೆ ಇದು ನಿಜವಾದ ವಿರಕ್ತಿಯೇ ? ಇದು ನಿಜವಾದ ವಿರಕ್ತಿಯಲ್ಲವೆನ್ನುವದಕ್ಕೆ ಮುಂದೆ ಅನೇಕ ಕಾರಣಗಳನ್ನು ತೋರಿಸುತ್ತಾರೆ ಇದು ಮೋಹದಿಂದ ಬಂದ ವಿರಕ್ತಿಯು ಆದುದರಿಂದ ಶ್ರೀಕೃಷ್ಣನು ಈ ಮೋಹವನ್ನು ದೂರ ಸರಿಸಲಿಕ್ಕೆ ಇಡೀ ಗೀತೆಯಲ್ಲಿ ಯತ್ನಿಸುತ್ತಾನೆ. ತನ್ನ ಕರ್ತವ್ಯವನ್ನು ಅರ್ಜುನನು ಮರೆತುದರಿಂದ ಅವನಿಗೆ ಈ ಯುದ್ಧ ಅಕರ್ತವ್ಯವಾಗಿ ಪಾಪಕರವಾಗಿ ತೋರುತ್ತದೆ.

**गोविंद.** ಮಧುಸೂದನ ಸರಸ್ವತಿಯವರು **गोविंद** ಶಬ್ದದ ವ್ಯುತ್ಪತ್ತಿಯನ್ನು ಹೀಗೆ ಕೊಡುತ್ತಾರೆ. **गोशब्दवाच्यानि इंद्रियाणि अधिष्ठानतया नित्यं प्राप्तः** ನಿತ್ಯದಲ್ಲಿ ಇಂದ್ರಿಯಗಳಿಗೆ ಗೋಚರನಾದವನು ಪ್ರಭುಪಾದರು Bhagavadgita as it is ದಲ್ಲಿ ಇಂದ್ರಿಯಗಳನ್ನೂ ಆಕಳುಗಳನ್ನೂ ತೃಪ್ತಿಪಡಿಸುವವನು ಎಂದು ಅರ್ಥ ಮಾಡುತ್ತಾರೆ ಮುಂದೆ ಈ ವಿಷಯದಲ್ಲಿ ಹೀಗೆ ಬರೆಯುತ್ತಾರೆ—"ಗೋವಿಂದನಿಗೆ ನಮ್ಮ ಇಂದ್ರಿಯಗಳನ್ನು ಸಂತೋಷಗೊಳಿಸುವ ಉದ್ದೇಶವಿಲ್ಲ. ಆದರೆ ನಾವು ಗೋವಿಂದನ ಇಂದ್ರಿಯಗಳನ್ನು ಸಂತೋಷಗೊಳಿಸಿದರೆ ನಮ್ಮ ಇಂದ್ರಿಯಗಳು ತಾವಾಗಿಯೇ ಸಂತೋಷ ಹೊಂದುತ್ತವೆ. ನಾವು ಬೇಡಿದ್ದನ್ನೆಲ್ಲ ಪರಮಾತ್ಮನು ನಮಗೆ ಕೊಟ್ಟು ನಮ್ಮನ್ನು ಸಂತೋಷಿಸಬೇಕೆಂದು ನಾವು ಇಚ್ಛಿಸುತ್ತೇವೆ ಆದರೆ ಕೃಷ್ಣನು ಹಾಗೆ ಮಾಡುವದಿಲ್ಲ. ನಮಗೆ ಎಷ್ಟು ಯೋಗ್ಯವೋ ಅಷ್ಟೇ ಕೊಡುತ್ತಾನೆ ಆದರೆ ಗೋವಿಂದನ ಇಂದ್ರಿಯಗಳನ್ನು ತೃಪ್ತಿಪಡಿಸುವಾಗ ಮನುಷ್ಯನಿಗೆ ಎಲ್ಲ ಇಂದ್ರಿಯ ಸಖಗಳೂ ಲಭ್ಯವಾಗುತ್ತವೆ. ಅರ್ಜುನನ ಕುಲಪ್ರೇಮವೂ ಕುಟುಂಬ ಪ್ರೇಮವೂ ಇಲ್ಲಿ ಅಭಿವ್ಯಕ್ತವಾಗಿವೆ. ಆದುದರಿಂದ ಅವನು ಯುದ್ಧಕ್ಕೆ ಸಿದ್ಧನಿಲ್ಲ ಪ್ರತಿಯೊಬ್ಬನಿಗೆ ಸಂಪತ್ತು ಪರರೆದುರಿಗೆ ತೋರಿಸಿ ಸಂತೋಷಿಸಲಿಕ್ಕೆ ಬೇಕಾಗುತ್ತದೆ. ನೋಡುವವರೇ ಇಲ್ಲದ ಮೇಲೆ ಆಸಂಪತ್ತಿನಿಂದ ಪ್ರಯೋಜನವೇನು ? ಲೌಕಿಕ ಸಂಪತ್ತಿನ ವಿಚಿತ್ರ ರೀತಿಯದು. ಆದರೆ ಪಾರಮಾರ್ಥಿಕ ರೀತಿಯೇ ಬೇರೆಯಾಗಿದೆ ಗೋವಿಂದನನ್ನು ಸಂತೋಷಗೊಳಿಸುವದೇ ಭಕ್ತನ ಇಚ್ಛೆಯಾದುದರಿಂದ, ದೇವರು ಕೊಡಲಿಕ್ಕೆ ಸಿದ್ಧನಿದ್ದರೆ, ಭಕ್ತನು ಎಷ್ಟು ಕೊಟ್ಟರೂ ಸ್ವೀಕರಿಸುತ್ತಾನೆ. ದೇವರ ಇಚ್ಛೆ ಇಲ್ಲದಿದ್ದರೆ, ಏನು ಕೊಡದಿದ್ದರೂ ಭಕ್ತನು ತೃಪ್ತನಿರುತ್ತಾನೆ. ಅರ್ಜುನನಿಗೆ ತನ್ನ ಆಪ್ತರನ್ನು ಕೊಲ್ಲುವದು ಬೇಡ. ಯಾವ ಕಾರಣದಿಂದಾದರೂ ಅವರನ್ನು ಕೊಲ್ಲುವದು ಅಗತ್ಯವಿದ್ದರೆ ಕೃಷ್ಣನು ಅವರನ್ನು ಕೊಲ್ಲಬೇಕೆಂದು ಅರ್ಜುನನ ಅಭಿಪ್ರಾಯ. ಅರ್ಜುನನಿಗೆ ಕೃಷ್ಣನು ಈ ಮೊದಲೇ ಅವರನ್ನು ಕೊಂದಿದ್ದಾನೆಂಬುದು ಗೊತ್ತಿಲ್ಲ. ಅದು ಮುಂದೆ ಗೊತ್ತಾಗುವದು ಅವರನ್ನು ಕೊಲ್ಲುವದರಲ್ಲಿ ಅರ್ಜುನನು ನಿಮಿತ್ತಮಾತ್ರನಾಗಬೇಕಾಗಿರುತ್ತದೆ.

ಆದರೆ ಅರ್ಜುನನಿಗೆ ಅಪರಾಧ ಮಾಡಿದ ವೈರಿಗಳ ಮೇಲೆ ಸೇಡು ತೀರಿಸಿಕೊಳ್ಳುವ ಇಚ್ಛೆಯಿಲ್ಲ. ಭಕ್ತನಿಗೆ ಸೇಡು ತೀರಿಸಿಕೊಳ್ಳುವ ಇಚ್ಛೆ ಇಲ್ಲದಿದ್ದರೂ ದೇವನಿಗೆ ದುಷ್ಟರನ್ನು ದಂಡಿಸುವ ಇಚ್ಛೆ ಇದೆ."

ಪ್ರಭುಪಾದರ ಈವಾದ ಸರಿಯಿಲ್ಲ. ಯಾಕೆಂದರೆ ಇದರಲ್ಲಿ ಅರ್ಜುನನಿಗೆ ನಿಜ ವಾದ ವಿರಕ್ತಿ ಹುಟ್ಟಿದೆಯೇ ಎನ್ನುವದು ಮುಖ್ಯವಾದ ಪ್ರಶ್ನೆ. ಈ ಪ್ರಶ್ನೆನಿರ್ಧಾರ ವಾದ ಮೇಲೆ ಅದನ್ನು ಬಿಡಿಸುವ ಗೀತೆಯ ತಾತ್ಪರ್ಯವು ಸ್ಪಷ್ಟವಾಗುವದು. ಈ ಅಧ್ಯಾಯದ ಕೊನೆಗೆ ಈ ಪ್ರಶ್ನೆಯನ್ನು ಚರ್ಚಿಸುತ್ತೇವೆ. ಅರ್ಜುನನಿಗೆ ಮೋಹ ಬಂದುದನ್ನು ಎಲ್ಲರೂ ಒಪ್ಪುತ್ತಾರೆ. ಈ ಮುಖ್ಯ ಸಂಗತಿಯ ಆಧಾರದ ಮೇಲೆ ಅವನ ಮಾತಿನ ತಾತ್ಪರ್ಯವನ್ನು ನಿರ್ಣಯಿಸಬೇಕು.[1]

**आचार्याः पितरः पुत्रास्तथैव च पितामहाः ।**
**मातुलाः श्वशुराः पौत्राः श्यालासंबंधिन स्तथा ॥ ३४ ॥**
**एतान्नहंतुमिच्छामि घ्नतोऽपि मधुसूदन ।**
**अपि त्रैलोक्यराज्यस्य हेतोः किन्नु महीकृते ॥ ३५ ॥**

ಗುರುಗಳು ತಂದೆಗಳು ಮಕ್ಕಳು ಅದರಂತೆಯೇ ಮುತ್ತಂದಿರು ಸೋದರ ಮಾವಂದಿರು (ಹೆಣ್ಣುಕೊಟ್ಟ ಮಾವಂದಿರು ಮೊಮ್ಮಕ್ಕಳು ಭಾವ-ಮೈದಂದರು ಹಾಗೂ ಸಂಬಂಧಿಗಳು ಇರುತ್ತಾರೆ.) ಮಧುಸೂದನ, ಅವರು ನಮ್ಮನ್ನು ಸಂಹಾರ ಮಾಡುವವರಾದರೂ ಕೂಡ, ಮೂರು ಲೋಕಾಧಿಪತ್ಯದ ದೆಸೆಯಿಂದ ಈ ಬಾಂಧವರನ್ನು ಸಂಹಾರ ಮಾಡುವದಕ್ಕೆ ಇಚ್ಛಿಸುವದಿಲ್ಲ ; ಇನ್ನು ಕೇವಲ ಭೂಮಿ ಗಾಗಿ ಇವರನ್ನು ಕೊಲ್ಲುವದಿಲ್ಲೆಂದು ಏನು ಹೇಳತಕ್ಕದ್ದು.[2]

---

[1] Hill Says—the name Govinda is important. It raises a question whether legend previous to Gita connected his boyhood with cow-keeping in Gokula. But Bhandarkar explains this with reference to a legend of krishna's finding the earth (गो). He further says Govinda is a later form of Govind which in the Rigveda is used as an epithet of Indra in the sense of "the finder of the cows"

[2] ಕುಮಾರ ವ್ಯಾಸನು ಗೀತೆಯ ಈ ಸಂದರ್ಭವನ್ನು ಹೀಗೆ ಸಾರಾಂಶಿಸಿದ್ದಾನೆ ;—

ಕೆಲಬರೊಡ ಹುಟ್ಟಿದರು ಗುರುಗಳು ।
ಕೆಲರು ಕೆಲಬರು ಮಾವ ಮೈದುನ ।
ನಳಿಯ ಮಗ ಹಿರಿಯಯ್ಯ ಮುತ್ತಯ ಮೊಮ್ಮನೆನಿಸುವರು ॥
ಕಳದೊಳಿನಿಬರ ಕೊಂದು ಶಿವಶಿವ ।
ಕೆಲವು ದಿವಸ ಸಿರಿಗೆ ಸೋಲಿದು
ಮುಳುಗುವೆನೆ ಭವಸಿಂಧುವಿನೊಳಾನೆನುತ ಮನಮುರಿದ ॥ ೨೭ ॥ (ಭೀಷ್ಮಪರ್ವ)

**ವಿಶೇಷ ಟಿಪ್ಪಣಿಗಳು :**

**मधुसूदन — मधुनामकदैत्यमर्दन** ಮಧುನಾಮಕ ದೈತ್ಯನನ್ನು ಸಂಹರಿಸಿದವನು. ಮಧುಸೂದನನೆನಿಸಿಕೊಳ್ಳುವದು ನಿನಗೆ ದೊಡ್ಡ ಕೀರ್ತಿಯನ್ನು ತಂದಿದೆ ಆದರೆ ನಾನು ಈ ಬಂಧು-ಬಾಂಧವರನ್ನು ಕೊಂದರೆ ದೊಡ್ಡ ಅಪಕೀರ್ತಿ ಬರುತ್ತದೆ. ಇದು ಅರ್ಜುನನ ಅಭಿಪ್ರಾಯವೆಂದು ಚಿದ್ಭವಾನಂದರ ಅಭಿಪ್ರಾಯ. ಅರ್ಜುನನು ಕರುಣೆಯಿಂದ ಹೀಗೆ ಮಾತನಾಡುತ್ತಿರುವನು ತನ್ನ ಕರ್ತವ್ಯವನ್ನು ಪೂರ್ತಿ ಮರೆತಿದ್ದಾನೆ ಕ್ಷತ್ರಿಯನಿಗೆ ಧರ್ಮಕ್ಕಾಗಿ ಯುದ್ಧಮಾಡುವದು ಮೊದಲು. ಆಮೇಲೆ ಉಳಿದವುಗಳು ಇದೇ ಅರ್ಜುನನ ಮೋಹ.

ಇದಕ್ಕೆ ಇನ್ನೊಂದು ಮಗ್ಗಲಿದೆ. ಧರ್ಮಕ್ಕೆ ವಿರೋಧವಾಗಿರುವವರನ್ನು ಶಿಕ್ಷೆಗೆ ಒಳಪಡಿಸಬೇಕು. ಶಿಕ್ಷೆ ಹೊಂದಿದವನು ಪಶ್ಚಾತ್ತಾಪದಿಂದ ನೊಂದು ಸುಧಾರಿಸಿದರೆ ಅದೊಂದು ಲಾಭ. ಹಾಗಾಗದೇ ಹೆಚ್ಚು ಹೆಚ್ಚು ತಪ್ಪುಮಾಡುತ್ತಾ ಹೋದರೆ ಅವನು ಸಮಾಜಬಹಿಷ್ಕೃತನಾಗುವನು. ಇವೆರಡರ ಪರಿಣಾಮವೂ ಸಮಾಜದ ಮೇಲೆ ಆಗುತ್ತದೆ. ಇದನ್ನು ಅರ್ಜುನ ವಿಚಾರಿಸಲಿಲ್ಲ.

**त्रैलोक्य** "ಸ್ವರ್ಗ ಭೂಮಿ ಪಾತಾಲ ಅಥವಾ ಭೂಃ, ಭುವಃ, ಸ್ವಃ, ಮನುಷ್ಯಲೋಕ, ಅರ್ಧದೇವತಾಲೋಕ ಅಂತರಿಕ್ಷ; ಮತ್ತು ದೇವತೆಗಳ ಸ್ವರ್ಗ" (Hill).

**निहत्यधार्तराष्ट्रान्नः का प्रीतिः स्याज्जनार्दन ।**
**पापमेवाश्रयेदस्मान्हत्वैतान् आततायिनः ।। ३६ ।।**

ಎಲೈ ಶ್ರೀ ಕೃಷ್ಣನೇ, ಧೃತರಾಷ್ಟ್ರನ ಮಕ್ಕಳನ್ನು ಸಂಹಾರ ಮಾಡಿದರೆ ನಮಗೆ ಏನು ಸಂತೋಷವು ಆದೀತು ? ಈ ದ್ರೋಹಿಗಳಾದ ಜನರನ್ನು ಕೊಂದರೆ ನಮಗೆ ಪಾಪವೇ ಬರುವದು.

**ವಿಶೇಷ ಟಿಪ್ಪಣಿಗಳು :**

ಈ ಶ್ಲೋಕದ ಮೊದಲಿನ ಸಾಲಿನಲ್ಲಿ ಕೌರವರನ್ನು ಕೊಲ್ಲುವದರಿಂದ ಯಾವ ಲೌಕಿಕ ಸುಖವು ಇಲ್ಲವೆಂದೂ ಎರಡನೇ ಸಾಲಿನಲ್ಲಿ ಯಾವ ಪಾರತ್ರಿಕ ಸುಖವು ಇಲ್ಲವೆಂದೂ ಅರ್ಜುನನು ಹೇಳುತ್ತಾನೆ ಆದುದರಿಂದ ಹೇಗೆಯೇ ವಿಚಾರ ಮಾಡಿದರೂ ಯುದ್ಧವು ಬೇಡವೆಂದು ಅರ್ಜುನನ ಮತ.

**आततायिन्** ದ್ರೋಹಿ. ವಸಿಷ್ಠ ಸ್ಮೃತಿಯಲ್ಲಿ **अग्निदोगरदश्चैव शस्त्रपाणिर्धनापहः । क्षेत्रदाराहरश्चैव षडेते आततायिनः,** ಮನೆಗೆ ಬೆಂಕಿ ಹಚ್ಚಿ

ದವರು, ವಿಷವನ್ನು ಹಾಕಿದವರು, ಶಸ್ತ್ರವನ್ನೆತ್ತಿ ಹೊಡೆಯತಕ್ಕವರು, ಧನ, ಭೂಮಿ ಮತ್ತು ಹೆಂಡತಿಯನ್ನು ಅಪಹರಿಸಲಿಕ್ಕೆ ಬಂದವರು ಆತತಾಯಿಗಳೆನಿಸುವರು. ಇವರನ್ನು ಶಿಕ್ಷಿಸಿದರೆ ಪಾಪವಿಲ್ಲ, ಈಗಿನ ಕಾಯದೆಯಲ್ಲಿಯೂ ಸ್ವಸಂರಕ್ಷಣೆಗಾಗಿ ಇಂಥ ಆತತಾಯಿಗಳು ಮೈಮೇಲೆ ಬಂದರೆ ಏನೂ ವಿಚಾರವಿಲ್ಲದೆ ಅವರನ್ನು ಕೊಲ್ಲ ಬಹುದು. ಅದಕ್ಕೆ ಶಿಕ್ಷೆ ಏನೂ ಆಗುವದಿಲ್ಲ. ಅರ್ಜುನನಿಗೆ ಈ ಧರ್ಮಶಾಸ್ತ್ರವು ಗೊತ್ತಿತ್ತು ಆದರೂ ಅರ್ಜುನನು ಈ ರೀತಿ ನಡೆದುಕೊಂಡುವದಕ್ಕೆ ಬೇರೆ ಬೇರೆ ವ್ಯಾಖ್ಯಾನಕಾರರು ಬೇರೆ ಬೇರೆ ರೀತಿಯಿಂದ ಉಪಪತ್ತಿಯನ್ನು ಕೊಟ್ಟಿದ್ದಾರೆ.

೧) **मा हिंस्यात् सर्वभूतानि** ಯಾವ ಪ್ರಾಣಿಯನ್ನೂ ಹಿಂಸಿಸಬಾರದು ಎಂಬ ನಿಯಮವು ಧರ್ಮಶಾಸ್ತ್ರದ ನಿಯಮವು. ಆತತಾಯಿಗಳನ್ನು ಕೊಲ್ಲಬೇಕೆಂಬ ಅಪವಾದನಿಯಮವು ಅರ್ಥಶಾಸ್ತ್ರದ್ದು. ಅರ್ಥಶಾಸ್ತ್ರವು ದುರ್ಬಲವಾದದ್ದು ; ಧರ್ಮಶಾಸ್ತ್ರವು ಪ್ರಬಲವಾದದ್ದು. ಆದುದರಿಂದ ಅಪವಾದನಿಯಮವು ಮೇಲಿನ ಧರ್ಮಶಾಸ್ತ್ರದ ಸಾಮಾನ್ಯನಿಯಮವನ್ನು ವಿರೋಧಿಸಲಾರದು. ಇದರ ತಾತ್ಪರ್ಯ ವೆಂದರೆ ಆತತಾಯಿಂದ ಸ್ವಸಂರಕ್ಷಣೆಯನ್ನು ಅವನಿಗೆ ಹಿಂಸೆಯಾಗದಂತೆ ಮಾಡಿ ಕೊಳ್ಳಬೇಕು. ಕಾಯಿದೆಯ ರಕ್ಷಣೆಯು ನೀತಿಯ ನಿರ್ಬಂಧದ ಮುಂದೆ ನಡೆಯ ಲಾರದು. ಅರ್ಜುನನು ಈ ನಿರ್ಣಯಕ್ಕೆ ಅನುಸರಿಸಿ ಯುದ್ಧ ಮಾಡುವದಿಲ್ಲವೆಂದು ಹೇಳುತ್ತಾನೆಂದು ಕೆಲವರ ಅಭಿಪ್ರಾಯ.

೨) ಗೀತಾವಿವೃತ್ತಿಕಾರರು ಅರ್ಜುನನ ಅಭಿಪ್ರಾಯವನ್ನು ಹೀಗೆ ವಿಶದ ಪಡಿಸುತ್ತಾರೆ. ಆತತಾಯಿಗಳನ್ನು ಕೊಲ್ಲುವದು ಧರ್ಮಶಾಸ್ತ್ರಕ್ಕೂ ನೀತಿ ಶಾಸ್ತ್ರಕ್ಕೂ ಸಮ್ಮತವೆಂದು ಇಟ್ಟುಕೊಂಡರೂ ಕೆಲವರು ಹೇಳುವಂತೆ ಅರ್ಜುನನಿಗೆ ಶತ್ರುಸೈನ್ಯದಲ್ಲಿ ಬರೆ ಅಪ್ಪರು—ಇಷ್ಟರು, ಗುರುಗಳು ಕಂಡರು. ಯುದ್ಧದಿಂದ ಅವರ ನಾಶವಾಗುವದು, ಕುಲನಾಶವಾಗುವದು. ಇದನ್ನು ಮಾಡುವದು ಬೇಡ. ಮತ್ತು ಆತತಾಯಿಗಳನ್ನು ಕೊಂದರೆ ಪಾಪವಿಲ್ಲೆಂದು ಹೇಳಿದ್ದಾರೆ ಅಷ್ಟೇ. ಅವರನ್ನು ಕೊಲ್ಲ ಬೇಕೆಂಬ ವಿಧಿಯಿಲ್ಲ. ಆದುದರಿಂದ ಅರ್ಜುನನು ಯುದ್ಧ ಬೇಡವೆನ್ನುತ್ತಾನೆ.

೩) ಎಲ್ಲ ಧರ್ಮಶಾಸ್ತ್ರಗಳನ್ನು ನೋಡಿದರೆ ಆತತಾಯಿಗಳ ವಿಷಯದಲ್ಲಿ ಸ್ಪಷ್ಟವಾದ ನಿಯಮವಿಲ್ಲ ಕಾತ್ಯಾಯನನಂತೂ ತನ್ನ ಅಸಮ್ಮತಿಯನ್ನೇ ತೋರಿ ಸುತ್ತಾನೆ. ಹಿರಿಯರು, ಗೌರವಾರ್ಹರು ಆತತಾಯಿಗಳಾಗಿ ಬಂದರೆ ಅವರನ್ನು ಕೊಲ್ಲ ಬಾರದೆಂದು ಸ್ಪಷ್ಟವಾಗಿ ಹೇಳುತ್ತಾನೆ.

**आततायिनि चोत्कृष्टे तपः स्वाध्यायजन्मतः ।**
**वधस्तत्र तु नैव स्यात् पापे हीनें वधो मतः ।।**

ತಪಸ್ಸಿನಿಂದ ವೇದಾಧ್ಯಯನದಿಂದ ಜನ್ಮದಿಂದ ಶ್ರೇಷ್ಠನಿದ್ದ ಆತತಾಯಿಯನ್ನು ಕೊಲ್ಲಬಾರದು. ಕೆಳಗಿನವರಾದ ಪಾಪಿಗಳಿಗೆ ಮಾತ್ರ ವಧವು ಉಕ್ತವಾಗಿದೆ, ಶ್ರೇಷ್ಠನು ಆತತಾಯಿ ಇದ್ದರೆ ಅವನನ್ನು ಕೊಲ್ಲದಿದ್ದರೆ ಅಶ್ವಮೇಧಯಾಗ ಮಾಡಿದ ಫಲ ಬರುತ್ತದೆಂದು ಬೃಹಸ್ಪತಿಯು ಹೇಳುತ್ತಾನೆ. ಇಂಥ ಮಹಾಪಾತಕ ಮಾಡಿದವರು ಅಶ್ವಮೇಧಯಾಗದಿಂದ ಶುದ್ಧರಾಗುತ್ತಾರೆ. ಅದಕ್ಕೆ ಪಾಂಡವರು ಮಹಾಭಾರತ ಯುದ್ಧದ ತರುವಾಯ ಅಶ್ವಮೇಧಯಾಗವನ್ನು ಮಾಡಿದರು.

೪) ಪಾಪಕ್ಕೆ ಪ್ರತೀಕಾರ ಮಾಡುವದು ಬೇಡ. ಕೆಟ್ಟದ್ದನ್ನು ಒಳ್ಳೇತನದಿಂದ ಎದುರಿಸೋಣ ಇದು ಕ್ರಿಶ್ಚನ್ನರ ತತ್ವವೆಂದು ಕೆಲವರು ಗ್ರಹಿಸುತ್ತಾರೆ. ನಮ್ಮದೇ ಇಂಥದೊಂದು ವಾದವಿದೆ, ಶಾಂತಿಪರ್ವದಲ್ಲಿ ಉದ್ಯೋಗಪರ್ವದಲ್ಲಿ ಈ ವಾದವನ್ನು ಪ್ರೋತ್ಸಾಹಿಸುವ ಶ್ಲೋಕಗಳಿವೆ. **अक्रोधेन जयेत् क्रोधं असाधु साधुना जयेत् । जयेत् कदर्यं दानेन जयेत् सत्येन चानृतं (उद्योग).** ಈ ವಾದವು ಎಷ್ಟರ ಮಟ್ಟಿಗೆ ರಾಷ್ಟ್ರೀಯಮಟ್ಟದ ರಾಜಕಾರಣದಲ್ಲಿ ಯೋಗ್ಯವಾಗುತ್ತದೆ ಎನ್ನುವದನ್ನು ವಿಚಾರಿಸಬೇಕು. ಕ್ರಿಶ್ಚನ್ನರ ಈ ತತ್ವವು ಇತಿಹಾಸದಲ್ಲಿ ಪ್ರಯೋಗದಲ್ಲಿ ಬಂದಿದೆಯೇ ? ಎಂಬುದನ್ನು ನೋಡಬೇಕು.

ಈ ವಾದವನ್ನು ಅರ್ಜುನನು ಅನುಸರಿಸುತ್ತಾನೆ. ಅವರು ತಿಳಿಯದೇ ಕೆಡಕು ಮಾಡಿದರೂ ನಾವೇಕೆ ಕೆಡಕು ಮಾಡಿ ಪಾಪ ಸಂಪಾದಿಸಬೇಕು ಎಂಬುದು ಅರ್ಜುನನ ವಾದ.

ಈ ಶ್ಲೋಕದ ಎರಡನೇ ಸಾಲಿಗೆ ಇನ್ನೊಂದು ಅರ್ಥವನ್ನು ಹೇಳುತ್ತಾರೆ, ದುರ್ಯೋಧನನು ಈಗ ನಮಗೆ ಆತತಾಯಿಯೇ ! ಏಕೆಂದರೆ ಅವನು ನಾವು ಮಲಗಿದ ಮನೆಗೆ ಬೆಂಕಿಹಚ್ಚಿದ್ದಾನೆ; ವಿಷ ಕೊಟ್ಟಿದ್ದಾನೆ. ನಮ್ಮ ಸ್ತ್ರೀಯನ್ನು ಎಳೆದಿದ್ದಾನೆ. ನಮ್ಮನ್ನು ಅಡವಿಗೆ ಅಟ್ಟಿದ್ದಾನೆ. ನಮ್ಮ ರಾಜ್ಯವನ್ನು ಬಲಾತ್ಕಾರದಿಂದ ಕಸಿದುಕೊಂಡಿದ್ದಾನೆ, ಹೀಗಿದ್ದರೂ ಹಿಂದೆ ಹೇಳಿದ ಪ್ರಕಾರ ಅವನು ಆತತಾಯಿಯು ಆಗದಿದ್ದರೂ ಈಗ ನಮ್ಮನ್ನು ಯುದ್ಧದಲ್ಲಿ ಕೊಂದರೆ ಅವನು ಆತತಾಯಿಯಾಗುವನು. "ನಾವು ಯುದ್ಧದಿಂದ ನಿವೃತ್ತರಾದರೂ ಅವರು ನಮ್ಮನ್ನು ಕೊಂದರೆ ಅವರು ಆತತಾಯಿಯಾಗುವರು" ಇದು ಎರಡನೆ ಅರ್ಥ.

**तस्मान्नार्हा वयं हंतुं धार्तराष्ट्रान् स्वबांधवान् ।**
**स्वजनं हि कथं हत्वा सुखिनस्सचाम माधव ॥ ३७ ॥**
**यद्यप्येते न पश्यंति लोभोपहतचेतसः ।**
**कुलक्षयकृतं दोषं मित्रद्रोहे च पातकम् ॥ ३८ ॥**

कथं न ज्ञेयमस्माभिः पापादस्मान्निवर्तितुम्
कुलक्षयकृतं दोषं प्रपश्यद्भिर्जनार्दन ॥ ३९ ॥

ಎಲೈ ಕೃಷ್ಣನೇ ! ಆದುದರಿಂದ (ಯಾವ ಕಾರಣದ ದೆಶೆಯಿಂದ ಬಂಧುಗಳನ್ನು ಕೊಲ್ಲುವದರಿಂದ ಐಹಿಕ ಆಯುಷ್ಮಿಕ ಫಲಗಳು ಪ್ರಾಪ್ತವಾಗದೆ ಪಾಪವೇ ಬರುವದು ಆ ಕಾರಣದಿಂದ) ನಮಗೆ ಬಂಧುಗಳಾವ ದುರ್ಯೋಧನಾದಿಗಳನ್ನು ನಾವು ಕೊಲ್ಲುವದು ಸರಿಯಲ್ಲ. ಏಕೆಂದರೆ ಸ್ವಜನರನ್ನು ಕೊಂದು ನಾವು ಹೇಗೆ ನಿಶ್ಚಯವಾಗಿ ಸುಖಿಗಳಾದೇವು ? ॥ ೩೭ ॥ ಈ ಕೌರವರು ರಾಜ್ಯ ಲೋಭದಿಂದ ಧರ್ಮಬುದ್ಧಿಯನ್ನು ಕಳಕೊಂಡು ವಂಶದ ನಾಶದಿಂದ ಬರುವ ದೋಷವನ್ನೂ ಸ್ನೇಹಿತರ ದ್ರೋಹದಿಂದ ಬರುವ ಪಾಪವನ್ನೂ ನೋಡದೆ ಇದ್ದರೂ ॥ ೩೮ ॥ ಕುಲನಾಶದಿಂದ ಆಗುವ ಕೇಡನ್ನು ತಿಳಿದ ನಾವು ಈ ಕುಲಕ್ಷಯದಿಂದ ಬರುವ ಪಾಪದಿಂದ ದೂರಾಗಲಿಕ್ಕೆ ವಿಚಾರ ಮಾಡದೇ ಇರುವದು ಹೇಗೆ ಯುಕ್ತವಾದೀತು ? ॥ ೩೯ ॥

**ವಿಶೇಷ ಟಿಪ್ಪಣಿಗಳು :**

ಗೀತಾ ವಿವೃತ್ತಿಯಲ್ಲಿ ರಾಘವೇಂದ್ರ ಸ್ವಾಮಿಗಳು— "**तस्मात्** ಎಂದರೆ **सीदंति मम गात्राणि** (೨೯) ಈ ಶ್ಲೋಕದಿಂದ ಹೇಳಿದ ಕಾರಣಗಳ ಸಲುವಾಗಿ ನಾವು ಧಾರ್ತರಾಷ್ಟ್ರರನ್ನು ಕೊಲ್ಲುವದು ಯೋಗ್ಯವಲ್ಲ. ಆದರೆ ಬಂದ ಆತತಾಯಿಯನ್ನು ಕೊಲ್ಲಲೇಬೇಕೆಂಬ ನಿಯಮವಿರುವದರಿಂದ ಮತ್ತು ಅವರು ಆತತಾಯಿಗಳಾದುದರಿಂದ ಕೊಲ್ಲುವದು ಅವಶ್ಯವಾದರೂ ಸಹ ಅವರನ್ನು ಕೊಲ್ಲುವದರಿಂದ ಬಂಧುಗಳನ್ನು ಕೊಲ್ಲಬೇಕಾದುದರಿಂದ ಅವರನ್ನು ಕೊಲ್ಲುವದು ಯೋಗ್ಯವಲ್ಲೆಂದು ತಾತ್ಪರ್ಯವು. ಬಂಧುಗಳಾದರೂ ಅವರು ಆತತಾಯಿಗಳಾಗುವದರಿಂದ ಅಂಥ ಬಂಧುಗಳನ್ನು ಕೊಲ್ಲಬೇಕು ಎಂದು ಹೇಳಿದರೆ ಅದಕ್ಕೆ ಉತ್ತರ— **स्वजनं हि इति.—स्याम** ಎಂದರೆ **भवेम.** ಯಾಕೆಂದರೆ ಅವರೊಡನೆ ನೋಡುವದು ಮುಟ್ಟುವದು ಮಾತನಾಡುವದು ಇವು ತಪ್ಪುವವು." ಈ ರೀತಿಯಾದ ವಿಚಾರಸರಣಿಯನ್ನು ಈ ಶ್ಲೋಕದಲ್ಲಿ ತೋರಿಸಿದ್ದಾರೆ. ಇದರಲ್ಲಿ ಅರ್ಜುನನು 'ಆತತಾಯಿಯನ್ನು ಕೊಲ್ಲಬೇಕೆಂಬ' ವಿಧಾನದಕಿಂತಲೂ ಬಂಧುಗಳನ್ನು ಕೊಲ್ಲಬಾರದೆಂಬ ನಿಷೇಧವು ಪ್ರಬಲವೆಂದು ತಿಳಿಯುತ್ತಾನೆ.

**लोभोपहतचेतसः—** ಆದರೆ ಈ ಬಂಧುತ್ವವು ಪರಸ್ಪರ ಬಂಧನಕಾರಿಯಾಗಿದೆ. ಕೌರವರು ಬಂಧುತ್ವವನ್ನು ಬದಿಗಿರಿಸಿ ಪಾಂಡವರ ಮೇಲೆ ಯುದ್ಧಕ್ಕೆ ಏರಿ ಬಂದಾಗ ಅರ್ಜುನನು ಅವರೊಡನೆ ಹೋರಾಡಲಿಕ್ಕೆ ಸ್ವಜನರನ್ನು ಕೊಲ್ಲುವ ಪಾಪಕ್ಕೆ ಹೆದರಿ, ಯಾಕೆ ಹಿಂದೆ ಸರಿಯಬೇಕು ? ಇದಕ್ಕೆ ಅರ್ಜುನನ ಉತ್ತರವೆಂದರೆ:

"ದುರ್ಯೋಧನಾದಿಗಳು ರಾಜ್ಯ ಲೋಭದಿಂದ ಕುರುಡರಾಗಿ ಯುದ್ಧದಿಂದ ಬರುವ ಅನರ್ಥವನ್ನು ಕಾಣದಿದ್ದರೂ ನಾವು ಶುದ್ಧ ಸಾತ್ವಿಕರಾದುದರಿಂದ ನಮಗೆ ಇದು ಪಾಪಕಾರಿಯೆಂದು ತಿಳಿದಿದೆ" ರಾಜಕೀಯ ಕಾಯದೆಯಲ್ಲಿಯೂ ನೀತಿಶಾಸ್ತ್ರದಲ್ಲಿಯೂ ತಿಳಿಯದೆ ಪಾಪ ಮಾಡಿದವನಿಗೆ ಪ್ರಾಯಶ್ಚಿತ್ತವದೆ; ಆದರೆ ತಿಳಿದು ಮಾಡಿದವನಿಗೆ ಆ ಸವಲತ್ತು ಇಲ್ಲ. **तपहृत** ಇದು **(तपाधि)** ಲೋಭವು ವಸ್ತುವಿಗೆ ಅದರಲ್ಲಿಲ್ಲದ ಬಣ್ಣಕೊಡುವದು. ಬಿಳಿ ಸ್ಫಟಿಕವು ದಾಸಾಳದ ಹೂವಿನಿಂದ ಕೆಂಪಗೆ ಕಾಣುವದು. ಹಾಗೆ ಲೋಭವು ದುರ್ಯೋಧನನ ಬುದ್ಧಿಗೆ ಮಂಕು ಬಡಿದು ಯುದ್ಧವು ಉಪಾದೇಯವೆಂದು ತೋರಿಸಿತು.

ಈ ತನ್ನವಾದವನ್ನು ಅರ್ಜುನನು ಹೆಚ್ಚು ಉಪಪತ್ತಿಗಳನ್ನು ಕೊಟ್ಟು ಬಲಪಡಿಸುತ್ತಾನೆ. "ಈ ನಮ್ಮನಮ್ಮೊಳಗಿನ ಜಗಳದಿಂದ ನಮ್ಮ ಕುಲವೇ ನಾಶವಾಗುತ್ತದೆ" ಎಂದು ಮತ್ತೊಂದು ಕಾರಣ ಈಗ ಒಟ್ಟಾರೆ ಅವನು ಹೀಗೆ ಹೇಳುತ್ತಾನೆ: ಕುಲಕ್ಷಯವನ್ನು ಮಾಡುವದು ಪಾಪಕಾರಿಯಾದುದು. ದುರ್ಯೋಧನನಿಗೆ ಇದರ ಅರಿವು ಇಲ್ಲ. ಇದು ಅಲ್ಲದೆ ಅವನು ಕೃತಘ್ನನೂ ಇದ್ದಾನೆ. ಆದರೆ ಪಾಂಡವರು ಯಾವ ತರಹದ ಕೃತಘ್ನತೆಯನ್ನು ತೋರಿಲ್ಲ. ರಾಜಸೂಯಯಾಗದಲ್ಲಿ ದುರ್ಯೋಧನನನ್ನೇ ಕೋಶಾಧ್ಯಕ್ಷನನ್ನು ಮಾಡಿದ್ದರು ಆದರೂ ಅವನು ಕೂಡಲೇ ಪಾಂಡವರ ನಾಶಕ್ಕೆ ಹೊಂಚುಹಾಕಿದನು. ಕಪಟದ್ಯೂತದಲ್ಲಿ ಸೋಲಿಸಿ ಅವರನ್ನು ಅಡವಿಗೆ ಅಟ್ಟಿದನು. ೧೩ ವರ್ಷಗಳ ಮೇಲೆ ಸಹ ಸೂಜಿಯ ತುದಿಗೆ ಹತ್ತಿದ ಮಣ್ಣನ್ನೂ ಕೊಡುವದಿಲ್ಲೆಂದು ಹೇಳಿದನು. ಹೀಗೆ ದುರ್ಯೋಧನನು ಕುಲಕ್ಷಯ ಮತ್ತು ಕೃತಘ್ನತೆಗಳೆಂಬ ಎರಡು ಪಾಪಗಳನ್ನು ಮಾಡುತ್ತಾನೆ. ಅರ್ಜುನನು ಹೇಳುವ ಹಾಗೆ ಪಾಂಡವರು ಯುದ್ಧಮಾಡುವದರಿಂದ ಕುಲಕ್ಷಯವನ್ನು ಮಾತ್ರ ಮಾಡುತ್ತಾರೆ. ಆದುದರಿಂದ ಅರ್ಜುನನು ಕೇಳುತ್ತಾನೆ : . "ಇಷ್ಟು ಸ್ಪಷ್ಟವಾಗಿ ಪಾಪಮಾಡುವದನ್ನು ಅರಿತೂ ನಾವೇಕೆ ಯುದ್ಧಮಾಡಬೇಕು ?" ಎಂದು.

ಆದರೆ ಕೆಲವರು ಕೇಳಬಹುದು—"ದುರ್ಯೋಧನನು ಯುದ್ಧಕ್ಕೆ ಆಹ್ವಾನ ಮಾಡಿದ್ದಾನೆ: ಕ್ಷತ್ರಿಯನು ಅದನ್ನು ಸ್ವೀಕರಿಸಿ ಯುದ್ಧಮಾಡಲೇ ಬೇಕು" ಆದರೂ ಕ್ಷತ್ರಿಯ ಧರ್ಮ ತ್ಯಾಗ ಮತ್ತು ಕುಲಕ್ಷಯಗಳಲ್ಲಿ ಕುಲಕ್ಷಯದ ಪಾಪವೇ ಹೆಚ್ಚಿನದು, ಇದನ್ನು ಅರ್ಜುನನು ತಿಳಿದಿದ್ದಾನೆ. ಅದಕ್ಕೆ ಅರ್ಜುನನು ಯುದ್ಧ ಮಾಡಲು ಹಿಂಜರಿಯುತ್ತಾನೆ.*

---

* ಕುಲವೆನ್ನುವದರಿಂದ ಒಂದು ಕುಟುಂಬ ಅಥವಾ ಅನೇಕ ಕುಟುಂಬಗಳೆಂದು ಅರ್ಥವಲ್ಲ ಕುಲವೆಂದರೆ ಕುಟುಂಬವೆಂಬ ಸಂಸ್ಥೆಯೆಂದರ್ಥ. ಈ ಕುಟುಂಬ ಸಂಸ್ಥೆಯು ಮುರಿದರೆ ಸಮಾಜಕ್ಕೆ ದೊಡ್ಡ ಹಾನಿಯೆಂದು ಅರ್ಜುನನ ಅಭಿಪ್ರಾಯ ಯಾಕೆಂದರೆ ಸಮಾಜದ ವಿಕಾಸದಲ್ಲಿ

ಆದರೆ ಅರ್ಜುನನು ಹಿಂದೆ ಸರಿದರೆ ಎಂತಹ ಘೋರ ಪರಿಣಾಮಕಾದಿದೆ ಎಂಬುದನ್ನು ಅವನು ಸ್ವಲ್ಪವೂ ಗಮನಿಸುವದಿಲ್ಲ. ಪಾಂಡವರು ಹಿಂದೆ ಸರಿದರೆ ಸತ್ಯಕ್ಕೆ ಧರ್ಮಕ್ಕೆ ಇರುವ ಬೆಲೆಯೆಲ್ಲ ಹೋಗುವದು. ಹಿಂಸೆ ದಬ್ಬಾಳಿಕೆ ಮೊದಲಾದ ಕೌರವರು ಮಾಡುವ ಕುಕೃತ್ಯಗಳಿಂದ ಜಗತ್ತು ತಲ್ಲಣಿಸಿ ಹೋಗುವದು

**ಜನಾರ್ದನ** ಎಂಬುದಕ್ಕೆ ಜನನ ರಹಿತ ಅಥವಾ ಸಂಸಾರಾರ್ದನ (ಸಂಸಾರವನ್ನು ನಾಶಮಾಡುವವ) ಎಂದು ಅರ್ಥ.

**कुलक्षये प्रणश्यंति कुल धर्माः सनातनाः ।**
**धर्मे नष्टे कुलं कृत्स्नमधर्मोऽभिभवत्युत ॥ ४० ॥**

**अधर्माभिभवात् कृष्ण प्रदुष्यंति कुलस्त्रियः ।**
**स्त्रीषु दुष्टासु वार्ष्णेय जायते वर्णसंकरः ॥ ४१ ॥**

**संकरो नरकायैव कुलघ्नानां कुलस्य च ।**
**पतंति पितरोह्येषां लुप्तपिंडोदकक्रियाः ॥ ४२ ॥**

**दोषैरेतैः कुलघ्नानां वर्णसंकरकारकैः ।**
**उत्साद्यंते जातिधर्माः कुलधर्माश्च शाश्वताः ॥ ४३ ॥**

**उत्सन्नकुलधर्माणां मनुष्याणां जनार्दन ।**
**नरके नियतं वासो भवतीत्यनुशुश्रुम ॥ ४४ ॥**

ವಂಶವು ನಾಶವಾಗುತ್ತಿರಲಾಗಿ ಪರಂಪರೆಯಾಗಿ ಬಂದ ಕ್ಷತ್ರಿಯಾದಿ ಕುಲಗಳಿಗೆ ಉಚಿತವಾದ ಧರ್ಮಗಳು ಸಂಪೂರ್ಣವಾಗಿ ನಾಶಹೊಂದುವವು. ಕುಲಧರ್ಮವು ನಾಶವಾಗುತ್ತಿರಲಾಗಿ ಅಧರ್ಮವು ಉಳಿದ ಯಾವತ್ತೂ ಕುಲವನ್ನು ವ್ಯಾಪಿಸು

---

ಕುಟುಂಬವು ಮಾನವನು ಕಟ್ಟಿದ ಅತ್ಯುಚ್ಚವಾದ ಸಂಸ್ಥೆಯು. Henry Dramumond ರು ಈ ವಿಷಯದಲ್ಲಿ ಹೀಗೆ ಹೇಳುತ್ತಾರೆ—"ಜಗತ್ತಿನ ಸಾಮಾಜಿಕ ಮತ್ತು ನೈತಿಕ ಪ್ರಗತಿಯನ್ನು ತರುವ ಶಕ್ತಿಗಳ ಉತ್ಪಾದನೆಗೂ ಆಶ್ರಯಕ್ಕೂ ಕುಟುಂಬವು ಯೋಗ್ಯವಾದ ಸ್ಥಳವಾಗಿದೆ. ನಿಸರ್ಗವೇ ಈ ಪವಿತ್ರ ಕುಟುಂಬವನ್ನು ಹುಟ್ಟಿಸಿದೆ. ಕೆಲವು ಶತಮಾನಗಳಲ್ಲ; ಲಕ್ಷ ಲಕ್ಷ ವರ್ಷಗಳ ಯುಗವು ಕಳೆದುಹೋದರೂ ಕುಟುಂಬವು ಅಳಿಯದೇ ಉಳಿದಿದೆ. ಕಾಲವು ಅದಕ್ಕೆ ಕುಂದು ತಂದಿಲ್ಲ. ಮುಂದೆ ಬಂದ ಯಾವ ಕಲೆಯೂ ಅದನ್ನು ಸುಧಾರಿಸಿಲ್ಲ. ಯಾವ ಪ್ರತಿಭೆಯೂ ಇದಕ್ಕಿಂತ ಸುಂದರವಾದುದನ್ನು ಕಂಡಿಲ್ಲ; ಯಾವ ಧರ್ಮವೂ ಕುಟುಂಬದಕ್ಕಿಂತ ಹೆಚ್ಚು ದೈವಿಕವಾದುದನ್ನು ನೋಡಿಲ್ಲ." ಗೀತಾಕಾರರಿಗೂ ಇದೆಲ್ಲ ಸಮ್ಮತವೆಂದು ತೋರುತ್ತದೆ.

ತ್ತದೆ ॥ ೪೦ ॥ ಎಲೈ ಕೃಷ್ಣನೇ ಅಧರ್ಮವು ವ್ಯಾಪಿಸುವದರಿಂದ ಕುಲಸ್ತ್ರೀಯರು ಕೆಡುವರು. ವೃಷ್ಣಿಕುಲದಲ್ಲಿ ಅವತರಿಸಿಡ ಶ್ರೀ ಕೃಷ್ಣನೇ ! ಕುಲಸ್ತ್ರೀಯರು ಕೆಟ್ಟರೆ ವರ್ಣಸಾಂಕರ್ಯವು ಹುಟ್ಟುತ್ತದೆ ॥ ೪೧ ॥. ಈ ವರ್ಣಸಾಂಕರ್ಯವು ಕುಲನಾಶಮಾಡಿದವರಿಗೆ ಮತ್ತು ಕುಲಕ್ಕೆ (ಕುಲದಲ್ಲಿ ಹುಟ್ಟಿದ ಪುತ್ರ ಪೌತ್ರಾದಿಗಳಿಗೆ) ನರಕಕ್ಕೆ ಕಾರಣವಾಗುತ್ತದೆ. ಕುಲವನ್ನು ನಾಶ ಮಾಡತಕ್ಕ ಜನರ ಪಿತೃಗಳು ಪಿಂಡ ಉದಕ ಲೋಪ ಹೊಂದಿದವರಾಗಿ ನರಕದಲ್ಲಿ ನಿಶ್ಚಯವಾಗಿ ಬೀಳುತ್ತಾರೆ (ಶ್ರಾದ್ಧ ತರ್ಪಣಗಳಿಲ್ಲದೆ) ॥ ೪೨ ॥. ಕುಲ ನಾಶಮಾಡತಕ್ಕ ಜನರ ವರ್ಣಸಂಕರಕ್ಕೆ ಕಾರಣವಾದ ದೋಷಗಳಿಂದ, ಪರಂಪರೆಯಿಂದ ಬಂದ ಕುಲಾಚಾರ ಧರ್ಮಗಳು ಮತ್ತು ಕ್ಷತ್ರಿಯ ನಿಮಿತ್ತವಾಗಿ ಬಂದ ಜಾತಿ ಧರ್ಮಗಳು ನಾಶವಾಗುತ್ತವೆ ॥ ೪೩ ॥. ಎಲೈ ಕೃಷ್ಣನೇ ! ಯಾರ ಕುಲಧರ್ಮ (ಜಾತಿ ಧರ್ಮಗಳು) ನಾಶಹೊಂದಿವೆ ಅಂಥ ಮನುಷ್ಯರಿಗೆ ತಪ್ಪದೆ ನರಕದಲ್ಲಿ ವಾಸವು ಆಗುತ್ತದೆಂದು (ದೊಡ್ಡವರಿಂದ) ಕೇಳಿದ್ದೇವೆ ॥ ೪೪ ॥.*

**ವಿಶೇಷ ಟಿಪ್ಪಣಿಗಳು :**

**कुलधर्माः**: ಪರಂಪರಾಗತವಾಗಿ ಬಂದ ಕ್ಷತ್ರಿಯಾದಿ ಕುಲಧರ್ಮಗಳು ಕುಟುಂಬವು ನಾಶವಾದರೆ ನಾಶಹೊಂದುವವು. ನಮ್ಮ ಭರತ ದೇಶದಲ್ಲಿ ಕುಲಾಚಾರಗಳಿಗೆ ಬಹಳ ಮಹತ್ವವಿದೆ. ಸ್ಮೃತಿಕಾರರು ಪರಂಪರಾಗತವಾಗಿ ಬಂದ ಕುಲಾಚಾರಗಳಿಗೆ ಬಹಳ ಮಹತ್ವ ಕೊಟ್ಟಿದ್ದಾರೆ. ಇದಕ್ಕಾಗಿ ಕುಲಸಂತಾನವು ಅವಿಚ್ಛಿನ್ನವಾಗಿ ನಡೆಯಬೇಕೆಂದು ಹೇಳುತ್ತಾರೆ. **कुलस्त्रियः**: ಇವರಲ್ಲದವರು ವೇಶ್ಯಾಸ್ತ್ರೀಯರು. ಆ ಕಾಲಕ್ಕೆ ವೇಶ್ಯಾಸ್ತ್ರೀಯರಿದ್ದರೆನ್ನುವದು ಭಾಗವತದೊಳಗಿನ ಪಿಂಗಳೆಯ ಕಥೆಯಿಂದ ಸಿದ್ಧವಾಗುತ್ತದೆ ಮಹಾಭಾರತದಲ್ಲಿ ಈ ವರ್ಗವಿತ್ತೆನ್ನುವದಕ್ಕೆ ಉಕ್ತಿಗಳು ದೊರೆಯುತ್ತಿವೆ. ಕುಲಧರ್ಮದ ನಾಶದಿಂದಲೇ ಕುಲಸ್ತ್ರೀಯರ ನಾಶ ಪ್ರಾರಂಭವಾಗುತ್ತದೆ. ಯುದ್ಧದಿಂದ ಹಿರಿಯರು ಮುಖ್ಯಸ್ಥರು ಸಾಯುವದ

---

* ಮಹಾಭಾರತ ಯುದ್ಧದಲ್ಲಿ ರಾಷ್ಟ್ರದ ತರುಣ ಜನರೇ ಕೂಡಿದ್ದರು.

**आषोडशात् सप्तति वर्ष पर्यंतं यौवनम् (वात्स्यायन)** ೧೬ ವರ್ಷದಿಂದ ೭೦ ವರ್ಷದ ವರೆಗೆ ತರುಣನೆನಿಸುವನು. ಅಲ್ಲಿ ಬೆಳೆದವರೆಲ್ಲ ಮಧ್ಯವಯಸ್ಕಿನ ಜನರಿದ್ದರೆಂದು ಹೇಳಲಾಗಿದೆ. ಭೀಷ್ಮ–ದ್ರೋಣರು ಅಪವಾದ. ಅವರು ಅತಿ ವೃದ್ಧರು.

ರಣಕ್ಷೇತ್ರದ ಮೇಲೆ ಎರಡೂ ಸೈನ್ಯ ಕೂಡಿ ೧೮ ಅಕ್ಷೌಹಿಣಿ ಸೈನ್ಯ ಎಂದರೆ ಸ್ವಲ್ಪು ಹೆಚ್ಚು ಕಡಿಮೆ ೪೦ ಲಕ್ಷ ಸೈನಿಕರಿದ್ದರು ಒಂದು ಅಕ್ಷೌಹಿಣಿ ಎಂದರೆ ೨೧೮೭೦ ಆನೆಗಳು, ೨೧೮೭೦ ರಥಗಳು, ೬೫೬೧೦ ಕುದುರೆಗಳು, ೧೦೯೩೫೦ ಕಾಲಾಳುಗಳು— ಎಲ್ಲ ಕೂಡಿ ೨೧೮೭೦೦, ಇಷ್ಟು ಅಕ್ಷೌಹಿಣಿಯ ಸಂಖ್ಯೆಯು.

ರಿಂದ, ಮಾರ್ಗದರ್ಶನವಿಲ್ಲದೆ ಚಿಕ್ಕವರು ಕೆಡುವದು ಸಹಜವದೆ ಕುಲಕ್ಷಯು ವಾದಾಗ ಪತಿಗಳಿಲ್ಲದ ಸ್ತ್ರೀಯರು ಅಡ್ಡದಾರಿ ತುಳಿಯುವದು ಸ್ವಾಭಾವಿಕ. ಹಾಗೆಯೇ ತಮ್ಮ–ತಂಗೆಂದಿರಿಗೆ ಮತ್ತು ಮಕ್ಕಳಿಗೆ ನಿಷಿದ್ಧ ಜಾತಿಯಿಂದ ಗಂಡಂದಿರನ್ನು ಹುಡುಕುತ್ತಾರೆ. ಯಾಕೆಂದರೆ ಗಂಡಸರೇ ಬಹಳ ಕಡಿಮೆ. ಇದರಿಂದ ವರ್ಣ ಸಂಕರವು ಪ್ರಾರಂಭವಾಗುತ್ತದೆ **वर्णसंकर:** ಈ ವರ್ಣಸಾಂಕರ್ಯಕ್ಕೆ ಅರ್ಜುನನು ಬಹಳ ಹೆದರುತ್ತಾನೆ. ವರ್ಣ ಶುದ್ಧತೆಯನ್ನು (racial purity) ಕಾಯ್ದುಕೊಳ್ಳ ಲಿಕ್ಕೆ ಪ್ರಾಚೀನರು ಬಹು ಪ್ರಯತ್ನಪಟ್ಟಿದ್ದಾರೆ ಅರ್ವಾಚೀನರು ಮಾತ್ರ ವರ್ಣ ಸಾಂಕರ್ಯವನ್ನೇ ಗುರಿಯಿಟ್ಟುಕೊಂಡಿದ್ದಾರೆ. 'ಜಾತಿಯನ್ನು ನಾಶಮಾಡಿರಿ' ಎನ್ನುವದೇ ಈಗಿನವರ ಕೂಗು.

C. M. ಪದ್ಮನಾಭಾಚಾರ್ಯರು ಗೀತೆಯ ಮೇಲಿನ ತಮ್ಮ ಗ್ರಂಥದಲ್ಲಿ ಬೆಳಕು ಚಲ್ಲುವ ಟಿಪ್ಪಣಿಯನ್ನು ಬರೆದಿದ್ದಾರೆ— "Abbe Dubois ಎಂಬ ಒಬ್ಬ ಫ್ರೆಂಚ ಮಿಶನರಿಯವರು ದಕ್ಷಿಣ ಹಿಂದುಸ್ತಾನದಲ್ಲಿ ಮೂವತ್ತು ವರ್ಷವಿದ್ದರು. ಅವರು "Hindu Manners and customs" ಎಂಬ ಗ್ರಂಥವನ್ನು ಬರೆದಿದ್ದಾರೆ. ಇದನ್ನು East India Company ಯವರು ಕೊಂಡು ಅದನ್ನು ಇಂಗ್ಲೀಷಿನಲ್ಲಿ ಪ್ರಕಟಿಸಿದರು. ಜಾತಿಯ ವಿಷಯದಲ್ಲಿ ಈ ಹಿಂದೂ ದ್ವೇಷಿಯು ಸಹ ಈ ರೀತಿಯಾಗಿ ಹೇಳುತ್ತಾನೆ— "ಈ ವರ್ಣವಿಭಾಗವು ಹಿಂದೂ ಕಾಯಿದೆಯ (ಧರ್ಮಶಾಸ್ತ್ರದ) ಬಹುಅಂಶಗಳಲ್ಲಿ ಅತ್ಯಂತ ಸಂತೋಷದಾಯಕ ಪ್ರಯತ್ನವೆಂದು ತಿಳಿಯುತ್ತೇನೆ. ಜನರನ್ನು ಈ ರೀತಿಯಾಗಿ ಜಾತಿವಿಭಾಗ ಮಾಡಿದ್ದರಿಂದಲೇ ಹಿಂದೂ ದೇಶವು ತಿರುಗಿ ಕಾಡುಸ್ಥಿತಿಗೆ ಹೋಗಲಿಲ್ಲವೆಂದು ಭಾವಿಸುತ್ತೇನೆ. ನಾಗರಿಕತೆಯಲ್ಲಿಯ ಕಲೆಗಳನ್ನೂ ವಿಜ್ಞಾನವನ್ನೂ ಪೂರ್ಣಗೊಳಿಸಿ ಅವುಗಳನ್ನು ಸುರಕ್ಷಿತವಾಗಿ ಇಡಲಿಕ್ಕೂ ಇದೇ ಸಹಾಯವಾಯಿತು. ಉಳಿದ ಅನೇಕ ದೇಶಗಳು ಇನ್ನೂ ಕಾಡು ಸ್ಥಿತಿಯಲ್ಲೇ ಇದ್ದವು."

"ನಾಗರಿಕತೆಯನ್ನು ಉಳಿಸಿಕೊಳ್ಳಲಿಕ್ಕೆ ವಿವೇಕವು ಇಂಥ ಸಂಸ್ಥೆಯೊಂದನ್ನೇ ಯೋಜಿಸಬಲ್ಲದೆಂದು ನಾನು ಭಾವಿಸುತ್ತೇನೆ."

"ಇವರಲ್ಲಿ ಅಸ್ಪೃಶ್ಯರು ಯಾವ ನೀತಿಯ ನಿರ್ಬಂಧವೂ ಇಲ್ಲದೆ ತಮ್ಮ ಸಹಜ ಪ್ರವೃತ್ತಿಗಳಿಗೆ ಬಲಿಬಿದ್ದು ಹಾಳಾದದ್ದನ್ನು ನೋಡಿದರೆ, ಜಾತಿ ನಿರ್ಬಂಧಗಳೂ ಧರ್ಮ ಶಾಸನಗಳೂ ಈ ಹಿಂದುಗಳಿಗೆ ಕರ್ತವ್ಯದ ಬಿಗಿಬಂದಿನಲ್ಲಿ ಇಡದಿದ್ದರೆ ಇವರ ಸ್ಥಿತಿಯು ಏನಾಗುತ್ತಿತ್ತೆಂಬುದರ ಚಿತ್ರವು ನಮಗೆ ಬರುತ್ತದೆ."

ಯಾವನ ಬಾಯಿಂದ ಹಿಂದೂಗಳ ವಿಷಯದಲ್ಲಿ ಒಂದೂ ಒಳ್ಳೇ ಮಾತು ಬಂದಿಲ್ಲ ಅವನು ಹೇಳಿದ ಮಾತುಗಳಿವು ಎನ್ನುವದನ್ನು ನಾವು ಮರೆಯಬಾರದು.

ಆಧುನಿಕ ಅನೇಕ ಬರಹಗಾರರು ಇದೇ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ. Dr. Bryce's Romanes Leetures ದಲ್ಲಿ—"ತಾಯಿಯ ಪ್ರಭಾವವು ಚಿಕ್ಕಕೂಸಿನ ಶೀಲಸಂವರ್ಧನೆಯ ಮೇಲೆ ಬಹಳವಾಗಿರುತ್ತದೆ. ಈ ವರ್ಣಸಾಂಕರ್ಯ ಈ ಪ್ರಭಾವವನ್ನು ಬಹುಮಟ್ಟಿಗೆ ಕಡಿಮೆ ಮಾಡುತ್ತದೆಂದು ಹೇಳಿದ್ದಾರೆ. ಶೀಲಸಂವರ್ಧನೆಯು ನಾಗರಿಕತೆಯ ಪ್ರಬಲವಾದ ಅಂಗವು.

ಮನು ಮೊದಲಾದ ಸ್ಮೃತಿಕಾರರು ಈ ವರ್ಣಸಾಂಕರ್ಯದಿಂದ ವರ್ಣಪರಿಶುದ್ಧತೆಯು ಹಾಳಾಗದಂತೆ ಅದನ್ನು ಕಾಯಲಿಕ್ಕೆ ವರ್ಣಸಾಂಕರ್ಯದಿಂದ ಉತ್ಪನ್ನವಾದ ಸಂತತಿಯನ್ನು ಬೇರೆ ಜಾತಿಗಳಲ್ಲಿ ಕೂಡಿಸುತ್ತಾರೆ ಅದಕ್ಕೆ ಅನುಲೋಮ ಪ್ರತಿಲೋಮ ವ್ಯವಸ್ಥೆಯೆಂದು ಹೆಸರು. ಬ್ರಾಹ್ಮಣ ತಂದೆ ವೈಶ್ಯತಾಯಿಯಿಂದ ಹುಟ್ಟಿದ ಕೂಸಿಗೆ ಅಂಬಷ್ಟವೆಂದು ಹೆಸರು. ಈ ಪ್ರತ್ಯೇಕತೆಯಿಂದ ಪರಿಶುದ್ಧತೆಯನ್ನು ಕಾಯುತ್ತಿದ್ದರು.

**लुप्तपिंडोदकक्रिया :** ಸ್ಮೃತಿಯಲ್ಲಿ ಹೇಳಿದ ಅನೇಕ ಜನ ಕೃತಕ ಮಕ್ಕಳು ಮಾಡಿದ ಶ್ರಾದ್ಧಾದಿಗಳು ತಂದೆ–ತಾಯಿಗಳಿಗೆ ಮುಟ್ಟುವದಿಲ್ಲವೆಂದು ತೋರುತ್ತದೆ ಈ ನಿಯೋಗದಿಂದ ಹುಟ್ಟಿದ ಕ್ಷೇತ್ರಜ ಮಗನು ಕೊಟ್ಟ ಪಿಂಡಾದಿಗಳು ಅವನ ತಾಯಿಯ ನಿಜವಾದ ಗಂಡನಿಗೆ ಮುಟ್ಟುವದಿಲ್ಲವೆಂದು ಹೇಳುತ್ತಾರೆ. ದೀರ್ಘತಮಸ್ಸು ಎಂಬ ಋಷಿಯು ಒಬ್ಬ ರಾಜನ ಸಲುವಾಗಿ ಅವನ ಹೆಂಡತಿಯಲ್ಲಿ ಪ್ರಜೋತ್ಪಾದನೆಯನ್ನು ಮಾಡಿದನು. ಅವನಿಂದ ಹುಟ್ಟಿದ ಮಗನು ಕೊಟ್ಟ ಪಿಂಡೋದಕವು ರಾಜನಿಗೆ ಮುಟ್ಟುವದೇ ? ಎಂಬ ಪ್ರಶ್ನೆಗೆ ನೀಲಕಂಠನು ಮುಟ್ಟುವದಿಲ್ಲೆಂದು ಉತ್ತರಿಸುತ್ತಾನೆ ಆ ಕ್ಷೇತ್ರಜ ಪುತ್ರನಿಗೆ ಲೌಕಿಕ ವ್ಯವಹಾರದಲ್ಲಿ ಮಾತ್ರ ಅಧಿಕಾರ; ಈ ಪಾರತ್ರಿಕ ಕರ್ಮಗಳಲ್ಲಿ ಅಧಿಕಾರವಿಲ್ಲೆಂದು ಅವರ ಮತ. ಆದುದರಿಂದ ವಂಶವು ಕಡಿದು ಹೋದಮೇಲೆ ಅವರಿಗೆ ಕೃತ್ರಿಮ ಉಪಾಯದಿಂದ ಪಿಂಡೋದಕವು ದೊರೆಯದ್ದರಿಂದ ಅವರು ನರಕದಲ್ಲಿ ಬೀಳುತ್ತಾರೆ.

ಮಹಾಭಾರತದಲ್ಲಿ ಆಸ್ತೀಕ ಚರಿತ್ರೆಯು ಇದಕ್ಕೆ ತಕ್ಕ ಉದಾಹರಣೆಯಾಗಿದೆ. ಪಿತೃಗಳು ಲುಪ್ತಪಿಂಡೋದಕಗಳಾದರೆ ಎಂಥ ಹೀನ ಪರಿಸ್ಥಿತಿಯಲ್ಲಿ ಇರುತ್ತಾರೆನ್ನುವದನ್ನು ಈ ಚರಿತ್ರೆಯು ಸ್ಪಷ್ಟಪಡಿಸುತ್ತಿದೆ. ಆಸ್ತಿಕನ ತಂದೆಯಾದ ಜರತ್ಕಾರುವು ತನ್ನ ತಾರುಣ್ಯದಲ್ಲಿ ಮದುವೆಯಾಗುವದಿಲ್ಲೆಂದು ನಿಶ್ಚಯಿಸಿ ಅರಣ್ಯದಲ್ಲಿ ಸಂಚರಿಸುತ್ತಿರುವಾಗ ಅಕಸ್ಮಾತ್ತಾಗಿ ಒಂದು ಹಾಳುಭಾವಿಗೆ ಬಂದನು. ಅದರಲ್ಲಿ ಬಹಳ ಜನರು ಹುಲ್ಲಿನ ಗರಿಗಳನ್ನು ಹಿಡಿದುಕೊಂಡು ಜೋತಾಡುತ್ತಿದ್ದರು. ಕೆಲವು ಇಲಿಗಳು ಆ ಹುಲ್ಲುಗಳ ಬೇರುಗಳನ್ನು ಕತ್ತರಿಸುತ್ತಿದ್ದವು. ಕೆಳಗೆ ಆಳವಾದ ತಗ್ಗು. ಈ ದಾರುಣವಾದ ವಿಪತ್ತನ್ನು ನೋಡಿ ಜರತ್ಕಾರುವು ಅವರಿಗೆ ಅವರ ಸ್ಥಿತಿಗೆ ಕಾರಣವನ್ನು

ಕೇಳಿದನು. ಅತ್ಯಂತ ವಿಷಾದದಿಂದ ಅವರು— "ಜರತ್ಕಾರು ಎಂಬ ಋಷಿಯ ಪಿತೃಗಳು ನಾವು, ಅವನು ಮದುವೆಯಾಗುವದಿಲ್ಲೆಂದು ನಿರ್ಧರಿಸಿದ್ದರಿಂದ ಲುಪ್ತಪಿಂಡೋದಕಗಳು ನಾವು ಆಗುವದರಿಂದ ಇನ್ನು ಬೇಗನೇ ನಾವು ನರಕದಲ್ಲಿ ಬೀಳುತ್ತಿದ್ದೇವೆ" ಎಂದು ಹೇಳಿದರು. ಆಗ ಜರತ್ಕಾರು ತಾನೇ ಎಂದು ಹೇಳಿ ಮನಸ್ಸಿಲ್ಲದಿದ್ದರೂ ಈ ಪಿತೃಗಳ ದುರವಸ್ಥೆಯನ್ನು ನೋಡಲಾರದೆ ಮದುವೆಯಾಗಲಿಕ್ಕೆ ಒಪ್ಪಿಕೊಂಡನು. ಆಮೇಲೆ ವಾಸುಕಿಯ ತಂಗಿಯನ್ನು ಮದುವೆಯಾಗಿ ಆಸ್ತೀಕನನ್ನು ಪಡೆದನು ಇದೇ ಆಸ್ತೀಕನೇ ಹುಡುಗನಿದ್ದಾಗಲೇ ಸರ್ಪಯಾಗ ಮಾಡುತ್ತಿರುವ ಜನಮೇಜಯನನ್ನು ತಡೆದುನಿಲ್ಲಿಸಿ ಸರ್ಪಗಳನ್ನು ಉಳಿಸಿದನು.

ನೀಲಕಂಠರನು ಆಕ್ಷೇಪಿಸಿದ ಈ ಸಂಗತಿಯು ಧರ್ಮಶಾಸ್ತ್ರದ ದೃಷ್ಟಿಯಿಂದ ಬಹಳ ಮಹತ್ವವುಳ್ಳದ್ದಿದೆ ಈ ದತ್ತಕ ಮಕ್ಕಳನ್ನು ಬಿಟ್ಟು ಉಳಿದ ಕೃತ್ರಿಮ ರೀತಿಯಿಂದ ಮಕ್ಕಳನ್ನು ಪಡೆಯುವದು ನಿಂತುಹೋಗಿದೆ ಆದರೆ ನೀಲಕಂಠರನು ಪಾರತ್ರಿಕ ದೃಷ್ಟಿಯಿಂದ ದತ್ತಕ ಮಗನು ಸಹ ಪಿಂಡೋದಕ ಪ್ರದಾನದಿಂದ ದತ್ತಕ ತಂದೆ-ತಾಯಿಗಳನ್ನು ಪಾರತ್ರಿಕ ದೃಷ್ಟಿಯಿಂದ ಪಾರುಮಾಡಲಾರನೆಂದು ಅಭಿಪ್ರಾಯ ಪಡುತ್ತಾನೆ

**कुलस्य** (೪೨) **च**. ಕುಲ ಎಂದರೆ ಆ ಕುಲದಲ್ಲಿ ಹುಟ್ಟಿದ ಪುತ್ರ ಪೌತ್ರಾದಿ ಸಂತಾನ (ಗೀತಾವಿವೃತ್ತಿ). **अनुशुश्रुम** (೪೪) ದೊಡ್ಡವರಿಂದ ಹಿರಿಯರಿಂದ ಕೇಳಿದ್ದೇವೆ. **प्रायश्चित्तमकुर्वाणाः पापेषु निरता नराः । अपश्चात्तापिनः कष्टान् निरयान् यांति दारुणान् ॥** ಪಾಪಮಾಡುವದರಲ್ಲಿ ತೊಡಗಿದ ಜನರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಮನಸಿನಲ್ಲಿ ಪಶ್ಚಾತ್ತಾಪ ಪಡದಿದ್ದರೆ ಕಷ್ಟದಾಯಕವಾದ ಭಯಾನಕವಾದ ನರಕಗಳಿಗೆ ಹೋಗುತ್ತಾರೆ. ಇದು ಹಿರಿಯರು ಹೇಳಿದ ಮಾತು ಅರ್ಜುನನು ಈ ಮಾತನ್ನು ಕೇಳಿದ್ದೇನೆಂದು (**अनुशुश्रुम**) ಹೇಳಿದ್ದಾನೆ.*

---

* ಆದರೆ ಈ ಪ್ರಶ್ನೆಗೆ ಭಾಗವತ ಧರ್ಮವು ಬೇರೆ ಉತ್ತರವನ್ನೇ ಕೊಡುತ್ತದೆ —

**देवर्षिभूताप्तनृणां पितॄणाम् न किंकरो नायमृणी च राजन् ।**
**सर्वात्मना यः शरणं शरण्यं गतो मुकुंदं परिहृत्य कृत्यम् ॥**

"ಶರಣ-ಹೋಗಲಿಕ್ಕೆ ಯೋಗ್ಯನಾದ ಮುಕುಂದನಿಗೆ, ಎಲ್ಲ ಕರ್ತವ್ಯಗಳಿಂದ ಮುಕ್ತನಾಗಿ ಪರಿಪೂರ್ಣವಾಗಿ ಯಾರು ಶರಣು ಹೋಗುತ್ತಾರೆ ಅವರು ದೇವತೆಗಳಿಗೆ, ಋಷಿಗಳಿಗೆ, ಭೂತಗಳಿಗೆ, ಆಪ್ತಜನರಿಗೆ, ಪಿತೃಗಳಿಗೆ ದಾಸರೂ ಅಲ್ಲ ಮತ್ತು ಅವರ ಋಣದಲ್ಲಿಯೂ ಅವರಿಲ್ಲ" ಇದರ ತಾತ್ಪರ್ಯವೆಂದರೆ— ಪರಮಾತ್ಮನಿಗೆ ಅನನ್ಯ ಭಾವನೆಯಿಂದ ಶರಣುಹೋದವರಿಗೆ ಈ ಎಲ್ಲ ಕರ್ತವ್ಯಗಳೂ ಬಂಧಕವಾಗದಿರುವದರಿಂದ, ಪರಮಾತ್ಮನ ಪೂಜೆಯಿಂದಲೇ ಅವರೆಲ್ಲರೂ ತೃಪ್ತರಾಗುತ್ತಾರೆ.

**उत्साद्यंते जातिधर्माः (४३) –** ವರ್ಣವ್ಯವಸ್ಥೆಯ ದೃಷ್ಟಿಯಿಂದ ವರ್ಣಸಾಂಕರ್ಯವು ಬಹು ಅನರ್ಥವನ್ನು ಸಮಾಜದಲ್ಲಿ ಹುಟ್ಟಿಸುವದು. ಯಾಕೆಂದರೆ ಈ ವರ್ಣ ಸಾಂಕರ್ಯದಿಂದ ಆಯಾ ವರ್ಣಕ್ಕೆ ಸೇರಿದ ಬ್ರಾಹ್ಮಣ ವೈಶ್ಯ, ಕ್ಷತ್ರಿಯ, ಶೂದ್ರರು ತಮ್ಮ ತಮ್ಮ ಕೆಲಸವನ್ನು ಬಿಟ್ಟು ಇತರರ ಕೆಲಸಕ್ಕೆ ಕೈಹಾಕುವರು ಒಂದೇ ವರ್ಣದಲ್ಲಿರುವ ಹಲವು ಕುಲಕಸಬುಗಳನ್ನು ಉಳಿದವರು ಕೂಡ ಮಾಡುವದರಿಂದ ಕೆಲಸದ ಗುಣಮಟ್ಟ ಕಡಿಮೆಯಾಗಿ ಸ್ಪರ್ಧೆ ಹೆಚ್ಚಾಗಿ ಉದ್ಯೋಗಗಳಲ್ಲಿ ಅವ್ಯವಸ್ಥೆಯೂ ಬರುವದು ಒಳ್ಳೇ ಕೆಲಸಗಾರರು ಕೆಲಸವಿಲ್ಲದೆ ಕೂಡಬಹುದು.

ಇನ್ನೊಂದು ದೃಷ್ಟಿಯಿಂದ ಕೆಲಸಗಳ ಗುಣಮಟ್ಟಕ್ಕೆ ಹಾನಿಯಿದೆ. ಒಳ್ಳೇ ಕೆಲಸ ಮಾಡದಿದ್ದರೆ ನರಕ, ಒಳ್ಳೇ ಕೆಲಸ ಮಾಡಿದರೆ ಸ್ವರ್ಗ— ಹೀಗೆ ಕೆಲಸದ ಗುಣಮಟ್ಟವನ್ನು ಕಾಯುವದಕ್ಕೆ ಸಾಮಾನ್ಯ ಜನರಿಗೆ ಇವು ಸಹಾಯವಾಗುತ್ತವೆ. ಈ ವರ್ಣ ಸಾಂಕರ್ಯದಿಂದ ಇದೂ ಹೋಗುವದರಿಂದ ಉದ್ಯೋಗದಲ್ಲಿ ವೈಗುಣ್ಯವು ಬರುತ್ತದೆ.

ಹಿಂದೆ ೨೮ ರಿಂದ ೩೮ ರವರೆಗೆ ವಿಧಾನ ಮಾಡುವಾಗ ಧಾರ್ತರಾಷ್ಟ್ರರಿಗೆ ಆಗುವ ಹಾನಿ ಮಾತ್ರ ಅರ್ಜುನನ ಲಕ್ಷ್ಯದಲ್ಲಿತ್ತು ಆದರೆ ೪೦_೪೪ ರಲ್ಲಿ ಎರಡೂ ಪಕ್ಷಗಳ ಹಾನಿಯನ್ನು ಸಮನಾಗಿ ಅವನು ನೋಡುತ್ತಿದ್ದಾನೆ.

ಇನ್ನೊಂದು ಮಾತೆಂದರೆ ೨೮ ರಿಂದ ೩೮ ರವರೆಗೆ ತೋರಿಸಿದ ಅಂಜಿಕೆಯು ಎಲ್ಲರಿಗೂ ಸ್ಪಷ್ಟವಾಗಿ ತಿಳಿಯುತ್ತಿದೆ. ಆದರೆ ೪೦ ರಿಂದ ೪೪ ವರೆಗೆ ತೋರಿಸಿದ ಹಾನಿಯು ಸಹಜವಾಗಿ ಲಕ್ಷ್ಯದಲ್ಲಿ ಬರುವದಿಲ್ಲ. ಭಾರತೀಯ ಯುದ್ಧದಲ್ಲಿ ಆದ ಸಂಹಾರದ ಸಂಖ್ಯೆಯು ದೊಡ್ಡದಾದರೂ ಅರ್ಜುನನು ತೋರಿಸುವ ಭೀತಿಗೆ ಕಾರಣವೇನು ತೋರುವದಿಲ್ಲ. ಈ ಯುದ್ಧದಲ್ಲಿ ಕೆಲವೊಂದು ವಯೋಮಾನದ ಜನರೇ ತೊಡಗಿದ್ದರಿಂದ ಕುಟುಂಬದ ಎಲ್ಲ ಗಂಡಸರೂ ಸಾಯುವ ನಿರೀಕ್ಷೆಯಿಲ್ಲದ್ದರಿಂದ ಸುಲಭವಾಗಿ ಪಿತೃಗಳು ಲುಪ್ತಪಿಂಡೋದಕರಾಗುವ ಸಂಭವವಿಲ್ಲ. ಆದರೂ ಅರ್ಜುನನು ಗಾಬರಿಯಲ್ಲಿ ಉದ್ವೇಗದಲ್ಲಿ ಭಾವನೆಗಳ ಆವೇಗದಲ್ಲಿ ತಾಳತಪ್ಪಿ ವರ್ಣಿಸಹತ್ತಿದ್ದಾನೆ ಆದುದರಿಂದ ಈ ಚಿತ್ರವು ಅತಿ ರಂಜಿತವಿರುವದರಲ್ಲಿ ಆಶ್ಚರ್ಯವೇನಿಲ್ಲ.

**अहो बत महत् पापं कर्तुं व्यवसिता वयम् ।**
**यद्राज्यसुखलोभेन हंतुं स्वजनमुद्यताः ।। ४५ ।।**

**यदि मामप्रतीकारं अशास्त्रं शस्त्रपाणयः ।**
**धार्तराष्ट्रा रणे हन्युः तन्मे क्षेमतरं भवेत् ।। ४६ ।।**

**संजय उवाच । एवमुक्त्वार्जुनसांख्ये रथोपस्थ उपाविशत् ।**
**विसृज्य सशरं चापं शोकसंविग्नमानसः ।। ४७ ।।**

ಅಯ್ಯೊ! ರಾಜ್ಯಪ್ರಾಪ್ತಿಯಿಂದ ಆಗತಕ್ಕ ಸುಖದ ಆಶೆಯಿಂದ ನಾವು ಬಂಧುಗಳನ್ನು ಕೊಲ್ಲಲಿಕ್ಕೆ ಸಿದ್ಧರಾಗಿದ್ದೇವೆ. ನಿಜವಾಗಿಯೂ ನಾವು ಮಹಾಪಾಪಕರವಾದ ಉದ್ಯೋಗ ಮಾಡುವದಕ್ಕೆ ನಿರ್ಧಾರ ಮಾಡಿರುವೆವು ॥ ೪೫ ॥ ಅಪಕಾರವನ್ನು ಮಾಡಿದರೂ ಪ್ರತೀಕಾರವನ್ನು ಮಾಡದಿರುವ, ಶಸ್ತ್ರರಹಿತನಾದ ನನ್ನನ್ನು ಒಂದು ಪಕ್ಷದಲ್ಲಿ ಶಸ್ತ್ರಧಾರಿಗಳಾದ ದುರ್ಯೋಧನಾದಿಗಳು ಯುದ್ಧದಲ್ಲಿ ಕೊಂದರೂ ಅದು ನನಗೆ ಅತ್ಯಂತ ಹಿತಕರವಾದುದು ಆಗುವದು ॥ ೪೬ ॥. ಸಂಜಯನು ಹೇಳಿದನು— ಅರ್ಜುನನು ಈ ಪ್ರಕಾರವಾಗಿ ಹೇಳಿ ಬಾಣದಿಂದ ಕೂಡಿದ ಧನುಷ್ಯವನ್ನು ಬಿಟ್ಟು, ದುಃಖದಿಂದ ಖಿನ್ನವಾದ ಮನಸ್ಸುಳ್ಳವನಾಗಿ ಯುದ್ಧರಂಗದಲ್ಲಿ ರಥದ ಮಧ್ಯದಲ್ಲಿ ಕುಳಿತನು ॥ ೪೭ ॥.[1]

**ವಿಶೇಷ ಟಿಪ್ಪಣಿಗಳು :**

[2]**अहोबत** ಇದು ಉದ್ಗಾರವಾಚಕ ಅವ್ಯಯ. **अहो** ಇದು ಆಶ್ಚರ್ಯವನ್ನೂ **बत** ಇದು ಖೇದವನ್ನೂ ತೋರಿಸುತ್ತವೆ. ಆದರೆ **अहोबत** ಇದು ಒಂದೇ ಶಬ್ದವೆಂದೂ ಅದು ದಯಾ ಮತ್ತು ಖೇದವನ್ನು ಬೋಧಿಸುತ್ತವೆಂದೂ ಹೇಳುತ್ತಾರೆ. ಅರ್ಜುನನು ಈ ಅಧ್ಯಾಯದಲ್ಲಿ ಹೇಗೆ ಈ ಬೇರೆ ಬೇರೆ ಭಾವನೆಗಳನ್ನು ತೋರಿಸುತ್ತಾ ಬಂದಿದ್ದಾನೆಂಬುದನ್ನು ವಾಚಕರು ಮರೆತಿರಲಿಕ್ಕಿಲ್ಲ. **यदि हन्युः तत्क्षेमतरं**- ಅರ್ಜುನನು **यदि** ಎಂದು ಉಪಯೋಗಿಸುತ್ತಾನೆ. 'ಅವನು ಶಸ್ತ್ರ ಪರಿತ್ಯಾಗಮಾಡಿ

---

[1] ಕುಮಾರವ್ಯಾಸರು ಹೀಗೆ ಈ ವಿಷಯವನ್ನು ಹೇಳಿದ್ದಾರೆ :—
ಕೆಡುವ ಕಾಯವ ನೆಚ್ಚಿ ಬಂಧುಗ
ಳೊಡನೆ ವೈರವ ಮಸೆದು ನರಕಕೆ
ಕೆಡೆವೆನೇ ತಾನೆನುತ ರಥದೊಳು ಬಿಲ್ಲನಿಳುಹಿದನು ॥ ೩೧ ॥

[2] ಧೃತರಾಷ್ಟ್ರನು ಯುದ್ಧದ ಮೊದಲು ಸಂಜಯನನ್ನು ಪಾಂಡವರ ಕಡೆಗೆ ಕಳುಹಿದ್ದನು. ಸಂಜಯನು ದೌತ್ಯವನ್ನು ಸ್ವೀಕರಿಸಿ ಪಾಂಡವರಿಗೆ ಧೃತರಾಷ್ಟ್ರನ ಸಂದೇಶವನ್ನು ಮುಟ್ಟಿಸಿದನು. ಅದರ ಸಾರಾಂಶವು ಹೀಗಿದೆ— "ಯುದ್ಧ ಮಾಡಬೇಡಿರಿ. ಯಾಕೆಂದರೆ ನೀವು ಧರ್ಮಿಷ್ಠರು. ನೀವು ರಾಜ್ಯಲೋಭಕ್ಕೆ ತುತ್ತಾಗಬೇಡಿರಿ; ಮತ್ತು ಯುದ್ಧದ ಪಾಪವನ್ನು ಕಟ್ಟಿಕೊಳ್ಳಬೇಡಿರಿ. ಇದಕ್ಕಿಂತ ನೀವು ಸನ್ಯಾಸ ಸ್ವೀಕರಿಸುವದು ಒಳ್ಳೇದು. ಎಂದರೆ ನಿಮಗೆ ಸ್ವಜನರನ್ನು ಕೊಂದು ಪಾಪ ಕಟ್ಟಿಕೊಳ್ಳುವ ಪ್ರಸಂಗ ಬರುವದಿಲ್ಲ." ಸಂಜಯನು ಹೇಳಿದ ಈ ವಿಚಾರಗಳೇ ಅರ್ಜುನನ ಮನಸಿನಲ್ಲಿ ತುಂಬಿದ್ದವು. ಒಮ್ಮೆಲೆ ಯುದ್ಧ ಭೂಮಿಯ ಮೇಲೆ ಆಪ್ತರನ್ನೂ ಇಷ್ಟರನ್ನೂ ನೋಡಿ ಈ ಮಾತುಗಳೇ ಅವನ ನೆನಪಿಗೆ ಬಂದವು. ಅರ್ಜುನನ ಈ ಯುದ್ಧ ಪರಾಙ್ಮುಖತೆಯು ಪಾದವು ಸಂಜಯನ ಮಾತಿನ ಪ್ರತಿಧ್ವನಿಯೆ ಆಗಿದೆ.

ಯುದ್ಧ ಮಾಡುವದನ್ನು ತ್ಯಜಿಸಿದನೆ'ಂಬುದೇ ಆ ವಿಲಕ್ಷಣ ಪರಿಸ್ಥಿತಿ. ಇಂಥ ಪರಿಸ್ಥಿತಿಯಲ್ಲಿ ಏನಾಗಬಹುದು ಎಂಬುದೇ ಪ್ರಶ್ನೆ. ಮೊದಲು ದಿನ ಸಾಯಂಕಾಲ ಮಾಡಿಕೊಂಡ ಯುದ್ಧದ ಸಮಯದಲ್ಲಿ ಅರಿಯು ಅಸ್ತ್ರರಹಿತನಾಗಿದ್ದವನನ್ನು ಕೊಲ್ಲಬಾರದೆಂಬ ನಿಯಮವಿದೆ. ಅದಕ್ಕೆ ಅನುಗುಣವಾಗಿ ಅರ್ಜುನನು ಯುದ್ಧ ಮಾಡದಿದ್ದರೆ, ದುರ್ಯೋಧನನೂ ಯುದ್ಧ ಮಾಡದೆ ತಿರಗಿಹೋಗಬಹುದು. ಅದಾದರೆ ಒಳ್ಳೆದಾಯಿತು. ಇಲ್ಲವಾದರೆ ಅರ್ಜುನನನ್ನು ಅವರು ಕೊಲ್ಲಬಹುದು. ಅದೂ ಹಿತಕರವಾದುದೇ! ಯಾಕೆಂದರೆ ಬಂಧುವಧೆಯು ತಪ್ಪಿತು ಮತ್ತು ಅವನು ರಣದಲ್ಲಿ ಸತ್ತದ್ದರಿಂದ ವೀರಸ್ವರ್ಗವು ದೊರಕುವದು.

ಈ ಶ್ಲೋಕದಲ್ಲಿ ಅರ್ಜುನನ ಹೃದಯ ದೌರ್ಬಲ್ಯದ ಅತಿರೇಕವನ್ನೇ ನೋಡುತ್ತೇವೆ. ತಾನು ಶಸ್ತ್ರಪರಿತ್ಯಾಗ ಮಾಡಿ ವೈರಿಯು ತನ್ನನ್ನು ಕೊಲ್ಲಬೇಕೆಂದು ಇಚ್ಛಿಸುವದು ನಿರ್ವಿಣ್ಣತೆಯ ಪರಾಕಾಷ್ಠೆಯೆಂದು ಹೇಳಬಹುದು ಅಧರ್ಮವನ್ನು ಎದುರಿಸುವ ಸಮಸ್ಯೆಯು ಹಾಗೆ ಉಳಿಯಿತು! ತಿರುಗಿ ಕೇಳಿದರೆ ಇದರಿಂದ ಅಧರ್ಮಕ್ಕೆ ಪ್ರೋತ್ಸಾಹವಿತ್ತಂತೆ ಆಗುತ್ತದೆ. ಅಧರ್ಮವನ್ನು ಆಚರಿಸುವದೂ ಅದನ್ನು ಪ್ರೋತ್ಸಾಹಿಸುವದೂ ಒಂದೇ; ಅಧರ್ಮ ಮಾಡುವದನ್ನು ನೋಡುತ್ತ ಅದನ್ನು ತಡೆಯದೆ ಸುಮ್ಮನೆ ಕೂಡುವದೂ ಒಂದೇ! **रथोपस्थ उपाविशत्** ಶಂಕರಾಚಾರ್ಯರ ಅನುಯಾಯಿಗಳೆಲ್ಲ **रथोपस्थे** ರಥದ ಮೇಲೆ **रथोपरी** ಕುಳಿತು ಕೊಂಡನು ಎಂದೇ ಅರ್ಥಮಾಡಿದ್ದಾರೆ **पु. अ. न.** ಕಾರರು ಮಾತ್ರ 'ರಥದಲ್ಲಿ ನಿಂತುಕೊಂಡು ಆಮೇಲೆ **उप** ಭಗವಂತನ ಹತ್ತಿರ ಕುಳಿತುಕೊಂಡನು' ಎಂದು ಅರ್ಥಮಾಡಿದ್ದಾರೆ. ಗೀತಾವಿವೃತ್ತಿಯಲ್ಲಿ ರಾಘವೇಂದ್ರರು—'**रथोपस्थे रथमध्ये** ರಥದಲ್ಲಿ ಕುಳಿತು ಕೊಂಡನು' ಎಂದು ಹೇಳಿದ್ದಾರೆ. **उपस्थ** ಶಬ್ದಕ್ಕೆ 'ಮಧ್ಯದಲ್ಲಿ' ಎಂಬ ಅರ್ಥವನ್ನು ಕೋಶಕಾರರೂ ಕೊಡುತ್ತಾರೆ (ಆಪ್ಟೆಕೋಶ) ಕೆಲವರು ಇದಕ್ಕೆ 'ವಿಶ್ರಾಂತಿಯ ಸ್ಥಳ' ವೆಂದು ಅರ್ಥ ಮಾಡುತ್ತಾರೆ. ಆದರೆ ಕೆಲವರು 'ನಿತ್ಯದಲ್ಲಿ ಕೂಡುವ ಸ್ಥಳದಲ್ಲಿ' ಎಂದು ಅರ್ಥ ಮಾಡಿದ್ದಾರೆ. ಮುರಾರಿಯಲ್ಲಿ ಗೀತಾಪದ್ಯವಿಕಾಸವೆಂಬ ತಮ್ಮ ಗೀತೆಯ ವಿವರಣೆಯಲ್ಲಿ 'ಮುಖ್ಯ ಭಾಗದ ಮುಂದೆ ಪುರುಷನ ಜನನೇಂದ್ರಿಯದಂತೆ ಜೋತಾಡುವ ಸಾರಥಿಯು ಕೂಡುವ ಭಾಗವೆಂದು' ಬಹು ಕಷ್ಟಬಟ್ಟು ಅರ್ಥವನ್ನು ಹಚ್ಚಿದ್ದಾರೆ. ಅರ್ಜುನನನ್ನು ಸಾರಥಿಯಗೂಡ ಕೂಡ್ರಿಸಬೇಕಾಗಿದ್ದರೆ ಟಿಳಕರಂತೆ 'ರಥದಲ್ಲಿ ಸಾರಥಿ ಮತ್ತು ರಥಿ' ಇಬ್ಬರೂ ಕೂಡಿಯೇ ಕೂಡುವ ಪದ್ಧತಿಯೆಂದು ಒಪ್ಪಿದರಾಯಿತು. ಆದರೆ ರಥಿಯು ಸಾಮಾನ್ಯವಾಗಿ ಎದ್ದು ನಿಂತೇ ಯುದ್ಧ ಮಾಡುತ್ತಾನೆ. ಈಗ ಅರ್ಜುನನು ತನ್ನ ಸ್ಥಳದಲ್ಲೇ ಕುಳಿತಿದ್ದರಿಂದ ಅವನು ಯುದ್ಧ ಮಾಡಲಿಕ್ಕೆ ಒಪ್ಪಲಿಲ್ಲವೆಂದು ಸಹಜವಾಗಿ ಅರ್ಥವಾಗುತ್ತದೆ. ಈ ಸಂದರ್ಭದಲ್ಲಿ

ಪ್ರಾಚೀನ ಕಾಲದ ರಥದ ರಚನೆಯ ಜ್ಞಾನವು ಹೆಚ್ಚು ಉಪಕಾರಿಯಾಗುತ್ತದೆ. ಮಹಾಭಾರತದಲ್ಲಿ ಅಲ್ಲಲ್ಲಿ ರಥದ ವರ್ಣನೆ ಬಂದಿದ್ದರಿಂದ ಅದರ ಮೇಲಿಂದ ಸಹ ರಥದ ಚಿತ್ರವನ್ನು ಕಲ್ಪಿಸಬಹುದು **उपस्थ** ಶಬ್ದಕ್ಕೆ 'ಮಧ್ಯ' ವೆಂಬ ಕೋಶದ ಅರ್ಥವನ್ನು ಸ್ವೀಕರಿಸುವದು ಹೆಚ್ಚು ಸಹಜವಾದುದೆಂಬುದು ವಾಚಕರಿಗೆ ಈಗಾಗಲೇ ಕಂಡಿರಬೇಕು.

**इति श्रीमद्भगवद्गीतासु उपनिषत्सु ब्रह्मविद्यायां योगशास्त्रे श्रीकृष्णार्जुनसंवादे अर्जुनविषादयोगो नाम प्रथमोऽध्यायः ।**

ಶ್ರೀ ಮದ್ಭಗವದ್ಗೀತೆಯೆಂಬ ಉಪನಿಷತ್ತಿನಲ್ಲಿ, ಬ್ರಹ್ಮವಿದ್ಯೆಯಲ್ಲಿ, ಯೋಗ ಶಾಸ್ತ್ರದಲ್ಲಿ, ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಅರ್ಜುನ ವಿಷಾದಯೋಗವೆಂಬ ಒಂದನೆ ಅಧ್ಯಾಯವು ಮುಗಿಯಿತು.

**ವಿಶೇಷ ಟಿಪ್ಪಣಿಗಳು :**

ಲೋ ಟಿಳಕರು ಇದರ ಮೇಲೆ ಟಿಪ್ಪಣಿ ಬರೆಯುವಾಗ 'ಗೀತೆಯಲ್ಲಿ ಬ್ರಹ್ಮವಿದ್ಯೆಯನ್ನಷ್ಟೇ ಹೇಳಿಲ್ಲ ಕರ್ಮಯೋಗವನ್ನೂ ಹೇಳಿದೆಂದು ಈ ಮಾತಿನ ಅರ್ಥವೆಂದು ಹೇಳುತ್ತಾರೆ. ಈ ಸಂಕಲ್ಪ ಮಹಾಭಾರತದಲಿಲ್ಲ. ಆದರೂ ಶಂಕರಾ ಚಾರ್ಯರು ಭಾಷ್ಯ ಬರೆಯುವ ಮೊದಲೇ ಇದು ಬಂದಿರಬೇಕೆಂಬುದು ಸ್ಪಷ್ಟವದೆ. ಯಾಕೆಂದರೆ ಸನ್ಯಾಸಮಾರ್ಗಿಯು ಇಂಥ ಸಂಕಲ್ಪವನ್ನು ಕೊಡಲಾರನೆಂದು ಹೇಳುತ್ತಾರೆ. ಗೀತೆಯಲ್ಲಿ ಸನ್ಯಾಸವನ್ನು ಹೇಳಿಲ್ಲ. ಕರ್ಮಯೋಗವನ್ನೇ ಹೇಳಿದ್ದಾರೆಂದು ಅವರ ವಾದ.

ಅಂತೂ ತಾತ್ಪರ್ಯ ನಿರ್ಣಯಕ್ಕೆ ಇದು ಒಳ್ಳೇ ಸಹಕಾರಿಯಾಗಿದೆ. ಡಾ.ರಾಧಾ ಕೃಷ್ಣನ್ನರವರು ತಮ್ಮ ಭಗವದ್ಗೀತೆಯೆಂಬ ಟಿಪ್ಪಣಿಯಲ್ಲಿ **ब्रह्मविद्यायां** ಎಂಬುದರ ಮೇಲೆ ಹೀಗೆ ಬರೆಯುತ್ತಾರೆ— ಬ್ರಹ್ಮವಿದ್ಯೆಯೆಂದರೆ ಬ್ರಹ್ಮನ ವಿಷಯಕ ವಿದ್ಯೆ. ಬ್ರಹ್ಮ ಎಂಬುದು ತತ್ವವು. ತತ್ವವೆಂದರೇನು ? ನಿರಂತರ ಸಂಗತಿಗಳ ಸಾಲಿನ ಹಿಂದೆ ತಾಳುವದು ಬಾಳುವದು ಯಾವದಾದರೂ ಇದೆಯೇ ? ಈ ನಾನಾ ಆವಿರ್ಭಾವಕ್ಕೆ ಕಾರಣರು ಯಾರು ? ಅನಂತ ಸಂಭವಗಳ ಸಮೃದ್ಧವಾದ ಈ ಲೀಲೆಯುನ್ನು ಒತ್ತಾಯಿಸುವದು ಯಾವದು ? ಅವಕ್ಕೇನಾದರೂ ಉದ್ದೇಶವಿದೆಯೋ ? ಅರ್ಥ ವಿದೆಯೋ ? ಇಂಥ ಈ ತತ್ವದ ಸ್ವರೂಪವನ್ನು ತಿಳಿದುಕೊಳ್ಳಲಿಕ್ಕೆ ಸಹಾಯ ಮಾಡುವದೇ ಬ್ರಹ್ಮವಿದ್ಯೆಯು ಎಂದು ಅವರು ಹೇಳುತ್ತಾರೆ.

**योगशास्त्र** ಶ್ರೀ ಕೃಷ್ಣನು ಬರೀ ತತ್ವವನ್ನು ವಿವೇಚಿಸುವದಿಲ್ಲ. ಆದರೆ ಜೀವನಕ್ಕೆ ಉಪಯೋಗ ಬೀಳುವ ಯೋಗಶಾಸ್ತ್ರವನ್ನೂ ಹೇಳುತ್ತಾನೆಂದು ಈ ಪದ

ವನ್ನು ಉಪಯೋಗಿಸಿದ್ದಾರೆ. ನಮ್ಮ ಜೀವನ ಬರೀ ನೋಡುವ ದೃಶ್ಯವಲ್ಲ, ಇದು ಹೋರಾಡುವ ರಣಭೂಮಿಯು ಎಂದು ಡಾ ರಾಧಾಕೃಷ್ಣನ್ನರು ಬರೆಯುತ್ತಾರೆ.

**ಕೃಷ್ಣಾರ್ಜುನಸಂವಾದ–** ಪ್ರಿಯಕರ–ಪ್ರೇಯಸಿಯರಿಗೆ ಮಧ್ಯೆ ಸಂಧಾನಕ್ಕೆ ಅನ್ಯರ ಅವಶ್ಯಕತೆ ಇಲ್ಲದಂತೆ ನರನಿಗೂ ನಾರಾಯಣನಿಗೂ ಯಾರೂ ಮಧ್ಯೆ ಬೇಕಾಗಿಲ್ಲ ತನ್ನಷ್ಟು ದೇವನಿಗೆ ಸಮೀಪದಲ್ಲಿ ಯಾರೂ ಇಲ್ಲ ಅವನನ್ನು ಮುಟ್ಟಲಿಕ್ಕೆ ಬರೀ ಆರ್ತ ಅಂತಃಕರಣ, ಶುದ್ಧ ಉದ್ದೇಶವಿದ್ದರಾಯಿತು. ಅರ್ಜುನನು ಏಕಾಂಗಿಯಾಗಿ ಮಧ್ಯೆ ಯಾರೂ ಇಲ್ಲದೆ ದೇವರ ಎದುರಿಗೆ ನಿಂತಿದ್ದಾನೆ. ನರನಿಗೂ ನಾರಾಯಣನಿಗೂ ನಿತ್ಯ ಸಂಪರ್ಕ ಇದ್ದೇ ಇದೆ. ಉದ್ದೇಶದ ಸಾಂಗತ್ಯವು ಸಿದ್ಧವಾಗುವವರೆಗೆ ಸಂವಾದವು ಸಾಗಿದೆ.

ಇವರ ವಿಷಯದಲ್ಲಿಯೇ ಋಗ್ವೇದವು **सयुजा सखाया** ಎಂದು ಹೇಳಿದೆ, ಒಂದೇ ಗಿಡದ ಮೇಲಿರುವ ಎರಡು ಪಕ್ಷಿಗಳು ಇವು ಎಂದು ರಾಧಾಕೃಷ್ಣನ್ನರು ಅಭಿಪ್ರಾಯಪಡುತ್ತಾರೆ

**विषाद:** ಮನಸಿನ ಕುಗ್ಗು ಇದಕ್ಕೆ ಯೋಗವೆಂದು ಕರೆದಿದ್ದಾರೆ. ಯಾಕೆಂದರೆ ಆತ್ಮನಿಗೆ ಬಂದ ಈ ಅಂಧಕಾರವು ಮುಂದಿನ ಅಧ್ಯಾತ್ಮಜೀವನಕ್ಕೆ ಮುಖ್ಯವಾದ ಹೆಜ್ಜೆಯು. . .ಇಂಥ ವಿಷಾದದಲ್ಲಿಯೇ ನಾವು ದೇವರಿಗೆ 'ದೇವ ! ಯಾಕೆ ನನ್ನ ಕೈ ಬಿಡುತ್ತಿ' ಎಂದು ಕೂಗುತ್ತೇವೆ ಎಂದು ರಾಧಾಕೃಷ್ಣನ್ನರು ಬರೆದಿದ್ದಾರೆ

"**विषादयोग** ವು ಆಚರಿಸುವ ಯೋಗವಲ್ಲ. ಇದರ ಮೇಲೆ ರಾಜಯೋಗ ಹಠಯೋಗಗಳಂತೆ ಗ್ರಂಥಗಳಿಲ್ಲ ವಿಷಾದವೆಂದರೆ ಖೇದ ಇದನ್ನು ತಂದುಕೊಳ್ಳಲಿಕ್ಕೆ ಯಾರು ಪ್ರಯತ್ನಿಸುತ್ತಾರೆ ?— ಇಲ್ಲಿ ಯೋಗ ಶಬ್ದವನ್ನು ವಿಲಕ್ಷಣ ಅರ್ಥದಲ್ಲಿ ಉಪಯೋಗಿಸಿದ್ದಾರೆ ಪ್ರತಿಯೊಂದು ಆನಂದಯೋಗವು ಒಂದೊಂದು ಕುಯೋಗವನ್ನೂ ದೂರ ಮಾಡುತ್ತದೆ. ದೈವೀಸಂಪದ್ಯೋಗವು ಆಸುರಸಂಪದ್ಯೋಗವನ್ನು ದೂರಮಾಡುತ್ತದೆ. ...ವಿಷಾದ ಬರದ ಹೊರ್ತು ಆನಂದದ ಯೋಗವು ಆಗುವದಿಲ್ಲ. .. ಈ ವಿಷಾದವು ಒಂದಿಲ್ಲೊಂದು ರೂಪದಿಂದ ಎಲ್ಲರಿಗೂ ಬರುತ್ತದೆ. ಅಖಂಡ ಆನಂದ ಕೊಡುವ ಈ ಅದ್ಭುತ ಭಗವದ್ಗೀತೆಯು ಇದರಿಂದ ಉದಯಕ್ಕೆ ಬಂತು." (ನಾತವಳೇಕರರು)

"**विषादयोग** ಅರ್ಜುನನಿಗೆ ಬಂದ ವಿಷಾದದಯೋಗ, ಕರ್ಮಯೋಗ, ಭಕ್ತಿಯೋಗಗಳು ಇವೆ ಆದರೆ ವಿಷಾದಯೋಗವು ಹೊಸದು. ಗೀತೆಯಲ್ಲಿ ಯೋಗ ಮತ್ತು **युज्** ಧಾತುವಿನಿಂದ ಸಾಧಿತವಾದ ಅನೇಕ ರೂಪಗಳು ಗೀತೆಯಲ್ಲಿ ಬಂದಿವೆ

ಇದರ ಅರ್ಥ 'ದೇವರಿಗೆ ಕೂಡಿಸು' ಎಂದು. ಇದೇ ಅರ್ಥದ ವಿಸ್ತಾರದಲ್ಲಿ ದೇವರೊಡನೆ ಸಂಧಿಸಲಿಕ್ಕೆ ಬೇಕಾದ ಬೇರೆ ಉಪಾಯಗಳಿಗೂ ಅದು ಅನ್ವಯಿಸಬಹುದು. ಈ ಕಡೆಯ ಅರ್ಥದಲ್ಲಿ ಇಲ್ಲಿ ಈ ಶಬ್ದವನ್ನು ಉಪಯೋಗಿಸಿದ್ದಾರೆ, ದುಃಖ, ವಿಷಾದ, ನಿರಾಶೆ, ಅಪಜಯ, ತೊಂದರೆಗಳು, ಅತೃಪ್ತಿಗಳು ಪ್ರಗತಿಗೆ ಪ್ರಬಲವಾದ ಪ್ರಚೋದಕಗಳು. ಹೀಗೆ ವಿಷಾದವು ಪರಮಾತ್ಮನ ಮಿಲನಕ್ಕೆ ಪ್ರಚೋದಕವಾಗಿದೆ" (The Gita in the Light of Modern Science – R B. Lal )

"ಗೀತೆಯಲ್ಲಿ ಯೋಗವೆಂದರೆ ಕರ್ಮಯೋಗವೇ ಎಂಬುದು ನಿಜವಾದ ಅರ್ಥವಲ್ಲ **समत्वं योग उच्यते** ಎಂದು ಗೀತೆಯಲ್ಲಿಯೇ **योग** ಶಬ್ದದ ವ್ಯಾಖ್ಯೆಯನ್ನು ಮಾಡಿದ್ದಾರೆ. ಅದಕ್ಕೆ ಗೀತೆಯಲ್ಲಿ ಅಧ್ಯಾಯ ಸಮಾಪ್ತಿ ಕಾಲಕ್ಕೆ ಹೇಳಿದ **योग शास्त्र** ದ ಅರ್ಥವು ಸಮತಾಶಾಸ್ತ್ರ (science of Equanimity) ವೆಂದು ಒಪ್ಪುವದು ಯೋಗ್ಯವಾಗಿದೆ. ಈಶ್ವರಪ್ರಾಪ್ತಿ, ಬ್ರಹ್ಮಪ್ರಾಪ್ತಿಗಳ ಅರ್ಥವೂ ಇದೇ ಅದೆ. ಪರೀಘವನ್ನು ಬಿಟ್ಟು ಮಧ್ಯ ಕೇಂದ್ರಕ್ಕೆ ಹೋಗುವದು ಎಂದರೆ ಅಲ್ಲಿ ಇರುವ ಸಮತ್ವವನ್ನು ಸಂಪಾದಿಸುವದು. ಪರೀಘದಲ್ಲಿ ಗತಿಯು ಹೆಚ್ಚಾಗಿರುತ್ತದೆ. ಆದುದರಿಂದ ಅಲ್ಲಿ ಚಂಚಲತೆ ಇರುತ್ತದೆ. ಕೇಂದ್ರದಲ್ಲಿ ಶಾಂತಿ ಮತ್ತು ಸಮತ್ವವಿರುತ್ತದೆ. ಈ ಸಮತ್ವವು ವ್ಯಕ್ತಿಯ ಮನಸಿನಲ್ಲಿ ಸ್ಥಾಪಿತವಾಗಬೇಕು ಈ ಸಮತ್ವ ಸಮಾಜದಲ್ಲಿ ರಾಷ್ಟ್ರದಲ್ಲಿ ಮತ್ತು ಜಗತ್ತಿನಲ್ಲಿ ಸ್ಥಾಪಿತವಾಗಬೇಕು. ಮಾನವ ಕುಲವೇ ಸಮತೆಯ ಸಲುವಾಗಿ ದೃಢಪಡಿಸುತ್ತದೆ. ಇದನ್ನೇ ಭಗವದ್ಗೀತೆಯಲ್ಲಿ ಹೇಳಿದೆ. ...ಆದುದರಿಂದ ಗೀತೆಗೆ ಸಮತಾಶಾಸ್ತ್ರವೆಂದು ಹೆಸರು" (ಸಾತವಳೇಕರರ ಗೀತಾ) **योऽयं योगः त्वया प्रोक्तः साम्येन मधुसूदन (६—३३)**

## ಉಪಸಂಹಾರವು

ಈ ಅಧ್ಯಾಯದಲ್ಲಿ ನಡೆದುದೇನು ? ಮುಖ್ಯವಾಗಿ ಇದರಲ್ಲಿ ಅರ್ಜುನನ ಆಕ್ಷೇಪ ಮತ್ತು ಕೊನೆಯಲ್ಲಿ ಅವನಿಂದ ವಿಷಾದದಿಂದ ಶಸ್ತ್ರಪರಿತ್ಯಾಗಪೂರ್ವಕವಾಗಿ ಯುದ್ಧನಿರಾಕರಣೆ. ಆ ನಿರಾಕರಣೆಯನ್ನು ವಿಚಾರಪೂರ್ವಕವಾಗಿ ತಮ್ಮ ಪೂರ್ವೇತಿಹಾಸ ಪರ್ಯಾಲೋಚನೆಯಿಂದ ಮತ್ತು ಭವಿಷ್ಯದಲ್ಲಿ ಆಗಬಹುದಾದ ಅನರ್ಥವನ್ನು ಲಕ್ಷ್ಯದಲ್ಲಿ ತಂದು ಅರ್ಜುನನು ನಿರ್ಣಯಿಸಿದ್ದಾನೆ. ಎರಡೂ ಸೈನ್ಯಗಳ ಮಧ್ಯದಲ್ಲಿ ನಿಂತ ಅರ್ಜುನನಿಗೆ ವಿಚಾರಗಳು ತಲೆಯಲ್ಲಿ ಬರಹತ್ತಿದಂತೆ ಮನಸ್ಸು ಭಾವಾವೇಶಕ್ಕೆ ಒಳಗಾಗಿ ಅದರ ಪರಿಣಾಮವು ಶರೀರದ ಮೇಲೂ ಆಯಿತು. ತಿಳಿಯಾಗಿ ಹೊರಟ ವಿಚಾರ ಪ್ರವಾಹದಲ್ಲಿ ಒಮ್ಮೆಲೆ ಭಾವನೆಯ ರಾಡಿಯು ಹೊಕ್ಕು ಇಡೀ ಪ್ರವಾಹವನ್ನೇ ಕಲಕುಮಲಕು ಮಾಡಿ ಅವನ ಶರೀರದ ಸ್ಥೈರ್ಯ, ಬುದ್ಧಿಯ ಧೈರ್ಯಗಳೆರಡನ್ನೂ ಕೊಚ್ಚಿಕೊಂಡು ಹೋಯಿತು. ಹೇಗೋ ಅರ್ಜುನನು ಸಾವರಿಸಿ

ಕೊಂಡು ಕೃಷ್ಣನಗೂಡ ಮಾತನಾಡಿದರೂ ಅವನು ಮೊದಲಿನ ಶುದ್ಧ ವಿವೇಕಿಯಾದ ಅರ್ಜುನನಲ್ಲ; ಅವನು ಗಾಬರಿಗೊಂಡ ವಿಚಾರದ ಸುಳಿವಿನಲ್ಲಿ ಸಿಕ್ಕು ಒದ್ದಾಡುತ್ತಿರುವ ಅರ್ಜುನ ಮಾತನಾಡುತ್ತಿದ್ದಾನೆ. ಈ ಸಂಗತಿಯನ್ನು ನಾವು ಮರೆಯಕೂಡದು. ಇದನ್ನು ಹಿನ್ನೆಲೆಯಲ್ಲಿಟ್ಟುಕೊಂಡು ನಾವು ಅವನಾಡಿದ ಮಾತಿನ ತಾತ್ಪರ್ಯ ತೆಗೆಯಬೇಕು.

ಒಂದು ಮಾತು : ಈ ಅಧ್ಯಾಯಕ್ಕೆ ಮೂವರು ಆಚಾರ್ಯರೂ ಭಾಷ್ಯವನ್ನು ಬರೆದಿಲ್ಲ ಇದಕ್ಕೆ ಹಲವರು ಅಪಾರ್ಥಮಾಡಿದ್ದಾರೆ. ಈ ಅಧ್ಯಾಯವನ್ನು ಶಂಕರಾಚಾರ್ಯರು ಮಹತ್ವದ್ದಲ್ಲವೆಂದು ತಿಳಿದಿದ್ದಾರೆಯೇ ! ಎಂಬ ಆಕ್ಷೇಪವೆತ್ತಿದ್ದಾರೆ. ಒಂದು ಮಾತನ್ನು ನಾವು ನೆನಪಿನಲ್ಲಿಡಬೇಕು. ಭಾಷ್ಯವು ಪ್ರವೃತ್ತವಾಗಬೇಕಾದರೆ 'ಅರ್ಥವು ಕಠಿಣವಾಗಿರಬೇಕು, ಅಪಾರ್ಥಕ್ಕೆ ಸುಲಭವಾಗಿ ಆಸ್ಪದವಿರಬೇಕು' ಎಂದರೆ ಮಾತ್ರ ಭಾಷ್ಯವನ್ನು ಬರೆಯುವ ಸಂಪ್ರದಾಯ. ಎರಡನೇ ಅಧ್ಯಾಯದಲ್ಲಿ ಹೊರಡುವ ತತ್ವವಿಚಾರಕ್ಕೆ ಇದು ಪೂರ್ವಭಾವಿಯಾದ ಪೂರ್ವರಂಗದಂತೆ ಇದೆ. ಸುಲಭವಾಗಿದೆ ಅಪಾರ್ಥಕ್ಕೆ ಆಸ್ಪದವಿಲ್ಲೆಂದು ಬಿಟ್ಟಿದ್ದಾರೆ.

ಆದರೆ ಆಧುನಿಕರು ಇದರ ಮೇಲೂ ಪ್ರಬಲವಾದ ಆಕ್ಷೇಪವನ್ನು ಎತ್ತಿದ್ದಾರೆ. ಶ್ರೀಮಾನ್ ಖರೆಯವರು ತಮ್ಮದೊಂದು ಚಿಕ್ಕದಾದ ಲೇಖನದಲ್ಲಿ ಈ ರೀತಿಯಾಗಿ ಬರೆಯುತ್ತಾರೆ— The way in which Arjuna has most logically putup his case in the first chapter of the Bhagavadgeeta and his firm decision not to leave the battle field at any cost do not warrant such charges (He preferred the life of a mendicant). The arguments put forward by him in the first chapter are so cogent and forceful that even a critical scrutiniser like Mahatma Gandhi is reported to have said that he had been impressed more by the soundness of Arjuna's arguments rathei than by the stereotype answers of Shri Krishna himself. No body can deny the magnanimity and straight forwardness of Arjuna in offering to forego his share in the ancestral property (Kingdom), if it entailed a fight, in which the very Kith and Kin– the would be recipients of the share– were sure to be wiped off ! ಅರ್ಜುನನ್ನು ಒಳ್ಳೆ ತರ್ಕಬದ್ಧವಾಗಿ ತನ್ನ ಪಕ್ಷವನ್ನು ಮುಂಡಿಸಿದ್ದರಿಂದ ಏನಾದರೂ ಯುದ್ಧಭೂಮಿಯನ್ನು ಬಿಡುವದಿಲ್ಲೆಂಬ ದೃಢನಿರ್ಧಾರವನ್ನು ಮಾಡಿದ್ದರಿಂದ ಅವನನ್ನು ಇಂಥ ಆಪಾದನೆಗಳಿಗೆ ಗುರಿಪಡಿಸುವದು ಯೋಗ್ಯವಾಗುವದಿಲ್ಲ. (ಅರ್ಜುನನು ಕ್ಷತ್ರಿಯ ವೃತ್ತಿಯಕಿಂತ ಭಿಕ್ಷಾವೃತ್ತಿಯನ್ನು ಹೆಚ್ಚು ಮೆಚ್ಚಿದನು). ಮೊದಲನೆ ಅಧ್ಯಾಯದಲ್ಲಿ ಅವನು

ಮಂಡಿಸಿದ ವಾದವು ಎಷ್ಟು ಸಂಗತ ಮತ್ತು ಪ್ರಬಲವಾಗಿದೆ. ಅದರ ಪರಿಣಾಮವಾಗಿ ಮಹಾತ್ಮಾ ಗಾಂಧಿಯವರಂಥ ಸೂಕ್ಷ್ಮ ವಿಮರ್ಶಕರು ಸಹ ಹೀಗೆ ಹೇಳಿದರೆಂದು ವರದಿಯಾಗಿದೆ. "ಅರ್ಜುನನ ವಾದದ ಭದ್ರತೆಯು ಮನಸಿನ ಮೇಲೆ ಕೃಷ್ಣನ ಸಾಂಪ್ರದಾಯಿಕ ಉತ್ತರಗಳಕ್ಕಿಂತ ಹೆಚ್ಚು ಪರಿಣಾಮವನ್ನು ಮಾಡಿತು ಯುದ್ಧವೇ ಆಗುವದಾಗಿ ಅದರಲ್ಲಿ ನನ್ನ ಪಾಲಿನ ರಾಜ್ಯವನ್ನು ಅನುಭವಿಸುವ ಬಂಧು ಬಳಗವೇ ಪೂರ್ತಿಯಾಗಿ ನಾಶವಾಗುವದಾದರೆ ತನಗೆ ಬರತಕ್ಕ ಪಿತ್ರಾರ್ಜಿತ ಆಸ್ತಿಯನ್ನೇ ಬಿಡುವದಕ್ಕೆ ಸಿದ್ಧನಾದ ಅರ್ಜುನನ ಔದಾರ್ಯ ಮತ್ತು ಸರಳತನವನ್ನು ಯಾರೂ ಅಲ್ಲಗಳೆಯಲಾರರು.)

ಅರ್ಜುನನ ಪಕ್ಷ ಸರಿಯಾದದ್ದೇ ? ಎನ್ನುವದೇ ಮೂಲ ಪ್ರಶ್ನೆ. ಸರಳವಾದ ಸಂದರ್ಭ ಸುಲಭವಾದ ವಾಕ್ಯಗಳು ತಪ್ಪು ತಿಳುವಳಿಕೆಗೆ ಆಸ್ಪದವಿಲ್ಲದ ನಿರೂಪಣೆಯಾದುದರಿಂದ ಯಾವ ಆಚಾರ್ಯರೂ ಭಾಷ್ಯವನ್ನು ಬರೆದಿಲ್ಲ. ಅರ್ಜುನನ ಯುದ್ಧ ನಿರಾಕರಣೆಯ ಪ್ರಶ್ನೆಗೆ ಮೂಲಭೂತವಾದ ಒಂದು ಗ್ರಹಿಕೆ ಇದೆ. ಅದನ್ನು ಎಲ್ಲ ಆಚಾರ್ಯರೂ ಟೀಕಾಕಾರರೂ ವಿಮರ್ಶಕರೂ ಗ್ರಹಿಸಿದ್ದಾರೆ ಅದು ಅರ್ಜುನನ ಅಜ್ಞಾನ ಅಥವಾ ಮೋಹ ರಾಜ್ಯವು ಯುದ್ಧಪ್ರಾರಂಭಕ್ಕೆ ಅಂತಿಮವಾದ ಕಾರಣವಾಗಿದ್ದರೂ ಯುದ್ಧ ಹೂಡಲಿಕ್ಕೆ ಮೂಲವಾದ ಕಾರಣ ಬೇರೆಯಿದೆ. ರಾಜ್ಯದಲ್ಲಿ ಬರೀ ರಾಜರಷ್ಟೇ ಇಲ್ಲ; ಪ್ರಜಾಜನರೂ ಇದ್ದಾರೆ. ಈ ಯುದ್ಧವು ಪ್ರಜಾಜನರಿಗೆ ಸಂಬಂಧಿಸಿದೆಯೇ ? ಮೂಲದಲ್ಲಿ ಇದು ಇಡೀ ದೇಶದ ಪ್ರಜಾಜನರ ಹಿತಕ್ಕಾಗಿಯೇ ಹೂಡಿದ ಯುದ್ಧವು. ದುರ್ಯೋಧನಾದಿಗಳ ದಬ್ಬಾಳಿಕೆ ಮೀತಿಮೀರಿ ನಿಂತಿದೆ. ರಾಜ್ಯವು ಹಸ್ತಾಂತರವಾಗಿ ಹಿತಕಾರಿಗಳ ಕೈಗೆ ಬಂದರೆ ಪ್ರಜಾಜನರಿಗೆ ಕ್ಷೇಮವಾಗುವದು. ವಿಶ್ವದ ದೃಷ್ಟಿಯಲ್ಲಿ ಈ ಕಂಟಕವನ್ನು ವಿಶ್ವಕರ್ತನು ನಿವಾರಿಸಬೇಕಾಗಿದೆ. ಇದು ಬಹು ದೊಡ್ಡ ಪ್ರಮಾಣದ ಉಪಟಳವಾದುದರಿಂದ ಪರಮಾತ್ಮನೇ ಅವತರಿಸಿ ಬಂದು ಪಾಂಡವಾದಿಗಳ ನೆವಮಾಡಿ ದುಷ್ಟರನ್ನು ದಮನಮಾಡಲು ಯುದ್ಧವನ್ನು ಹೂಡಲೇಬೇಕಾಯಿತು. ಧುರ್ಯೋಧನಾದಿಗಳ ಅನ್ಯಾಯಕ್ಕೊಳಪಟ್ಟ ಮುಖ್ಯರಾದ ಪಾಂಡವರನ್ನು ಮುಂದೆಮಾಡಿಕೊಂಡು ಶ್ರೀಕೃಷ್ಣನು ಯುದ್ಧದ ಕಹಳೆಯನ್ನು ಊದಿಸಿದನು. ಈ ಮಹೋದ್ದೇಶವನ್ನು ಅರ್ಜುನನು ಅರಿತಿದ್ದರೂ ಅಹಂಭಾವದಿಂದ ಅಜ್ಞಾನದಿಂದ ತನಗೆ ರಾಜ್ಯವನ್ನು ಕೊಡಿಸಲಿಕ್ಕೆ ಮಹಾಭಾರತ ಯುದ್ಧ ಪ್ರಾರಂಭವಾಗುವದೆಂದು ತಿಳಿದುಕೊಂಡು ತನಗೆ ರಾಜ್ಯ ಕೊಡಿಸುವದಕ್ಕಾಗಿ ಈ ರಕ್ತಪಾತ ಬೇಡವೆಂದು ಅರ್ಜುನನ ಮತ "ಯುದ್ಧವು ಪೂರ್ತಿಯಾಗಿ ನಿನಗೆ ಸಂಬಂಧಿಸಿದ್ದಲ್ಲ. ನೀನು ನಿಮಿತ್ತ ಮಾತ್ರ. ಆದರೆ ನೀನು ನನ್ನ ಭಕ್ತನಾದುದರಿಂದ ಇದರಲ್ಲಿ ನಿನ್ನದು ಮುಖ್ಯ ಪಾತ್ರ ಜಗತ್ತನ್ನು ನಿಷ್ಕಂಟಕ ಮಾಡುವದು ನನ್ನ ಕೆಲಸ ಅದಕ್ಕೆ ನಿನ್ನನ್ನು ಬಳಸಿಕೊಂಡಿದ್ದೇನೆ ಅಷ್ಟೇ !!" ಎಂದು ಶ್ರೀಕೃಷ್ಣನ ಮತ.

ಆದರೆ ಯುದ್ಧವನ್ನೇ ಏಕೆ ಮಾಡಬೇಕು ? ಶಾಂತಿಯುತವಾದ ಅಹಿಂಸಾ ಮಾರ್ಗದಿಂದ ಜಗತ್ತನ್ನು ಸುಧಾರಿಸುವದು ಭಗವಂತನಿಗೆ ಸಾಧ್ಯವಿದ್ದಿಲ್ಲವೇ ? ತಿಳಿಯದಿದ್ದ ದುರ್ಯೋಧನನು ತಪ್ಪುಮಾಡಿದರೂ ತಿಳಿದವರಾದ ನಾವೇಕೆ ತಪ್ಪು ದಾರಿಹಿಡಿಯಬೇಕು ? **(यद्यप्येते न पश्यंति लोभोपहत चेतसः)** ಎಂದು ಅರ್ಜುನನು ಕೃಷ್ಣನನ್ನು ಪ್ರಶ್ನಿಸಿದನು. ಉಪದೇಶದಿಂದ ಅವರು ಒಳ್ಳೆದಾರಿಗೆ ಬರದಿದ್ದರೆ ಅವರ ಕೈಯಿಂದ ನಾವು ಸಾಯೋಣ ; ನಾವು ಅವರನ್ನು ಕೊಲ್ಲುವದು ಬೇಡ ಎಂದು ಅರ್ಜುನನ ಅಹಿಂಸಾವಾದ. ಸ್ವಜನರನ್ನು ಕೊಲ್ಲುವದು ಹೇಗೆ ? ಎನ್ನುವದು ಅರ್ಜುನನ ಪ್ರಶ್ನೆ.

ಈ ಪ್ರಶ್ನೆಯನ್ನು ಪೂರ್ತಿಯಾಗಿ ನುರಿಸಿ ಸರ್ವಸಂಗ್ರಾಹಕ ಉತ್ತರ ಹೇಳ ಬೇಕಾದರೆ ನಮಗೆ ಸಂದರ್ಭಾನುಗುಣವಾದ ವಿಚಾರವಿಕಾಸವು ಬೇಕು. ದುರ್ಯೋಧನನು ದ್ರೋಣಾಚಾರ್ಯರಿಗೆ ಉಭಯ ಸೈನ್ಯದ ಸಮಾಲೋಕನವನ್ನು ಮಾಡಿಸಿ ಅದರ ಪರಿಣಾಮವನ್ನು ಹೇಳುತ್ತಾನೆ. "ಭೀಷ್ಮರಿಂದ ರಕ್ಷಿತವಾದ ನಮ್ಮ ಸೈನ್ಯವು ಅಪೂರ್ಣವಾಗಿದೆ. ಭೀಮನಿಂದ ರಕ್ಷಿತವಾದ ಶತ್ರು ಸೈನ್ಯವು ಪರಿಪೂರ್ಣವಾಗಿದೆ". ಆದುದರಿಂದ ಜಾಗರೂಕವಾಗಿರಬೇಕೆಂದು ದ್ರೋಣರಿಗೆ ಹೇಳುತ್ತಾನೆ. ದುರ್ಯೋಧನನಿಗೆ ಭೀಮನ ಹೆದರಿಕೆ ಬಹಳ. ಆಗ ಭೀಷ್ಮರು ಸಿಂಹಗರ್ಜನೆಯಿಂದ ಶಂಖಧ್ವನಿಯಿಂದ ತಮ್ಮ ಉತ್ಸಾಹವನ್ನು ವ್ಯಕ್ತಮಾಡಿ ಸೈನಿಕರಿಗೆ ಹುರಿದುಂಬಿಸಿದರು. ಇದಕ್ಕೆ ಪಾಂಡವರೂ ಉತ್ಸಾಹದ ಶಂಖಧ್ವನಿಯಿಂದ ಉತ್ತರಿಸಿದರು ಆಗ ಇನ್ನು ಯುದ್ಧ ಪ್ರಾರಂಭವಾಗಬೇಕು. ಅಷ್ಟರಲ್ಲಿ ಅರ್ಜುನನು ಸೈನ್ಯಗಳ ಮಧ್ಯದಲ್ಲಿ ನಿಂತು ಉಭಯ ಸೈನ್ಯಗಳನ್ನು ನೋಡಿ, ಅವನ ಮನಸು ಒಮ್ಮೆಲೆ ಉದ್ವಿಗ್ನಗೊಂಡು ಕುಪ್ಪಳಿಸಿತು ವೀರ್ಯೋತ್ಸಾಹ ಅಳಿಯಿತು. ವಿಷಾದವು ಆವರಿಸಿ ಯುದ್ಧಮಾಡುವದಿಲ್ಲೆಂದು ಹೇಳಿ ಶಸ್ತ್ರಗಳನ್ನು ಕೆಳಕ್ಕಿಟ್ಟನು. ಆಗ ಅವನು ಕೊಟ್ಟಕಾರಣಗಳು —

೧) ಸ್ವಜನರ ಕೊಲೆಯಾದ ಮೇಲೆ ರಾಜ್ಯದಿಂದ ಏನು ಪ್ರಯೋಜನ ? ಸ್ವರ್ಗ ಬೇಡ.

೨) ಈ ಯುದ್ಧದಿಂದ ಪಾಪವೇ ಬರುವದು. ಅ) ಸ್ವಜನರನ್ನು ಕೊಲ್ಲುವದರಿಂದ; ಬ) ಕುಟುಂಬಗಳ ನಾಶದಿಂದ ಸ್ತ್ರೀಯರು ದುಷ್ಟರಾಗುವರು. ಜಾತಿ ಸಂಕರವಾಗುವದು; ಕ) ಪಿತೃಗಳಿಗೆ ಪಿಂಡ ತಪ್ಪುವದು; ಗ) ಗುರುಗಳನ್ನು ಮತ್ತು ಹಿರಿಯರನ್ನು ಕೊಲ್ಲುವದು ಇವೆಲ್ಲ ಪಾಪಕ್ಕೆ ಕಾರಣಗಳು

ಈಗ ಉಪಪತ್ತಿಯ ದೃಷ್ಟಿಯಿಂದ, ಈ ಕಾರಣಗಳ ಬೆಲೆ ಏನು ? ಅರ್ಜುನನಿಗೆ ಇದನ್ನೆಲ್ಲ ನೋಡಿಯೇ ದುರ್ಯೋಧನಾದಿಗಳ ಮೇಲೆ ಒಳ್ಳೆ ದಯೆ ಹುಟ್ಟಿತು ಎಂದು

ಹೇಳುತ್ತಾರೆ ಅರ್ಜುನನ ಮನಸು ಆಗ ಸರಿಯಾದ ದಾರಿಯಲ್ಲಿ ನಡೆಯುತ್ತಿತ್ತೆ ? ಅವನ ಬುದ್ಧಿಯು ನಿಚ್ಚಳವಾಗಿ ವಿಚಾರ ಮಾಡುವದಕ್ಕೆ ಸಮರ್ಥವಾಗಿತ್ತೆ ? ಭಾವಗಳು ಪರಿಶುದ್ಧವಾಗಿ ಏಳುತ್ತಿದ್ದವೇ ?

ರಾಮಾನುಜರು ಅರ್ಜುನನಿಗೆ ಈಗ ತನ್ನ ಬಂಧುಗಳ ದುರ್ದಶೆಯನ್ನು ನೋಡಿ **कृपयापरयाविष्टः** ಅತ್ಯಂತ ಕರುಣೆಯಿಂದ ಮನಸ್ಸು ಕರಗಿತು ಎಂದು ಹೇಳುತ್ತಾರೆ ಶಂಕರಾನಂದ ಮಧುಸೂದನ ಸರಸ್ವತಿ ಮೊದಲಾದವರು ಅರ್ಜುನನ ವೈರಾಗ್ಯವನ್ನು ಹೊಗಳುತ್ತಾರೆ ಅರ್ಜುನನ ವಾದವನ್ನು ಅವರು ಪೂರ್ತಿಯಾಗಿ ಎತ್ತಿ ಹಿಡಿಯುತ್ತಾರೆ. ಇದಕ್ಕೆ ಅನುಗುಣವಾಗಿಯೇ ೨ನೇ ಅಧ್ಯಾಯದ ೧೧ನೇ ಶ್ಲೋಕದಲ್ಲಿರುವ **प्रज्ञावादांश्चभाषसे** ಎಂದರೆ 'ಜ್ಞಾನಿಗಳ ಮಾತನ್ನು ಹೇಳುತ್ತೀ ಎಂದು ಅರ್ಥೈಸುತ್ತಾರೆ ಹೀಗೆ ಅರ್ಜುನನ ವಾದವು ಬುದ್ಧಿವಂತಿಕೆಯ ಮಾತಾಗಿದ್ದರೆ ಮುಂದೆ ಕೃಷ್ಣನಿಗೆ ಬುದ್ಧಿಯ ಮಾತುಗಳನ್ನು ಹೇಳಲಿಕ್ಕೆ ಅವಕಾಶ ಹೇಗೆ ? ಭಗವಾನ್ ಕೃಷ್ಣನು ಅರ್ಜುನನಿಗೆ ಉಪದೇಶಿಸಲಿಕ್ಕೆ ಅವಕಾಶ ಬೇಕಿದ್ದರೆ ಅರ್ಜುನನ ಮಾತುಗಳು ಮೋಹನಿಮಿತ್ತಕವೆಂದು ಒಪ್ಪಲೇಬೇಕು. ಇದಕ್ಕೆ ಉಪಪತ್ತಿಯನ್ನು ಹಿಂದೆ ಹೇಳಿದ್ದಾಗಿದೆ. ಈಗ ಒಂದು ಪ್ರಶ್ನೆ ಉಳಿದಿದೆ. ಅದು ಎಂದರೆ ಕೃಷ್ಣನು ಯುದ್ಧದ ಹಾದಿಯನ್ನೇಕೆ ಹಿಡಿದ; ಅಹಿಂಸೆಯ ಹಾದಿಯನ್ನೇಕೆ ಹಿಡಿಯಲಿಲ್ಲ ಇದರ ಪೂರ್ತಿ ವಿಚಾರವಾಗಬೇಕಾಗಿದೆ.

ಅರ್ಜುನನಲ್ಲಿ ಈಗ ಮೂರು ದೋಷಗಳು ತೋರಿ ಬರುತ್ತವೆ. ೧) ಅವನಲ್ಲಿ ಈಗ ಅಹಂಕಾರ ಹೆಚ್ಚಿದೆ. ನಾನು ಯುದ್ಧ ಮಾಡುತ್ತೇನೆ, ನಾನು ವೈರಿಗಳನ್ನು ಕೊಲ್ಲುತ್ತೇನೆ, ನಾನು ವೈರಿಗಳನ್ನು ಗೆಲ್ಲುತ್ತೇನೆ. ಇದು ನಿಜವಾದ ವಿರಕ್ತಿಯಲ್ಲ, ೨) ಮೇಲಾಗಿ ಅರ್ಜುನನು ಸ್ಪಷ್ಟವಾಗಿ ಹೃದಯದೌರ್ಬಲ್ಯದ ಚಿನ್ಹಗಳನ್ನು ತೋರಿಸುತ್ತಾನೆ ಮತ್ತು ಬಾಯಿಂದ ಒಪ್ಪಿಕೊಳ್ಳುತ್ತಾನೆ. ಮನೋದೌರ್ಬಲ್ಯವು ಶರೀರದ ಮೇಲೆ ಸಹ ಪರಿಣಾಮ ಮಾಡಿದೆ. ಬುದ್ಧಿಯೂ ಅವನು ಆರೋಗ್ಯವಂತನಿದ್ದಾಗ ಮಾಡಿದ ನಿರ್ಣಯವನ್ನು ತಿರಸ್ಕರಿಸಿ ಯುದ್ಧ ಮಾಡಬಾರದೆಂಬ ನಿರ್ಣಯಕ್ಕೆ ಬಂದಿತು ೩) ಅರ್ಜುನನು ಅಪರೋಕ್ಷಜ್ಞಾನಿಯಾಗಿದ್ದರೂ ಆ ದಿವ್ಯ ಜ್ಞಾನದ ಸಹಾಯ ಪಡೆಯದೆ ಶುಷ್ಕತರ್ಕದ ಮೋಹಕ್ಕೆ ಬಿದ್ದು ಅದು ತೋರಿದ ಅಡ್ಡದಾರಿಯನ್ನು ತುಳಿಯಹತ್ತಿದ್ದಾನೆ.

ಶ್ರೀಕೃಷ್ಣನು ಈ ಮೂರೂ ದೋಷಗಳನ್ನು ಲಕ್ಷ್ಯದಲ್ಲಿರಿಸಿ ಅವುಗಳ ನಿವಾರಣೆಗೆ ಉಪದೇಶಿಸಿದನು ಅರ್ಜುನನಿಗೆ ಬಂದ ಈ ಕಠಿಣ ರೋಗಕ್ಕೆ ಉಪಾಯವನ್ನು ಶ್ರೀಕೃಷ್ಣನೊಬ್ಬನೇ ಯೋಜಿಸಬಲ್ಲ. ೧) ಅರ್ಜುನನು ಪೂರ್ತಿಯಾದ ಕರ್ತನಲ್ಲ ಎಂಬದನ್ನು ಅರಿತು ಅಹಂಕಾರ ಬಿಡಬೇಕು. ೨) ಹೃದಯ ದೌರ್ಬಲ್ಯ

ವನ್ನು ಸರಿಯಾದ ಜ್ಞಾನದ ಸಹಾಯದಿಂದ ನಿವಾರಿಸಬೇಕು. ಧರ್ಮಯುದ್ಧವೇ ಇದಕ್ಕೆ ಯೋಗ್ಯವಾದ ಉಪಾಯ. ೩) ದಿವ್ಯಜ್ಞಾನದ ಸಹಾಯವನ್ನು ತಾತ್ಕಾಲಿಕ ವಾಗಿ ಕಳೆದುಕೊಂಡವನಿಗೆ ದಿವ್ಯಜ್ಞಾನ ನೀಡಿ, ಅದರ ಬೆಳಕಿನಲ್ಲಿ ನೋಡಿದರೆ ಎಲ್ಲವೂ ಸ್ಪಷ್ಟವಾಗಿ ತಿಳಿಯುವದು ಎಂದು ಆಶ್ವಾಸನೆ ನೀಡುತ್ತಾನೆ

ಈ ಮೂರೂ ಉಪಾಯಗಳನ್ನು ಜೋಡಿಸಿದ ಮೇಲೆ ಅರ್ಜುನನು **नष्टो मोहः स्मृतिः लब्धात्वत्प्रसादान्मयाच्युत** ಎಂದು ಹೇಳಿ, **करिष्ये वचनंतव** ಎಂದು ಯುದ್ಧಕ್ಕೆ ಅಣಿಯಾದನು

ಇಲ್ಲಿ ಅಹಂಕಾರವನ್ನು ಕಳೆಯುವದಕ್ಕೆ ಕೃಷ್ಣನ ಹಾದಿಯೊಂದೇ ಇಲ್ಲ. ಬುದ್ಧ ದೇವನ ಮಾರ್ಗವೂ ತೆರೆದಿದೆ. ಕೃಷ್ಣನು ಲೋಕವ್ಯಾಪಾರದಲ್ಲಿ ಪರಮಾತ್ಮನ ಅಂಗ ವನ್ನು ದೃಢಪಡಿಸಿ ಆವನ ಪ್ರೀತ್ಯರ್ಥವಾಗಿ ತನಗೆ ಪ್ರಾಪ್ತವಾದ ಧರ್ಮ ಯುದ್ಧ ವನ್ನು ಮಾಡಿ ಕೃತಕೃತ್ಯನಾಗುವ ದಾರಿಯನ್ನು ಅರ್ಜುನನಿಗೆ ತೋರಿಸಿದನು. ಆದರೆ ಬುದ್ಧದೇವನು ಅಹಂಕಾರದ ಪೂರ್ತಿ ನಾಶಮಾಡಿ ಸಂಪೂರ್ಣವಾದ ಅಹಿಂಸೆಯನ್ನು ಆಚರಿಸುವದೇ ಜಗತ್ತಿನಲ್ಲಿ ಶಾಂತಿಯ ಮಾರ್ಗ ದೇವರಿಲ್ಲದ ನಾಸ್ತಿಕವಾದದ ಬಲ ದಿಂದ ದೇವರ ಕರ್ತೃತ್ವವನ್ನು ಅಲ್ಲಗಳೆದು ಅಹಂಕಾರದ ಪೂರ್ತಿ ಪರಿತ್ಯಾಗದಿಂದ ತನ್ನ ಕರ್ತೃತ್ವವನ್ನೂ ಅಳಿದು ಅಹಿಂಸೆಯನ್ನು ಆಚರಿಸುವದೇ ನಿಜವಾದ ಶಾಂತಿಮಾರ್ಗ. ಕೃಷ್ಣನ ಧರ್ಮಯುದ್ಧದ ಮಾರ್ಗಕ್ಕಿಂತಲೂ ಬುದ್ಧನ ಯುದ್ಧಪರಿತ್ಯಾಗರೂಪ ಅಹಿಂಸಾ ಮಾರ್ಗವೇ ಹೆಚ್ಚು ಶ್ರೇಯಸ್ಕರವೆಂದು ಆಧುನಿಕರಿಗೂ ಅನಿಸುತ್ತದೆ. ಮಹಾತ್ಮಾಗಾಂಧಿಯವರು ಈ ವಿಚಾರದ ಸುಳಿಯಲ್ಲೇ ಸಿಕ್ಕು ಕೃಷ್ಣನು ಯುದ್ಧವನ್ನು ಉಪದೇಶಿಸಿಲ್ಲವೆಂಬ ನಿರ್ಣಯಕ್ಕೆ ಬಂದು ಮಹಾಭಾರತ ಯುದ್ಧವನ್ನೇ ಅಲ್ಲ ಗಳೆದರು. ಕೃಷ್ಣನು ಉಪದೇಶಿಸಿದ್ದು ನಿತ್ಯದಲ್ಲಿ ಮನೋಭೂಮಿಕೆಯ ಮೇಲೆ ನಡೆಯುವ ಒಳಿತು–ಕೆಡಕುಗಳ ನಡುವೆ ನಡೆಯುವ ನೈತಿಕ ಯುದ್ಧ, ಹೊರಗೆ ರಕ್ತ ಹರಿಸುವ ಘೋರ ಯುದ್ಧವನ್ನು ಅವನು ಉಪದೇಶಿಸಿಲ್ಲವೆಂದು ಅನಾಸಕ್ತಿ ಯೋಗದಲ್ಲಿ ವಾದಿಸಿದ್ದಾರೆ.

೨) ಇನ್ನು ಹೃದಯ ದೌರ್ಬಲ್ಯದ ಪ್ರಶ್ನೆ: ಗೀತೆಯು ಅರ್ಜುನನು ಹೃದಯ ದೌರ್ಬಲ್ಯದಿಂದ ಪೀಡಿತನಾಗಿ ಬುದ್ಧಿಯ ಮೇಲಿನ ಹಿಡಿತವನ್ನು ಕಳೆದುಕೊಂಡನು ಎಂದು ಒಪ್ಪುತ್ತದೆ ಡಾ. ರೀಳೆಯವರು ತಮ್ಮ ಗೀತೆಯ ಮೇಲಿನ ಮನೋವಿಶ್ಲೇಷ ಣಾತ್ಮಕ ವಿವೇಚನೆಯಲ್ಲಿ ಹೀಗೆ ಹೇಳುತ್ತಾರೆ:—"ಕೌರವರ ಮೇಲಿನ ದ್ವೇಷ–ಈರ್ಷೆ ಗಳನ್ನು ಅರ್ಜುನನು ಉಳಿದ ಹವ್ಯಾಸದಲ್ಲಿ ಹತ್ತಿಕ್ಕಿದ್ದನು ಹತ್ತಿಕ್ಕಿದ ಮನಸಿನ ಆವೇ ಗವು ವಿಚಿತ್ರ ಶಕ್ತಿಯನ್ನು ಸಂಪಾದಿಸಿತು. ಆ ಉತ್ಸಾಹವನ್ನು ಅರ್ಜುನನು ಯೋಗ್ಯ ವಾದ ಮಾರ್ಗದಲ್ಲಿ ನಿಯಂತ್ರಿಸಲಿಕ್ಕೆ ಸಮರ್ಥನಾಗಲಿಲ್ಲ ಆದರೂ ಯುದ್ಧ ಭೂಮಿಗೆ

ಬಂದಾಗ ಅವನಿಗೆ ವಿಜಯದ ಆಶೆ ಇತ್ತು, ರಾಜ್ಯ ಸಂಪಾದಿಸುವ ಉಮೇದಿ ಇತ್ತು. ಆದರೆ ವೈರಿಗೆ ಎದುರು ನಿಂತಾಗ ಒಮ್ಮೆಲೇ ತಡೆದುಹಿಡಿದ ಆ ಉತ್ಸಾಹವು ಅರ್ಥಟಿ ಸುತ್ತ ಹೊರಬಿತ್ತು. ಈ ಉತ್ಸಾಹವನ್ನು ಸರಿಯಾಗಿ ಸಂಚಾಲಿಸಲಿಕ್ಕೆ ಅರ್ಜುನನಿಗೆ ಸಾಧ್ಯವಾಗಲಿಲ್ಲ. ಅವನ ಜಾಗೃತ ಅರಿವು ಪಾಪದ ಬೆದರಿಕೆಯನ್ನು ಅರ್ಜುನನ ಮುಖಕ್ಕೆ ಹಿಡಿಯಿತು. ಉತ್ಸಾಹವು ಕುಗ್ಗಿತು. ಈ ಮಾನಸಿಕ ಗೊಂದಲವು ಹೃದಯದೌರ್ಬಲ್ಯ ಅಥವಾ ಮನೋದೌರ್ಬಲ್ಯ (psycho neurosis) ದಲ್ಲಿ ಪರಿಣಮಿಸಿತು ಇದೊಂದು ಮನಸಿನ ಕ್ರಿಯೆಯನ್ನು ವ್ಯತ್ಯಾಸಗೊಳಿಸುವ ಒಂದು ರೋಗವು. ಆದರ ಪರಿಣಾಮವು ದೇಹದ ಮೇಲೂ ಆಗುತ್ತದೆ. ಮನಸಿನಲ್ಲಿ ವಿಷಾದವು ಆವರಿಸಿತು. ಗಾಂಡೀವವು ಕೈಯಿಂದ ಕಳಚಿಬಿತ್ತು. ಕೃಷ್ಣನು ಎಷ್ಟು ಉತ್ಸಾಹ ತುಂಬಿದರೂ ಅವನು ಯುದ್ಧಕ್ಕೆ ಸಿದ್ಧನಾಗಲಿಲ್ಲ. ಮನೋದೌರ್ಬಲ್ಯವು ಶರೀರದ ಮೇಲೆ ವಿಪರೀತ ಪರಿಣಾಮ ಮಾಡಿತು. ಯುದ್ಧ ಮಾಡುವದಿಲ್ಲೆಂಬ ವಿಪರೀತ ನಿರ್ಧಾರಕ್ಕೆ ಅರ್ಜುನನನ್ನು ಮುಟ್ಟಿಸಿತು.

ಇಡೀ ಗೀತೆಯನ್ನು ಈ ರೋಗಕ್ಕೆ ಉಪಾಯವಾಗಿ ಅರ್ಥೈಸಬೇಕು. ಆಚಾರ್ಯರು ಹೀಗೆ ಮಾಡಲಿಲ್ಲ. ಅವರು ಮಾಡಿದ ಆಧ್ಯಾತ್ಮಿಕ ವಿಶ್ಲೇಷಣೆ ಮತ್ತು ಸಂಶ್ಲೇಷಣೆಗಳು (analysis and Synthesis) ಅರ್ಜುನನ ಈ ದೋಷಕ್ಕೆ ಸಂಬಂಧವಿಲ್ಲದಂತೆ ಮಾಡಿದ್ದಾರೆಂದು ಆಪಾದಿಸಿ, ಮನೋವಿಜ್ಞಾನದ ವಿಶ್ಲೇಷಣೆಯ ರೂಪದಲ್ಲಿ ಡಾ. ರೀಳೆಯವರು ಗೀತೆಯ ವಿವೇಚನೆಯನ್ನು ಮಾಡಿದ್ದಾರೆ.

೩) ಆದರೆ ಮನೋವಿಶ್ಲೇಷಣೆಯ ಈ ಗೂಢ ಮನೋವಿಜ್ಞಾನ (Depth Psychology) ಕ್ಕೂ ತತ್ವಜ್ಞಾನದ ಆತ್ಮತತ್ವಕ್ಕೂ ನಿಕಟವಾದ ಸಂಬಂಧವಿರ ಬೇಕೆಂದು ಊಹಿಸಿ ಆಧುನಿಕ ಅನೇಕ ಮನೋವಿಜ್ಞಾನಿಗಳು ಆ ದಿಸೆಯಲ್ಲಿ ಅನೇಕ ಸಂಶೋಧನೆಗಳನ್ನು ನಡೆಸಹತ್ತಿದ್ದಾರೆ. ಮುಖ್ಯವಾಗಿ ಈ ವಿಶ್ಲೇಷಣೆಯ ಮಾರ್ಗವೇ ಆಧ್ಯಾತ್ಮ ಮಾರ್ಗಕ್ಕೆ ಹೊಂದದಿರುವದರಿಂದ ಈಗಿನ ವಿಜ್ಞಾನಿಗಳು ಸಹಜಾನುಭವಕ್ಕೆ (Spontaneous exprience) ಅತ್ಯಂತ ಅನುಕೂಲವಾದ ಪದ್ಧತಿಯನ್ನು ಅನುಸರಿಸ ಹತ್ತಿದ್ದಾರೆ. ಈ ಹೊಸ ವಿಜ್ಞಾನದಿಂದ ಮನುಷ್ಯ ತಾನು ಆತ್ಮನೆಂಬ ಅನುಭವಕ್ಕೆ ಮತ್ತೆ ತಿರುಗುತ್ತಿದ್ದಾನೆ. ಮಾನವನಲ್ಲಿ ವ್ಯಕ್ತಿತ್ವವು ಹೆಚ್ಚು ಸ್ಥಿರವಾದ ತತ್ವವನ್ನು ಕಾಣುತ್ತದೆ. ಈಗಿನ ಮನೋವಿಜ್ಞಾನವು (leads modern man in search of soul to a soul, beyond psychology) (The Death and Rebirth of Psychology by Ira progoff.) ಆತ್ಮ ಸಂಶೋಧನೆಯಲ್ಲಿದ್ದ ಆಧುನಿಕ ಮನುಷ್ಯನನ್ನು ಮನೋ ವಿಜ್ಞಾನದ ಆಚೆಗಿರುವ ಆತ್ಮದ ಕಡೆಗೆ ಕರೆದೊಯ್ಯುತ್ತಿದೆ. ಮನುಷ್ಯನ ಮನೋಭೂಮಿಕೆಯು ಮನಸಿನ ಆಚೆಗಿರುವ ಒಂದು ತತ್ವವನ್ನು ಸೂಚಿಸುತ್ತದೆ. ಅದರ ಪ್ರತಿಬಿಂಬವೇ ಮನೋ

ವೇದಿಕೆಯಲ್ಲಿ ಬಿದ್ದಿರುತ್ತದೆ. ಫ್ರಾಯಿಡರ ಈ ಸುಪ್ತಮನಸಿನ ವ್ಯಾಪಾರವೆಲ್ಲ ಆತ್ಮನ ಆಧಿಪತ್ಯದ ವ್ಯಾಪಾರಗಳು. ಇದನ್ನೆಲ್ಲ ತಿಳಿಯಲು ವಿಜ್ಞಾನದಿಂದ ಸಹಿತವಾದ ಜ್ಞಾನಯೋಗವು ಬೇಕು ಅದರಿಂದಲೇ ಮನೋತೀತಾವಸ್ಥೆಯು (Super Conscious) ಗೋಚರವಾಗುವದು. ಈ ಆತ್ಮತತ್ವವನ್ನು ಅರಿತುಕೊಂಡು ಪರಮಾತ್ಮ ತತ್ವದ ಕಡೆಗೆ ಮನುಷ್ಯನು ಹೊರಟಾಗ ದಿವ್ಯಜ್ಞಾನದ ಸಹಾಯದಿಂದ ನಿಚ್ಚಳವಾದ ಜ್ಞಾನವು ಮನುಷ್ಯನಿಗೆ ದೊರೆಯುವದು. ಶ್ರೀಕೃಷ್ಣನು ಅರ್ಜುನನಿಗೆ ಈ ದಿವ್ಯ ಜ್ಞಾನವನ್ನು ನೀಡಿ ಅವನಿಗೆ ಬಂದ ಮೋಹವನ್ನು ತಪ್ಪಿಸಿ ಆ ದಿವ್ಯಜ್ಞಾನದ ಬೆಳಕಿನಲ್ಲಿ ಮಹಾಭಾರತ ಯುದ್ಧದ ಪರಮರಹಸ್ಯವನ್ನೂ ಅದರ ಮಹತ್ವವನ್ನೂ ಅದರಲ್ಲಿ ಅರ್ಜುನನ ಪಾತ್ರವನ್ನೂ ತೋರಿಸಿ ಕೊಟ್ಟಾಗ ಅರ್ಜುನನಿಗೆ ಈ ದಿವ್ಯ ಜ್ಞಾನದ ಸಹಾಯವಿಲ್ಲದ ಕುಂಟ ತರ್ಕದ ಶಷ್ಕನಿರ್ಣಯಗಳ ಪೊಳ್ಳುತನದ ಪರಿಚಯವಾಗಿ ಯುದ್ಧಕ್ಕೆ ಸಿದ್ಧನಾಗುತ್ತಾನೆ.

ಎಲ್ಲ ಆಚಾರ್ಯರೂ ಮನೋವಿಶ್ಲೇಷಣೆಯ ಮಾರ್ಗವು ಎಲ್ಲ ಸಂಶಯಗಳನ್ನು ನಿವಾರಿಸುವದಿಲ್ಲ ಅದರಾಚೆಗಿರುವ ಆತ್ಮತತ್ವದ ಇರುವನ್ನು ಒಪ್ಪುವದು ಅಷ್ಟೇ ಅಲ್ಲ, ಅದರ ಸಾಕ್ಷಾತ್ಕಾರದಿಂದ ಮಾತ್ರ ಎಲ್ಲ ಸಂಶಯಗಳ ನಿವಾರಣೆ ಸಾಧ್ಯ (**छिद्यन्ते सर्व संशयाः तस्मिन्दृष्टेपरावरे**). ಆತ್ಮತತ್ವದ ಸಾಕ್ಷಾತ್ಕಾರವಿಲ್ಲದಾಗ ಪಾಪವೆಂದು ತೋರಿದ್ದು ಅಪರೋಕ್ಷಜ್ಞಾನದ ಬೆಳಕಿನಲ್ಲಿ ಪುಣ್ಯವೆಂದು ತೋರಬಹುದು. ಹಿಂಸೆಯೆಂದು ತೋರಿದ್ದು ಅಹಿಂಸೆಯೆಂದು ಕಾಣಬಹುದು, ಆದುದರಿಂದ ಶ್ರೀಕೃಷ್ಣನು ಅರ್ಜುನನಿಗೆ ಅಪರೋಕ್ಷಜ್ಞಾನದ ದಾರಿಯನ್ನು ಹಿಡಿದನು



# ೨ ನೇ ಅಧ್ಯಾಯ

**संजय उवाच: –**

**तं तथा कृपयाविष्ट मश्रुपूर्णाकुलेक्षणम् ।**
**विषीदंतमिदं वाक्यमुवाच मधुसूदनः ॥ १ ॥**

ಸಂಜಯನು ಮಾತನಾಡಿದನು .

ಈ ಪ್ರಕಾರ ಮರುಕದಿಂದ ಕೂಡಿದ ಕಣ್ಣೀರು ತುಂಬಿ ವ್ಯಾಕುಲವಾದ ಕಣ್ಣುಗಳಿಂದ ದುಃಖಪಡತಕ್ಕ ಅರ್ಜುನನನ್ನು ಕುರಿತು ಮಧುಸೂದನನು (ಕೃಷ್ಣನು) ಹೀಗೆ ಹೇಳಿದನು.

**ವಿಶೇಷ ಟಿಪ್ಪಣಿಗಳು :**

**संजय उवाच** ೧ ನೇ ಅಧ್ಯಾಯದ ಕಡೆಯ ಶ್ಲೋಕವನ್ನು ಸಂಜಯನೇ ನುಡಿದಿದ್ದಾನೆ. ಈಗ ಮತ್ತೆ ಅವನೇ ಮುಂದುವರಿಸುತ್ತಾನೆಂದು ಸ್ಪಷ್ಟಪಡಿಸಲಿಕ್ಕೆ ಆ ಪದಗಳನ್ನು ಉಪಯೋಗಿಸಿದ್ದಾನೆ ವೈಶಂಪಾಯನನು. ಆದರೆ ಈ ಮಾತನ್ನು ಧೃತರಾಷ್ಟ್ರನಿಗೆ ಹೇಳುತ್ತಾನೆಂಬದನ್ನು ನಾವು ಮರೆಯಬಾರದು. ಆದುದರಿಂದಲೇ ಶಾಂಕರಭಾಷ್ಯದ ಮೇಲಿನ ತಮ್ಮ ಟಿಪ್ಪಣಿಯಲ್ಲಿ ಆನಂದಗಿರಿಯೂ ಮಧುಸೂದನ ಸರಸ್ವತಿಯೂ ಈ ಎರಡು ಪದಗಳಿಂದ ಕೂಡಿದ ವಾಕ್ಯದಲ್ಲಿ ಹೆಚ್ಚಿನ ಅರ್ಥವನ್ನು ಕಾಣುತ್ತಾರೆ. "ಅರ್ಜುನನು ಅಹಿಂಸಾಮಾರ್ಗವೇ ಶ್ರೇಷ್ಠವಾದ ದಾರಿಯು ಮತ್ತು ಭಿಕ್ಷೆ ಬೇಡುವದೇ ಯೋಗ್ಯವಾದ ವೃತ್ತಿಯೆಂದು ನಿರ್ಧಾರಮಾಡಿ ಯುದ್ಧಕ್ಕೆ ವಿಮುಖನಾದನೆಂಬ ಸುದ್ದಿಯನ್ನು ಸಂಜಯನ ಬಾಯಿಂದ ಕೇಳಿ ಧೃತರಾಷ್ಟ್ರನು ನನ್ನ ಮಕ್ಕಳ ರಾಜ್ಯಲಕ್ಷ್ಮಿಯು ಇನ್ನು ಸ್ಥಿರವಾಯಿತೆಂದು ನಿಶ್ಚಿಂತನಾಗಿ ಕುಳಿತದ್ದನ್ನು ಸಂಜಯನು ನೋಡಿ ಇವನ ದುರಾಶೆಯನ್ನು ಬೇಗನೆ ಓಡಿಸಬೇಕೆಂಬ ಇಚ್ಛೆಯಿಂದ ಅವನಿಗೆ ಈ ಮಾತನ್ನು ಹೇಳುತ್ತಾನೆ". ಈ ಹುದುಗಿದ ಅರ್ಥವನ್ನು ಬಯಲಿಗೆಳೆದು ಕಾವ್ಯದ ಕಂಪನ್ನು ಕಡಿಮೆ ಮಾಡುವದರಕ್ಕಿಂತ ಅದನ್ನು ಹಾಗೆ ವಾಚಕರಿಗೆ ಊಹಿಸಲಿಕ್ಕೆ ಬಹುಜನ ಟೀಕಾಕಾರರು ಬಿಟ್ಟಿದ್ದಾರೆ *

**तथा** (ಹಿಂದೆ ಹೇಳಿದ) ಹಾಗೆ. ಕೂಡಬಾರದ ಸ್ಥಳದಲ್ಲಿ, ಕೂಡಬಾರದಂತೆ ಕುಳಿತು ಯುದ್ಧ ಮಾಡಬಾರದೆಂದೇ ನಿಶ್ಚಯಿಸಿದನು.

---

* ಶ್ರೀರಾಘವೇಂದ್ರರು ವಿವೃತ್ತಿಯಲ್ಲಿ ಸೂಕ್ಷ್ಮವಾಗಿ 'ಧೃತರಾಷ್ಟ್ರನು ಮುಂದೆ ಏನಾಯಿತೆಂದು ಕೇಳಬೇಕೆಂಬ ಅಪೇಕ್ಷೆಯಂತೆ' ಎಂದು ಹೇಳಿ ಸುಮ್ಮನಾಗಿದ್ದಾರೆ.

**कृपया**—ದಯೆ, ಮರುಕ. ದಯೆ ಇದು ದೊಡ್ಡ ಗುಣ ಇದನ್ನು ತೋರಿಸುವ ಮನುಷ್ಯನು ಸಂಯಮಿಯಾಗಿ ಪ್ರಭುತ್ವವನ್ನು ಕಾಯ್ದುಕೊಂಡು ಅನ್ಯಿಗರಿಗೆ ಕೈ ನೀಡಲಿಕ್ಕೆ ಹಾತೊರೆಯುತ್ತಾನೆ. ಆದರೆ ಈಗಿನ ಅರ್ಜುನನ ಸ್ಥಿತಿಯೆಂದರೆ ತಾನೇ ಅನ್ನಿಗರ ಕರುಣೆಗೆ ಪಾತ್ರನಾಗುವಂತೆ ಕುಸಿದು ಬಿದ್ದಿದ್ದಾನೆ. ಅವನು ಕೌರವರ ಮೇಲೆ ಕರುಣೆ ತೋರಿಸುವದು ಶಕ್ಯವಿಲ್ಲ. ಅವನು ಒಂದು ತರಹದ ಮೋಹದಿಂದ ಕೌರವರು ತನ್ನವರೆಂದು ಕಳವಳಪಡುತ್ತಿದ್ದಾನೆ. ದಯೆ ತೋರಿಸುವವನು ದಕ್ಷ ನಿರುತ್ತಾನೆ. ಆದರೆ ಈಗ ಅರ್ಜುನನು ವಿಷಾದದಿಂದ ನಿರ್ವಿಣ್ಣನಾಗಿದ್ದಾನೆ. ಮೋಹವು ತುಂಬ ಅವನನ್ನು ಆವರಿಸಿದೆ; ಮತ್ತಿಷ್ಟು ಹಣ್ಣು ಮಾಡುವ ಮರುಕವು ಅವನನ್ನು ಮುತ್ತಿದೆ. ಆದುದರಿಂದ S Radhakrishnan says— "The pity of Arjuna has nothing in Common with Divine Compassion It is a form of self indulgence, a Shrinking of the nerves from an act which requires him to hurt his own people." ಶ್ರೀ ರಾಘವೇಂದ್ರರು ಹೇಳುತ್ತಾರೆ— **स्वजनकृपयाव्याप्तं** ಸ್ವಜನರ ಮೇಲಿನ ಮರುಕ ತುಂಬಿದವನಾಗಿ.

**श्रीभगवानुवाच :—**

**कुतस्त्वाकश्मलमिदं विषमेसमुपस्थितम् ।**
**अनार्यजुष्टमस्वर्ग्यं अकीर्तिकरमर्जुन ॥ २ ॥**

ಎಲೈ ಅರ್ಜುನನೇ, ಈ ವಿಷಮ (ಯುದ್ಧ) ಕಾಲದಲ್ಲಿ ಆರ್ಯರಿಂದ ಎಂದೂ ಸೇವಿಸದೆ ಇದ್ದ, ಸ್ವರ್ಗಕ್ಕೆ ದಾರಿಯಲ್ಲದ, ಅಪಕೀರ್ತಿಯನ್ನು ತರುವ ಈ ಮನೋ ದೌರ್ಬಲ್ಯವು (ಯುದ್ಧದಿಂದ ನಿವೃತ್ತಿಯು) ಎಲ್ಲಿಂದ ನಿನಗೆ ಬಂತು ?

**ವಿಶೇಷ ಟಿಪ್ಪಣಿಗಳು :**

**भगवान्—भग** ಎಂದರೆ ಐಶ್ವರ್ಯ, ಧರ್ಮ, ಯಶಸ್ಸು, ಶ್ರೀ, ವೈರಾಗ್ಯ ಮತ್ತು ಮೋಕ್ಷ (ಇವೆಲ್ಲ ಸಮಗ್ರವಾಗಿ) ಇವು ನಿತ್ಯದಲ್ಲಿ ಏಕಕಾಲಕ್ಕೆ ನಿರ್ಬಾಧಿತ ವಾಗಿ ಉಳ್ಳವನು ಅವನೇ ವಾಸುದೇವನು. **(ऐश्वर्यस्य समग्रस्य धर्मस्य यशसः श्रियः । वैराग्यस्याथमोक्षस्य षण्णां भग इतीरणा)** ಮೋಕ್ಷ ವೆಂದರೆ ಮೋಕ್ಷ ಸಾಧನವಾದ ಜ್ಞಾನವೆಂದು ತಿಳಿಯಬೇಕು. ಈ ಷಡ್ಗುಣೈಶ್ವರ್ಯ ಸಂಪನ್ನನೇ ವಾಸುದೇವನು.*

---

* ಬುದ್ಧಿರಾಜರು ತಮ್ಮ ಶ್ರೀಮದ್ಭಗವದ್ಗೀತೆಯಲ್ಲಿ— "ಭಗವಾನ್ ಎಂಬುದನ್ನು ಶ್ರೀಕೃಷ್ಣ ಎಂಬ ಅರ್ಥದಲ್ಲಿ ಉಪಯೋಗಿಸಿದ್ದಾರೆ. ವೇದದಲ್ಲಿ "ವರಕೊಡತಕ್ಕವನು" ಎಂದು ಅರ್ಥ. ಆಮೇಲೆ ಭಗವೆಂದರೆ 'ಕಲ್ಯಾಣ, ಒಳಿತು' ಎಂದು ಇದಕ್ಕೆ ಅರ್ಥವು ಬಂತು. ವಿಷ್ಣು

**ಕಶ್ಮಲ** – ಇದರ ಸಾಮಾನ್ಯ ಅರ್ಥ ಮಾಲಿನ್ಯ, ಹೊಲಸು ಇದು ಮಾನಸವೆಂಬುದನ್ನು ಒಬ್ಬರು ಹೇಳುತ್ತಾರೆ. ಇದು ಚಿತ್ತವ್ಯಾಮೋಹವೆಂದು ಮತ್ತೊಬ್ಬರು. ಇದನ್ನು ಅರ್ಜುನ ಪದದೊಡನೆ ವಿರುದ್ಧವಾಗಿ ನಿಲ್ಲಿಸಿದ್ದಾರೆ. ಬೆಳ್ಳಗಿದ್ದ ಅರ್ಜುನನಿಗೆ ಈ ಕಪ್ಪಾದ ಕಶ್ಮಲ ಹೇಗೆ ಬಂತು ? ಎಂಬ ಪ್ರಶ್ನೆಯನ್ನು ಕೇಳುತ್ತಾನೆ.

**ಅರ್ಜುನ – पृथिव्यांचतुरंतायां वर्णो मे दुर्लभः समः । करोमि कर्म शुद्धंच तेनमां अर्जुनं विदुः** ಈ ನಾಲ್ಕು ದಿಕ್ಕುಗಳುಳ್ಳ ಭೂಮಿಯ ಮೇಲೆ ನನ್ನಂತಹ ಬಣ್ಣವಿದ್ದವನು ಯಾರೂ ಇಲ್ಲ. ಅಲ್ಲದೆ ನಾನು ದೋಷರಹಿತ ಕೆಲಸಗಳನ್ನು ಮಾತ್ರ ಮಾಡುತ್ತೇನೆ. ಆದುದರಿಂದ ನನಗೆ ಅರ್ಜುನನೆಂದು ಕರೆಯುತ್ತಾರೆ ಎಂದು ಅರ್ಜುನನೇ ಹೇಳುತ್ತಾನೆ. ಇಂಥ ಅರ್ಜುನ ಹೀನ ಮೋಹಕ್ಕೆ ತುತ್ತಾಗಬೇಕೇ ? ಎಂಬುದು ಪ್ರಶ್ನೆ.

ಭಗವಂತನು ಇಷ್ಟು ಹೊತ್ತಿನವರೆಗೆ ಅರ್ಜುನನ ಮಾತುಗಳನ್ನು ಸುಮ್ಮನೇ ಕೇಳಿದನು. ಇದರಿಂದ ಅರ್ಜುನನಿಗೆ ತನ್ನ ಮಾತುಗಳು ಪರಮಾತ್ಮನಿಗೆ ಸಮ್ಮತವೇನೋ ಎಂಬ ಭಾವನೆಯಾಗಿರಬೇಕು ಆದರೆ ಮನಸಿನಲ್ಲಿ ತುಂಬಿದ್ದನ್ನೆಲ್ಲ ಒಮ್ಮೆ ಹೊರಗೆಡವಿದರೆ ಮನಸಿನ ಪುನಃ ಸ್ವಾಸ್ಥ್ಯಕ್ಕೆ ಅನುಕೂಲವಾಗುವದೆಂದು ಭಗವಂತನ ಯೋಜನೆ ಆಮೇಲೆ ನಿಷ್ಠುರವಾದ ಸ್ಪಷ್ಟ ರೀತಿಯಲ್ಲಿ ಭಗವಂತನು ಮಾತುಗಳನ್ನಾಡಿ ಅರ್ಜುನನನ್ನು ಎಚ್ಚರಿಸಿದ್ದಾನೆ. ಕಶ್ಮಲ ಶಬ್ದದ ಹಿಂದೆ ಭೂಮಂಡಲದಷ್ಟು ತಿರಸ್ಕಾರವನ್ನು ಅರ್ಜುನನ ದೌರ್ಬಲ್ಯ ನೋಡಿ ವ್ಯಕ್ತಗೊಳಿಸಿದ್ದಾನೆ. ಎಂಥ ತುಚ್ಛ ಮತ್ತು ಹೀನ ಮಾತುಗಳನ್ನು ಆಡಿದೆ ಎಂದು ಅರ್ಜುನನನ್ನು ನೋಡಿ ಬೇಸರಪಟ್ಟುಗೊಂಡಿದ್ದಾನೆ ಮುಂದೆ ಹೇಳಿದ ಒಂದೊಂದು ಕಾರಣವೂ ಹದನಾದ ಬಾಣದ ಇರಿತದಂತೆ ತಡೆಯಲಿಕ್ಕೆ ಅಸಾಧ್ಯವಾಗಿದೆ. ತಪಸ್ಸು ಇಂದ್ರಿಯ ನಿಗ್ರಹದಿಂದ ಉತ್ಪನ್ನವಾದ ಮಕ್ಕಳಿಗೆ ಮನು ಆರ್ಯರೆಂದು ಕರೆಯುತ್ತಾನೆ. ಉಚ್ಚತರಗತಿಯ ಧ್ಯೇಯವಾದಿಯಾಗಿ ಮಹಾ ತ್ಯಾಗಿಯಾಗಿರುವ ಸುಸಂಸ್ಕೃತ ಪುರುಷನು ಆರ್ಯನೆನಿಸುವನು ಆರ್ಯರಿಗೆ ಆದರ್ಶನಾದ ಅರ್ಜುನನು ಹೀನವಾದ ವಿಚಾರದಿಂದ ಯುದ್ಧದಿಂದ ನಿವೃತ್ತನಾಗುವ ಮಾತುಗಳನ್ನಾಡಿದ್ದರಿಂದ ಕೃಷ್ಣ ಬಹು ನೊಂದುಕೊಂಡು ಮಾತನಾಡಿದ್ದಾನೆ. ಇಂಥ ಮನೋವೃತ್ತಿಯ ಜನರಿಗೆ ಈ ಲೋಕವೂ

---

ಪುರಾಣದಲ್ಲಿ ಇದನ್ನು ಶಿವನಿಗೆ ಹಚ್ಚಿದ್ದಾರೆ ಭಗವತ್ ಎಂಬುದು ಭಗವಂತನ ಸ್ವರೂಪವನ್ನು ವರ್ಣಿಸುತ್ತದೆ. ಭಗವತ್ ಎಂದರೆ ಆತ್ಮನಿಗೆ ಹೆಸರು. ಪುರುಷೋತ್ತಮನಿಗೂ ಭಗವಾನನೆನ್ನುತ್ತಾರೆ. ಭಾಗವತ ಮಂತ್ರವಾದ **ॐ नमो भगवते वासुदेवाय** ದಲ್ಲಿ ಇದು ಉಪಯೋಗವಾಗಿದೆ ಎಂದು ಇದರ ಮೇಲೆ ಟಿಪ್ಪಣಿ ಬರೆದಿದ್ದಾರೆ.

ಇಲ್ಲ, ಪರಲೋಕವೂ ಇಲ್ಲ. ಎಂಥ ಉಚ್ಚವಾದ ಕೀರ್ತಿ ಶಿಖರಕ್ಕೆ ಮುಟ್ಟಿ, ಮೇಲೆ ಏಳಲಿಕ್ಕೆ ಬಾರದ ಅಧಃಪತನವನ್ನು ಹೊಂದಿದೆಯಲ್ಲ ! ಎಂದು ಭಗವಂತನು ಕನಿಕರ ಬಡುತ್ತಾನೆ. ಭಗವಂತನು ಅರ್ಜುನನ ಮಾತುಗಳನ್ನು ಹುಚ್ಚನು ಬಡಬಡಿಸಿದ ಮಾತುಗಳೆಂದು ತಿರಸ್ಕರಿಸಿದ್ದರೂ ಶಂಕರಾನಂದಿಕಾರರು "ಅರ್ಜುನನಿಗೆ ವಿವೇಕೋದಯವಾಗಿ ಅತ್ಯಂತ ವಿರಕ್ತಿಯಿಂದ ತತ್ವಬುಭುತ್ಸುವಾಗಿ ಅವನು ಭಗವಂತನಿಗೆ ಶರಣುಬಂದು ತತ್ವಬೋಧೆ ಮಾಡಬೇಕೆಂದು" ಅವನಾಡಿದ ಈ ಮಾತುಗಳನ್ನು ಅಖಂಡವಾಗಿ ಹೊಗಳಿದ್ದಾರೆ. ಹಾಗೆ ಮಹಾತ್ಮಾ ಗಾಂಧಿಯವರು ಅರ್ಜುನನು ಹೇಳಿದ ಯುಕ್ತಿಯು (ಯುದ್ಧರೂಪ ಹಿಂಸೆಯಿಂದ ಪಾಪ ಬರುತ್ತದೆ ಮೊದಲಾದ ಮಾತುಗಳಲ್ಲಿ ತೋರುವ) ನಿರ್ದುಷ್ಟವಾಗಿದೆ ಸಾಂಪ್ರದಾಯಕವಾದ ಭಗವಂತನ ಮಾತುಗಳು ಇವುಗಳ ಎದುರಿಗೆ ಹುರುಳಿಲ್ಲದವು ಎಂದು ಹೇಳುತ್ತಾರೆ. ಇದರ ವಿಷಯಕ ಹೆಚ್ಚಿನ ಚರ್ಚೆಯನ್ನು ಉಪನ್ಯಾಸಗಳಲ್ಲಿ ಕಾಣಬಹುದು.

**क्लैब्यं मास्म गमः पार्थ नैतत्त्वय्युपपद्यते ।**
**क्षुद्रं हृदयदौर्बल्यं त्यक्त्वोत्तिष्ठ परंतप ॥ ३ ॥**

ಎಲೈ ಅರ್ಜುನನೇ, ಅಧೈರ್ಯವನ್ನು ಹೊಂದಬೇಡ, ಇದು ನಿನಗೆ ಯೋಗ್ಯವಲ್ಲ. ಎಲೈ ಶತ್ರುತಾಪಕನೇ ಅತಿ ತುಚ್ಛವಾದ ಮನಸಿನಲ್ಲಿರುವ ದುರ್ಬಲತ್ವವನ್ನು ಬಿಟ್ಟು (ಯುದ್ಧಕ್ಕೆ) ಏಳು

**ವಿಶೇಷ ಟಿಪ್ಪಣಿಗಳು :**

**क्लैब्यं**— ಶಬ್ದಶಃ ಅರ್ಥವೆಂದರೆ ಕ್ಲೀಬನ ಭಾವ (ಪುರುಷತ್ವ ಹೀನ ಸ್ಥಿತಿ); ತನ್ನ ಅಜ್ಞಾತಾವಸ್ಥೆಯಲ್ಲಿ ಬೃಹನ್ನಳೆಯ ವೇಷದಲ್ಲಿದ್ದರೂ ಅರ್ಜುನನು ಪೌರುಷವನ್ನು ಕಳಕೊಳ್ಳಲಿಲ್ಲ. ವಿರಾಟರಾಜನ ಗೋಸಂರಕ್ಷಣೆಗಾಗಿ ಕೌರವರಗೂಡ ಹೋರಾಡಿ ಅವರನ್ನು ಸೋಲಿಸಿದ್ದೇ ಇದಕ್ಕೆ ಸಾಕ್ಷಿ. ಈ ಸಂಗತಿಯು ಅರ್ಜುನನ ನೆನಪಿಗೆ ಬರಲೆಂದೇ ಕೃಷ್ಣನು ಈ ಪದವನ್ನು ಉಪಯೋಗಿಸಿದ್ದಾನೋ ಏನೋ !

ಕೆಲವು ಟೀಕಾಕಾರರು "ಅರ್ಜುನನಿಗೆ ಷಂಢ ಮೊದಲಾದ ಬೈಗಳನ್ನು ಶ್ರೀಕೃಷ್ಣನು ಉಪಯೋಗಿಸಿದ್ದಾನೆನ್ನುವದು ಯೋಗ್ಯವಲ್ಲ. ಕೃಷ್ಣನ ಗೌರವಕ್ಕೂ ಅರ್ಜುನನ ಸ್ಥಾನಕ್ಕೂ ಇಂಥ ಕೀಳಾದ ಬೈಗಳು ಒಗ್ಗುವದಿಲ್ಲ" ಎಂದು ಆಕ್ಷೇಪಿಸಿದ್ದಾರೆ

**पार्थ**— ಹೆಸರುಗಳನ್ನು ಯೌಗಿಕಾರ್ಥಬೋಧಕವಾಗಿ ವ್ಯಾಸರು ಉಪಯೋಗಿಸಿದ್ದಾರೆಂದು ಹೇಳಲಿಕ್ಕೆ ಸಾಕಷ್ಟು ಪ್ರಮಾಣಗಳಿಲ್ಲದಿದ್ದರೂ ಕೆಲವು ಸ್ಥಳಗಳಲ್ಲಿ

ಆ ಯೌಗಿಕ ಅರ್ಥವು ಒಳ್ಳೇ ಸಾರ್ಥಕವಾಗಿ ತೋರುತ್ತದೆ ಈ ಸಂದರ್ಭದಲ್ಲಿ ಅರ್ಜುನನಿಗೆ ಪಾರ್ಥನೆಂದು ಕರೆದದ್ದು ಎಂಥ ಸಂದರ್ಭದ ನೆನಪನ್ನು ತಂದುಕೊಡುತ್ತದೆ ನೋಡಿ ! ಯುದ್ಧ ಪ್ರಾರಂಭದ ಪೂರ್ವದಲ್ಲಿ ಕುಂತಿಯು ಅರ್ಜುನನಿಗೆ ಒಂದು ಸಂದೇಶ ಕಳಿಸಿದ್ದಳು "ಭಿಕ್ಷೆಯು ಅವನಿಗೆ ನಿಷಿದ್ಧ ; ಒಕ್ಕಲತನವು ಅವನಿಗೆ ಯೋಗ್ಯವಲ್ಲ; ಮತ್ತು ಕ್ಷತ್ರಿಯನಾದುದರಿಂದ ಅವನು ಎಲ್ಲರನ್ನೂ ರಕ್ಷಿಸಬೇಕು ಅದು ಕ್ಷತ್ರಿಯನ ಕರ್ತವ್ಯ. ಕ್ಷತ್ರಿಯನ ಬಲ ಅವನ ತೋಳಿನಲ್ಲಿದೆ." ಶ್ರೀಕೃಷ್ಣನು ನೀನು ಕುಂತಿಯ ಮಗನೆಂದು ಹೇಳುವದರಿಂದ ಮೆಲ್ಲನೆ ಅವಳ ಸಂದೇಶವನ್ನು ಅವನ ನೆನಪಿಗೆ ತರುತ್ತಾನೆ.

***क्लैब्यं मा स्म गमः**— ಹೇಡಿಯಾಗಬೇಡ ಯಾಕೆಂದರೆ ಹೇಡಿಯು ಯುದ್ಧಕ್ಕೆ ಹೆದರುತ್ತಾನೆ, ವೀರನು ಹೆದರುವದಿಲ್ಲ; ಅವನು ಒಮ್ಮೆ ಸಾಯುತ್ತಾನೆ ಹೇಡಿಯು ಹತ್ತುಸಾರೆ ಸಾಯುತ್ತಾನೆ. ಅರ್ಜುನನ ವೈರಾಗ್ಯದ ಮಾತುಗಳೆಲ್ಲ ಶ್ರೀಕೃಷ್ಣನಿಗೆ ಹೇಡಿಯ ಮಾತುಗಳಂತೆ ಅನಿಸುತ್ತವೆ. ಬಹಳ ತುಚ್ಛ ಮಾತುಗಳಿಂದ ಅರ್ಜುನನನ್ನು ತಿರಸ್ಕರಿಸಿ ಅವನನ್ನು ಬಡಿದೆಬ್ಬಿಸಲಿಕ್ಕೆ ಭಗವಂತನು ಪ್ರಯತ್ನಿಸುತ್ತಾನೆ.

**क्षुद्रं हृदय दौर्बल्यं**— ಹೇಯವಾದ ಹೃದಯ ದೌರ್ಬಲ್ಯ. ಯುದ್ಧ ಮಾಡದೆ ತಿರುಗಿಹೋಗುವದು ಅತಿ ಹೇಯವಾದುದು. ಯಾಕೆಂದರೆ ಯುದ್ಧದಿಂದ ನಿವೃತ್ತನಾಗುವದು ಕಳವು ಮಾಡಿದಂತೆ ಕೊಲೆ ಮಾಡಿದಂತೆ ಮಹಾ ಪಾಪವು. ಅರ್ಜುನನು ಯುದ್ಧ ಬಿಡುವದರಿಂದ ದುಷ್ಟಶಕ್ತಿಗಳು ಪ್ರಬಲವಾಗಿ ಕೊಲೆ–ಸುಲಿಗೆ ನಡೆಯುತ್ತವೆ. ಹೃದಯ ದೌರ್ಬಲ್ಯವೆಂದರೆ ಈಗಿನ ಮನೋವಿಶ್ಲೇಷಣೆಯ ಶಾಸ್ತ್ರದ ಪ್ರಕಾರ ಅದು Psychoneurosis ಎನಿಸುತ್ತದೆ. ಮನಸಿನ ಆವೇಗವನ್ನು ಮತ್ತೆ ಮತ್ತೆ ಹತ್ತಿಕ್ಕಿದ್ದರಿಂದ ಆ ಮಾನಸಿಕ ಉತ್ಸಾಹ ಹೊರಬೀಳುವ ದಾರಿಯನ್ನೇ ನೋಡುತ್ತಿರುತ್ತದೆ. ಯುದ್ಧದ ಪ್ರಸಂಗದಲ್ಲಿ ಆ ಉತ್ಸಾಹ ಹೊರಸೂಸಿ ಬಂದರೂ ಸನ್ನಿವೇಶದ ಬಲದಿಂದ ಅದು ಮನೋಭಾವನೆಗಳ ರೂಪದಲ್ಲಿ ಹೊರಬಿತ್ತು. ಆದುದರಿಂದ ಅದು ದೈಹಿಕ ದುರ್ಬಲತೆಯಲ್ಲಿಯೂ ಮಾನಸಿಕ ದುರ್ಬಲತೆಯಲ್ಲಿಯೂ ಹೊರಬಿತ್ತು. ಯುದ್ಧದ ನಿರ್ಧಾರದ ವಿರುದ್ಧ ಅದು ಯುದ್ಧ ನಿವೃತ್ತಿಯಲ್ಲಿ ಪರಿಣಮಿಸಿತು. ಇದು ಮನಸಿನ ಕ್ರಿಯೆಯನ್ನು ಭಂಗಗೊಳಿಸುತ್ತದೆ. ಇದರ ದೈಹಿಕ ಪರಿಣಾಮವೆಂದರೆ ಮೈನಡಗುವದು, ಬೆವರು ಬಿಡುವದು, ಎದೆ ಬಡಿದು

---

***क्लैब्यं**— "ನಪುಂಸಕನಾಗಬೇಡ !" ಕೃಷ್ಣನು ಹಿಂದಿನ ಕಥೆಯನ್ನು ನೆನಪಿಗೆ ತಂದು ಕೊಡುತ್ತಾ –"ನಿಜವಾದ ಆರ್ಯನಂತೆ ಅರ್ಜುನನು ತನ್ನನ್ನು ನೋಡಿ ಮೋಹಿತಳಾದ ಊರ್ವಶಿಯ ಬೇಡಿಕೆಯನ್ನು ತಿರಸ್ಕರಿಸಿದಾಗ ಅವಳು– ನೀನು ನಪುಂಸಕನಾಗೆಂದು ಶಾಪಕೊಟ್ಟದ್ದು ನಿಜವಾಯಿತೇ ?" ಎಂದು ಕೇಳುತ್ತಾನೆ. (ಸಾತವಳೇಕರ).

ಕೊಳ್ಳುವದು, ನಾಡಿಯು ಒತ್ತಡ ವೊದಲಾದವು. ಮಾನಸಿಕ ಪರಿಣಾಮವೇದರೆ ವಿಚಾರಗಳನ್ನು ಸೇಖರಿಸುವ ಅಸಾಮರ್ಥ್ಯ, ಒಟ್ಟಾರೆ ಕೆಲಸ ನಿರ್ವಹಿಸುವ ಅಸಾಮರ್ಥ್ಯ, ಮಾನಸಿಕ ಗೊಂದಲ, ಇವಕ್ಕೆಲ್ಲ ಮನೋದೌರ್ಬಲ್ಯವೆಂದು ಹೆಸರು ಅದರ ಹೊರಗಿನ ಲಕ್ಷಣಗಳು ಹೊಂದಿಕೆಯಾದರೂ ಶ್ರೀಕೃಷ್ಣನು ಮನಸ್ಸನ್ನು ಆರೋಗ್ಯಕ್ಕೆ ತರುವದಾರಿಯು, ಫ್ರಾಯಿಡ ವೊದಲಾದವರ ಮನೋವಿಶ್ಲೇಷಣ ಮಾರ್ಗಕ್ಕಿಂತ ಭಿನ್ನವಾಗಿದೆ. (ಉಪನ್ಯಾಸಗಳಲ್ಲಿ ನೋಡಿರಿ) [1]

ಜ್ಞಾನೇಶ್ವರರು 'ಅರ್ಜುನನು ಯುದ್ಧದಿಂದ ನಿವೃತ್ತನಾಗುವ ಮಾತು, ಕತ್ತಲೆಯು ಸೂರ್ಯನನ್ನು ಕವಿದಂತೆ, ಅಮೃತವು ಮರಣವನ್ನು ತಂದಂತೆ, ಕಪ್ಪೆಯು ಹಾವನ್ನು ನುಂಗಿದಂತೆ, ನರಿಯು ಸಿಂಹವನ್ನು ಎದುರಿಸಿದಂತೆ ಆಶ್ಚರ್ಯಕರವಾಗಿದೆ, ಎಂದು ಹೇಳುತ್ತಾರೆ

ಅರ್ಜುನನಿಗೆ ಕರುಣೆ ಬಂದದ್ದು ಅಸ್ಥಾನದಲ್ಲಿ ಅಕಾಲದಲ್ಲಿ ಎನ್ನುವದೇ ಶ್ರೀಕೃಷ್ಣನ ಮತ. ಮಹಾಪುರುಷನು ಯೋಗ್ಯ ಕಾಲದಲ್ಲಿ ಕರುಣೆಯನ್ನು ತೋರಿಸಲಿಕ್ಕೂ ಅಥವಾ ನಿಷ್ಠುರನಾಗಿ ನಿಲ್ಲಲಿಕ್ಕೂ ಸಿದ್ಧನಾಗಿರಬೇಕು. **वज्रादपि कठोराणि मृदूनि कुसुमादपि । लोकोत्तराणां चेतांसि को हि विज्ञातु मर्हति** ಎಂಬ ಭವಭೂತಿಯ ವಾಕ್ಯವನ್ನು ಸ್ಮರಿಸಬೇಕು.

**उत्तिष्ठ** ಎದ್ದು ನಿಲ್ಲು, ಅಣಿಯಾಗು, ಹೇಡಿತನವನ್ನು ತ್ಯಜಿಸಿ ಮನೋದೌರ್ಬಲ್ಯ ಬಿಟ್ಟು ನಿಜವಾದ ಕ್ಷತ್ರಿಯನಂತೆ ಯುದ್ಧಕ್ಕೆ ಅಣಿಯಾಗು. ಏನು ಚೇತರಿಸುವ ಮಾತುಗಳಿವು. ಈ ಮೂರು ಶ್ಲೋಕಗಳು ಈಗಿನ ಮಕ್ಕಳಿಗೆ ಸಂಜೀವಿನಿಯಂತೆ ಪುನರುಜ್ಜೀವನ ಗೊಳಿಸಲಿಕ್ಕೆ ಸಾಕು. ೧) ಹೇಡಿತನ ಹೀನವಾದುದು, ೨) ಅಯೋಗ್ಯ ಕಾಲದಲ್ಲಿ ಅಂತಃಕರಣಬೇಡ, ೩) ಎಲ್ಲ ದೌರ್ಬಲ್ಯಗಳನ್ನು ತ್ಯಜಿಸಿ, ಮೇಲಕ್ಕೆ ಕೆಲಸಕ್ಕೆ, ಎದ್ದೇಳು ತರುಣರಿಗೆ ತಾರಕಮಂತ್ರವಿದು.

**नायमात्मा बलहीनेन लभ्यः**— ದುರ್ಬಲನಿಗೆ ಆತ್ಮನೂ ದೊರೆಯುವದಿಲ್ಲ. ದುರ್ಬಲನಿಂದ ಯಾವ ಹೇಳಿಕೊಳ್ಳುವ ಕೆಲಸವೂ ಆಗುವದಿಲ್ಲ [2]

---

[1] ಸಾಂಪ್ರದಾಯಿಕ ಟೀಕಾಕಾರರು ಬಹುಶಃ 'ಈ ಹೃದಯ ದೌರ್ಬಲ್ಯವೆಂದರೆ ಕಾತರ್ಯಭಾವವು (ಶ್ರೀ ರಾಘವೇಂದ್ರು) ಅದು ಕೃಪೆ ಮತ್ತು ಮೋಹದಿಂದ ಉತ್ಪನ್ನವಾಗುತ್ತದೆಂದು ಹೇಳುತ್ತಾರೆ.

[2] II ೩ ಇದೊಂದು ಮಹತ್ವದ ಶ್ಲೋಕವು,— ಈ ಶ್ಲೋಕದ ವಿಷಯಕ್ಕೆ ವಿವೇಕಾನಂದರು ಬರೆಯುತ್ತಾರೆ.— "If one reads this one shloka he gets all the merits

अर्जुन उवाच :–

कथं भीष्ममहं संख्ये द्रोणंच मधुसूदन
इषुभि: प्रतियोत्स्यामि पूजार्हावरिसूदन ।। ४ ।।

ಅರ್ಜುನನು ಹೇಳಿದನು—

ವೈರಿಗಳನ್ನು ನಾಶಗೊಳಿಸುವ ಮಧುಸೂದನ, ಗೌರವಕ್ಕೆ ಯೋಗ್ಯರಾದ ಭೀಷ್ಮ–ದ್ರೋಣ ಮುಂತಾದವರನ್ನು ಬಾಣದಿಂದ ಯುದ್ಧದಲ್ಲಿ ಹೇಗೆ ಎದುರಿಸಲಿ ?

**ವಿಶೇಷ ಟಿಪ್ಪಣಿಗಳು :**

ರಾಮಾನುಜಾಚಾರ್ಯರು ಮತ್ತು ರಾಘವೇಂದ್ರರು ಈ ಶ್ಲೋಕಕ್ಕೆ ಒಂದೇ ತರಹದ ಸಂಗತಿಯನ್ನು ಕೊಡುತ್ತಾರೆ. **पुन: स्नेहकारुण्यतया व्याकुल:** ಅರ್ಜುನನು ಭಗವಂತನ ಕಣಕುವ ಮಾತುಗಳಿಂದ ಅವನೇನು ಚೇತರಿಸಿಕೊಳ್ಳಲಿಲ್ಲ; ಅಷ್ಟೇ ಅಲ್ಲ ಅವನಿಗೆ ದುಃಖವು ಉಮ್ಮಳಿಸಿ ಬಂತು. ಯಾವ ನಿರ್ಬಂಧವೂ ಅವನ ಕಾರುಣ್ಯವನ್ನು ತಡೆಯಲಿಕ್ಕೆ ಸಮರ್ಥವಾಗಲಿಲ್ಲ. ಭೀಷ್ಮ–ದ್ರೋಣರೊಡನೆ ನಾನು

---

of Reading the entire Gita; for in this one shloka lies embeded the whole message of Gita."

ಲಾಲ ಅವರು ಹೇಳುತ್ತಾರೆ— "Complete resignation or non-resistence to evil however laudable for the rare, realised soul is hardly a practical proposition for the average person who has to deal with those who are mixtures of good and evil but mostly with the wicked. Therefore he has to be bold and give and receive hard knocks."

ಅರವಿಂದರು— 'A day will come when man is ready for universal peace; mean while the aspect of battle and the nature, and function of a man as a fighter have to be accepted ........... Gita is therefore addressed to a fighter."

"Krishna has called upon every one to destory, when by destruction the world advanecs. but hate not that which thou destroyest. He has called upon every one to stand up and do his duty."

ಎದುರು ನಿಂತು ಹೇಗೆ ಯುದ್ಧ ಮಾಡಲಿ ! ಹಿಂದಿನ ತನ್ನ ಚರಿತ್ರೆಯ ಚಿತ್ರಗಳೇ ಅವನ ಕಣ್ಣೆದುರಿಗೆ ನಿಂತವು ಪಂಡುರಾಜನು ಸತ್ತಮೇಲೆ ತಬ್ಬಲಿಗಳಾಗಿದ್ದಾಗ ಭೀಷ್ಮರೇ ಈ ಅನಾಥ ಮಕ್ಕಳನ್ನು ಹಸ್ತಿನಾಪುರಕ್ಕೆ ತಂದು ಸಾಕಿಸಲುಹಿದ್ದರು ತಾಯಿಯಂತೆ ತಬ್ಬಲಿಗಳನ್ನು ಜೋಪಾನ ಮಾಡಿದ ತಾತನನ್ನು ನೆನಿಸಿದ ಕೂಡಲೆ ದುಃಖವು ಎಲ್ಲೆಯೊಡೆದು ಬಂದಿತು. ಹಾಗೆಯೇ ದ್ರೋಣಾಚಾರ್ಯರು, ತನ್ನ ಮಗ ಅಶ್ವತ್ಥಾಮನಕಿಂತ ಹೆಚ್ಚಾಗಿ ತನ್ನನ್ನು ಪ್ರೀತಿಸಿ ವಿದ್ಯೆಯನ್ನು ಕೊಟ್ಟ ಗುರುವನ್ನು ಬಾಣ ಹೊಡೆದು ಕೊಲ್ಲಬೇಕೇ ? ಎಂಥ ಪ್ರಸಂಗವಿದು ಎಂದು ಅರ್ಜುನನು ಗೋಳಿಟ್ಟನು.

ಇದು ಮೋಹ; ನಿಜವಾದ ಕಾರುಣ್ಯವಲ್ಲ. ವಿನೋಬಾ ಭಾವೆಯವರು ಒಂದು ಉತ್ತಮ ದೃಷ್ಟಾಂತವನ್ನು ಕೊಟ್ಟಿದ್ದಾರೆ ಅರ್ಜುನನಲ್ಲಿ ಅಶೋಕನಂತೆ ಅಹಿಂಸಾ ವೃತ್ತಿಯು ಉದಯಿಸಿಲ್ಲ ಸ್ವಜನರ ಮೇಲಿನ ಮೋಹದಿಂದ ಅವನ ಕರ್ತವ್ಯ ನಿಷ್ಠೆಯು ಸಡಿಲಾಗಿದೆ. ಒಬ್ಬ ನ್ಯಾಯಾಧೀಶನು ನೂರಾರು ಅಪರಾಧಿಗಳಿಗೆ ಗಲ್ಲಿನ ಶಿಕ್ಷೆಯನ್ನು ಕೊಟ್ಟಿದ್ದನು, ಒಂದು ದಿವಸ ಅವನ ಮಗನೇ ಕೊಲೆ ಮಾಡಿ ಅಪರಾಧಿಯಾಗಿ ಅದೇ ನ್ಯಾಯಾಧೀಶನ ಎದುರಿಗೆ ನಿಂತನು. ಅವನ ಅಪರಾಧ ಸಿದ್ಧವಾದುದರಿಂದ ನ್ಯಾಯಾಧೀಶನಿಗೆ ಅವನಿಗೆ ದೇಹಾಂತ ಶಿಕ್ಷೆ ಕೊಡುವ ಪ್ರಸಂಗ ಬಂತು. ಆಗ ನ್ಯಾಯಾಧೀಶನು ಹಿಂಜರಿದನು. ಮತ್ತು ದೇಹಾಂತ ಶಿಕ್ಷೆ ಕೊಡುವದು ಅಮಾನುಷವೆಂದು ವಾದಿಸಹತ್ತಿದನು. ಮಗನಲ್ಲದೆ ಬೇರೊಬ್ಬನು ಬಂದಿದ್ದರೆ ನ್ಯಾಯಾಧೀಶನು ಶಿಕ್ಷೆಯನ್ನು ಕೊಡುತ್ತಿದ್ದನು. ಅರ್ಜುನನ ಅವಸ್ಥೆಯು ಹೀಗೆ ಆಗಿದೆ ಆದುದರಿಂದ ಮಧ್ವಾಚಾರ್ಯರು ತಮ್ಮ ತಾತ್ಪರ್ಯದಲ್ಲಿ ಹೀಗೆ ಹೇಳಿದ್ದಾರೆ– **परम धर्मं बंधुस्ने हादधर्मत्वेनाशंक्य** ದುಷ್ಟರಾದ ದುರ್ಯೋಧನಾದಿಗಳನ್ನು ನಿಗ್ರಹಿಸುವದು ಕ್ಷತ್ರಿಯರಿಗೆ ಪರಮ ಧರ್ಮವಾಗಿದ್ದರೂ ಬಂಧುಗಳು ಗುರುಗಳು ಹಿರಿಯರು ಎಂದು ಅವರಲ್ಲಿ ಆಸಕ್ತಿಯಿಂದ ಅದನ್ನು ಅಧರ್ಮವೆಂದು ಗ್ರಹಿಸಿದನು. ಇದು ಮಾನವ ಸಹಜವಾದ ಭಾವನೆ. ಆದರೂ ಕರ್ತವ್ಯನಿಷ್ಠರು ಇಂಥ ಭಾವನೆಗಳಿಗೆ ಅವಕಾಶ ಕೊಡದೆ ಕಠೋರರಾಗಿ ಕರ್ತವ್ಯವನ್ನು ನಿರ್ವಹಿಸುತ್ತಾರೆ. ಆದರೆ ಶೋಕದೊಳಗೆ ಮುಳುಗಿದ ಅವನನ್ನು ಮೇಲೆತ್ತುವದೇ ಕಷ್ಟವಾಗಿದೆ. ಆದರೂ ಕೃಷ್ಣನು ಅನೇಕ ಉಪಾಯಗಳನ್ನು ಯೋಜಿಸುತ್ತಿದ್ದಾನೆ. ಅರ್ಜುನನು ಮೊದಲು ತನ್ನ ಹೃದಯದೊಳಗಿನ ಎಲ್ಲವನ್ನೂ ಹೊರಗೆಳೆಯುತ್ತಿದ್ದಾನೆ.

**गुरून् नहत्वा हि महानुभावान्**
**श्रेयो भोक्तुं भैक्ष्यमपीह लोके ।**

**हत्वार्थ कामांस्तु गुरूनिहैव**
**भुंजीय भोगान् रुधिर प्रदिग्धान् ॥ ५ ॥**

ಮಹಾನುಭಾವರಾದ ಗುರುಗಳನ್ನು ಕೊಲ್ಲದೆ ಈ ಲೋಕದಲ್ಲಿ ಭಿಕ್ಷಾನ್ನದಿಂದಾದರೂ ಜೀವಿಸುವದು ಹೆಚ್ಚು ಶ್ರೇಯಸ್ಕರವು. ಆದರೆ ದುಡ್ಡಿನಲ್ಲಿ ಆಸಕ್ತರಾದ ಗುರುಗಳನ್ನು ಇಲ್ಲಿಯೇ ಕೊಂದು ಅವರ ರಕ್ತದಿಂದ ತೊಡೆಯಲ್ಪಟ್ಟ ಭೋಗಗಳನ್ನು ಈ ಲೋಕದಲ್ಲಿ (ಹೇಗೆ) ಮಾತ್ರ ಅನುಭವಿಸಬೇಕು.*

**ವಿಶೇಷ ಟಿಪ್ಪಣಿಗಳು** ·

**ಗುರೂನ್**–ವಿದ್ಯಾಗುರುಗಳು ದ್ರೋಣಾಚಾರ್ಯರು ಮಾತ್ರ. ಭೀಷ್ಮಾದಿಗಳು ಹಿರಿಯರು. ಅವರಲ್ಲಿ ಪಾಂಡವರು ವಿಶೇಷವಾದ ಗೌರವ–ಆದರಗಳನ್ನು ತೋರಿಸುತ್ತಾರೆ. ಯುದ್ಧವು ಪ್ರಾರಂಭವಾಗುವ ಮೊದಲು ಯುಧಿಷ್ಠಿರನು ರಣಾಂಗಣದ ಮೇಲೆ ತನ್ನ ಕವಚವನ್ನು ಕಳೆದು ಭೀಷ್ಮ, ದ್ರೋಣ, ಶಲ್ಯರಿಗೆ ಪಾದಮುಟ್ಟಿ ನಮಸ್ಕಾರಮಾಡಿ ಅವರ ಆಶೀರ್ವಾದವನ್ನು ಸ್ವೀಕರಿಸಿದನು ಯುಧಿಷ್ಠಿರನ ಶಿಷ್ಟಸಂಪ್ರದಾಯವನ್ನು ಚಾಚೂ ತಪ್ಪದೇ ಅನುಸರಿಸುವದನ್ನು ನೋಡಿ ಇವರೆಲ್ಲರು ಹೇಳಿದರು :

**" अर्थस्य पुरुषोदासः दासस्त्वर्थो न कस्यचित् ।**
**इति सत्यं महाराज बद्धोस्म्यर्थेन कौरवैः ॥ "**

"ಮನುಷ್ಯನು ಅರ್ಥದ ಆಳು, ಅರ್ಥವು ಮಾತ್ರ ಯಾರ ಆಳೂ ಅಲ್ಲ. ಇದು ಸತ್ಯವಾದ ಸಂಗತಿಯು. ಕೌರವರಿಂದ ನಾನು ದುಡ್ಡಿನಿಂದ ಕಟ್ಟಲ್ಪಟ್ಟಿದ್ದೇನೆ". ಇಂಥ ಅಸಹಾಯ ಸ್ಥಿತಿಯಲ್ಲಿ ಇವರು ಇದ್ದಾರೆ. ಹೀಗಿದ್ದರೂ ಅವರನ್ನು ಕೊಲ್ಲುವದು ಬೇಡವೆಂದು ಅರ್ಜುನನ ವಾದ.

---

* ಕೊನೆಯ ನಿರ್ಣಯವನ್ನು ಕುಮಾರವ್ಯಾಸನು ಹೀಗೆ ಪದ್ಯರೂಪದಲ್ಲಿಟ್ಟಿದ್ದಾನೆ ;

ಲಾಲಿಸದೆ ಕುಲಛಲವ ನೀತಿಯ ।
ಪಾಲಿಸದೆ ಕೊಲೆಗಡುಕತನದೊಳು ।
ಮೇಲುಗಾಣದೆ ಬಂಧುಗಳ ಗುರುಗಳ ಸಹೋದರರ ॥
ಕೋಲಮೊನೆಯಲಿ ಕೊಂದು ನೆತ್ತರ
ಗೂಳನುಂಬವೊಲಖಿಳ ರಾಜ್ಯದ
ಮೇಲೆ ಸೊಗಸುವ ಸಿರಿಯು ಸೊಲ್ಲೆ ಮುಕುಂದ ಫಲ್ಗುಣ ಫಲ್ಲಂದ ॥ ೪೨ ॥
(ಭೀಷ್ಮಪರ್ವ)

ಮುಖ್ಯವಾಗಿ ಅರ್ಜುನನು ಯುದ್ಧ ಮಾಡದಿರಲಿಕ್ಕೆ ಎರಡು ಕಾರಣಗಳನ್ನು ಮುಂದೆ ಒಡ್ಡುತ್ತಾನೆ ೧) ಯುದ್ಧ ಮಾಡುವದರಿಂದ ಇಲ್ಲಿ ದೊರೆಯುವ ಲಾಭಗಳು ೨) ಯುದ್ಧ ಮಾಡುವದರಿಂದ ಮುಂದೆ ಮರಣದ ತರುವಾಯ ದೊರೆಯುವ ಲಾಭಗಳು. ಇಲ್ಲಿ ರಕ್ತಪಾತದಿಂದ ದೊರೆಯುವ ರಾಜ್ಯಕ್ಕಿಂತ ಭಿಕ್ಷಾಶನವೇ ಒಳ್ಳೇದು, ಮರಣದ ತರುವಾಯ ಗುರುಗಳನ್ನು ಕೊಲ್ಲುವದರಿಂದ ನರಕಾದಿ ಅನರ್ಥವೇ ಕಾದಿಟ್ಟುದರಿಂದ ಯುದ್ಧವು ಬೇಡವೆಂಬ ನಿರ್ಣಯಕ್ಕೆ ಬಂದಿದ್ದಾನೆ ಭಿಕ್ಷಾಶನೆಯು ಸುಲಭವೆಂದು ಅರ್ಜುನನ ತಿಳುವಳಿಕೆ ಮನೆಮನೆಗೆ ಭಿಕ್ಷೆಗೆ ಹೋಗುವದು ಅವರು ಅಂದದ್ದನ್ನು ಆಡಿಸಿಕೊಳ್ಳುವದು, ಎಲ್ಲ ತರಹದ ಅವಮಾನವನ್ನು ಸಹಿಸಿಕೊಳ್ಳುವದು ಸಾಧ್ಯವಾಗಲಿಕ್ಕಿಲ್ಲ — ಕ್ಷತ್ರಿಯನಿಗೆ ಸಹಿಸುವ ದಾಗಲಿಕ್ಕಿಲ್ಲ.

ಅರ್ಜುನನ ಹಾರ್ದವನ್ನು ಚನ್ನಾಗಿ ಆಲೋಡನೆ ಮಾಡಿ ಅದನ್ನು ತರ್ಕಬದ್ಧ ವಾದ ರೀತಿಯಿಂದ ಒಳ್ಳೇ ಸ್ವಾರಸ್ಯವಾಗಿ ರಾಘವೇಂದ್ರರು ಇಟ್ಟಿದ್ದಾರೆ. "ಕೌರವಾದಿ ಗಳನ್ನು ಕೊಲ್ಲದಿದ್ದರೆ ರಾಜ್ಯವು ದೊರೆಯದೆ ಇದ್ದುದರಿಂದ ದೇಹ ನಿರ್ವಾಹವನ್ನು ಹೇಗೆ ಮಾಡುವದು ಎಂಬ ಸಂಶಯಕ್ಕೆ ಅರ್ಜುನನು ಹೇಳುತ್ತಾನೆ:—"ಭಕ್ತ್ಯಾದಿ ಗುಣಸಂಪನ್ನರಾದ ದ್ರೋಣ ಮೊದಲಾದ ಮಹಾನುಭಾವರನ್ನು ಕೊಲ್ಲುವದ ಕ್ಕಿಂತ ಈ ಲೋಕದಲ್ಲಿ ಭಿಕ್ಷೆ ಬೇಡಿ ಬಂದ ಅನ್ನದಿಂದ ಉದರ ಪೋಷಣೆ ಮಾಡಿ ಕೊಳ್ಳುವದು ಹೆಚ್ಚು ಶ್ರೇಯಃಸ್ಕರವು, ಯಾಕೆಂದರೆ ಸತ್ತ ಮೇಲೆ ನರಕದಲ್ಲಿ ಆಗುವ ದುಃಖಗಳಿಲ್ಲ; ಈ ಕಾರಣದಿಂದ ನಾನು ಯುದ್ಧ ಮಾಡುವದಿಲ್ಲ. ಅವರನ್ನು ಕೊಂದರೆ ಪಾರತ್ರಿಕ ದುಃಖವಾಗುತ್ತದೆ. ಇಷ್ಟೇ ಅಲ್ಲ, ಇಲ್ಲಿ ಸಹ ದುಃಖ ಅನುಭವಿಸ ಬೇಕಾಗುತ್ತದೆ ಹಣದ ಆಶೆಗೆ ಮುಗ್ಧರಾದ ಈ ಗುರುಗಳನ್ನು ಕೊಂದು ಅವರು ಉಣ್ಣುತ್ತಿರುವ ಅದೇ ಊಟವನ್ನೇ ಅವರ ರಕ್ತದಿಂದ ತೊಯ್ದುದನ್ನು, ಅವರ ಆಸನಗಳಲ್ಲಿಯೇ ಕುಳಿತುಕೊಂಡು ನಾನು ಊಟಮಾಡಬೇಕು ಇದು ನರಕದೊಳಗಿನ ದುಃಖಕ್ಕಿಂತ ಹೆಚ್ಚಿನದಾದ ದುಃಖವು" ಎಂದು ತಾತ್ಪರ್ಯವು.

ವೇಕಂಟನಾಥರ ಬ್ರಹ್ಮಾನಂದಗಿರಿಯೆಂಬ ವ್ಯಾಖ್ಯೆಯಲ್ಲಿ 'ಮಧುಸೂದನ ಮತ್ತು ಅರಿಸೂದನ' ಎಂಬ ಎರಡು ಸಂಬೋಧನಗಳನ್ನು ಬಳಿಸಿಕೊಂಡು ಅರ್ಜುನನು ತನ್ನ ಪಕ್ಷವನ್ನು ಹೇಗೆ ಸಮರ್ಥಿಸಿಕೊಳ್ಳುತ್ತಾನೆನ್ನುವದನ್ನು ನೋಡಬಹುದು, "ಮಧು ಎಂಬ ದೈತ್ಯನನ್ನು ಕೊಂದಂಥ ನಿನ್ನಿಂದ ನನ್ನನ್ನು ಸಹ ಅಂಥ ಕೆಲಸಕ್ಕೆ ನೀನು ತೊಡಗಿಸಬೇಕು. ಆದರೆ ಇಂಥ ಗೌರವಕ್ಕೆ ಅರ್ಹರಾದವರೊಡನೆ ಯುದ್ಧ ಮಾಡಲಿಕ್ಕೆ ಅಲ್ಲ 'ನಾನು ಕೂಡ ಪೂಜಾರ್ಹನಾದ ಸೋದರಮಾವನನ್ನು ಕೊಂದಿ ದ್ದೇನೆ' ಎಂದು ಕೃಷ್ಣನು ನುಡಿದರೆ ಅದಕ್ಕೆ ಅರ್ಜುನನು ಅವನನ್ನು 'ಅರಿಸೂದನ'

ಎಂದು ಸಂಬೋಧಿಸುತ್ತಾನೆ ಕಂಸನು ನಿನಗೆ ಜನ್ಮದಿಂದಲೇ ಆದೇಕೆ ಆ ಮೊದಲಿನಿಂದಲೇ ವೈರಿಯು. ಅವನಗೂಡ ನೀನು ಹೋರಾಡಿರಬಹುದು ಆದರೆ ಭೀಷ್ಮರು ನನ್ನನ್ನು ಜೋಪಾನ ಮಾಡಿದ್ದಾರೆ, ದ್ರೋಣರು ನನಗೆ ಧನುರ್ವಿದ್ಯೆಯನ್ನು ಕಲಿಸಿದ್ದಾರೆ. ಆದುದರಿಂದ ನಾನು ಅವರ ಕೂಡ ಹೋರಾಡಲಾರೆನು ”

**अर्थकामान्**– “ದುಡ್ಡಿಗೆ ತಮ್ಮನ್ನು ಮಾರಿಕೊಂಡವರು” ಭೀಷ್ಮರಂಥ ಜ್ಞಾನಿಗಳು ತಮ್ಮನ್ನು ತಾವು ಹೇಗೆ ಮಾರಿಕೊಂಡರು ?*

**रुधिरप्रदिग्धान्**– ರಕ್ತದಿಂದ ತೊಯ್ದ. ಇದು ಅಲಂಕಾರವೂ ಅಲ್ಲ; ಅತಿಶಯೋಕ್ತಿಯೂ ಅಲ್ಲ ಇದು ಸತ್ಯ ಸಂಗತಿಯು. (S Radhakrishnan–“If we hear the woes of women, the cries of children, the tales of calamity, of oppression and of injustice, in the myriad forms, no one with any human feelings would delight in such bloodshed conquests ”

ಎಸ್ ರಾಧಾಕೃಷ್ಣನ್ನರು ಹೇಳುತ್ತಾರೆ “ಹೆಣ್ಣುಮಕ್ಕಳ ಪ್ರಲಾಪವನ್ನೂ ಚಿಕ್ಕಮಕ್ಕಳ ವಿಲಾಪವನ್ನೂ ವಿಪತ್ತುಗಳ ಕಥೆಗಳನ್ನೂ ಹಿಂಸೆ–ಅನ್ಯಾಯಗಳ ದೂರುಗಳನ್ನೂ ನಾನಾರೂಪ ವಿರೂಪಗಳಲ್ಲಿ ಕೇಳಿದರೆ ಅಂತಃಕರಣವುಳ್ಳ ಯಾವ ಮನುಷ್ಯನೂ ರಕ್ತಪಾತದಿಂದ ಕೂಡಿದ ವಿಜಯದಿಂದ ಉತ್ಸಾಹಿತನಾಗುವದಿಲ್ಲ”

**न चैतद्विद्मः कतरन्नो गरीयो**
**यद्वा जयेम यदि वा नो जयेयुः ।।**
**यानेव हत्वा न जिजीविषामः**
**तेऽवस्थिताः प्रमुखे धार्तराष्ट्राः ।। ६ ।।**

(ಭಿಕ್ಷಾಶನ–ಯುದ್ಧಗಳೆರಡರಲ್ಲಿ) ಯಾವದು ನಮಗೆ ಹೆಚ್ಚು ಒಳ್ಳೆಯದೋ ಅದನ್ನು ತಿಳಿಯಲಾರೆವು. ಅಥವಾ ನಾವು (ಯುದ್ಧ ಮಾಡುವದನ್ನು ಅಂಗೀಕಾರ ಮಾಡಿದರೂ) ದುರ್ಯೋಧನಾದಿಗಳನ್ನು ಜಯಿಸುವೆವೋ ಅಥವಾ ನಮ್ಮನ್ನು ದುರ್ಯೋಧನಾದಿಗಳು ಜಯಿಸುವರೋ ಇದನ್ನು ಕೂಡ ತಿಳಿಯುವದಿಲ್ಲ. ಯಾವ ಬಂಧುಗಳನ್ನು ಸಂಹಾರ ಮಾಡಿ ಬದುಕಲಿಕ್ಕೆ ಇಚ್ಛಿಸುವದಿಲ್ಲವೋ ಆ ಬಂಧುಗಳಾದ ದುರ್ಯೋಧನಾದಿಗಳೇ ನಮ್ಮೆದುರಿಗೆ ನಿಂತಿರುತ್ತಾರೆ ॥ ೬ ॥.

---

* ಅಥವಾ ಮಧ್ವಾಚಾರ್ಯರು ಹೇಳಿಥಂತೆ ‘ಗುರುಗಳು ನನ್ನ ಆನಂದ ಮತ್ತು ಸಂಪತ್ತು’ ಎಂದು Hillರು ತಿಳಿಸುತ್ತಾರೆ ಆದರೆ ಮಧ್ವಾಚಾರ್ಯರು ಈ ಶ್ಲೋಕದ ಮೇಲೆ ಭಾಷ್ಯವನ್ನೇ ಬರೆದಿಲ್ಲ.

**ವಿಶೇಷ ಟಿಪ್ಪಣಿಗಳು :**

ಇಲ್ಲಿ ಅರ್ಜುನನಿಗೆ ತಿಳಿಯದೇ ಇದ್ದುದು ಯಾವದು ? ಯುದ್ಧ ಮಾಡು ವದೋ ಅಥವಾ ಭಿಕ್ಷೆ ಬೇಡುವದೋ? ಇದರ ವಿಷಯ ಹಿಂದಿನ ಶ್ಲೋಕದಲ್ಲಿ ಹೇಳಿದ್ದಾಗಿದೆ. ಈ **ನ ಚ ಏತದ್ ವಿದ्मः**. ಈ **ಚ** ಇದು ಹಿಂದಿನ ಶ್ಲೋಕದ ವಾಕ್ಯವನ್ನೂ ಈ ಶ್ಲೋಕದ **ಕತರನ್ನೋ ಗರೀಯೋ** ವಾಕ್ಯವನ್ನೂ ಜೋಡಿಸುತ್ತದೆ ಎಂದಾಗ, ಭಿಕ್ಷೆ ಅಥವಾ ಯುದ್ಧದ ಪಕ್ಷಗಳು ಇಲ್ಲಿ ಚರ್ಚೆಗೆ ಬರುವದಿಲ್ಲ. ಇಲ್ಲಿ ಅರ್ಜುನನಿಗೆ ತಿಳಿಯದ ಮಾತೆಂದರೆ ಯುದ್ಧ ಮಾಡುವದೇ ಆದಲ್ಲಿ ಸೋಲೋ ಗೆಲವೋ ಈ ಪಕ್ಷಗಳ ವಿಚಾರ. ಆದುದರಿಂದ ರಾಘವೇಂದ್ರರು **पापमंगीकृत्य युद्धकरणेऽपि जयः संदिग्धः एव** ಎಂದು ಅವತರಣಿಕೆಯನ್ನು ಕೊಡುತ್ತಾರೆ. ಆದುದರಿಂದ ಇವರ ಅಭಿಪ್ರಾಯದಲ್ಲಿ ಅರ್ಜುನನಿಗೆ ತಿಳಿಯದೇ ಇದ್ದ ವಿಷಯವೆಂದರೆ ಸೋಲೋ ಗೆಲವೋ ? ಯುದ್ಧವೋ ಭಿಕ್ಷಾಶನವೋ ಎಂಬುದು ಇದರ ಹಿಂದಿನ ಶ್ಲೋಕದಲ್ಲಿ ಇತ್ಯರ್ಥವಾಗಿದೆ ಪಾಪದಾಯಕವಾದರೂ ಯುದ್ಧ ಮಾಡುವದೇ ಶ್ರೇಯಸ್ಕರವೆಂದು ನಿಶ್ಚಿತವಾದ ಮೇಲೆ ಅರ್ಜುನನಿಗೆ ಸೋಲೋ ಗೆಲುವೋ ಎಂಬುದು ತಿಳಿಯದಾಗಿದೆ ಶ್ರೀಧರರೂ ಇದೇ ಅಭಿಪ್ರಾಯದವರಾಗಿದ್ದಾರೆ.

ಆದರೆ ಶಂಕರಾನಂದರು ಅರ್ಜುನನಿಗೆ ತಿಳಿಯದೆ ಇದ್ದುವು ಎಂದರೆ ಯುದ್ಧವೇ ಅಥವಾ ಭಿಕ್ಷಾಶನವೇ ? ಅರ್ಜುನನು ಮತ್ತೆ ಇಲ್ಲಿ ಯುದ್ಧಮಾಡುವದು ಶಾಸ್ತ್ರ ಸಮ್ಮತವೋ ಭಿಕ್ಷೆಬೇಡುವದು ಶಾಸ್ತ್ರಸಮ್ಮತವೋ ಅದು ತನಗೆ ತಿಳಿಯದೆಂದು ಮೊದಲು ಹೇಳುತ್ತಾನೆ. ಆಮೇಲೆ ಯುದ್ಧ ಮಾಡುವದೇ ಆದರೆ ತನಗೆ ಸೋಲು ಒಳ್ಳೆಯದೋ ಅಥವಾ ಗೆಲವು ಒಳ್ಳೆಯದೋ ತಿಳಿಯದಾಗಿದೆ ಎಂದು ಹೇಳುತ್ತಾನೆ— ಎಂದು ಶಂಕರಾನಂದರ ಅಭಿಪ್ರಾಯ.

ಶಂಕರಾನಂದರ ಅಭಿಪ್ರಾಯಕ್ಕೆ ತೊಂದರೆಗಳಿವೆ : ೧) **ಚ** ಇದು ಮೊದಲಿಗೆ ಬಂದುದರಿಂದ ಅದು ಹಿಂದಿನ ವಾಕ್ಯ ಮತ್ತು **ನ ಏತದ್ ವಿದ्मः** ಈ ವಾಕ್ಯವನ್ನು ಜೋಡಿಸುತ್ತದೆ **ಕತರನ್ನೋ ಗರೀಯೋ** ಅಲ್ಲ. ೨) ಆದುದರಿಂದ ಅರ್ಜುನನಿಗೆ ತಿಳಿಯದೇ ಇದ್ದ ವಿಷಯವೆಂದರೆ ಭಿಕ್ಷಾಶನವೋ ಯುದ್ಧವೋ ಮತ್ತು ಯುದ್ಧದಲ್ಲಿ ಸೋಲೋ ಗೆಲವೋ. ಇಲ್ಲಿ ಮೂರರ ಸಮುಚ್ಚಯವಿಲ್ಲ, ಎರಡರ ಸಮುಚ್ಚಯವಿದೆ. ಆದುದರಿಂದ ರಾಘವೇಂದ್ರರ ವಾಕ್ಯಯೋಜನೆಯೇ ಸರಿಯೆಂದು ತೋರುತ್ತದೆ.

ಒಟ್ಟಾರೆ ಅರ್ಜುನನ ಎದುರಿಗೆ ಬಿಡಿಸಲಾರದ ಪ್ರಶ್ನೆಯು ಪೆಡಂಭೂತನಂತೆ ಎದುರು ನಿಂತಿತು ಕುಲಕ್ಷಯವನ್ನು ಮಾಡುವ ಯುದ್ಧದಕ್ಕಿಂತ ಭಿಕ್ಷಾಶನವೇ

ಒಳ್ಳೇದು. ಆದರೆ ಕ್ಷತ್ರಿಯನಿಗೆ ಯುದ್ಧವೇ ಕರ್ತವ್ಯವಾದರೂ ಅದರಿಂದ ತನಗೆ ಜಯವು ಹಿತಕಾರಿಯೋ ಅಪಜಯವು ಹಿತಕಾರಿಯೋ ? ಯಾಕೆಂದರೆ ಯುದ್ಧದಲ್ಲಿ ಜಯಾಪಜಯಗಳು ನಿಶ್ಚಿತವಲ್ಲ; ಆದರೆ ತನಗೆ ಅದರಿಂದ ಸುಖವಿಲ್ಲವೆನ್ನುವದು ನಿಶ್ಚಿತ. ಸೋತರಂತೂ ಮರಣ ತಪ್ಪಿದ್ದಲ್ಲ, ಗೆದ್ದರೂ ರಾಜ್ಯಲಾಭದಿಂದ ಸುಖ ಪಡಲಿಕ್ಕೆ ಸಂಗಡ ಆಪ್ತೇಷ್ಟರು ಇರದಿರುವದರಿಂದ ಅದೂ ದುಃಖದಾಯಕವೇ !! ಬೇಗನೇ ಯಾವದಾದರೂ ಒಂದು ಪಕ್ಷವನ್ನು ನಿರ್ಧರಿಸಲೇಬೇಕು. ಯುದ್ಧದ ಕಹಳೆ ಊದುವದಕ್ಕೆ ಸಿದ್ಧವಾಗಿದೆ ಅರ್ಜುನನು ವಿಚಾರದ ಆಘಾತಕ್ಕೆ ಸಿಕ್ಕು ದಿಗ್ಭ್ರಾಂತನಾದನು ಡೋಲಾಯಮಾನನಾದ ಅರ್ಜುನನು ನಿರ್ವಿಣ್ಣನಾದನು. ಬೆಂದು ಬೆಂಡಾದರೂ ಇತ್ಯರ್ಥಕ್ಕೆ ಬಾರದಿದ್ದಾಗ ಶ್ರೀಕೃಷ್ಣನಿಗೆ ಮರೆಹೊಕ್ಕನು .

**कार्पण्यदोषोपहतस्वभावः**
**पृच्छामि त्वां धर्मसंमूढचेताः ।।**
**यच्छ्रेयः स्यान्निश्चितं ब्रूहि तन्मे**
**शिष्यस्तेऽहं शाधिमां त्वां प्रपन्नम् ।। ७ ।।**

ನನ್ನ ಅತಿ ದೈನ್ಯರೂಪವಾದ ದೋಷದಿಂದ ನನ್ನ ಶೌರ್ಯ ಮೊದಲಾದ ಸ್ವಭಾವವು ನಷ್ಟವಾಗಿದೆ. ಧರ್ಮದ ವಿಷಯದಲ್ಲಿ ಸಂದೇಹವುಳ್ಳವನಾಗಿದ್ದೇನೆ. ಆದುದರಿಂದ ನಾನು ನಿನ್ನನ್ನು ಕೇಳುತ್ತೇನೆ. ಯಾವದು ನಿಶ್ಚಿತವಾದ ಶ್ರೇಯಸ್ಸೋ ಅದನ್ನು ನನಗೆ ಹೇಳು ನಾನು ನಿನಗೆ ಶಿಷ್ಯನು. ನಿನಗೆ ಮೊರೆ ಹೊಕ್ಕ ನನಗೆ 'ಈ ಪ್ರಕಾರವಾಗಿ ಮಾಡು' ಎಂದು ಆಜ್ಞಾಪಿಸು.

**ವಿಶೇಷ ಟಿಪ್ಪಣಿಗಳು :**

**कार्पण्यं**—ಕೃಪಣತನವು ಲೌಕಿಕದಲ್ಲಿ **यः स्वल्पां अपि वित्तक्षतिं न क्षमते** ಯಾವನು ಸ್ವಲ್ಪ ದ್ರವ್ಯವನ್ನು ಖರ್ಚುಮಾಡಿದ್ದನ್ನು ಸಹ ಕ್ಷಮಿಸುವದಿಲ್ಲವೋ ಅವನು ಕೃಪಣನು ಜಿಪುಣನು ಲೌಕಿಕದಲ್ಲಿ, ಆದರೆ ಪಾರಮಾರ್ಥಿಕದಲ್ಲಿ **"यो वा एतदक्षरं गार्गि अविदित्वा अस्माल्लोकात्प्रैति स कृपणः"** । **तस्य भावः कार्पण्यं** ಹೀಗೆ ಏನೂ ಆತ್ಮಜ್ಞಾನವಿಲ್ಲದವನು ಕೃಪಣನು ಎಂದು ಕೆಲವರು ಹೇಳುತ್ತಾರೆ. ಅರ್ಜುನನು ತನ್ನ ಬಂಧುಬಾಂಧವರಿಗೆ ಜಿಪುಣನು ದುಡ್ಡಿಗೆ ತೋರಿಸಿದಂತ ಅತಿ ಪ್ರೀತಿಯನ್ನು ತೋರಿಸುತ್ತಿದ್ದಾನೆ. ಮುಖ್ಯವಾಗಿ ಇದರಲ್ಲಿ ಮನಸಿನ ಉದ್ವಿಗ್ನತೆಯು ಸೇರಿದೆ. C. M ಪದ್ಮನಾಭಾಚಾರ್ಯರು ಕೃಪಣ ಎಂದರೆ 'ಗುಲಾಮನು, ಹಣಕ್ಕೆ ಕೊಂಡುಕೊಳ್ಳಲ್ಪಟ್ಟವನು' ಎಂದೂ ಅರ್ಥ ಬರೆದಿದ್ದಾರೆ. 'ಪರಾಧೀನನು' ಎಂದು ಅರ್ಥ.

ಅದ್ವೈತಿಗಳು ಮೇಲಿನ ಉಪನಿಷತ್ತನ್ನು ಉದ್ಧರಿಸಿ– ಸ್ವಭಾವ ಎನ್ನುವದಕ್ಕೆ ಪರಬ್ರಹ್ಮನೆಂದು ಅರ್ಥಮಾಡಿ ಕಾರ್ಪಣ್ಯವೆಂದರೆ ಅಜ್ಞಾನವೆಂದು ಅರ್ಥಮಾಡಿ– "ಅಜ್ಞಾನದ ದೋಷದಿಂದ ಮುಚ್ಚಲ್ಪಟ್ಟ ಬ್ರಹ್ಮಜ್ಞಾನವುಳ್ಳವನಾಗಿ" ಎಂದು ಅರ್ಥ ಮಾಡುತ್ತಾರೆ ಅರ್ಥವು ಸರಸವಾದರೂ ಎಳೆದು ಹಚ್ಚಿದಂತೆ ತೋರುತ್ತದೆ. ಅರ್ಜುನನು ತನ್ನ ಮಾತಿನಲ್ಲಿ ಜಗತ್ತಿನ ಮಿಥ್ಯಾತ್ವವನ್ನಾಗಲಿ ಬ್ರಹ್ಮನ ನಿತ್ಯತ್ವವನ್ನಾಗಲಿ ಹೇಳಿಲ್ಲ

ಈ ಮೂರು ಶ್ಲೋಕಗಳ ಸಂಗತಿಯನ್ನು ಸತ್ಯಧ್ಯಾನತೀರ್ಥರು ತಮ್ಮ ಗೀತಾ ಪ್ರತಿಪದಾರ್ಥ ಚಂದ್ರಿಕೆಯಲ್ಲಿ ಸೊಗಸಾಗಿ ಸಂಕ್ಷೇಪವಾಗಿ ಕೊಟ್ಟಿದ್ದಾರೆ "ಹೇ ಕೃಷ್ಣನೇ ! ಭೈಕ್ಷಾಶನವು ಗುರುಹತ್ಯಾದಿ ದೋಷರಹಿತವಾದ ಕಾರಣ ಉತ್ತಮವೋ ಅಥವಾ ಯುದ್ಧವು ಗುರುಹತ್ಯಾದಿ ದೋಷಗಳಿಂದ ಯುಕ್ತವಾದರೂ ಕ್ಷತ್ರಿಯರಿಗೆ ಸ್ವಧರ್ಮವಾದ ಕಾರಣ ಅದಕ್ಕಿಂತ ಉತ್ತಮವೋ ಎಂದೂ ಯುದ್ಧಮಾಡಿದರೂ ನಾವು ಗೆಲ್ಲುವೆವೋ ಅಥವಾ ದುರ್ಯೋಧನಾದಿಗಳು ಜಯಿಸುವರೋ ಎಂದೂ ಸಂಶಯ ಉಂಟಾಗಿದೆ, ನಾವು ಜಯಿಸಿದರೂ ಯಾರನ್ನು ಸಂಹಾರಮಾಡಿ ಬದುಕುವದಕ್ಕೆ ಇಚ್ಛಿಸುವದಿಲ್ಲವೋ ಅಂಥ ಧಾರ್ತರಾಷ್ಟ್ರರು ಯುದ್ಧದಲ್ಲಿ ಎದುರಿಗೆ ನಿಂತಿರುವದರಿಂದ ನಮಗೆ ಜಯವಾದರೂ ಮರಣವನ್ನು ಹೊಂದಿದಂತೆಯೇ ! ಆ ಜಯವು ಪರಾಜಯ ರೂಪವೇ ! ಈ ಪ್ರಕಾರವಾಗಿ ಕಾರ್ಪಣ್ಯದೋಷದಿಂದ (ತತ್ವಜ್ಞಾನದಿಂದ ನಷ್ಟವಾದ ಸ್ವಭಾವವುಳ್ಳ) ಅರ್ಜುನನು, ಯಾವದು ಶ್ರೇಯಸ್ಸಾಧ್ಯವೋ ಯಾರಿಗೆ ಜಯ ಉಂಟಾಗುವದೋ ಅದನ್ನು ನಿಶ್ಚಯವಾಗಿ ಹೇಳು, ಎಂದು ಶ್ರೀಕೃಷ್ಣನನ್ನು ಪ್ರಶ್ನೆ ಮಾಡಿದನು "

ಸ್ವಾಮಿ ಪ್ರಭುಪಾದರು ತಮ್ಮ **Bhagavadgeeta as it is** ದಲ್ಲಿ ಸಂಸಾರಿಕ ಗೊಂದಲದಲ್ಲಿ ನಾವು ಬಿದ್ದಾಗ ನಮಗೆ ಗುರುವಿನ ಅವಶ್ಯಕತೆಯನ್ನು ಹೇಳುತ್ತಾರೆ. ತನ್ನ ಬಂಧು ಬಾಂಧವರನ್ನು ರಕ್ಷಿಸಬೇಕೆಂಬ ಇಚ್ಛೆಯಿಂದ ತಾನು ಗೊಂದಲದಲ್ಲಿ ಬಿದ್ದೇನೆಂದು ಅವನಿಗೆ ಗೊತ್ತಿದೆ. ಈಗ ತನ್ನ ಕರ್ತವ್ಯವು ಯುದ್ಧವಾಗಿದ್ದರೂ ಈ ಕಾರ್ಪಣ್ಯದೋಷದಿಂದ ಅದನ್ನು ಮಾಡಲಿಕ್ಕೆ ಇಚ್ಛೆ ಇಲ್ಲದಾಗಿದೆ. ಆದುದರಿಂದ ಅವನು ಶ್ರೀ ಕೃಷ್ಣನಿಗೆ ನಿಶ್ಚಿತ ನಿರ್ಧಾರವನ್ನು ಈ ವಿಷಯದಲ್ಲಿ ಕೇಳುತ್ತಿದ್ದಾನೆ ಈಗ ಗುರು–ಶಿಷ್ಯರ ನಡುವೆ ಸಂವಾದವು ಗಂಭೀರವಾಗಹತ್ತಿದೆ ಶಿಷ್ಯನು ಶ್ರೀಕೃಷ್ಣನಿಗೆ ಶರಣಾಗತನಾಗಿದ್ದಾನೆ

ಆದರೆ ಶಾರಣಾಗತಿಯು ಪೂರ್ತಿಯಾಗಿಲ್ಲವೆಂದು ಇದರ ಕೊನೆಗೆ ಬರುವ ಅವನ ನಿಶ್ಚಯದಿಂದ ಗೊತ್ತಾಗುತ್ತದೆ– **"न योत्स्य इति गोविंदं उक्त्वा तूष्णीं बभूवह"** ।।ಯುದ್ಧ ಮಾಡಬಾರದೆಂಬ ನಿರ್ಧಾರವು ಇನ್ನೂ ಅವನಿಗೆ ಅಂಟಿಕೊಂಡಿದೆ

ರಾಧಾಕೃಷ್ಣನ್ನರು ಈ ಸಂದರ್ಭದಲ್ಲಿ ಹೇಳುವ ಒಂದೆರಡು ಮಾತುಗಳು ಮಹತ್ವದವು ಇವೆ:— ೧) ತನ್ನಲ್ಲಿಯ ದೋಷದ ಅರಿವು ತನಗೆ ಬಂದರೆ ಅವನು ಆಧ್ಯಾತ್ಮಿಕ ದೃಷ್ಟಿಯಿಂದ ಜೀವಂತನಿದ್ದಾನೆಂದು ಗೊತ್ತಾಗುತ್ತದೆ. ಈ ತರಹದ ಸಂಶಯದ ದ್ವಾರದಿಂದ**ಲೇ** ಮಾನವನು ಅಧ್ಯಾತ್ಮದಲ್ಲಿ ಮೇಲಿನ ಎತ್ತರಕ್ಕೆ ಹೋಗುತ್ತಾನೆ.

೨) ಅಧ್ಯಾತ್ಮ ಶಾಸ್ತ್ರದಲ್ಲಿ ಇದು ಗೊತ್ತಿದ್ದ ಮೆಟ್ಟಲು; ಇನ್ನು ಬೆಳಕು ಬೆಳಗುವ ಮುಂಚೆಯೇ ಕತ್ತಲೆ ಕವಿಯುತ್ತಿದೆ ಸಂಶಯ ಸಂದೇಹಗಳು ಮುತ್ತುತ್ತವೆ. ಅರ್ಜುನನಿಗೆ ಒಳಗಿನ ಹೊರಗಿನ ಸಂದೇಹಗಳು ತೊಂದರೆಗಳು ಬೆಳಗು ಹರಿಯ ಹತ್ತಿದಂತೆ ಹೆಚ್ಚುತ್ತವೆ. ಅವನ್ನೆಲ್ಲ (ಜ್ಞಾನಾಗ್ನಿಯಲ್ಲಿ ಹಾಕಿ ಸುಡಬೇಕು.) ಬೆಳಕು ನಮ್ಮನ್ನು ಮುತ್ತುವವರೆಗೆ ಕತ್ತಲೆ ಕಾಡುತ್ತದೆ.

ಸ್ವಾಮಿ ಚಿದ್ಭವಾನಂದರು ಹೇಳುತ್ತಾರೆ :

**अन्यच्छ्रेयो अन्यदुतैव प्रेयः ते उभे नानार्थे पुरुषं सिनीतः।**
**तयोः श्रेयः आददानस्य साधुर्भवति हीयतेऽर्थात् य उप्रेयो वृणीते**

ಒಂದು ಹಿತ ಒಂದು ಸಂತೋಷ; ಅವೆರಡು ಬೇರೆ ಬೇರೆ ಪ್ರಯೋಜನವುಳ್ಳವಾಗಿ ಮನುಷ್ಯನನ್ನು ಬಂಧಿಸುತ್ತಿವೆ. ಹಿತವನ್ನು ಸ್ವೀಕರಿಸುವವನಿಗೆ ಒಳಿತು ಆಗುತ್ತದೆ. ಆದರೆ ಯಾವನು ಸಂತೋಷವನ್ನು ಆರಿಸುತ್ತಾನೆ ಅವನು ಗುರಿಯನ್ನು ಕಳೆದು ಕೊಳ್ಳುತ್ತಾನೆ.

ಅರ್ಜುನನು ಈಗ ಕವಲು ದಾರಿಯಲ್ಲಿ ನಿಂತಿರುತ್ತಾನೆ. ಶ್ರೇಯಸ್ಸನ್ನಾರಿಸಬೇಕು; ಪ್ರೇಯಸ್ಸನ್ನಾರಿಸಬೇಕು ತಿಳಿಯದಾಗಿದೆ. ದೇವರು ಅವನಿಗೆ ಪ್ರೇಯಸ್ಸನ್ನೇ ಕೊಡುತ್ತಾ ಬಂದಿದ್ದಾನೆ. ಈಗ ಅವನು ಶ್ರೇಯಸ್ಸನ್ನಾರಿಸಿದ್ದಾನೆ. ಕೃಷ್ಣನು ಅವನಿಗೆ ಗುರು, ಗೆಳೆಯನಲ್ಲ; ಅವನು ಅವನಿಗೆ ಹಿತಮಾಡಲು ಸದಾಸಿದ್ಧ; ಆದರೆ ಅರ್ಜುನನು ಅವನು ಹೇಳಿದಂತೆ ಕೇಳಬೇಕಾಗಿದೆ

ವಿಪತ್ತು ಬಂದಾಗೆಲ್ಲ ನಾವೂ ಅರ್ಜುನನ ಸ್ಥಾನದಲ್ಲಿದ್ದಂತೆ ಭಾವಿಸಿ ಪರಮಾತ್ಮನನ್ನು ಆ ಶಬ್ದಗಳಿಂದ ಸ್ತುತಿಸಿದರೆ ನಿಜವಾಗಿ ಶ್ರೀಕೃಷ್ಣನು ಪ್ರೀತನಾಗುತ್ತಾನೆ. *

---

* **प्रपन्नम्** ರಾಮಾನುಜರಲ್ಲಿ ಭಕ್ತಿ ಮತ್ತು ಪ್ರಪತ್ತಿ (**भक्ति, प्रपत्ति**) ಎಂದು ಎರಡು ದಾರಿಗಳನ್ನು ಒಪ್ಪಿರುತ್ತಾರೆ ಅವರು ಅವುಗಳನ್ನು ಮರ್ಕಟನ್ಯಾಯ ಮತ್ತು ಮಾರ್ಜಾಲ ನ್ಯಾಯದಿಂದ ವಿವರಿಸುತ್ತಾರೆ ಆದರೆ ಗೀತೆಗೆ ಈ ರಾಮಾನುಜರ ಈ ಪಾರಿಭಾಷಿಕ ಅರ್ಥಗಳು ಗೊತ್ತಿದ್ದಂತೆ ಕಾಣುವದಿಲ್ಲ. (Modi–Notes on Bhagavadgeeta)

ಈಗ ಅರ್ಜುನನು ೧ ನೇ ಅಧ್ಯಾಯದಲ್ಲಿ ೨ ನೇ ಅಧ್ಯಾಯದ ೧೦ ಶ್ಲೋಕಗಳಲ್ಲಿ ತನ್ನ ಮನಸಿನ ಆ ವಿಷಾದವನ್ನು ಶ್ರೀಕೃಷ್ಣನ ಎದುರಿಗೆ ಹೇಗೆ ತಿಳಿಸಿದ್ದಾನೆಂದು ಸಂಗ್ರಾಹಕವಾಗಿ ನೋಡುವದರಲ್ಲಿ ನಮಗೆ ಒಂದು ಮಾತು ಸ್ಪಷ್ಟವಾಗುತ್ತದೆ ಈ ವಿಚಾರಸರಣಿಯಲ್ಲಿ ಒಂದು ಸುಸಂಗತತನವಿಲ್ಲ. ಎರಡನೆಯದಾಗಿ ಇವನು ತೋರುವ ವೈರಾಗ್ಯ, ದಯಾ, ಬಂಧು–ಬಾಂಧವರ ವಿಷಯದಲ್ಲಿ ಶೋಕ, ಕುಲಕ್ಷಯದ ಚಿಂತೆ, ಗುರುಗಳಿಗೆ ಗೌರವ ತೋರಿಸಲಿಕ್ಕೆ ಯುದ್ಧದಿಂದ ನಿವೃತ್ತಿ–ಇವೆಲ್ಲ ಶುದ್ಧ ಮನಸಿನ ವಿಚಾರದ ಪರಿಣಾಮಗಳಲ್ಲ. ಮನಸ್ಸಿನಲ್ಲಿ ಒಂದು ದೌರ್ಬಲ್ಯ ಸೇರಿ ಅದು ಕಾರ್ಯನಿರ್ವಹಣೆಯನ್ನು ಸಿಥಿಲಗೊಳಿಸಿದೆ. ಇವೆಲ್ಲ ಆ ದೌರ್ಬಲ್ಯದ ವಿಕೃತ ಬುದ್ಬುದಗಳು, ಅನೇಕ ಜನವ್ಯಾಖ್ಯಾನಕಾರರು ತಪ್ಪುತಿಳುವಳಿಕೆಯಿಂದ ಇವು ಖೊಟ್ಟಿನಾಣ್ಯಗಳೆಂದು ಗುರುತಿಸದೆ ಅರ್ಜುನನು ಸಾಂಸಾರಿಕ ತಾಪತ್ರಯದಿಂದ ಪರಿತಪ್ತನಾಗಿ ವಿರಕ್ತಿಯನ್ನು ಹೊಂದಿ ಮುಮುಕ್ಷುವಿಗೆ ಬೇಕಾದ ಆತ್ಮಜ್ಞಾನಕ್ಕೆ ಅರ್ಹನಾಗಿದ್ದಾನೆಂದು ಬಣ್ಣಿಸಿದ್ದಾರೆ. ಇದು ಅರ್ಜುನನ ಈಗಿನ ನಿಜವಾದ ಚಿತ್ರವಲ್ಲ ಮೋಹದ ಮಬ್ಬಿನಲ್ಲಿ ಮನೋವಿಕಾರಗಳ ಬಿರುಗಾಳಿಗೆ ಸಿಕ್ಕು ಕಲ್ಲು ಮುಳ್ಳು ಹಾಸಿಗೆಯ ಮೇಲೆ ಕಾಲಿಟ್ಟಿದ್ದರೂ ಕೃಷ್ಣನನ್ನು ಕೂಗುತ್ತಿದ್ದರೂ ಇನ್ನೂ ತಾನೇ ದಾರಿಯನ್ನು ಹುಡುಕುವ ಹವ್ಯಾಸದಲ್ಲಿದ್ದಾನೆ. ಒಟ್ಟಾರೆ ಅವನು ಗೊಂದಲಮಯ ಪರಿಸ್ಥಿತಿಯಲ್ಲಿದ್ದಾನೆ. ತಡವರಿಸಿ ನೆಲಕ್ಕೆ ಬೀಳುವ ಸ್ಥಿತಿಯಲ್ಲೂ ನನಗೇನಾಗಿದೆ ಎಂದು ತನ್ನ ಕಾಲಮೇಲೆ ನಿಲ್ಲಲು ಎತ್ನಿಸುತ್ತಿರುವದನ್ನು ನೋಡಿ ಕನಿಕರದಿಂದ ಕೃಷ್ಣನು ಮುಗುಳು ನಗೆ ನಗುತ್ತಾನೆ.*

ಅರ್ಜುನನು ಈಗ ತನ್ನ ನಿಜಸ್ವರೂಪವನ್ನು ಕೃಷ್ಣನೆದುರಿಗೆ ತೆರೆಯುತ್ತಾನೆ.

**न हि प्रपश्यामि ममापनुद्यात्**
**यच्छोकमुच्छोषणमिंद्रियाणाम् ।।**

---

* ಒಬ್ಬ ಮನೋವಿಶ್ಲೇಷಣಜ್ಞನು ಬರೆಯುವದೇನೆಂದರೆ–Arjuna's philosophical talk in versses 32 to 46 of Chapter I of the Geeta about the evils that might accrue from his taking part in the battle are nothing but 'ration'a lisations i. e reasons given by an individual for his conduct that are in reality not reasons at all but excuses or justifications that are frequently thought of, after the event .. . .. .. .. unhaphiness and depression over came Arjuna first and in his desperate attempt to find relevent reasons for them be invented delusions for his inactions.

**अवाप्य भूमौ असपत्नमृद्धं**
**राज्यं सुराणामपि चाधिपत्यम् ॥ ८ ॥**

ಭೂಲೋಕದಲ್ಲಿ ವೈರಿಗಳಿಲ್ಲದ ಸಮೃದ್ಧವಾದ ರಾಜ್ಯವನ್ನು ಪಡೆದರೂ ದೇವತೆಗಳಮೇಲೆ ಅಧಿಕಾರ ಪಡೆದರೂ ಇಂದ್ರಿಯಗಳಿಗೆ ತಾಪ ಕೊಡುತ್ತಿರುವ ನನ್ನ ಈ ಶೋಕವನ್ನು ಯಾವದು ಹೋಗಲಾಡಿಸುವದೋ ಅದನ್ನು ನಾನು ಕಾಣೆನು ॥ ೫ ॥

## ವಿಶೇಷ ಟಿಪ್ಪಣಿಗಳು

**शोकं** ಅರ್ಜುನನ್ನು ಕಂಗೆಡಿಸುವ ಈ ದುಃಖವು ಯಾವುದು ? ಶಂಕರಾನಂದರು ತಮ್ಮ ಟೀಕೆಯಲ್ಲಿ, "ಇದು ಸರ್ವ ಸಾಂಸಾರಿಕರಿಗೆ ಬರತಕ್ಕ ದುಃಖ"ವೆಂದೂ ಅದನ್ನು ತಾನು ಪೂರ್ತಿಯಾಗಿ ಅರ್ಜುನನು ನೀಗಬೇಕೆಂದು ಇಚ್ಛಿಸುತ್ತಾನೆ "ಎಂದೂ ಹೇಳುತ್ತಾರೆ. ರಾಘವೇಂದ್ರರು ವಿವೃತ್ತಿಯಲ್ಲಿ ಇದು " ಅರ್ಥಕಾಮರಾಗಿದ್ದ ಗುರುಗಳನ್ನು ಬಂಧುಗಳನ್ನು ಕೊಲ್ಲುವ ನಿಮಿತ್ತವಾಗಿ ಬರುವ ಶೋಕ "ವೆಂದು ಹೇಳುತ್ತಾರೆ.

ಈ ಸಂದರ್ಭದಲ್ಲಿ ಶಂಕರಾನಂದರು "ಅರ್ಜುನನು ತನಗೆ ಬ್ರಹ್ಮ ಮತ್ತು ವಿಷ್ಣುವಿನ ಪದ ಲಾಭವಾದರೂ ಈ ಶೋಕದ ನಿವೃತ್ತಿಯು ಆಗುವದಿಲ್ಲ ಎಂದು ಹೇಳುತ್ತಾನೆ." ಇದರಿಂದ ಹೇಗೆ ಯೋಗ್ಯರು ಬ್ರಹ್ಮಪದವಿಗೆ ಬರುತ್ತಾರೋ ಹಾಗೆ ವಿಷ್ಣುಪದವಿಗೆ ಬರುವವರು ಇದ್ದಾರೆಂದು ಸೂಚಿಸುತ್ತಾನೆ. ಇದು ಗೀತೆಗೆ ವಿರುದ್ಧವಾದುದು. ವಿಷ್ಣುವೇ ಅಥವಾ ಕೃಷ್ಣನೇ ಪರಬ್ರಹ್ಮನೆಂದೂ ಅವನೇ ಪುರುಷೋತ್ತಮನೆಂದೂ ಹೇಳಿದ್ದರಿಂದ ಆಸ್ಥಾನಕ್ಕೆ ಬರತಕ್ಕವರು ಇನ್ನೊಬ್ಬರಿಲ್ಲವೆಂದು ಸ್ಪಷ್ಟವಾಗುತ್ತದೆ. ಹೀಗೆ ವಿಷ್ಣುವಿನ ಮೇಲೆ ಈ ತರಹದ ಹೀನ ದೋಷವನ್ನು ಆರೋಪಿಸುವದು ಸರಿಯಲ್ಲ.

ವೇಂಕಟನಾಥರ ಬ್ರಹ್ಮಾನಂದಗಿರಿಯಲ್ಲಿ ಮಧುಸೂದನ ಸರಸ್ವತಿಯವರ ವ್ಯಾಖ್ಯಾನವನ್ನು ಅವರು ವಿಮರ್ಶಿಸುತ್ತಾರೆ—**"यत्तु अत्र मधुसूदनसरस्वतिभिः व्याख्यातम्** ಎಂದು ಪ್ರಾರಂಭಿಸಿ **अधिकारिविशेषणप्रदर्शनार्थोऽय ग्रंथसंदर्भः** "ಅರ್ಜುನನು ಯೋಗ್ಯನಾದ ಅಧಿಕಾರಿಯೆಂದು ಸಿದ್ಧಮಾಡಲಿಕ್ಕೆ ಬೇಕಾದ ಅವನಲ್ಲಿರುವ ಧರ್ಮಗಳನ್ನು ಈ ಗ್ರಂಥಭಾಗದಲ್ಲಿ ತೋರಿಸುತ್ತಾರೆ" ಎಂದು ಮೊದಲಾಗಿ ಹೇಳಿದ್ದು ಸರಿಯೋ ಎಂಬುದನ್ನು ವಿಚಾರಿಸಿ ನೋಡಬೇಕು ಎಂದು ವೇಂಕಟನಾಥರು ಹೇಳುತ್ತಾರೆ.

ಇಲ್ಲಿ ಮತ್ತು ಸ್ವರ್ಗದಲ್ಲಿ ದೊರೆಯತಕ್ಕ ಎಲ್ಲ ಫಲಗಳಲ್ಲಿಯೂ ನಿರುಪಾಧಿಕವಾದ ವೈರಾಗ್ಯವು ಇಲ್ಲಿ ಉಕ್ತವಾಗಿದ್ದರೆ ಆಗ ನಾವು ಅಧಿಕಾರಿಯ ವಿಶೇಷಣಗಳೆಂದು ಹೇಳಬಹುದು. ಭೋಗಗಳಲ್ಲಿ ವಿರಕ್ತಿಯು ಶೋಕನಿಮಿತ್ತಕವಾಗಿ ಬಂದುದೆಂದು ಸ್ಪಷ್ಟವಾಗಿ ಹೇಳುತ್ತಾನೆ. (**यच्छोकमुच्छोषणं**); ರಾಜ್ಯದಲ್ಲಿ ವೈರಾಗ್ಯವು ಬಂಧುಗಳ ವಧ ನಿಮಿತ್ತಕವಾದುದು. ಗುರು ವಧವನ್ನು ಮಾಡಬೇಕಾಗುತ್ತದೆಂದು ಅರ್ಜುನನು ಭಿಕ್ಷಾಟನಕ್ಕೆ ಸಿದ್ಧನಾಗಿದ್ದಾನೆ. ಇಂಥ ಸೋಪಾಧಿಕವಾದ ವೈರಾಗ್ಯವು ಜ್ಞಾನಾಧಿಕಾರಿಯ ಧರ್ಮವಾಗಲಾರದು. ಎಂಬುದು ಶಾಸ್ತ್ರಸಮ್ಮತವಾದ ಮಾತು. ಆದುದರಿಂದ ಮುಂದೆ ದೈವೀಸಂಪತ್ತು ಜ್ಞಾನಾಧಿಕಾರಿಯ ವಿಶೇಷಣವೆಂದು ಹೇಳುತ್ತಾರೆ. (**दैवीसंपद्विमोक्षाय**). ಇಲ್ಲಿ ಜ್ಞಾನೋಪದೇಶ ಮಾಡಲಿಕ್ಕೆ ಪೂರ್ವಾಂಗವಾಗಿ ಅರ್ಜುನನ ಶೋಕ–ಮೋಹಗಳನ್ನು ಮಾತ್ರ ಪ್ರದರ್ಶಿಸುತ್ತಾರೆ. ಇದೇ ಯುಕ್ತವಾದುದೆಂದು ನಮ್ಮ ಅಭಿಪ್ರಾಯವೆಂದು ವೆಂಕಟನಾಥರು ಸ್ಪಷ್ಟವಾಗಿ ಹೇಳಿದ್ದಾರೆ.

ರಾಮಾನುಜಾಚಾರ್ಯರು ಸಹ ಯಮುನಾಚಾರ್ಯರ ಗೀತಾರ್ಥ ಸಂಗ್ರಹದ ಶ್ಲೋಕವನ್ನು ಉದಾಹರಿಸಿದ್ದಾರೆ.— **अस्थानस्नेहकारुण्य धर्माधर्मधियाकुलं । पार्थं प्रपन्नं उद्दिश्य शास्त्रावतरणं कृतम् ॥**

ಶಂಕರಾಚಾರ್ಯರೂ **अर्जुनेन आत्मनः शोकमोहौ प्रदर्शितौ** ಎಂದೇ ಹೇಳಿದ್ದಾರೆ. ಆಚಾರ್ಯರು ಸಹ ಭಾಷ್ಯದಲ್ಲಿ **बांधवादिमोहजालसंवृतं विषीदंतं** ಎಂದು ಸ್ಪಷ್ಟಪಡಿಸಿದ್ದಾರೆ. ಜಯತೀರ್ಥರು ಇದನ್ನು ಒಳ್ಳೇ ಸ್ವಾರಸ್ಯವಾಗಿ ವಿಶದಪಡಿಸಿದ್ದಾರೆ. "ಬಾಂಧವಾದಿ ಮೋಹವೆಂದರೆ–'ಇವರು ನನ್ನವರು, ನಾನು ಇವರವನು, ಇವರು ನನ್ನ ನಿಮಿತ್ತದಿಂದ ಸಾಯುತ್ತಾರೆ. ಇವರಿಲ್ಲದೆ ನಾನು ಬದುಕುವದು ಹೇಗೆ? ನನಗೆ ಪಾಪ ಬರುವದು. ಜಯವು ಸಂದಿಗ್ಧವು ಇತ್ಯಾದಿ ರೂಪದ ತಪ್ಪು ತಿಳುವಳಿಕೆಯ 'ಜಾಲದಿಂದ ಸಹಿತವಾದ ಈ ಮೋಹದಿಂದ ಬಿಗಿಯಲ್ಪಟ್ಟಿದ್ದೇನೆ ಆದುದರಿಂದ ವಿಷಾದಿಸುತ್ತೇನೆ'. ಮೋಹ ನಿಮಿತ್ತದಿಂದ ಬಂದ ಶೋಕದಿಂದ ಹುಟ್ಟಿದ ಮನೋದೌರ್ಬಲ್ಯವೇ ವಿಷಾದವು. ಅದು ಇದ್ದಾಗ ಎಲ್ಲ ಕೆಲಸಗಳು ನಿಂತು ಹೋಗುತ್ತವೆ.

ಬಂಧುಗಳು ಮಾಡಿದ ಮಹಾ ಅಪರಾಧವನ್ನು ಸ್ಮರಿಸುತ್ತಿದ್ದರೂ ಕೋಮಲ ಅಂತಃಕರುಣದ ಅರ್ಜುನನಿಗೆ ಬಂಧುಗಳ ಅಂತ್ಯಕಾಲಕ್ಕೆ ಆ ಸಿಟ್ಟು ದೂರಾಗುತ್ತದೆ. ಅದರ ಸ್ಥಳದಲ್ಲಿ ಪ್ರೀತಿಯು ಹುಟ್ಟುತ್ತದೆ. ಆದುದರಿಂದಲೇ ಇದಕ್ಕೆ ಮೋಹವೆಂದು ಹೆಸರು".

ಅರ್ಜುನನು ಜ್ಞಾನಿಯಾದುದರಿಂದ ಮೋಹಜಾಲದಲ್ಲಿ ಸಿಕ್ಕದ್ದು ಸ್ವಲ್ಪೇ ! ಎಂದು ತಿಳಿಯಬೇಕು.

ಸ್ವಾಮೀ ಚಿದ್ಭವಾನಂದರು ಈ ಸಂದರ್ಭದಲ್ಲಿ ಕೃಷ್ಣಾರ್ಜುನರ ವಿಚಿತ್ರ ಸಂಬಂಧ ವನ್ನು ವಿಶದಪಡಿಸುತ್ತಾರೆ. The relationship between Sri Krishna and Arjuna is unique The mother's love, the father's care, the master's discipline, the King's protection & God's grace–a sweet combination of all these is found in the attitude of Shri Krishna towards Arjuna". ಶ್ರೀ ಕೃಷ್ಣಾರ್ಜುನರ ಸಂಬಂಧವು ವಿಚಿತ್ರವಾದದ್ದು. ತಾಯಿಯ ಅಂತಃಕರಣವು, ತಂದೆಯ ಜಾಗರೂಕತೆಯು, ಸ್ವಾಮಿಯ ಶಿಸ್ತು, ರಾಜನ ರಕ್ಷಣೆಯು ದೇವರ ದಯೆಯು–ಇವೆಲ್ಲವುಗಳ ಸುಮಧುರಮಿಲನವೇ ಅರ್ಜುನನ ಕಡೆಗಿರುವ ಕೃಷ್ಣನ ನೋಟದಲ್ಲಿ ತುಂಬಿವೆ.

**संजय उवाच –**

**एवमुक्त्वा हृषीकेशं गुडाकेशः परंतप ।**
**नयोत्स्य इति गोविंदं उक्त्वातूष्णींबभूवह ॥ ९ ॥**

(ಧೃತರಾಷ್ಟ್ರನಿಗೆ) ಸಂಜಯನು ಹೇಳಿದನು :–

ಶತೃತಾಪಕನಾದ ಅರ್ಜುನನು (ಇಂದ್ರಿಯ ನಿಯಾಮಕನಾದ) ಶ್ರೀಕೃಷ ನಿಗೆ ಈ ಪ್ರಕಾರವಾಗಿ ನುಡಿದು ಯುದ್ಧ ಮಾಡುವದಿಲ್ಲೆಂದು ಹೇಳಿ ಸುಮ್ಮನಾದನು.

**ವಿಶೇಷ ಟಿಪ್ಪಣೆಗಳು :**

**ಹ** ಕ್ಕೆ ಇಂಥ ಧೈರ್ಯಶಾಲಿಯಾದ ಅರ್ಜುನನಿಗೆ ಈ ಪ್ರಕಾರವಾದ ಬುದ್ಧಿಯು ಹುಟ್ಟಿದ್ದು ಆಶ್ಚರ್ಯವು **हेत्याश्चर्ये** (ಗೀತಾರ್ಥ ಪ್ರತಿಪದಾರ್ಥ ಚಂದ್ರಿಕಾ) ಎಂದು ಅರ್ಥ ಬರೆದಿದ್ದಾರೆ.

**नयोत्स्ये –** 'ನಾನು ಯುದ್ಧ ಮಾಡುವದಿಲ್ಲ.' ಅರ್ಜುನನು ಕೃಷ್ಣನಿಗೆ ಮಾರ್ಗದರ್ಶನ ಮಾಡಲಿಕ್ಕೆ ಕೇಳಿದ್ದರೂ ಅವನು ಉಪದೇಶಿಸುವ ಮೊದಲೇ ಯುದ್ಧ ಮಾಡುವದಿಲ್ಲೆಂದು ತನ್ನ ನಿರ್ಣಯವನ್ನು ಹೇಳುತ್ತಾನೆ.

**हृषीकेश** ಇಂದ್ರಿಯಗಳಿಗೆ ಒಡೆಯ **गुडाकेश** ನಿದ್ರೆಗೆ ಒಡೆಯನಾದ ಅರ್ಜುನನು **तुष्णीं बभूवह** ಸುಮ್ಮನಾದನು. ಶಿಷ್ಯನು ಗುರುವಿನ ಉಪದೇಶವನ್ನು

ಇನ್ನೂ ಕೇಳಲಿಲ್ಲ. ಅದನ್ನು ಕೇಳಲಿಕ್ಕೆ ಆತುರನಾಗಿ ಅರ್ಜುನನು ಮೌನವನ್ನು ಧರಿಸಿದನು

**गोविंदं**– ಮಧುಸೂದನ ಸರಸ್ವತಿಯವರು **गां वेदलक्षणां वाणिं विदतीति व्युत्पत्या सर्ववेदोपादानत्वेन· सर्वज्ञम्** ವೇದವನ್ನು ತಿಳಿದವನಾದ ನಿಮಿತ್ತಿಕ ಸರ್ವಜ್ಞನು. ರಾಘವೇಂದ್ರರು **गाः वेदवाचः प्रतिपादकत्वेन विंदते लभत इति गोविंदः** ವೇದವಾಕ್ಯಗಳು ಅವನನ್ನು ಪ್ರತಿಪಾದಿಸುವದರಿಂದ ಅವನು ಗೋವಿಂದನು.

**तमुवाच हृषीकेशः प्रहसन्निव भारत**
**सेनयोरुभयोर्मध्ये विषीदंतमिदं वचः ॥ १० ॥**

ಎಲೈ ಭಾರತ (ಧೃತರಾಷ್ಟ್ರ)ನೇ ಶ್ರೀಕೃಷ್ಣನು ಎರಡೂ ಸೈನ್ಯದ ಮಧ್ಯದಲ್ಲಿ ದುಃಖಪಡತಕ್ಕ ಅರ್ಜುನನನ್ನು ಕುರಿತು ಈ ಮಾತನ್ನು ಮುಗಳು ನಗೆಯಿಂದ ಉಪಹಾಸ ಮಾಡುವವನಂತೆ ಹೇಳಿದನು.

**ವಿಶೇಷ ಟಿಪ್ಪಣಿಗಳು :—**

**प्रहसन्निव** – ಇದು ಅರ್ಥಗರ್ಭಿತ ಪದವು. ರಾಘವೇಂದ್ರರು **परिहासकर वाक्योक्ति द्योतक हास्यस्य सूचनाय 'इव' शब्दः** ಈ ಹಾಸವು ಅಥವಾ ನಗೆಯು ಪರಿಹಾಸವನ್ನು ತೋರಿಸುತ್ತದೆನ್ನುವದು **इव शब्द** ದಿಂದ ಗೊತ್ತಾಗುತ್ತದೆ ಆದರೆ C. M ಪದ್ಮನಾಭಾಚಾರ್ಯರು ಇದರಲ್ಲಿ ಬಹು ಅರ್ಥಗಳನ್ನು ಕಾಣುತ್ತಾರೆ "So the Lord put on a gentle smile to convey a host of meaning There was some ridicule, some contempt for the reason and conclusion of Arjuna, a covert insinuation that he had grievously misapprehended things." ಶ್ರೀಕೃಷ್ಣನು ಮುಗುಳು ನಗೆ ನಕ್ಕನು ಅದಕ್ಕೆ ಬಹು ಅರ್ಥಗಳು. ಸ್ವಲ್ಪ ಪರಿಹಾಸ, ಸ್ವಲ್ಪ ತಿರಸ್ಕಾರಗಳು ಅರ್ಜುನನು ಕೊಟ್ಟ ಕಾರಣಗಳಿಗಾಗಿ ಮತ್ತು ಅವನ ನಿರ್ಣಯಕ್ಕಾಗಿ ಅದರಲ್ಲಿ ಬೆರತಿದ್ದವು. ಮತ್ತು ಅರ್ಜುನನು ವಸ್ತುಸ್ಥಿತಿಯನ್ನು ಬಹಳ ವಿಪರ್ಯಾಸವಾಗಿ ತಿಳಿದುಕೊಂಡಿದ್ದನೆಂದು ಅದರಲ್ಲಿ ಛದ್ಮದಿಂದ ಸೂಚಿತವಾಗುತ್ತಿತ್ತು."

**सेनयोरुभयोर्मध्ये** ಇದನ್ನು **विषीदंतं** ದೊಡನೆ ಯೋಜಿಸಬೇಕು. "ಕೊನೆಯುವರೆಗಾದ ಯುದ್ಧದ ತಯಾರಿಗೆ ಹೊಣೆಗಾರನಾಗಿದ್ದರೂ ಅರ್ಜುನನು ಒಮ್ಮೆಲೆ ಮನಸು ಬದಲಾಯಿಸಿದನು. ಅಥವಾ ಅದನ್ನು **उवाच** ದೊಡನೆ ಓದ ಬಹುದು. ಅದರಿಂದ ಕೃಷ್ಣನು ಸ್ಥಳಕ್ಕೆ ಮಹತ್ವ ಕೊಡಲಿಲ್ಲ. ಯುದ್ಧ ಭೂಮಿಯ ಮೇಲೆ ಈ ತರಹದ ಉಪದೇಶವು ಸಾಮಾನ್ಯ ಸ್ಥಿತಿಯಲ್ಲಿ ಅಯುಕ್ತವಾಗಿದ್ದರೂ ಈ ವಿಚಿತ್ರ ಸ್ಥಿತಿಯಲ್ಲಿ ಅದು ಯೋಗ್ಯವಾಗಿಯೇ ಇತ್ತು ಎಂದು ಸೂಚಿತವಾಗುತ್ತದೆ.

ಮುಂದಿನ ಶ್ಲೋಕದಿಂದ ಭಗವಂತನ ಉಪದೇಶವು ಪ್ರಾರಂಭವಾಗುವದರಿಂದ ಹಿಂದಿನದನ್ನು ಅನುವಾದಿಸಿ ಮುಂದಿನದಕ್ಕೆ ಯೋಗ್ಯ ಸಂಗತಿಯಾಗುವದಕ್ಕೆ ತಕ್ಕದಾದ ಉಪೋದ್ಘಾತವನ್ನು ರಚಿಸಿದ್ದಾರೆ. ಅದು ಅವರವರು ತೆಗೆದ ಗೀತಾ ತಾತ್ಪರ್ಯಕ್ಕೆ ಅನುಗುಣವಾಗಿದೆ .—

(ಶಂಕರಾಚಾರ್ಯರು) ಹೀಗೆ ಧರ್ಮವನ್ನು ತಿಳಿಯಲಿಕ್ಕೆ ಶಕ್ತಿಸಾಲದೆ ಮಿಥ್ಯಾ ಜ್ಞಾನದಿಂದ ಬಳಲುತ್ತ ದೊಡ್ಡ ಶೋಕ ಸಾಗರದಲ್ಲಿ ಬಿದ್ದು ತೊಳಲುತ್ತಿರುವ ಅರ್ಜುನನನ್ನು ನೋಡಿ ಆತ್ಮಜ್ಞಾನವೇ ಇವನಿಗೆ ತಾರಣೋಪಾಯವೆಂದು ನಿರ್ಧರಿಸಿ ಭಗವಂತನಾದ ವಾಸುದೇವನು ಬಹು ಅಂತಃಕರಣದಿಂದ ಅವನನ್ನು ಉದ್ಧಾರ ಮಾಡಬೇಕೆಂದು ಆತ್ಮಜ್ಞಾನಕ್ಕೆ ಇನ್ನು ಪ್ರಾರಂಭಿಸಬೇಕೆಂದು ಹೇಳುತ್ತಾನೆ. ಮುಖ್ಯವಾಗಿ ಶಂಕರಾಚಾರ್ಯರು ಆತ್ಮಜ್ಞಾನದೊಡನೆ ಯಾವ ಕರ್ಮಸಮುಚ್ಚಯವೂ ಸಾಧ್ಯವಿಲ್ಲೆಂದು ಅಭಿಪ್ರಾಯಪಟ್ಟಿರುತ್ತಾರೆ.

(ರಾಮಾನುಜಾಚಾರ್ಯರು) ಅರ್ಜುನನಿಗೆ ಶೋಕಕ್ಕೆ ಕಾರಣವೆಂದರೆ ದೇಹ–ಆತ್ಮರ ಯಥಾರ್ಥಜ್ಞಾನವಿಲ್ಲದಿರುವದು. ದೇಹಕಿಂತ ಬೇರೇ ಆತ್ಮವದೆ ಎಂದು ತಿಳಿದು ಕೊಳ್ಳಲಿಕ್ಕೆ ಅರ್ಜುನನು ಧರ್ಮಾಧರ್ಮಗಳ ವಿಷಯದಲ್ಲಿ ಮಾತನಾಡಿದನು. ಎರಡೂ ಸೈನ್ಯಗಳು ಯುದ್ಧಕ್ಕೆ ಸಿದ್ಧವಾದಾಗ ಅರ್ಜುನನು ಅವುಗಳ ಮಧ್ಯದಲ್ಲಿ ಅಕಸ್ಮಾತ್ತಾಗಿ ನಿಂತು ಯುದ್ಧಕ್ಕೆ ಪರಾಙ್ಮುಖನಾದಾಗ ಪರಮಪುರುಷನಾದ ಶ್ರೀಕೃಷ್ಣನು ಮುಗುಳು ನಗೆ ನಗುತ್ತ ಅವನಿಗೆ ಹೀಗೆ ಹೇಳಿದನು.

(ಮಧ್ವಾಚಾರ್ಯರು) ಗೀತಾವಿವೃತ್ತಿಕಾರರು ಕೊಟ್ಟ ಸಂಗತಿಯನ್ನೇ ಸತ್ಯ ಧ್ಯಾನತೀರ್ಥರು ಗೀತಾಪ್ರತಿಪದಾರ್ಥ ಚಂದ್ರಿಕೆಯಲ್ಲಿ ಕನ್ನಡಿಸಿದ್ದಾರೆ—"ಪರಮಾತ್ಮನ ಮಹಾತ್ಮ್ಯ ಜ್ಞಾನವೂ ಮತ್ತು ಆತನಲ್ಲಿ ಭಕ್ತಿಯೂ ಇವೆರಡರಿಂದ ಯುಕ್ತವಾದ, ಭಗವತ್ಪ್ರೀತ್ಯರ್ಥವಾದ ತಮ್ಮ ತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಕರ್ಮಗಳನ್ನು ಮಾಡಿ ಭಗವದನುಗ್ರಹವನ್ನು ಸಂಪಾದನೆಮಾಡಿ ಮೋಕ್ಷವನ್ನು ಹೊಂದುವದು ಮನುಷ್ಯನ ಮುಖ್ಯ ಕರ್ತವ್ಯಕರ್ಮವು. ನೀನು ಕ್ಷತ್ರಿಯನಾದ ಕಾರಣ

ಶ್ರೀ ನಾರಾಯಣನಲ್ಲಿ ದ್ವೇಷಮಾಡತಕ್ಕ ತಾಮಸ ಜನರ ಮತ್ತು ಅವರ ಅನುಬಂಧಿಗಳ ಸಂಹಾರರೂಪವಾದ ಯುದ್ಧವು ನಿನಗೆ ಮೋಕ್ಷಕ್ಕೆ ಸಾಧನವಾದ ಧರ್ಮವು. ಬಾಂಧವರಲ್ಲಿ ಇದ್ದ ಸ್ನೇಹದಿಂದ "ಭಗವದ್ವೇಷಿಗಳಾದ ತಾಮಸರಾದ ದುರ್ಯೋಧನಾದಿಗಳ ಮತ್ತು ಅವರ ಅನುಬಂಧಿಗಳಾದ ಭೀಷ್ಮಾದಿಗಳ ಸಂಹಾರವು ಅಧರ್ಮವು" ಎಂದು ಹೇಳುವದು ಪಂಡಿತರು ಆಡುವ ಮಾತುಗಳಲ್ಲ. ಅವರನ್ನು (ಭಗವದ್ವೇಷಿಗಳನ್ನೂ ಅವರ ಅನುಬಂಧಿಗಳನ್ನೂ) ಸಂಹಾರ ಮಾಡುವದು ಪರಮ ಧರ್ಮವಾದ ಕಾರಣ ಭೀಷ್ಮಾದಿಗಳ ಸಂಹಾರವು ಪಾಪಕ್ಕೂ ಶೋಕಕ್ಕೂ ಕಾರಣವೆಂದು ನೀನು ಹೇಳುವದು ನಿನ್ನ ಅವಿವೇಕ ಮೂಲಕವು ಎಂದು ಶ್ರೀಕೃಷ್ಣನು ಹೇಳುತ್ತಾನೆ."*

(ಲೋಕಮಾನ್ಯ ಟಿಳಕರು) ಒಂದು ಕಡೆಗೆ ಕ್ಷತ್ರಿಯ ಧರ್ಮ, ಇನ್ನೊಂದು ಕಡೆಗೆ ಗುರುಹತ್ಯಾ ಮತ್ತು ಕುಲಕ್ಷಯ ಈ ಪಾತಕಗಳ ಭೀತಿ. ಹೀಗೆ ಜಗ್ಗುತ್ತಿರುವಾಗ "ಸಾಯಬೇಕೋ ಹೊಡೆಯಬೇಕೋ" ಎಂಬ ಮೋಹದೊಳಗೆ ಬಿದ್ದು ಯುದ್ಧ ಬಿಟ್ಟು ಭಿಕ್ಷೆ ಬೇಡಬೇಕೆಂದು ಸಿದ್ಧನಾದ ಅರ್ಜುನನಿಗೆ ನಿಜವಾದ ಕರ್ತವ್ಯ ಜಗತ್ತಿನಲ್ಲಿ ಯಾವದು ಎಂಬುದನ್ನು ಭಗವಂತನು ಈಗ ಉಪದೇಶಿಸುತ್ತಾನೆ... ಭಗವಂತನು ಹೇಳಿದ್ದೇನೆಂದರೆ- ಜಗತ್ತಿನ ರೀತಿಯ ಕಡೆಗೆ ನೋಡಿದರೆ ಆತ್ಮಜ್ಞಾನಿಯಾದ ಪುರುಷನಿಗೆ ಆಯುಷ್ಯ ಕಳೆಯುವ ಎರಡು ಮಾರ್ಗಗಳು ದೊರೆಯುತ್ತಿವೆ. ಆತ್ಮಜ್ಞಾನ ಸಂಪಾದನ ಮಾಡಿದ ಮೇಲೆ ಶುಕಾಚಾರ್ಯರ ಹಾಗೆ ಪುರುಷನು ಸಂಸಾರ ಬಿಟ್ಟು ಆನಂದದಿಂದ ಭಿಕ್ಷೆಯನ್ನು ಬೇಡುತ್ತ ತಿರುಗುತ್ತಾನೆ ಆದರೆ ಮತ್ತೆ ಕೆಲವರು ಜನಕನ ಹಾಗೆ ಆತ್ಮಜ್ಞಾನಿಗಳು ಜ್ಞಾನೋತ್ತರ ಸಹ ಸ್ವಧರ್ಮದಂತೆ ಲೋಕಕಲ್ಯಾಣಾರ್ಥವಾಗಿ ಜಗತ್ತಿನ ಪರಿಳಿತಗಳಲ್ಲಿ ಭಾಗವಹಿಸುತ್ತ ಕಾಲ ಕಳೆಯುತ್ತಾರೆ. ಮೊದಲಿನ ಮಾರ್ಗಕ್ಕೆ ಸಾಂಖ್ಯವೆಂದೂ ಅಥವಾ ಸಾಂಖ್ಯನಿಷ್ಠೆಯೆಂದೂ ಎರಡನೆಯದಕ್ಕೆ ಕರ್ಮಯೋಗವೆಂದೂ ಅಥವಾ ಯೋಗವೆಂದೂ ಹೆಸರು. ಈ ಎರಡೂ ಮಾರ್ಗಗಳು ಪ್ರಚಾರದಲ್ಲಿದ್ದರೂ ಅವುಗಳ ಪೈಕಿ ಕರ್ಮಯೋಗವು ಅಧಿಕ ಶ್ರೇಷ್ಠವೆಂದು ಗೀತೆಯ ಸಿದ್ಧಾಂತವು (ಗೀತಾ ೫-೨). ಈ ಎರಡು ನಿಷ್ಠೆಗಳಲ್ಲಿ ಅರ್ಜುನನ ಒಲವು ಈಗ ಸನ್ಯಾಸದ ಕಡೆಗೆ ಇರುವದನ್ನು ನೋಡಿ ತತ್ವಜ್ಞಾನ

* ಕಾಶ್ಮೀರದ ಆನಂದ ವರ್ಧನನು (ಜ್ಞಾನಕರ್ಮ ಸಮುಚ್ಚಯವಾದಿಗಳು) ಹೀಗೆ ಸಂಗತಿಯನ್ನು ಕೊಡುತಾರೆ.

**देहाहंभावना मिथ्या ज्ञानस्य 'नयोत्स्यमि' इति कृतसंकल्पस्य तत्वज्ञानोपदेशं विना मिथ्याज्ञाननिवृत्तेरसंभवेन तत्वोपदेशपूर्वंस्वकर्मणिप्रवर्तयिषुर्देहदेहिनो: संयोगवियोगस्वरुपं उद्दिशन् उवाच.**

ನಿರೂಪಣೆಯಿಂದ ಅವನ ತಪ್ಪನ್ನು ಅವನ ಲಕ್ಷ್ಯಕ್ಕೆ ಮೊದಲು ತಂದು ಮುಂದೆ ೩೯ನೇ ಶ್ಲೋಕದಿಂದ ಭಗವಂತನು ಕರ್ಮಯೋಗವನ್ನು ಪ್ರತಿಪಾದಿಸುತ್ತಾನೆ. ಸಾಂಖ್ಯಯೋಗದಲ್ಲಿ ಜ್ಞಾನೋತ್ತರಕರ್ಮ ಇಲ್ಲದಿದ್ದರೂ ಅವನ ಬ್ರಹ್ಮಜ್ಞಾನ ಮತ್ತು **ಕರ್ಮಯೋಗದಲ್ಲಿಯ ಬ್ರಹ್ಮಜ್ಞಾನವೇನು** ಬೇರೆ ಇರುವದಿಲ್ಲ ಆತ್ಮನು ಅವಿನಾಶಿಯಾದುದರಿಂದ "ಅವನನ್ನು ನಾನು ಹೇಗೆ ಕೊಲ್ಲಲಿ" ? ಈ ನಿನ್ನ ಬಡಬಡಿಸುವದು ವ್ಯರ್ಥವೆಂದು ಉಪಹಾಸಪೂರ್ವಕವಾಗಿ ಮೊದಲು ತೋರಿಸುತ್ತಾನೆ.

(ಜ್ಞಾನೇಶ್ವರಿಯವರು) " ಚನ್ನಾಗಿ ಪರೀಕ್ಷೆ ಮಾಡಿ ನೋಡಿದರೆ ಇಲ್ಲಿ ನೆರೆದ ಪ್ರತಿಯೊಬ್ಬನು ಕೊನೆಯವರೆಗೆ ಇರುವನು ಅಥವಾ ನಾಶಹೊಂದುವನು ಎಂಬ ವಿಚಾರವು ತಪ್ಪು. ಹುಟ್ಟು–ಸಾವುಗಳು ತೋರುವದರಿಂದ ಮಾತ್ರ ಅವು ಮಾಯೆ. (ಸುಳ್ಳು) ನಿಜವಾಗಿ ಆತ್ಮನು ನಿತ್ಯನು" ಎಂದು ಕೃಷ್ಣನು ಅರ್ಜುನನಿಗೆ ಸಮಾಧಾನ ಹೇಳುತ್ತಾನೆ

(ಅರಬಿಂದೋರವರು) "ಇಂಥ ಶಿಷ್ಯನಿಗೆ ಗೀತೋಪದೇಶಕನು ತನ್ನ ದಿವ್ಯ ಉಪದೇಶವನ್ನು ನೀಡುತ್ತಾನೆ. ಅವನು ಅರ್ಜುನನ ಮನೋವೃತ್ತಿಯ ಸೂಕ್ಷ್ಮ ಸ್ಥಿತಿಯಲ್ಲಿ ಅವನನ್ನು ಹಿಡಿಯುತ್ತಾನೆ. ಅಹಂಕಾರದ ಬಿಸಿಯಿಂದ ಅವನ ಮನಸು ಆ ಸ್ಥಿತಿಯನ್ನು ಹೊಂದಿರುತ್ತದೆ ಆಗ ಅವನ ಅಹಂಕಾರದ ನೆಲೆಗಟ್ಟಿನ ಮೇಲೆ ನಿಂತ ಬೌದ್ಧಿಕ, ನೈತಿಕ ಮತ್ತು ಭಾವಾತ್ಮಕ ಪುರುಷಾರ್ಥಗಳು ಮತ್ತು ಅವನ ಸಾಮಾಜಿಕ ಜೀವನವೆಲ್ಲ ಕುಪ್ಪಳಿಸಿ, ಜೀವನದ ದಿವಾಳಿಯನ್ನೇ ತೆಗೆದಿರುವಾಗ, ಶ್ರೀಕೃಷ್ಣನು ಅವನನ್ನು ಈ ಹೀನ ಜೀವನದಿಂದ ಮೇಲೆತ್ತಬೇಕಾಗಿದೆ. ಅವನಲ್ಲಿ ಎತ್ತರದ ಚೈತನ್ಯವನ್ನು ಜಾಗ್ರತಗೊಳಿಸಬೇಕಾಗಿದೆ. ಅಜ್ಞಕ್ರಿಯಾಸಕ್ತಿಯಿಂದ ಅತೀತಾವಸ್ಥೆಗೆ ಮುಟ್ಟಿಸಬೇಕಾಗಿದೆ. ಆದರೂ ಅವನು ಕ್ರಿಯಾ ಪ್ರವೃತ್ತಿಯನ್ನು ಹುಟ್ಟಿಸಿ ಅದನ್ನು ನಿಯಂತ್ರಿಸಬೇಕಾಗಿದೆ. ಅವನು ಅಹಂಕಾರದೊಳಗಿಂದ ಪಾರಾಗಿ ಪರಮಾತ್ಮನೆಡೆಗೆ ಸೇರಬೇಕಾಗಿದೆ. ಮನೋಮಯ ಪ್ರಾಣಮಯ ಅನ್ನಮಯ (ಶರೀರಮಯ) ಜೀವನದಿಂದ ಮನಸನ್ನು ದಾಟಿ ದೈವೀಸ್ಥಿತಿಗೆ ಮುಟ್ಟಿಸಬೇಕಾಗಿದೆ. ಅದೇ ಕಾಲಕ್ಕೆ ಅವನು ಕೇಳುವವನ್ನು ಮತ್ತು ಅವನ ಅಂತರ್ಗತ, ಪ್ರೇರಣೆಯಿಂದ ಅವನು ಅರಸುತ್ತಿರುವದನ್ನು ಕೃಷ್ಣನು ಕೊಡಬೇಕಾಗಿದೆ ಅದೆಂದರೆ ಜೀವನದ ಎಂದೂ ಮುಗಿಯದ ತುಮುಲ ಹೋರಾಟಗಳ, ನಿಬಿಡವಾದ ಗೊಂದಲಗಳ ಭ್ರಾಮಕ ಸತ್ಯತೆಗಳ ಸಾಮಾನ್ಯ ಮತ್ತು ಅಪೂರ್ಣನಿಯಮವನ್ನು ಮಿಕ್ಕಿದ ಜೀವನದ ಮತ್ತು ಕರ್ಮದ ಹೊಸದೊಂದು ನಿಯಮವನ್ನು ಅವನಿಗೆ ಕೊಡಬೇಕಾಗಿದೆ. ಅದರಿಂದ ಜೀವಾತ್ಮನು ಈ ಕರ್ಮ ಬಂಧನದಿಂದ ಮುಕ್ತನಾಗುತ್ತಾನೆ; ಮತ್ತು ದೈವೀ ಜೀವನದ ಅಮಿತ ಸ್ವಾತಂತ್ರ್ಯವನ್ನು ಸಂಪಾದಿಸಲಿಕ್ಕೆ ಪ್ರವೃತ್ತ

ನಾಗಲು ಸಮರ್ಥನಾಗುತ್ತಾನೆ. ಯಾಕೆಂದರೆ ಕರ್ಮವನ್ನು ಮಾಡಲೇಬೇಕು ಮತ್ತು ಈ ಜಗತ್ತಿನಲ್ಲಿ ಸಂಸಾರವು ಸಫಲವಾಗಲೇಬೇಕು. ಜೀವಾತ್ಮನು ಅಜ್ಞಾನ ದಿಂದ ಇಲ್ಲಿ ಮಾಡತಕ್ಕ ಕೆಲಸದಿಂದ ಪರಾವೃತ್ತನಾಗಬಾರದು ಗೀತೆಯ ಉಪ ದೇಶದ ಇಡೀ ಕ್ರಮವು ನಿರ್ದಿಷ್ಟವಾಗಿದೆ ನಿರ್ಧಾರಿತವಾಗಿದೆ. ಅದರ ಬಹು ದೂರದ ಸುತ್ತಿನಲ್ಲಿ ಸಹ ಅದು ಈ ಮೂರು ಉದ್ದೇಶಗಳನ್ನು ಪೂರ್ತಿ ಮಾಡಲೇ ಬೇಕು

(ಗಾಂಧಿಯವರು) "ಆ ಅಸದೃಶವಾದ ಉಪಾಯವೆಂದರೆ ಕರ್ಮದ ಫಲಗಳನ್ನು ತ್ಯಾಗ ಮಾಡುವದು." "ಇದು ಗೀತೆಯ ಮಧ್ಯಬಿಂದು ಇದರ ಸುತ್ತಲೂ ಗೀತೆಯನ್ನು ಹೆಣೆಯಲಾಗಿದೆ. ಈ ತ್ಯಾಗವು ಮಧ್ಯದಲ್ಲಿ ಇರುವ ಸೂರ್ಯನು, ಇದರ ಸುತ್ತಲೂ ಭಕ್ತಿ, ಜ್ಞಾನ ಮತ್ತು ಉಳಿದವು ಗ್ರಹಗಳಂತೆ ತಿರುಗುತ್ತವೆ. ಶರೀರವನ್ನು ಬಂದೀವಾಸಕ್ಕೆ ಹೋಲಿಸಲಾಗಿದೆ. ದೇಹವಿದ್ದಲ್ಲಿ ಕರ್ಮ ನಡೆಯಲೇಬೇಕು. ಒಬ್ಬ ಶರೀರಿಯು ಸಹ ಕರ್ಮದಿಂದ ಮುಕ್ತನಲ್ಲ. ಆದರೂ ಎಲ್ಲ ಧರ್ಮಗಳೂ ಮನುಷ್ಯನಿಗೆ ಶರೀರವನ್ನು ದೇವರ ಗುಡಿಯೆಂದು ಭಾವಿಸಿದರೆ ಮುಕ್ತಿಯನ್ನು ಹೊಂದುವದು ಶಕ್ಯವೆಂದು ಸಾರುತ್ತವೆ. ಪ್ರತಿ ಯೊಂದು ಕರ್ಮ ಎಷ್ಟೇ ಚಿಕ್ಕದಿರಲಿ ಕಲ್ಮಷದಿಂದ ಕೂಡಿದೆ. ಶರೀರವನ್ನು ದೇವರ ಗುಡಿಯೆಂದು ಭಾವಿಸುವದು ಹೇಗೆ ? ಹಾಗಾದರೆ ಕರ್ಮವನ್ನು ಈ ಕಲ್ಮಷದಿಂದ ಎಂದರೆ ಪಾಪದಿಂದ ಮುಕ್ತಗೊಳಿಸುವದು ಹೇಗೆ ? ಗೀತೆಯು ಈ ಪ್ರಶ್ನೆಯನ್ನು ಅಸಂದಿಗ್ಧ ಭಾಷೆಯಲ್ಲಿ ಉತ್ತರಿಸಿದೆ. "ನಿಷ್ಕಾಮ ಕರ್ಮದಿಂದ; ಕರ್ಮದ ಫಲದ ತ್ಯಾಗದಿಂದ ದೇವರಿಗೆ ಎಲ್ಲ ಕರ್ಮಗಳನ್ನು ಅರ್ಪಿಸುವದರಿಂದ ಎಂದರೆ ದೇವನಿಗೆ ಆತ್ಮಾರ್ಪಣೆ ಮಾಡುವದರಿಂದ.

ಶಂಕರಾಚಾರ್ಯರು ಯಾವ ಕರ್ಮಸಮುಚ್ಚಯವೂ ಇಲ್ಲದ ಸನ್ಯಾಸವೇ ಅರ್ಜುನನಿಗೆ ಶ್ರೀಕೃಷ್ಣನು ಉಪದೇಶಿಸಿದ್ದು ಎಂದು ಹೇಳಿದರೆ ಟಿಳಕರು ಪ್ರವೃತ್ತಿ ಧರ್ಮ ನಿವೃತ್ತಿ ಧರ್ಮಗಳಲ್ಲಿ ಕೃಷ್ಣನು ಪ್ರವೃತ್ತಿ ಧರ್ಮವನ್ನು ಬೋಧಿಸಿ ಅಪರೋಕ್ಷ ಜ್ಞಾನಾನಂತರ ಕೊನೆಯವರೆಗೂ ಕರ್ಮಮಾಡಲಿಕ್ಕೆ ಉಪದೇಶಿಸಿದ ನೆಂದು ಇನ್ನೊಂದು ತುದಿಗೆ ಹೋದರು. ಇದರಿಂದ ಗಾಂಧಿಯವರಿಗೆ ಸನ್ಯಾಸವನ್ನೂ ಶಂಕರಾಚಾರ್ಯರಿಗೆ ಗೃಹಸ್ಥ್ಯವನ್ನೂ ಕೊಡುವಹೊತ್ತು ಬಂತು ಮಧ್ವಾಚಾರ್ಯರು ಪ್ರವೃತ್ತಿ ನಿವೃತ್ತಿ ಧರ್ಮಗಳನ್ನು ಸಂಗ್ರಹಿಸಿ ಏಕಮುಖವಾಗಿ ಕೃಷ್ಣನು ಬೋಧಿಸಿದ್ದಾನೆಂದು ಹೇಳುತ್ತಾರೆ. 'ಸ್ವವೃತ್ತಿ' 'ಸ್ವಧರ್ಮ'ವು, ಸನ್ಯಾಸ ಕರ್ಮಯೋಗಗಳೆರಡನ್ನೂ ಸಂಗ್ರಹಿಸುತ್ತದೆ. ತನ್ನ ವರ್ಣಕ್ಕೆ ಆಶ್ರಮಕ್ಕೆ ಉಚಿತ ವಾದ ಕರ್ಮಗಳನ್ನು ಸನ್ಯಾಸಿಯೂ ಮಾಡಬೇಕು. ಅತ್ಯಂತ ವಿರಕ್ತಿಯಿಂದ ಸನ್ಯಾಸ ವನ್ನೂ ಸ್ವೀಕರಿಸಿ ಲೋಕಸಂಗ್ರಹಾರ್ಥವಾಗಿ ಕರ್ಮಗಳನ್ನು ನಿರಪೇಕ್ಷ ಬುದ್ಧಿಯಿಂದ

ಭಗವದಾರಾಧನೆಯೆಂದು ಮಾಡುತ್ತಾನೆ. ಕೃಷ್ಣನಿಗೆ ಸನ್ಯಾಸಾಶ್ರಮದ ಮೇಲೆ ತಿರಸ್ಕಾರವಿಲ್ಲ. ಅರ್ಜುನನು ಕ್ಷತ್ರಿಯನಾದುದರಿಂದ ಯುದ್ಧಮಾಡಲೇಬೇಕು. ಗಾಂಧಿಯವರ ಅಹಿಂಸಾವಾದಕ್ಕೆ ಗೀತೆಯಲ್ಲಿ ಆಸ್ಪದವಿಲ್ಲ. ಆದುದರಿಂದ ಗೀತೆಯಲ್ಲಿ ಹೇಳಿದ ಯುದ್ಧವು ಅಲಂಕಾರಿಕವಲ್ಲ, ಅದು ನಿಜವಾದ ಯುದ್ಧವೇ. ಮಧ್ವಾಚಾರ್ಯರು ಗೀತೆಗೆ ನೈತಿಕ ಅರ್ಥವನ್ನು ಒಪ್ಪಿದರೂ ಐತಿಹಾಸಿಕ ಸಂದೇಶವನ್ನು ಅಲ್ಲಗಳೆದಿಲ್ಲ. ಜ್ಞಾನೇಶ್ವರಿಯವರ ಮಾಯಾ ವಾದಕ್ಕೆ ಗೀತೆಯಲ್ಲಿ ಆಸ್ಪದವೇ ಇಲ್ಲ. ಆದುದರಿಂದ ತಿಲಕರವರ ಮಯಾ ವಾದದ ಮೇಲೆ ನಿಲ್ಲಿಸಿದ ಕರ್ಮಯೋಗವೂ ನಿಲ್ಲಲಾರದು ಅರವಿಂದರ ಗೀತಾಸಂದೇಶದಲ್ಲಿರುವ ಆಧ್ಯಾತ್ಮಿಕತೆಯ ನಿರ್ದೇಶ ಎಲ್ಲರಿಗೂ ಸಮ್ಮತವಾದುದೇ ! ಆದರೆ ಅವರ ತತ್ವಜ್ಞಾನವು ಒಪ್ಪಲಿಕ್ಕೆ ಯುಕ್ತವಾದುದಲ್ಲ. ಮಧ್ವಾಚಾರ್ಯರು ಜ್ಞಾನ–ಭಕ್ತಿ–ಕರ್ಮಗಳ ನಿಜವಾದ ಸಂವಲನದಿಂದ ಅರವಿಂದರ ಪೂರ್ವದಲ್ಲಿಯೇ ಪೂರ್ಣ ಯೋಗವನ್ನು ಪ್ರಸ್ತಾಪಿಸಿದ್ದಾರೆ. ಇದರಿಂದ ಮಧ್ವಾಚಾರ್ಯರ ಗೀತಾಸಂದೇಶವು ಎಷ್ಟು ಯುಕ್ತಿ ಯುಕ್ತವಾಗಿದೆನ್ನುವದನ್ನು ನಾವು ಮನಗಾಣಬಹುದು. *

**श्री भगवानुवाच–**

**अशोच्यानन्वशोचस्त्वं प्रज्ञावादांश्च भाषसे ।**
**गतासूनगतासूंश्च नानु शोचंति पंडिताः ॥ ११ ॥**

ಭಗವಂತನು ಹೇಳಿದನು;—

ಯಾರಿಗೆ ವ್ಯಥೆ ಪಡಬಾರದೋ ಅವರ ವಿಷಯದಲ್ಲಿ ಶೋಕಿಸುತ್ತಿ. ನಿನ್ನ ಬುದ್ಧಿಯಿಂದಲೇ ಕಲ್ಪಿತವಾದ (ಶಾಸ್ತ್ರ ವಿರುದ್ಧವಾದ) ಮಾತುಗಳನ್ನು ಆಡುತ್ತಿ. ಪಂಡಿತರು ಜೀವ ಹೋಗದೆ ಇದ್ದವರನ್ನು ಕುರಿತು ಶೋಕಿಸದಿರುವಂತೆ ಮರಣ ಹೊಂದತಕ್ಕ ಜನರನ್ನು ಕುರಿತೂ ದುಃಖಿಪಡುವದಿಲ್ಲ.

---

* ಗದುಗಿನ ಕುಮಾರವ್ಯಾಸನು ಈ ಗೀತೆಯ ಸಂದರ್ಭವನ್ನು ಹೀಗೆ ವರ್ಣಿಸಿದ್ದಾನೆ;—

ಕೆಡುವಕಾಯವ ನಚ್ಚಿ ಬಂಧುಗ
ಳೊಡನೆ ವೈರವ ಮಸೆದು ನರಕಕೆ
ಕೆಡೆವೆನೇ ತಾನೆನುತ ರಥದೊಳು ಬಿಲ್ಲನಿಳುಹಿದನು ॥೩೧॥ (ಭೀಷ್ಮ)
(ಆಗ ಭಗವಂತನು) ಕರಗಲಂತಃಕರಣ ಚಿಂತಾ
ತುರನು ಸಂಗ್ರಾಮದ ವಿರಕ್ತಿಯೊ
ಳಿರಲು ಕಂಡನು ಕಮಲನಾಭನು ನಗುತ ಮನದೊಳಗೆ
ತರಳನಿವ ಸದ್ವೃತ್ತ ಕಲೆಯಲಿ ಪರಿಣತನು ತಾನಲ್ಲ ನುಡಿದಿಂ
ವಚನ ಬೋಧಿಸಬೇಕೆನುತ–ನುಡಿಸಿದನು ಫಲುಗುಣನ ॥೩೨॥ ಭೀಷ್ಮ

**ವಿಶೇಷ ಟಿಪ್ಪಣಿಗಳು :**

ಇಲ್ಲಿಂದ ಗೀತೆಯ ಉಪದೇಶಕ್ಕೆ ಪ್ರಾರಂಭ. ಅರ್ಜುನನು ಯಾರ ಸಲುವಾಗಿ ಶೋಕಿಸುತ್ತಾನೆ, ಅವರು ಆ ಶೋಕಕ್ಕೆ ಅರ್ಹರಲ್ಲವೆನ್ನುವದನ್ನು ತಾತ್ವಿಕವಾಗಿ ವಿವೇಚಿಸುತ್ತಾನೆ.

**प्रज्ञावादान् :— स्वमनीषोत्थवचनानि** ತನ್ನ ಕಲ್ಪನೆಯಿಂದ ಹುಟ್ಟಿದ ಮಾತುಗಳು. ಶಂಕರಾಚಾರ್ಯರು ಮತ್ತು ರಾಮಾನುಜಾಚಾರ್ಯರು ಇದಕ್ಕೆ **प्रज्ञावतां बुद्धिमतां वादान् वचनानि, प्रज्ञानिमित्तवादांश्च** ಬುದ್ಧಿವಂತಿಕೆಯ ಮಾತುಗಳು ಎಂದು ಅರ್ಥಮಾಡಿದ್ದಾರೆ. ಇಬ್ಬರೂ, ಅರ್ಜುನನು ಹಿಂದೆ ಮೂರ್ಖತನದ ಮಾತುಗಳನ್ನು ಆಡಿದ್ದಾನೆಂದು ಒಪ್ಪುತ್ತಾರೆ. ಆದರೆ ಶಂಕರಾಚಾರ್ಯರು ಅರ್ಜುನನು ಈ ಜನ್ಮದಲ್ಲಿಯ ಮತ್ತು ಮುಂದಿನ ಜನ್ಮದಲ್ಲಿಯ ಉತ್ತಮ ತತ್ವಗಳನ್ನೂ ಹೇಳಿದನೆಂದು "ಬುದ್ಧಿವಂತನ ಮಾತುಗಳನ್ನು" ಆಡಿದನೆಂದು ಹೇಳಿದ್ದಾರೆ ರಾಮಾನುಜಾಚಾರ್ಯರು ಅವನು ದೇಹ ಆತ್ಮದ ಭೇದವನ್ನು ಗ್ರಹಿಸಿದ್ದಾನೆಂದು ಹೇಳಿದ್ದಾರೆ ಮಧ್ವಾಚಾರ್ಯರು ಮೇಲೆ ಹೇಳಿದಂತೆ ತನ್ನ ಬುದ್ಧಿಯಿಂದ ಮಾತ್ರ ಕಲ್ಪಿತವಾದ ಮಾತುಗಳೆಂದು ಅರ್ಥ ಮಾಡಿದ್ದಾರೆ.

ಒಂದು ಮಾತು ಎಲ್ಲರಿಗೂ ಸಮ್ಮತ. ಅರ್ಜುನನು ಮೂಢನಂತೆ ಮಾತನಾಡಿದ್ದಾನೆ. ಶೋಕ ಮಾಡಬಾರದವರ ಸಲುವಾಗಿ ಶೋಕಿಸುತ್ತಾನೆ ಈ ಎರಡೂ ಸಂಗತಿಗಳನ್ನು ಈ ಶ್ಲೋಕದ ಅರ್ಥಕ್ಕೆ ಹೇಗೆ ಹೊಂದಿಸಬೇಕು ? ಆದುದರಿಂದ **प्रज्ञा** ಎಂದರೆ 'ಬುದ್ಧಿ' ಎಂದು ಅರ್ಥಮಾಡಿ ಕೇವಲ 'ಬುದ್ಧಿಗೆ ತೋರಿದ ಮಾತುಗಳು' ಎಂದು ನಿರ್ಣಯಕ್ಕೆ ಬಂದಿದ್ದಾರೆ. ಅಥವಾ ರಾಘವೇಂದ್ರರು ಹೇಳುವಂತೆ **प्राज्ञा + अवादान्** ಬುದ್ಧಿಗೆ ವಿರುದ್ಧವಾದ ಎಂದರೆ ಮೂಢತನದ ಮಾತುಗಳು. ಶೋಕಿಸುವದು ಮತ್ತು ಮಾತನಾಡುವದು—ಇವೆರಡೂ ದಡ್ಡತನವನ್ನೇ ತೋರಿಸುತ್ತವೆಂದು ಅಭಿಪ್ರಾಯ ಪಡುತ್ತಾರೆ. ರಾಧಾಕೃಷ್ಣನ್ನರು ಇಲ್ಲಿ ಒಂದು ಪಾಠಾಂತರವನ್ನು ತೋರಿಸಿದ್ದಾರೆ. **प्रज्ञावान् न अभि भाषसे** ಬುದ್ಧಿವಂತನಂತೆ ಮಾತನಾಡುವದಿಲ್ಲ. ಇದು ರಾಘವೇಂದ್ರರ **प्रज्ञा + अवादान्** ಕ್ಕೆ ಸಮಾನಾರ್ಥಕವಾಗಿದೆ. ಮೂಢತನದ ಮಾತುಗಳು ಇವೆರಡರ ತಾತ್ಪರ್ಯ.*

---

* ಗದುಗಿನ ಕುಮಾರವ್ಯಾಸನು ಈ ಗೀತೆಯ ಸಂದರ್ಭವನ್ನು ಹೀಗೆ ವರ್ಣಿಸಿದ್ದಾನೆ –

ಕೆಡುವ ಕಾಯವ ನಚ್ಚಿ ಬಂಧುಗ
ಳೊಡನೆ ವೈರವ ಮಸೆದು ನರಕಕೆ
ಕೆಡೆವೆನೇ ತಾನೆನುತ ರಥದೊಳೆ ಬಿಲ್ಲನಿಳುಹಿದನು ॥೩೦॥ (ಭೀಷ್ಮ)

**ಗತಾಸೂನ್**–ಸತ್ತವರನ್ನು; ಆದರೆ ಅರ್ಜುನನು ಶೋಕಿಸುವ ಭೀಷ್ಮ-ದ್ರೋಣಾದಿಗಳು ಇನ್ನೂ ಸತ್ತಿಲ್ಲ. ಆದುದರಿಂದ 'ಸಾಯುತ್ತಿರುವವರನ್ನು' ಎಂದು ಅರ್ಥಮಾಡಬೇಕು. ಆದುದರಿಂದ **ಅಗತಾಸೂನ್** – ಜೀವಿಸುತ್ತಿರುವವರನ್ನು.'

ಅರ್ಜುನನು ಸಾಯುವವರ ಸಲುವಾಗಿ ಶೋಕಿಸುತ್ತಾನೆ, ಜೀವಿಸುವವರ ಸಲುವಾಗಿ ಅಲ್ಲ. ಪ್ರೊ. ರಂಗಾಚಾರಿಯವರು ಜೀವಿಸುವವರಿಗೂ ಸಂಸಾರದಲ್ಲಿ ತಾಪತ್ರಯಗಳ ಸಲುವಾಗಿ ಶೋಕಿಸುತ್ತಾನೆಂದು ವಾದಿಸುತ್ತಾರೆ. ಶಂಕರಾಚಾರ್ಯರು ಸತ್ತವರು ಇದ್ದವರು ಮಿಥ್ಯಾ ಸುಳ್ಳು. ಆದುದರಿಂದ ಜ್ಞಾನಿಯು ಶೋಕಿಸುವದಿಲ್ಲೆಂದು ಹೇಳುತ್ತಾರೆ. ಆದರೆ ಜಗತ್ತು ಮಿಥ್ಯೆ ಎಂಬ ವಾದ ಗೀತೆಗೆ ಸಮ್ಮತವಲ್ಲದ್ದು. ಅದು ಗೀತೆಗೆ ಸಮ್ಮತವೇ ಆದರೆ ಅರ್ಜುನನು ಮತ್ತು ಕೌರವರು ಸುಳ್ಳು, ಯುದ್ಧವು ಸುಳ್ಳು, ಶ್ರೀ ಕೃಷ್ಣನು ಸುಳ್ಳು. ಅವನು ಸುಳ್ಳುಯುದ್ಧವನ್ನು ಸುಳ್ಳು ಅರ್ಜುನನಿಗೆ ಸುಳ್ಳಾಗಿ ಅಪದೇಶಿಸಿದ್ದಾನೆಂದು ಆಗುತ್ತದೆ. ಇದೊಂದು ಸುಳ್ಳಿನಕಂತೆ ಅಷ್ಟೇ !

ಶಂಕರಾನಂದರು ವಿಚಿತ್ರವಾಗಿ ಕಲ್ಪಿಸಿದ್ದಾರೆ. ಅವರು ಜನರನ್ನು ಮೂರು ತೆರನಾಗಿ ವಿಭಾಗಿಸಿದ್ದಾರೆ. ೧) ಅಜ್ಞರು ೨) ವಿದ್ವಾಂಸರು ೩) ನಿಜವಾದ ಜ್ಞಾನಿಗಳು. ಅಜ್ಞರು ಸತ್ತವರ ಸಲುವಾಗಿ ಶೋಕಿಸುತ್ತಾರೆ. ಶಾಸ್ತ್ರ ತಿಳಿದ ವಿದ್ವಾಂಸರು ಜೀವಂತವಿದ್ದವರ ಸಲುವಾಗಿ ಶೋಕಿಸುತ್ತಾರೆ. ಜ್ಞಾನಿಗಳು ಇದ್ದವರು ಸತ್ತವರು ಇಬ್ಬರ ಸಲುವಾಗಿಯೂ ಶೋಕಿಸುವದಿಲ್ಲ. ಇದು ಒಳ್ಳೆ ಕಲ್ಪನೆಯಾದರೂ ಇದರ ಬುಡಕ್ಕೆ ವಿದ್ವಾಂಸರ ವೃತ್ತಿ ಮತ್ತು ಜ್ಞಾನಿಗಳ ವೃತ್ತಿಗೆ ಅಂತರ ಕಲ್ಪಸುವದಕ್ಕೆ ಸರಿಯಾದ ಆಧಾರವಿಲ್ಲ. (ಜೀವಂತರ ಸಲುವಾಗಿ ದುಃಖಕ್ಕೂ, ಯಾರ ಸಲುವಾಗಿಯೂ ದುಃಖವಿಲ್ಲದಿರುವದಕ್ಕೂ ಆಧಾರವಿಲ್ಲ.) ರಾಮಾನುಜಾಚಾರ್ಯರು ಮಾತ್ರ ಈ ತೊಂದರೆಯನ್ನು ತಪ್ಪಿಸುತ್ತಾರೆ. ಅವರು **ಗತಾಸೂನ್** ಎಂದರೆ ಮೃತ ದೇಹಗಳೆಂದೂ **ಅಗತಾಸೂನ್** ಎಂದರೆ ಸಾಯದೇ ಇದ್ದ ಆತ್ಮರೆಂದೂ ಅರ್ಥಮಾಡುತ್ತಾರೆ. ಅವರು ಜೀವನ–ಮರಣಗಳಿಗೆ ಇಲ್ಲಿ ಸಂಬಂಧವನ್ನೇ ಕಾಣುವದಿಲ್ಲ.

---

(ಆಗ ಭಗವಂತನು)– ಕರಗಲಂತಃಕರಣ ಚಿಂತಾ
ತುರನು ಸಂಗ್ರಾಮದ ವಿರಕ್ತಿಯೊ
ಳಿರಲು ಕಂಡನು ಕಮಲನಾಭನು ನಗುತ ಮನದೊಳಗೆ
ಶರಳನಿವನದ್ವೈತ ಕಲೆಯಲಿ
ಪರಿಣತನು ತಾನಲ್ಲ ನೆವದಿಂ
ನರನ ಬೋಧಿಸಬೇಕೆನುತ ನುಡಿಸಿದನು ಫಲುಗುಣನ ॥೩೨॥ (ಭೀಷ್ಮ)

ಇಲ್ಲಿ ತೊಂದರೆಯೆಂದರೆ ಜೀವಿಸುವವರ ಸಲುವಾಗಿ ಶೋಕಿಸುವದು. ಜೀವಂತವಿದ್ದವರ ಸಲುವಾಗಿ ಅರ್ಜುನನು ಶೋಕಿಸಿಲ್ಲ. ಅದಕ್ಕೆ ಕೃಷ್ಣನು "ಬುದ್ಧಿವಂತರು ಹಾಗೆ ಮಾಡಲಿಲ್ಲವೆಂದು ಹೇಳಲಿಲ್ಲ ಅದಕ್ಕೆ ಮಧ್ವಾಚಾರ್ಯರು ಇದನ್ನು ಉದಾಹರಣೆಗೆಂದು ಸ್ವೀಕರಿಸಿದರು ಈಗ ಆ ಪಂಕ್ತಿಯ ಅರ್ಥವು– "ಜ್ಞಾನಿಯು ಜೀವಂತರ ಸಲುವಾಗಿ ಶೋಕಿಸದಿರುವಂತೆ ಸಾಯುವವರ ಸಲುವಾಗಿಯೂ ಶೋಕಿಸುವದಿಲ್ಲ." ಇಲ್ಲಿ ಉಪಯೋಗಿಸಿದ **च** ಕ್ಕೆ **इव** ಎಂದು ಅರ್ಥವನ್ನು ಗ್ರಹಿಸುತ್ತಾರೆ.

ಒಟ್ಟಾರೆ, ಈ ಶ್ಲೋಕದ ತಾತ್ಪರ್ಯವನ್ನು ಸತ್ಯಧ್ಯಾನತೀರ್ಥರು ಹೀಗೆ ಹೇಳುತ್ತಾರೆ–"ಪಂಡಿತರು ಪ್ರಾಣ ಬಿಡದೇ ಇದ್ದ ಬಂಧುಗಳನ್ನು ಕುರಿತು ಹೇಗೆ ದಃಖಪಡುವದಿಲ್ಲವೋ ಅದರಂತೆ ಪ್ರಾಣಬಿಡಲು ಸಿದ್ಧರಾದ ಬಂಧುಗಳನ್ನು ಕುರಿತು ದುಃಖಪಡುವದಿಲ್ಲ; ಆದಕಾರಣ ಈ ಬಂಧುಗಳು ಶೋಕಿಸಲು ಅನರ್ಹರು, ಇಂತಹ ಶೋಕಾನರ್ಹರಾದ ಬಂಧುಗಳನ್ನು ಕುರಿತು ನೀನು ದುಃಖಪಡುತ್ತಿಯೆ ಮತ್ತು ಭಗವದ್ವೇಷಿಗಳನ್ನೂ ಅವರ ಬಂಧುಗಳನ್ನೂ ಸಂಹಾರ ಮಾಡುವದರಿಂದ ಪಾಪವು ಬರುತ್ತದೆಂದು ಮಾತನಾಡುತ್ತೀಯೆ ! ಈ ಮಾತುಗಳು ಪಂಡಿತರಿಗೆ ಸಮ್ಮತವಲ್ಲ ; ಕೇವಲ ನಿನ್ನ ಬುದ್ಧಿಯಿಂದ ಕಲ್ಪಿತವಾದ ಮಾತುಗಳು ; ಆದುದರಿಂದ ನೀನು ದುಃಖವೂ ಪಾಪವೂ ಬರುತ್ತದೆಂದು ಯುದ್ಧ ಮಾಡದೆ ಇರುವದು ಯುಕ್ತವಲ್ಲ."

ಇದನ್ನು ಸ್ವಲ್ಪ ವಿಸ್ತರಿಸಿ ಹೀಗೆ ಹೇಳಬಹುದು. ಸ್ವಾರ್ಥಿಗಳಾದ ಕೌರವರು ಅವರಿಗೆ ಸಹಾಯ ಮಾಡುವ ದ್ರೋಣಾದಿಗಳೂ— ಇವರನ್ನು ದಂಡಿಸದಿದ್ದರೆ ಏನಾಗುವದು ಎಂಬುದನ್ನು ಅರ್ಜುನ ಊಹಿಸಲಿಲ್ಲ ಕೇವಲ ಪಾಶವೀಶಕ್ತಿಯು ಆಸುರೀವೃತ್ತಿಯು ತಾಂಡವವಾಡುವದು. ಆದುದರಿಂದ ಅರ್ಜುನ ಯುದ್ಧ ಮಾಡಿ ಅವರನ್ನು ಸಂಹರಿಸಬೇಕು ಅದರಿಂದ ಅವರ ಅವಲಂಬಿಗಳಿಗೆ ದುಃಖವಾಗುವದು. ಒಬ್ಬರಿಗೆ ಸುಖ, ಒಬ್ಬರಿಗೆ ದುಃಖ ಇದು ನಿಸರ್ಗದ ನಿಯಮ. ಇದನ್ನು ಅರ್ಜುನ ಸಹಿಸಲೇಬೇಕು ಸುಖದುಃಖಗಳನ್ನು ಅವರವರು ಸಂಪಾದಿಸಿದ್ದಾರೆ, ಅವರವರು ಅನುಭೋಗಿಸಲೇಬೇಕು. ಅದಕ್ಕಾಗಿ ಅರ್ಜುನ ಅಳಬೇಕಾದುದಿಲ್ಲ, ಈ ವಾಸ್ತವವಾದವೇ ಶ್ರೀಕೃಷ್ಣನ ಉಪದೇಶದ ತಿರಳು.

ಜಯತೀರ್ಥರು ಪ್ರಮೇಯ ದೀಪಿಕೆಯಲ್ಲಿ— **यान् अन्वशोचः त्वं ते अशोच्याः तस्मात् तान् प्रति न शोकः कार्यः। यांश्च भाषसे ते प्रज्ञावादाः अतः न भाषणीयाः इति.** ಯಾರ ಸಲುವಾಗಿ ಶೋಕಿಸುತ್ತಿಯೋ ಅವರು

ಶೋಕಕ್ಕೆ ಅನರ್ಹರು. ಆದುದರಿಂದ ಅವರ ವಿಷಯದಲ್ಲಿ ಶೋಕವನ್ನು ಮಾಡ ಬಾರದು. ನೀನು ಆಡುವ ಮಾತುಗಳೆಲ್ಲ ಸ್ವಕಪೋಲಕಲ್ಪಿತವಾದವುಗಳು. ಆದುದರಿಂದ ಅವುಗಳನ್ನು ಆಡಬಾರದು.*

**नत्वेवाहं जातु नासं नत्वं नें मे जनाधिपाः**
**न चैव न भविष्यामः सर्वे वयमतः परम् ।। १२ ।।**

ನಾನು ಯಾವ ಕಾಲದಲ್ಲಿಯೂ ಇರಲಿಲ್ಲವೆಂಬುದಿಲ್ಲ (ಇದ್ದೇ ಇದ್ದೆನು); ನೀನು (ಅರ್ಜುನನು) ಇರಲಿಲ್ಲವೆಂದು ಇಲ್ಲ (ಇದ್ದೇಇದ್ದೀಯ), ಮತ್ತು ಈ ರಾಜರು ಇರಲಿಲ್ಲವೆಂದಲ್ಲ, (ಇದ್ದೇ ಇದ್ದರು) ಇನ್ನುಮುಂದೆ ನಾವೆಲ್ಲರೂ (ನಾನು, ನೀನು, ಈ ರಾಜರು) ಇರುವದಿಲ್ಲವೆಂದಲ್ಲ, (ಇದ್ದೇ ಇರುವೆವು)

**ವಿಶೇಷ ಟಿಪ್ಪಣಿಗಳು :—**

ಮೊದಲು ಹಿಂದಿನ ಶ್ಲೋಕದೊಡನೆ ಈ ಶ್ಲೋಕಕ್ಕೆ ಸಂಗತಿಯನ್ನು ಹೇಳ ಬೇಕು (ಅವತರಣಿಕೆ ಕೊಡಬೇಕು). ಭೀಷ್ಮ–ದ್ರೋಣಾದಿಗಳು ಸಾಯುವದರಿಂದ ಅವರು ಶೋಕಕ್ಕೆ ಅರ್ಹರೆಂದು ಆಕ್ಷೇಪಿಸಿದರೆ ಅವರ ದೇಹ ನಾಶದಿಂದ ಶೋಕವೇ ಅಥವಾ ಅವರ ಸ್ವರೂಪನಾಶದಿಂದ ನಿನ್ನ ಶೋಕವೇ ಎಂದು ವಿಕಲ್ಪಿಸಿ, ಜೀವ-ಸ್ವರೂಪದ ನಾಶದಿಂದ ಶೋಕವೆಂಬ ವಿಕಲ್ಪಕ್ಕೆ ಉತ್ತರ ಕೊಡುತ್ತಾನೆ ಶ್ರೀಕೃಷ್ಣ.

ಜೀವರು ಹಿಂದೆ ಇದ್ದರು, ಇಂದೂ ಇದ್ದಾರೆ, ಮುಂದೆಯೂ ಇರುತ್ತಾರೆ ಎಂದರೆ ಅವರು ನಿತ್ಯರು. ಹಾಗೆ ಈಶ್ವರನೂ ನಿತ್ಯನು, ಎಂಬ ಸತ್ಯವನ್ನೇ ಈ ಶ್ಲೋಕವು ಪ್ರತಿಪಾದಿಸುತ್ತದೆ. ಆದುದರಿಂದ ಜೀವರ ಸ್ವರೂಪಕ್ಕೆ ನಾಶವೇ ಇಲ್ಲದ್ದರಿಂದ ಜೀವರು ಅಶೋಚ್ಯರು ಎಂದು ಸಿದ್ಧವಾಯಿತು.

---

* ರಾಧಾಕೃಷ್ಣನ್ನರು ೧೧–೩೮ ರ ವರೆಗಿನ ಶ್ಲೋಕಗಳಲ್ಲಿ ಶ್ರೀಕೃಷ್ಣನು ಸಾಂಖ್ಯವನ್ನು ಉಪದೇಶಿಸುತ್ತಾನೆಂದು ಹೇಳುತ್ತಾರೆ. ಆದರೆ ಈ ಸಾಂಖ್ಯವೆಂದರೆ ಇದು ಕಪಿಲರ ಸಾಂಖ್ಯ-ದರ್ಶನವಲ್ಲ; ಆದರೆ ಇದು ಉಪನಿಷತ್ತುಗಳಿಂದ ಹೆಕ್ಕಿ ತೆಗೆದ ಜ್ಞಾನವೇ ಆಗಿದೆ.

ಬುದ್ಧಿರಾಜರು ತಮ್ಮ ಶ್ರೀಮದ್‌ಭಗವದ್ ಗೀತೆಯಲ್ಲಿ— "The wise one who knows the self as bodiless within the bodies, as constant and unchanging among changing and impermanent things, as great and omni present does never grieve" ಎಂದು Kathavalli Adh. I Valli 11 ಶ್ಲೋಕ 22 ನ್ನು ಉದಾಹರಿಸಿದ್ದಾರೆ.

ಇಲ್ಲಿ, ಈಶ್ವರನು ನಿತ್ಯನು ಎನ್ನುವ ಮಾತು ಅಪ್ರಸ್ತುತ, ಜೀವರು ನಿತ್ಯರೆಂದು ಸಾಧಿಸಬೇಕಾಗಿದೆ. ಈಶ್ವರನು ನಿತ್ಯನೆಂದು ಉಪನಿಷತ್ತುಗಳಿಂದ ಯಾವನಿಗೆ ಸಿದ್ಧವಾಗಿದೆ ಅವನಿಗೆ ಈಶ್ವರನು ಹೇಗೆ ಹಿಂದು ಮುಂದ ಇಂದು ಇದ್ದಾನೆ (ನಿತ್ಯ), ಹಾಗೆ ಜೀವರು ನಿತ್ಯರಾಗಿದ್ದಾರೆಂದು ಈಶ್ವರನನ್ನು ಉದಾಹರಣೆಗಾಗಿ ಹೇಳಿದ್ದಾನೆ. ರಾಮಾನುಜಾಚಾರ್ಯರೂ ಮಧ್ವಾಚಾರ್ಯರೂ ಇದೇ ರೀತಿಯಿಂದ ಈ ಶ್ಲೋಕಕ್ಕೆ ಅರ್ಥ ಹಚ್ಚುತ್ತಾರೆ. ಆದರೆ ಯಾರಿಗೆ ಈಶ್ವರನೂ ನಿತ್ಯನು ಎಂಬುದು ಸಂದಿಗ್ಧವಾಗಿದೆ, ಅವರಿಗೆ ಜೀವ ಮತ್ತು ಈಶ್ವರರಿಬ್ಬರೂ ಹಿಂದು ಮುಂದು ಇಂದು ಇದ್ದಾರೇದು ಭಗವಂತನು ಸಾಧಿಸುತ್ತಾನೆ

ರಾಘವೇಂದ್ರರು ಪೂರ್ವಕಾಲದ ಸಂಬಂಧದಿಂದ ಜೀವರು ಅನಾದಿಯೆಂದೂ ಉತ್ತರಕಾಲದ ಸಂಬಂಧದಿಂದ ಅವರು ನಿತ್ಯರೆಂದೂ ಹೇಳುತ್ತಾರೆ ಜೀವರಿಗೆ ಈಗಿನ ಕಾಲದ ಸಂಬಂಧವು ಸ್ಪಷ್ಟವಾದುದರಿಂದ ಅದನ್ನು ಹೇಳಿಲ್ಲ.

**न आस अहं न** ಎಂದು ಪ್ರತಿ ವ್ಯಾಕ್ಯದಲ್ಲಿಯೂ ಎರಡು ನಿಷೇಧಾವ್ಯಯಗಳನ್ನು ಉಪಯೋಗಿಸಿದ್ದರಿಂದ ಇದ್ದೇ ಇರುತ್ತೇನೆಂದು ಅರ್ಥವಾದರೂ ಮತ್ತೆ **एव** ಕಾರವನ್ನು ಉಪಯೋಗಿಸಿದ್ದರಿಂದ ಶ್ರೀಕೃಷ್ಣನ ವಿಷಯದಲ್ಲಿ ಜನನ-ಮರಣಗಳು (ಜೀವನಿಗೆ ಇರುವ ಹಾಗೆ) ಇಲ್ಲವೆಂದು ಅವನು ಸಾರುತ್ತಾನೆ.

ಮಾಕ್ಸಮ್ಯುಲರು ಬೇರೆ ರೀತಿಯಿಂದ ಜೀವರ ಅಮರತ್ವವನ್ನು (ನಿತ್ಯತ್ವವನ್ನು) ಅನುಮಾನದಿಂದ ತಿಳಿಯುತ್ತಾರೆ. ಜೀವರುಗಳಲ್ಲಿ ಕೊನೆಯವರೆಗೆ ಬಾಳಬೇಕೆಂಬ ಅದಮ್ಯವಾದ ಇಚ್ಛೆ ಇರುವದರಿಂದ ಜೀವರು ನಿತ್ಯರೆಂಡು ಗೊತ್ತಾಗುತ್ತದೆ. ಈ ಸಹಜವಾದ ಸಾಕ್ಷಿ ಪ್ರೇರಿತವಾದ ಪ್ರವೃತ್ತಿಗಳು ಜೀವನು ನಿತ್ಯನೆಂದು ಅವ್ಯಭಿಚರಿತವಾಗಿ ತೋರಿಸುತ್ತವೆಂದು ಹೇಳುತ್ತಾರೆ *

---

* ಕಾಂಟರು ಆತ್ಮನ ವಿಷಯದಲ್ಲಿ ಹೇಳಿದ ಮಾತು :—

ನಮ್ಮ ಆತ್ಮವು ಅಮರವದೆಯೆಂದು ಒಪ್ಪದ ಹೊರತು ಯಾವ ಧರ್ಮವನ್ನೂ ಅಸ್ತಿತ್ವದಲ್ಲಿ ತರಲಿಕ್ಕೆ ಬರುವದಿಲ್ಲ ಯಾಕೆಂದರೆ ನೀತಿಯ ಉತ್ಕೃಷ್ಟ ಸ್ವರೂಪವನ್ನು ಮನುಷ್ಯನ ಒಂದು ಜನ್ಮದಲ್ಲಿ ಸಾಧಿಸಲಿಕ್ಕೆ ಬರುವದಿಲ್ಲ. ಈ ದೃಶ್ಯ ಜಗತ್ತಿನ ಜ್ಞಾನವನ್ನು ಇಲ್ಲದ ಹಾಗೆ ಮಾಡಿದರೂ ಸಹ ಮತ್ತು ನಮ್ಮ ಬುದ್ಧಿ, ಜ್ಞಾನ, ಅಹಂಕಾರ ಮತ್ತು ಜ್ಞಾನಕ್ಕೆ ರಜೆ ಕೊಟ್ಟರೂ ಸಹ ನಮ್ಮಲ್ಲಿ ಆತ್ಮವೆಂಬ ಸದ್ವಸ್ತು ಉಳಿಯುತ್ತದೆ, ಮತ್ತು ಅದು ಅದೃಶ್ಯನಾದ ಬ್ರಹ್ಮನ ಪರಿಚಯವನ್ನು ಮಾಡಿಕೊಡುತ್ತದೆ ಈ ಪರಿಚಯವಾದ ಕೂಡಲೇ ನಮಗೆ ಈಶ್ವರತ್ವ ಸ್ವತಂತ್ರತೆ ಮತ್ತು ಅಮರತ್ವ ಈ ಮೂರರ ಸಾಕ್ಷಾತ್ಕಾರವು ಆಗುತ್ತವೆ (ಕೇರ್ಡಕೃತ ಧರ್ಮಕ್ರಾಂತಿ. ಭಾ ೧-೨)

ಪ್ಲೇಟೋನು ಸಹ ತನ್ನ ಫಿಡಿಯೆಸ ಎಂಬ ಒಂದು ಸಂವಾದರೂಪ ಗ್ರಂಥದಲ್ಲಿ—ಮರ್ತ್ಯಲೋಕದಲ್ಲಿ ಮೃತ್ಯು ಇದು ನಮ್ಮ ದೇಹಕ್ಕೆ ಮತ್ತು ಉಳಿದ ದೃಶ್ಯಕ್ಕೆ ಬರುತ್ತದೆ. ವಸ್ತುತಃ

ಇದರಲ್ಲಿ ಈಶ್ವರನು ಒಬ್ಬನೆಂದೂ ಜೀವರು ಬಹಳವೆಂದೂ ಹೇಳಿದ್ದಾರೆ. ಆದರೆ ಅದ್ವೈತಿಗಳಿಗೆ ಇದು ಬರ್ಷಣ. ಆದುದರಿಂದ ಶಂಕರಾಚಾರ್ಯರು **देहभेदानुवृत्त्या बहुवचनं नात्मभेदाभिप्रायेण** ದೇಹಗಳು ಅನೇಕವಿರುವದರಿಂದ ಬಹುವಚನವನ್ನು ಉಪಯೋಗಿಸಲಾಗಿದೆ. ಆತ್ಮರು ಭಿನ್ನರಿದ್ದಾರೆಂದು ಅಲ್ಲ (ಆತ್ಮ ಒಂದೇ) ಎಂದು ಹೇಳಿದ್ದಾರೆ ರಾಧಾಕೃಷ್ಣನ್ನರೂ ಅದಕ್ಕೆ ಗೋಣು ಹಾಕಿದ್ದಾರೆ, "The plurality of egoes is a fact of the emperical universe" ಜೀವರು ಅನೇಕರೆನ್ನುವದು ವ್ಯಾವಹಾರಿಕ ಜಗತ್ತಿನ ಸಂಗತಿಯು ಎಂದು ಇಲ್ಲದೇ ಇದ್ದ ವ್ಯಾವಹಾರಿಕ ಜಗತ್ತನ್ನು ಜೋಡಿಸಿದ್ದಾರೆ. ಸಾಮಾನ್ಯವಾಗಿ ಗೀತೆಯು ಭಾಗವತ ಧರ್ಮದ ಸ್ವತಂತ್ರ ಈಶ್ವರ ಮತ್ತು ಬಹುಜೀವವಾದವನ್ನೇ ಪ್ರತಿಪಾದಿಸುತ್ತಿದೆಂದು ಗಾರ್ಬೆ ಮೊದಲಾದವರು ಹೇಳುತ್ತಾರೆ ರಾಧಾಕೃಷ್ಣನ್ನರೇ, ಮುಂದೆ ೧೪ನೇ ಅಧ್ಯಾಯದಲ್ಲಿ ಜೀವರು ಬ್ರಹ್ಮನಲ್ಲಿ ಐಕ್ಯ ಹೊಂದುವದಿಲ್ಲ, ಸಾಧರ್ಮ್ಯವನ್ನು ಹೊಂದುತ್ತಾರೆಂದು ಹೇಳಿದ್ದಾರೆ ("It is not swarupata or identity but only samana dharmata).

ವೇದಾಂತ ದೇಶಿಕರು ಕೂಡ ಈ ಶ್ಲೋಕದಿಂದ "ಜೀವರು ನಿತ್ಯರು ಅನೇಕರು ಮತ್ತು ಚೇತನರು ಎಂಬುದನ್ನು ತೋರಿಸಿದ್ದಾರೆ, ಮತ್ತು ಜೀವರು ಉಪಾಧಿ ನಿಮಿತ್ತಕವಾಗಿ ಅಲ್ಲ; ಸ್ವರೂಪತಃ ಅನೇಕರು ಎಂದು ಹೇಳುತ್ತಾರೆ; ಹಾಗೆಯೇ ಶ್ರೀಕೃಷ್ಣನು ಇದರಿಂದ ಆತ್ಮನು ಅನಿತ್ಯನೆಂದು ಹೇಳುವ ಬೌದ್ಧರನ್ನೂ, ಆಗಮಾ-ಪಾಯಿ ಎಂದು ಹೇಳುವ ವೈಶೇಷಿಕರನ್ನೂ ಉಪಾಧಿನಿಮಿತ್ತಕವಾಗಿ ಆತ್ಮರು ಬಹಳ ಎಂದು ಹೇಳುವ ಅದ್ವೈತಿಗಳನ್ನೂ ಖಂಡಿಸಿದ್ದಾನೆ"ಂದು ಹೇಳುತ್ತಾರೆ ರಾಮಾನುಜರೂ ಮಧ್ವರೂ ಜೀವರು ಅಸಂಖ್ಯರು ಮತ್ತು ಅಣುಗಳು ಎಂದು ಒಪ್ಪುತ್ತಾರೆ.*

---

ದೇಹತ್ಯಾಗ ಮಾಡುವ ಕಾಲ ಬಂತು ಮತ್ತು ದೃಶ್ಯ ಜಗತ್ತು ನಷ್ಟವಾದ ವೇಲೆ ಆತ್ಮನ ನಿಜವಾದ ಸ್ವರೂಪವು ಪ್ರಕಟವಾಗುತ್ತದೆ ಜ್ಞಾನೀಮನುಷ್ಯನಿಗೆ ಆತ್ಮನಿಂದ ತನ್ನ ಸ್ವರೂಪವನ್ನು ಗುರುತಿಸುವದು ಇದೇ ಸಮಯ. ಈ ಪರಿಚಯ ಒಳ್ಳೆಗೆಯಾದರೆ ಆತ್ಮವು ಬ್ರಹ್ಮ ರೂಪಕ್ಕೆ ಹೋಗಿ ಮುಟ್ಟುತ್ತದೆ (ಆತ್ಮನು ಈಶ್ವರ ಸನ್ನಿಧಿಯಲ್ಲಿ ಯಾವಾಗಲೂ ಇರುವದಕ್ಕೆ ಹೋಗುತ್ತಾನೆ.) ಹೀಗೂ ಅರ್ಥವಾಗಬಹುದು (ಪ್ರೊ. ಭಾನು ಅವರ ಶ್ರೀಮದ್ಭಗವದ್ಗೀತೆಯಿಂದ)

* ಇಲ್ಲಿ ಟಿಳಕರು ಗೀತಾ ರಹಸ್ಯದಲ್ಲಿ ಈ ಶ್ಲೋಕದ ಮೇಲೆ ಟಿಪ್ಪಣೆ ಬರೆಯುವಾಗ ರಾಮಾನುಜರ ಈ ಹೇಳಿಕೆಯನ್ನು ಈ ರೀತಿಯಾಗಿ ಆಕ್ಷೇಪಿಸಿದ್ದಾರೆ—" ರಾಮಾನುಜರು ಭಾಷ್ಯದಲ್ಲಿ 'ನಾನು' ಎಂದರೆ ಪರಮೇಶ್ವರನು, 'ನೀನು ಮತ್ತು ರಾಜನೆಂದರೆ ಇತರ ಆತ್ಮರು ಇವರಿಬ್ಬರೂ ಹಿಂದೂ ಇದ್ದು ಮುಂದೂ ಇರುವದಾದರೆ ಪರಮೇಶ್ವರ ಮತ್ತು ಜೀವಾತ್ಮರು ಬೇರೆ, ಸ್ವತಂತ್ರ ಮತ್ತು ನಿತ್ಯರಿದ್ದಾರೆಂದು ಸಿದ್ಧವಾಗುತ್ತದೆಂದು ಹೇಳುತ್ತಾರೆ. ಆದರೆ ಈ ಅನುಮಾನವು ಸರಿಯಲ್ಲ. ಸಾಂಪ್ರದಾಯಿಕ ಆಗ್ರಹದ್ದು ಅದೆ. ಯಾಕೆಂದರೆ ಇಲ್ಲಿ ಎಲ್ಲವೂ ನಿತ್ಯವೆಂದು ಹೇಳುವದು ಮಾತ್ರ

ಸ್ವಾಮಿ ಪ್ರಭುಪಾದರು–"ಅವರ ವ್ಯಕ್ತಿತ್ವವು ಹಿಂದೆ ಮತ್ತು ಮುಂದೆ ಅವಿಚ್ಛಿನ್ನವಾಗಿ ಉಳಿಯುತ್ತದೆ ಆದುದರಿಂದ ಜೀವನು ಮೋಚನೆಯನ್ನು ಹೊಂದಿದ ಮೇಲೆ ಮಾಯೆಯಿಂದ ಬಿಡುಗಡೆ ಹೊಂದಿ ನಿರ್ಗುಣ ಬ್ರಹ್ಮನಲ್ಲಿ ಐಕ್ಯ ಹೊಂದುತ್ತಾನೆಂದೂ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಾನೆಂದೂ ಹೇಳುವ ಮಾಯಾವಾದಿಯ ವಾದವನ್ನು ಮಹಾಧಿಕಾರಿಯಾದ ಶ್ರೀಕೃಷ್ಣನು ಒಪ್ಪಿಲ್ಲವೆಂದು ಸ್ಪಷ್ಟವಾಗುತ್ತದೆ. ಯಾಕೆಂದರೆ ಮುಂದೆ ಸಹ ಜೀವನ ವ್ಯಕ್ತಿತ್ವವು ಅವಿಚ್ಛಿನ್ನವಾಗಿ ಸಾಗುತ್ತದೆಂದು ಭಗವಂತನು ಹೇಳಿದ್ದಾನೆ. ಔಪಾಧಿಕ ಸ್ಥಿತಿಯಲ್ಲಿ ಮಾತ್ರ ಜೀವನ ವ್ಯಕ್ತಿತ್ವವಿರುತ್ತದೆಂಬ ಮಾತಿಗೂ ಇಲ್ಲಿ ಆಧಾರ ದೊರೆಯುವದಿಲ್ಲ ಕೃಷ್ಣನು ಮಾಯೋಪಹಿತನಲ್ಲದ್ದರಿಂದ ಅವನ ಮಾತಿಗೆ ತತ್ವಜ್ಞಾನದಲ್ಲಿ ಬೆಲೆ ಇದೆ. ಆದರೆ ಕೃಷ್ಣನು ಹೇಳಿದ ವ್ಯಕ್ತಿತ್ವವು ದೇಹದ ದೃಷ್ಟಿಯಿಂದ ಮಾತ್ರ; ಆತ್ಮದ ದೃಷ್ಟಿಯಿಂದ ಅಲ್ಲವೆಂದರೆ ಕೃಷ್ಣನ ವ್ಯಕ್ತಿತ್ವವು ಎಂತಹದು ? ಅದೂ ನಿತ್ಯವಾಗಿದೆ. ನಿರ್ಗುಣ ಬ್ರಹ್ಮನು ಸಹ ಕೃಷ್ಣನಿಗೆ ಅಧೀನನಾಗಿದ್ದಾನೆ. ಕೃಷ್ಣನು ತನ್ನ ಅಧ್ಯಾತ್ಮಿಕ ವ್ಯಕ್ತಿತ್ವವನ್ನು ಅವ್ಯಾಹತವಾಗಿ ಸಾಗಿಸಿದ್ದಾನೆ. ಉಪಹಿತ ಜೀವನಂತೆಯೇ ಕೃಷ್ಣನನ್ನೂ ಎಣಿಸಿದರೆ ಅವನ ಗೀತೆಗೆ ಮಹತ್ವವೇನು? ಕೃಷ್ಣನನ್ನು ಈ ರೀತಿಯಾಗಿ ಅಸೂಯೆ ಬಡುವವರಿಗೆ ಗೀತೆಯ ಸವಿಯೇ ಗೊತ್ತಾಗುವದಿಲ್ಲ. ಕೃಷ್ಣನ ಮತ್ತು

---

ಪ್ರತಿಪಾದ್ಯ ವಿಷಯವಾಗಿದೆ. ಪರಸ್ಪರ ಸಂಬಂಧವನ್ನು ಹೇಳುವ ಕಾರಣವೇ ಇಲ್ಲ ಎಂದು ರಾಮಾನುಜರ ಮೇಲೆ ಆಕ್ಷೇಪಿಸಿದಾಗ ಇದೇ ಶ್ಲೋಕದ ಮೇಲೆ ಶಂಕರಾಚಾರ್ಯರು—'ದೇಹದ ದೃಷ್ಟಿಯಿಂದ ಅನೇಕರಾದರೂ ಆತ್ಮದ ದೃಷ್ಟಿಯಿಂದ ಆತ್ಮನೊಬ್ಬನೇ" ಎಂದು ಬರೆದಿದ್ದರೂ ಅದಕ್ಕೆ ಮತದಆಗ್ರಹವೆಂದು ಕರೆದಿಲ್ಲ

Hill ಸಹ ಶಂಕರಾಚಾರ್ಯರು ತತ್ವಜ್ಞಾನಕ್ಕೆ ಮರುಳಾಗಿ— " R considers the sloka to teach that the souls of men are many, shankara rightly regards the distinction as conventional rather than philosophical" ಈ ರೀತಿಯಾಗಿ ಹೇಳಿದ್ದಾರೆ.

ಮೇಲಾಗಿ ರಾಮಾನುಜರ ಪಂಕ್ತಿಯಲ್ಲಿ ಜೀವರು 'ಸ್ವತಂತ್ರ'ರು ಎಂಬ ಪದವೇ ಇಲ್ಲ. ಆತ್ಮರೂ ನಿತ್ಯರು ಮತ್ತು ಪರಮೇಶ್ವರನೂ ನಿತ್ಯನು ಎಂದಾಗ ಸಹಜವಾಗಿ ಅವರು ಭಿನ್ನರು ಎಂದು ಅಭಿಪ್ರಾಯವಾಗುವದರಿಂದ ಇದರಲ್ಲಿ ಮತದ ಆಗ್ರಹವೇನಿದೆ ? ಟಿಳಕರು ಇನ್ನೊಂದು ಬೆದರಿಕೆಯಂತೂ ಹುಸಿಗುಂಡು ಎಂದು ತೋರುತ್ತದೆ."ಹಾಗೆ ನೋಡಿದರೆ ಗೀತೆ ೮–೪; ಮತ್ತು ೧೩–೩೧ರಲ್ಲಿ ಎಲ್ಲರ ದೇಹದಲ್ಲಿರುವ ಆತ್ಮನೇ ನಾನೊಬ್ಬ ಪರಮೇಶ್ವರನೆಂದು ಅದ್ವೈತ ಸಿದ್ಧಾಂತವನ್ನೇ ಹೇಳಿದ್ದಾರೆ" ಎಂದು ಬೆದರಿಸಿದ್ದಾರೆ. ಎಲ್ಲರ ದೇಹಗಳಲ್ಲಿರುವ ಪರಮಾತ್ಮನು ಒಬ್ಬನೇ ಎಂದು ದ್ವೈತಿಗಳೂ ಒಪ್ಪಿದ್ದಾರೆಂಬ ಮಾತು ಟಿಳಕರಿಗೆ ಏಕೆ ತಿಳಿದಿಲ್ಲವೆಂಬುದು ಗೊತ್ತಾಗದು. ದೇಹದಲ್ಲಿ ಪರಮಾತ್ಮನ ಹೊರತು ಬೇರೆ ಆತ್ಮನಿಲ್ಲವೆಂದು ಟಿಳಕರ ಅಭಿಪ್ರಾಯವಾಗಿದ್ದರೆ ಸುಖದುಃಖಗಳೆಲ್ಲ ಅವನಿಗೇ ಎಂದು ಹೇಳಬೇಕಾಗುತ್ತದೆ.

ಜೀವರುಗಳ ವ್ಯಕ್ತಿತ್ವವು ಮತ್ತು ಬಹುತ್ವವು ನಿತ್ಯವಾದ ಸಂಗತಿಯೆಂದು ವೇದಗಳು ಸಾರುತ್ತವೆಂದು ಹೇಳುತ್ತಾರೆ'' ಎಂದು ಪ್ರತಿಪಾದಿಸಿದ್ದಾರೆ.

ಮೇಲಾಗಿ ಶ್ರೀಕೃಷ್ಣನಿಗೆ ಆತ್ಮನು ಒಬ್ಬನೆಂದು ಹೇಳಬೇಕಾಗಿದ್ದರೆ ಅವನು ಸರಳವಾಗಿ ಸ್ಪಷ್ಟವಾಗಿ ಆತ್ಮನು ಒಬ್ಬನಿದ್ದಾನೆ, ಅದಕ್ಕೆ ಅರ್ಜುನನು ಶೋಕಿಸ ಬೇಡವೆಂದು ಹೇಳುತ್ತಿದ್ದನು. ಈ ದ್ರಾವಿಡ ಪ್ರಾಣಾಯಾಮವನ್ನು ಅನುಸರಿ ಸುತ್ತಿರಲಿಲ್ಲ.

ಮಧ್ವಾಚಾರ್ಯರು ತಾತ್ಪರ್ಯದಲ್ಲಿ ಹೀಗೆ ಸಂಕ್ಷೇಪವಾಗಿ ಆದರೂ ಸುಂದರ ವಾಗಿ ಪ್ರತಿಪಾದಿಸಿದ್ದಾರೆ— "ಅರ್ಜುನ ! ನೀನು ಬಂಧು–ಬಾಂಧವರ ಮೇಲಿನ ಸ್ನೇಹದಿಂದ ಯುದ್ಧದಿಂದ ನಿವೃತ್ತನಾಗಬೇಕೆನ್ನುತ್ತಿ ಅದಕ್ಕೆ ಕಾರಣ ದೇಹ ನಾಶದ ಅಂಜಿಕೆಯೋ ಅಥವಾ ಆತ್ಮನಾಶದ ಭಯವೋ? ದೇಹವಂತೂ ಹೇಗಾದರೂ ನಾಶ ಹೊಂದುವದರಿಂದ ಆ ಅಂಜಿಕೆಗೆ ಪ್ರಯೋಜನವೇ ಇಲ್ಲ ಇನ್ನು ಆತ್ಮನಾಶ ಕ್ಕಾಗಿ ಎಂದರೆ ಅದು ಎಲ್ಲರಲ್ಲಿಯೂ ನಿತ್ಯವಾಗಿದೆ

ಪರಮ ಚೇತನನಾದ ನನಗೆ ನಾಶವಿಲ್ಲ. ಹೀಗೆಯೇ ನಿನ್ನ ಮತ್ತು ಉಳಿದವರ ಆತ್ಮಗಳಿಗೂ ನಾಶವಿಲ್ಲ, ಯಾಕೆಂದರೆ ಶ್ರುತಿಯಲ್ಲಿ **नित्यो नित्यानां** ಎಂದು (ನಿತ್ಯರಾದ ಜೀವರುಗಳಲ್ಲಿ ಪರಮಾತ್ಮನು ನಿತ್ಯನಾಗಿದ್ದಾನೆ) ಹೇಳಿದೆ. "ಜೀವರಿಗೆ ಮುಕ್ತಿ ಸಿಗುವವರೆಗೆ ದೇಹದ ಸಂಬಂಧವೆಂಬ ಜನ್ಮವೂ ದೇಹದ ವಿಯೋಗವೆಂಬ ಮರಣವೂ ಇರುತ್ತವೆ. ಪರಮಾತ್ಮನಿಗೆ ಮಾತ್ರ ಎಂದೂ ಇವುಗಳ ಸಂಬಂಧವಿಲ್ಲ, (ಸ್ಕಾಂದ ಪುರಾಣ) ಈಗ ಯುದ್ಧ ಭೂಮಿಯಲ್ಲಿ ಅರ್ಜುನನಂತೆ ಶ್ರೀ ಕೃಷ್ಣನೂ ನಿಂತುದರಿಂದ ಅವನಿಗೂ ಜನನ–ಮರಣಗಳು ಇರಬಹುದೆಂಬ ಶಂಕೆಯನ್ನು ಈ ಶ್ಲೋಕದಿಂದ ಶ್ರೀ ಕೃಷ್ಣನು ನಿವಾರಿಸುತ್ತಾನೆ. **नत्वेवाहं** ಎಂದು **तु** ಶಬ್ದವನ್ನು ಉಪಯೋಗಿಸಿದ್ದರಿಂದ ಕೃಷ್ಣನ ವಿಷಯದಲ್ಲಿ ಇವೆರಡೂ ಶಂಕೆಗಳಿಗೆ ಆಸ್ಪದವಿಲ್ಲ ವೆಂದು ಕೃಷ್ಣನ ಅಭಿಪ್ರಾಯ. ಈ ಸಂಶಯವು, ಜ್ಞಾನಿಯಾದ ಅರ್ಜುನನಿಗೆ ಇಲ್ಲದಿದ್ದರೂ ಉಳಿದ ಸಜ್ಜನರಿಗೆ ಸಂಶಯ ಬರಬಹುದೆಂದು ಆ ಶಂಕೆಯನ್ನು ತನ್ನ ವಿಷಯದಲ್ಲಿ ಭಗವಂತನು ನಿವಾರಿಸುತ್ತಾನೆ. ಶ್ರೀ ಕೃಷ್ಣನು ಅರ್ಜುನನಿಗೆ ಈ ಮಾತನ್ನು ಏಕಾಂತದಲ್ಲಿ ಹೇಳಿದ್ದರೂ ವೇದವ್ಯಾಸರೂಪದಿಂದ ಅದನ್ನೇ ಲೋಕದಲ್ಲಿ ಪ್ರಸಿದ್ಧಿಸುತ್ತಾನೆ.

**देहिनोस्मिन्यथा देहे कौमारं यौवनं जरा**

**तथा देहांतरप्राप्तिः धीरस्तत्र न मुह्यति ।। १३ ।।**

ಜೀವನಿಗೆ ಈ ದೇಹದಲ್ಲಿ ಬಾಲ್ಯವೂ ಯೌವನವೂ ವಾರ್ಧಕ್ಯವೂ (ಹೇಗೆ ಬರುತ್ತವೆಯೋ) ಹಾಗೆ ಬೇರೆ ದೇಹವೂ ಬರುತ್ತದೆ. (ಆದುದರಿಂದ) ಬುದ್ಧಿವಂತರು ಪೂರ್ವದೇಹವು ಹೋಗುತ್ತದೆಂಬ ವಿಷಯದಲ್ಲಿ ಮೋಹವನ್ನು ಹೊಂದುವದಿಲ್ಲ.

**ವಿಶೇಷ ಟಿಪ್ಪಣೆಗಳು :**

ಹಿಂದಿನ ಶ್ಲೋಕದಲ್ಲಿ ಆತ್ಮನು ನಿತ್ಯನಾದುದರಿಂದ ಭೀಷ್ಮ–ದ್ರೋಣರ ಸಲುವಾಗಿ ಶೋಕಿಸುವ ಕಾರಣವಿಲ್ಲವೆಂದು ಕೃಷ್ಣನು ಹೇಳಿದನು. ಇನ್ನು ಅವರ ದೇಹ ನಾಶದ ಸಲುವಾಗಿಯೂ ಶೋಕಿಸುವ ಕಾರಣವಿಲ್ಲೆಂದು ಹೇಳುತ್ತಾನೆ. ಯಾಕೆಂದರೆ ಒಂದು ದೇಹ ಹೋದರೆ ಅವರಿಗೆ ಹೊಸದೊಂದು ದೇಹ ಬರುತ್ತದೆಂದು ಇಲ್ಲಿ ಶ್ರೀ ಕೃಷ್ಣನು ಹೇಳುತ್ತಾನೆ.

ಮಧ್ವಾಚಾರ್ಯರು ತಮ್ಮ ಗೀತಾಭಾಷ್ಯದಲ್ಲಿ ಇನ್ನೊಂದು ವಿಧದಿಂದ ಈ ಶೋಕಕ್ಕೆ ಸಂಗತಿಯನ್ನು ಕೊಡುತ್ತಾರೆ. ಜೀವರು ನಿತ್ಯರೆಂಬ ಹಿಂದಿನ ಶ್ಲೋಕದ ಅರ್ಥವನ್ನೇ ಹೆಚ್ಚು ವಿಶದಿಸುತ್ತಾರೆ. ೧) ದೇಹದಿಂದ ಬೇರೆಯಾದ ಜೀವನಿರುವ ವಿಷಯದಲ್ಲಿ ಪ್ರಮಾಣವಿಲ್ಲದ್ದರಿಂದ ಜೀವನು ನಿತ್ಯನೆಂದು ಹೇಳುವದು ಸರಿಯಲ್ಲ. ೨) ದೇಹದಿಂದ ಬೇರೆಯಾದ ಜೀವನಿದ್ದರೂ ಒಬ್ಬ ಜೀವನಿಗೆ ಅನೇಕ ದೇಹಗಳು ಬರುತ್ತವೆಂಬ ಮಾತು ಸರಿಯಲ್ಲ. ಇವೆರಡು ಆಕ್ಷೇಪಗಳಿಗೆ ಈ ಶ್ಲೋಕದಲ್ಲಿ ಶ್ರೀ ಕೃಷ್ಣನು ಉತ್ತರ ಕೊಡುತ್ತಾನೆ.

ಜೀವನಿಗೆ ಬಾಲ್ಯ, ಯೌವನ, ವೃದ್ಧಾಪ್ಯ ಮೊದಲಾದ ಬೇರೆ ಬೇರೆ ಅವಸ್ಥೆಗಳು ಬರುತ್ತವೆ. ಆದರೂ ಬಾಲ್ಯದಲ್ಲಿದ್ದ ನನಗೆ ಯೌವನ ಬಂದಿದೆ; ಯುವಕನಾಗಿದ್ದ ನನಗೇ ಮುಪ್ಪು ಬಂದಿದೆ ಎಂದು ಎಲ್ಲ ಅವಸ್ಥೆಗಳಿಂದ ಬೇರೆಯಾದ 'ನಾನು' ಎಂಬುದೊಂದು ಅನುಸ್ಯೂತವಾಗಿ ಅವಿಚ್ಛಿನ್ನವಾಗಿ ವಸ್ತುವದೆಯೆಂದು ಸಿದ್ಧವಾಗುವದರಿಂದ ದೇಹಾತಿರಿಕ್ತ ಆತ್ಮನಿದ್ದಾನೆಂದು ತಿಳಿದು ಬರುತ್ತದೆ. ಆ ಒಬ್ಬ ಚೇತನನೇ ಬಾಲ್ಯ ಮೊದಲಾದ ಅವಸ್ಥೆಗಳನ್ನು ಅನುಭವಿಸುತ್ತಾನೆಂದು ಸಿದ್ಧವಾಗುತ್ತದೆ. ಹೀಗೆಯೇ ಒಬ್ಬನಿಗೆ ಅನೇಕ ದೇಹಗಳು ಸಹ ಬರಬಹುದು. ಅನೇಕ ದೇಹಗಳಲ್ಲಿಯೂ ಒಬ್ಬನೇ ಜೀವನು ನಾನಾತರಹದ ಅನುಭವಗಳನ್ನು ಹೊಂದುತ್ತಾನೆ. ಜೀವನದಲ್ಲಿ ಜೀವನು ಹೊಚ್ಚಹೊಸಬನಾಗಿ ಬಂದರೂ ಹಿಂದೆ ಅನುಭವವುಳ್ಳವನಂತೆ ನಡೆದುಕೊಳ್ಳುತ್ತಾನೆ. ಹುಟ್ಟಿದೊಡನೆ ಮೊಲೆಹಾಲನ್ನು ಉಣ್ಣುತ್ತಾನೆ. ಹಿಂದೆ ದೇಹಧರಿಸಿದ ಜೀವನೇ ಇಂದು ಜೀವನದಲ್ಲಿ ಪ್ರವೇಶಿಸಿದ್ದಾನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ತರ್ಕಕುತರ್ಕಗಳಿಂದ ಪ್ರಾಣವೇ ಚೈತನ್ಯವೆಂದಾಗಲಿ ಇಂದ್ರಿಯಗಳೇ ಚೈತನ್ಯವೆಂದಾಗಲಿ ವಾದಿಸಬಾರದು. ಆದುದರಿಂದ ಬುದ್ಧಿವಂತನಾದವನು ಸಾಕ್ಷಿಯನ್ನವಲಂಬಿಸಿ, ಆತ್ಮನನ್ನೇ ದೇಹಿಯೆಂದು ಗ್ರಹಿಸ

ಬೇಕೆಂದೂ "ಧೀರನಾದವನು ಈ ವಿಷಯದಲ್ಲಿ ಮೋಹವನ್ನು ಹೊಂದುವ ದಿಲ್ಲೆಂದೂ ಕೃಷ್ಣನು ಹೇಳುತ್ತಾನೆ.

ಇಲ್ಲಿ **ದೇಹಿನ್** ಎಂಬ ಶಬ್ದವನ್ನು 'ದೇಹಕ್ಕೆ ಒಡೆಯ' ಎಂಬ ಅರ್ಥದಲ್ಲಿ ಉಪಯೋಗಿಸಿದ್ದಾರೆ. ಅದು ಆತ್ಮವೇ ಅಲ್ಲದೆ ದೇಹವಾಗಲಿ ಇಂದ್ರಿಯಗಳಾಗಲಿ ಮನಸ್ಸಾಗಲಿ ಅಲ್ಲ. ಯಾಕೆಂದರೆ ಆತ್ಮನನ್ನು ಬಿಟ್ಟು ಉಳಿದೆಲ್ಲವೂ ಜಡಗಳಾದುದರಿಂದ ಅವುಗಳಿಂದ ಬೌದ್ಧಿಕ ವಿಚಾರ, ಕತೃತ್ವ ಭೋಕ್ತೃತ್ವ ಮೊದಲಾದ ಚೇತನ ವ್ಯಾಪಾರಗಳು ನಡೆಯಲಾರವು. ನಾವು ಮನಸಿನಿಂದ ವಿಚಾರಿಸುತ್ತೇವೆ, ಇಂದ್ರಿಯಗಳಿಂದ ತಿಳಿಯುತ್ತೇವೆ ಎಂದು ಅನುಭವ ಬಂದರೂ ಇವು ವಿಚಾರದ ಮತ್ತು ಗ್ರಹಣದ ಕರಣಗಳು ಅಥವಾ ಸಾಧನಗಳು ಕರಣಗಳು ಎಂದೂ ಕರ್ತೃಗಳಾಗಲಾರವು, ಆದುದರಿಂದ ವಿಚಾರ ಮಾಡುವವನು ಮನಸ್ಸಲ್ಲ, ನೋಡುವವನು ಕಣ್ಣಲ್ಲ (ಕರ್ತೃವಲ್ಲ). ಇದು ಅಲ್ಲದೆ ಗಾಢನಿದ್ರೆಯಲ್ಲಿ ಪ್ರಾಣವಾಯ್ವಾದಿಗಳಿದ್ದರೂ ಸುಖ–ದುಃಖ ಇಚ್ಛಾದ್ವೇಷ ಮೊದಲಾದವುಗಳಲ್ಲಿ ಒಂದನ್ನೂ ಅವು ತಿಳಿಯಲಾರವು. ಹಾಗೆಯೇ ಗಾಢನಿದ್ರೆಯಲ್ಲಿ (ಸುಷುಪ್ತಿ) ಮನಸ್ಸು ಏನನ್ನೂ ವಿಚಾರಿಸುವದಿಲ್ಲ. ಇದರಿಂದ ದೇಹಾದಿಗಳಿಗೆ ಈ ಯಾವ ವ್ಯಾಪಾರವನ್ನು ಮಾಡಲಿಕ್ಕೆ ಆಗದಿರುವದರಿಂದ ಇವುಗಳಿಂದ ಬೇರೆಯಾದ ಒಬ್ಬ ಈಕ್ಷಣ (ಚೇತನವ್ಯಾಪಾರ ಮಾಡುವವನು) ಕರ್ತನು ಇದ್ದಾನೆಂದು ತಿಳಿಯುತ್ತಿದೆ

ಹುಟ್ಟಿದ ಕೂಸಿಗೆ ಹಾಲುಕುಡಿಯಬೇಕೆನಿಸುವದು ಅದರ ಪ್ರಾಚೀನ ದೇಹದ ಅನುಭವದ ಬಲದಿಂದ ಎಂದು ನಾವು ವಾದಿಸಿದರೂ ಡಾರ್ವಿನ ಮೊದಲಾದವರು ಇದು ಆನುವಂಶಿಕ ಅನುಭವವೆಂದು ಹೇಳುತ್ತಾರೆ. ಆದರೆ ಸಹಜ ಪ್ರವೃತ್ತಿಗಳು ಮತ್ತು ಮನುಷ್ಯನ ವೈಯಕ್ತಿಕ ಸ್ವಭಾವಗಳು ಬರಿ ಆನುವಂಶಿಕತೆಯಿಂದ ಬಿಡಿಸಲಿಕ್ಕೆ ಸಾಧ್ಯವಿಲ್ಲೆಂದು ಭಾರತೀಯರು ಅದರ ಜೊತೆಗೆ ಕರ್ಮದ ಸಹಾಯದಿಂದ ಬರುವ ದೇಹಾಂತರಗಳನ್ನು ಜೋಡಿಸಿದ್ದಾರೆ. ಕ್ರಿಶ್ಚನ್ನರು, ಮಹಮ್ಮದೀಯರು ದೇಹಾಂತರಗಳನ್ನು ಒಪ್ಪುವದಿಲ್ಲ. ಇವರು ಮತ್ತು ನಾಸ್ತಿಕರೂ ದೇಹಾಂತರ ವಾದವನ್ನು ಕೇಳಿ ನಕ್ಕರೂ ಸಹ ನಿಜವಾದ ವಿಚಾರವಂತರೂ ಅಪೌರುಷೇಯ ವೇದಾದಿಗಳಲ್ಲಿ ಶ್ರದ್ಧೆಯುಳ್ಳವರೂ ಪುನರ್ಜನ್ಮಗಳಲ್ಲಿ ವಿಶ್ವಾಸವಿಟ್ಟಿದ್ದಾರೆ. ಅವರನ್ನೇ ಕೃಷ್ಣನು ಧೀರರೆಂದು ಕರೆದಿದ್ದಾನೆ.

ರಾಘವೇಂದ್ರರು ಬಹು ಸರಳವಾಗಿ ಮತ್ತು ಸುಂದರವಾಗಿ ಈ ಶ್ಲೋಕದ ಅರ್ಥವನ್ನು ವಿವರಿಸುತ್ತಾರೆ:—"ಇದು ಈ ಶ್ಲೋಕದ ಭಾವವು. ಬಾಲ್ಯದಲ್ಲಿರುವ ದೇಹವನ್ನು ಬಿಟ್ಟು ಯೌವನದಲ್ಲಿರುವ ದೇಹ ಬಿಟ್ಟು (ಅನ್ಯ ಅವಸ್ಥೆಯಲ್ಲಿರುವ) ದೇಹವನ್ನು ಸ್ವೀಕರಿಸಿದಾಗ ಶೋಕ ಮಾಡುವದು ಕಂಡಿಲ್ಲವೆಂಬದು, ಜಗತ್ತಿನಲ್ಲಿ

ಪ್ರಸಿದ್ಧ. ಅದು ಯಾಕೆಂದರೆ ಮುಪ್ಪಿನ ದೇಹವು ನಮಗೆ ಸಿದ್ಧವಿರುವದರಿಂದ. ಸಮಾನವಾದ ಲಾಭದಿಂದ ಹಾನಿಯು ತುಂಬಿ ಬರುವದರಿಂದ ದುಃಖವಾಗದಿದ್ದರೆ ಸತ್ತರೂ ಸಹ ಶೋಕ ಮಾಡಬಾರದು. ಯಾಕೆಂದರೆ ನಮಗೆ ಅನ್ಯ ದೇಹವು ದೊರೆಯುತ್ತದೆ. ಯಾವಾಗ ಯೌವನದಲ್ಲಿರುವ ದೇಹವನ್ನು ಕಳಕೊಂಡು ಮುಪ್ಪಿನ ದೇಹದಿಂದ ನಾವು ತೃಪ್ತರಾಗುತ್ತಿರುವಾಗ ಮುಪ್ಪಿನ ದೇಹ ಕಳಕೊಂಡು ಉತ್ತಮವಾದ ಯೌವನದಿಂದ ಕೂಡಿದ ದೇಹದಿಂದಂತೂ ತೃಪ್ತರಾಗುವದು ಏನಾಶ್ಚರ್ಯ. ಆದುದರಿಂದ ಬುದ್ಧಿವಂತನು ದೇಹನಾಶ ವಿಷಯದಲ್ಲಿ ಮೋಹಕ್ಕೆ ಒಳಗಾಗಬಾರದು : ಎಂದರೆ ಅವರ ದೇಹಗಳು ನಾಶವಾಗುತ್ತವೆಂದು ಶೋಕಿಸ ಬಾರದು. ಅಲ್ಲಿ ಬಾಲ್ಯ ಮೊದಲಾದ ಅವಸ್ಥೆಗಳು ನಾಶವಾಗುತ್ತವೆ; ಇಲ್ಲಿ (ಮರಣದಲ್ಲಿ) ಅವಸ್ಥೆಸಹಿತವಾದ ದೇಹನಾಶವೇ ಆಗುತ್ತದೆಂದು ಆಕ್ಷೇಪಿಸಿದರೆ ಅದಕ್ಕೆ ಉತ್ತರವೆಂದರೆ **निष्कदानेन पटग्रहणवत्:** ನಾವು ಎಷ್ಟೋ ಸಾರೆ ಬಂಗಾರದ ನಾಣ್ಯಗಳನ್ನು ಕೊಟ್ಟು ವಸ್ತ್ರಗಳನ್ನು ಕೊಂಡುಕೊಳ್ಳುತ್ತೇವೆ ಮರಣ-ದಿಂದ ಹಾನಿಕರವಾದ ದೇಹ ನಾಶವಾದರೂ ವಿಶೇಷ ಪ್ರಯೋಜನಕ್ಕಾಗಿ, ಬಂಗಾರ ಕೊಟ್ಟು ಬಟ್ಟೆಯನ್ನು ಕೊಂಡುಕೊಳ್ಳುವಂತೆ, ಮುಪ್ಪುದೇಹವನ್ನೇ ಕಳಕೊಂಡು ಹೊಸ ದೇಹವನ್ನು ಸಂಪಾದಿಸುತ್ತೇವೆ" ಇಲ್ಲಿ ಮುಪ್ಪಿನಿಂದ ಕೂಡಿದ ದೇಹವೇ ಬಂಗಾರ. ಅದನ್ನು ಕಳೆದುಕೊಂಡು ಹೊಸ ದೇಹವೇ ಪ್ರಯೋಜನಕಾರಿಯಾದ ಬಟ್ಟೆಯೆಂದು ತಿಳಿಯಬೇಕು.

ಧೀರನೆಂದರೆ ವೇದದಲ್ಲಿ ಪ್ರಾಮಾಣ್ಯ ಬುದ್ಧಿಯುಳ್ಳವನೆಂದು ಈ ಮೊದಲು ಹೇಳಿದೆ. ಮಧ್ವಾಚಾರ್ಯರು ತಮ್ಮ ಭಾಷ್ಯದಲ್ಲಿ ವೇದದ ಪ್ರಾಮಾಣ್ಯದ ವಿಷಯದಲ್ಲಿ ಹೀಗೆ ಬರೆಯುತ್ತಾರೆ— "ಆತ್ಮನು ನಿತ್ಯನೆಂದು ವೇದದಲ್ಲಿ ಹೇಳಿದೆ. ಆ ಶ್ರುತಿಯು ಪ್ರತ್ಯಕ್ಷದಂತೆ ಪ್ರಮಾಣವು (**प्रत्यक्षवच्चप्रामाण्यं**). ಬೌದ್ಧ ಮತ್ತು ಚಾರ್ವಾಕರೂ ಸಹ ಜ್ಞಾನವನ್ನು ಹುಟ್ಟಿಸುವದರಿಂದ ಪ್ರತ್ಯಕ್ಷವು ಪ್ರಮಾಣ ವಾದಂತೆ, ವೇದಗಳೂ ಜ್ಞಾನವನ್ನು ಹುಟ್ಟಿಸುವದರಿಂದ ಪ್ರಮಾಣಗಳೆಂದು ತಿಳಿಯಬೇಕು. ಆದರೆ ಕೆಲವೆಡೆಯಲ್ಲಿ ಈ ಬೌದ್ಧಾದಿ ವಾಕ್ಯಗಳಂತೆ ಈ ಶ್ರುತಿ ವಾಕ್ಯಗಳು ಅಪ್ರಮಾಣವೆಂದು ಹೇಳಲಿಕ್ಕೆ ಬರುವದಿಲ್ಲ, ಯಾಕೆಂದರೆ ಈ ವೇದಗಳು ಪುರುಷ ನಿರ್ಮಿತವಲ್ಲ, ಅವು ಅಪೌರುಷೇಯಗಳು, ಯಾವದಾದರೊಂದು ಅಪೌರು ಷೇಯ ವಾಕ್ಯವು ಇಲ್ಲದಿದ್ದರೆ ಎಲ್ಲ ಶಾಸ್ತ್ರಗಳಿಗೂ ಸಮ್ಮತವಾದ ಧರ್ಮಾಧರ್ಮಗಳ (ಪುಣ್ಯಪಾಪಗಳ) ಅಸ್ತಿತ್ವಕ್ಕೆ ಪ್ರಮಾಣಗಳೇ ದೊರೆಯುವದಿಲ್ಲ. ಯಾವನು ಈ ಧರ್ಮಾಧರ್ಮಗಳನ್ನು ಒಪ್ಪುವದಿಲ್ಲವೋ ಅವನು ಒಳ್ಳೆ ಪ್ರಯೋಜನವುಳ್ಳ ಶಾಸ್ತ್ರಗಳನ್ನು ಪ್ರತಿಪಾದಿಸಲಾರ ಧರ್ಮಪ್ರಮಾಣವು ಯಾವನೊಬ್ಬನಿಂದ ರಚಿತ ವಾಗಿದ್ದರೆ ಅಲ್ಲಿ ಅಜ್ಞಾನ ಮೊದಲಾದ ದೋಷಗಳನ್ನು ಶಂಕಿಸಬಹುದು.

ಆದುದರಿಂದ ಅನಾದಿ ಕಾಲದಿಂದಲೂ ಅಪೌರುಷೇಯವೆಂದು ಪ್ರಸಿದ್ಧಿಯನ್ನು ಪಡೆದ ವೇದವನ್ನು ಪ್ರಮಾಣವೆಂದು ಒಪ್ಪಿಕೊಳ್ಳಬೇಕಾಗುವದು.*

ಪ್ರಭುಪಾದರು ತಮ್ಮ Bhagavadgita as it is ದಲ್ಲಿ "The theory of reflection can be applied to the Supreme soul who is present in each and every individual body and is known as the Paramatma who is different from the individual living entity" ಎಂದು ಹೇಳಿ ಮುಂದೆ ಆಕಾಶವು ನೀರಿನಲ್ಲಿ ಪ್ರತಿಬಿಂಬಿತವಾಗುವದು: ಸೂರ್ಯ–ಚಂದ್ರರು, ನಕ್ಷತ್ರಗಳು ನೀರಿನಲ್ಲಿ ಪ್ರತಿಬಿಂಬಿತವಾಗುವವು. ಈ ನಕ್ಷತ್ರಗಳನ್ನು ಜೀವರಿಗೆ ಹೋಲಿಸಬಹುದು; ಸೂರ್ಯನನ್ನು ಅಥವಾ ಚಂದ್ರನನ್ನು ಪರಮಾತ್ಮನಿಗೆ ಹೋಲಿಸಿದ್ದಾರೆ. ಅರ್ಜುನನೇ ಈ ಜೀವರುಗಳ ಪ್ರತಿನಿಧಿಯೆಂದು ಹೇಳಿದ್ದಾರೆ. ಹೀಗೆ ಪರಮಾತ್ಮನು ಮೂಲರೂಪದಿಂದ ಪ್ರತಿಬಿಂಬಿತನೆಂದು ಆಚಾರ್ಯರ ಸಿದ್ಧಾಂತದಲ್ಲಿ ಒಪ್ಪಿಲ್ಲ. ಪ್ರಭುಪಾದರು ಚೈತನ್ಯರನ್ನು ಅನುಸರಿಸುವದರಿಂದ ಮಧ್ವಾಚಾರ್ಯರ ಸಿದ್ಧಾಂತವನ್ನೇ ಅನುಸರಿಸುತ್ತಿದ್ದರೂ ಪ್ರತಿಬಿಂಬ ತತ್ತ್ವವನ್ನು ಪರಮಾತ್ಮನಿಗೆ ಅನ್ವಯಿಸಬಹುದೆಂದು ಹೇಳಿದ್ದನ್ನು ನೋಡಿ ಆಶ್ಚರ್ಯವಾಗುತ್ತದೆ. ಶ್ರೀಮದ್ಭಾಗವತದಲ್ಲಿ **त्रिसर्ग:** ಎಂಬಲ್ಲಿ (೧–೧) ಪರಮಾತ್ಮ ಸರ್ಗವು **दीपात्दीपांतरोत्पत्ति: यथातथाईश्वरसर्ग** ವೆಂದು ವಿಜಯಧ್ವಜಿಯಲ್ಲಿ ಹೇಳಿದ್ದಾರೆ. ಮೂಲರೂಪಕ್ಕೂ ಅವತಾರ ರೂಪಗಳಿಗೂ ಅಥವಾ ಇತರ ರೂಪಗಳಿಗೂ ಬಿಂಬ ಪ್ರತಿಬಿಂಬ ಭಾವವಲ್ಲ; ಆದರೆ ಒಂದು ದೀಪದಿಂದ ಇನ್ನೊಂದು ದೀಪವನ್ನು ಹಚ್ಚಿಕೊಂಡಂತೆ ಮೂಲ ರೂಪ ಮತ್ತು ಪ್ರತಿರೂಪಗಳಿಗೆ ಏನೂ ಭೇದವಿಲ್ಲೆಂದು ಹೇಳುತ್ತಾರೆ.

---

*"ಮನುಷ್ಯನಿಗೆ ಬರುವ ನಾಲ್ಕು ಅವಸ್ಥೆಗಳಲ್ಲಿ ಎರಡನೇ ದೇಹ ಬರುವದೂ ಒಂದು ಅವಸ್ಥೆಯೇ. ಅದು ಯಥಾಕ್ರಮ ಬಂದೇ ಬರುತ್ತದೆ. ವೇದದಲ್ಲಿ ಇದನ್ನು ಬೇರೆ ರೀತಿಯಾಗಿ ಹೇಳಿದ್ದಾರೆ.—

**सनातनमेतदाहुरुताद्य स्यात्पुनर्णव: ॥ २३ ॥**
**त्वं स्त्रीमा त्वं पुमानसित्वंकुमार उत वा कुमारी ।**
**त्वंजीर्णो वंडेन वंचसि त्वं जातो भवसि विश्वतोमुख: ॥ २६॥**
**अथर्ववेद १० ॥**

ಇದು ಸನಾತನವದೆ, ಮತ್ತೆ ಮತ್ತೆ ಹೊಸದು ಆಗುತ್ತದೆ. ನೀನು ಸ್ತ್ರೀ ಇರುತ್ತೀ; ನೀನು ಪುರುಷನಿರುತ್ತೀ, ನೀನು ಕುಮಾರನಿರುತ್ತೀ, ನೀನು ಕುಮಾರಿಯೂ ಇರುತ್ತಿ. ಮುದುಕನಾದ ಮೇಲೆ ನೀನು ಕೈಯಲ್ಲಿ ಬಡಿಗೆ ಹಿಡಿದುಕೊಂಡು ಹೋಗುತ್ತಿ. ಯಾವಾಗ ನೀನು ಹೊಸದಾಗಿ ಹುಟ್ಟುತ್ತಿ. ಆಗ ನೀನು ಎಲ್ಲಕಡೆ ನೋಡುತ್ತಿ." (ಸಾತವಳೇಕರ).

ಈ ಶ್ಲೋಕದ ತಾತ್ಪರ್ಯವೆಂದರೆ—"ದೇಹದಲ್ಲಿ ಪೂರ್ವದಲ್ಲಿದ್ದ ಬಾಲ್ಯಾವಸ್ಥೆಯು ಹೋದರೂ ಹೇಗೆ ಯೌವನಾವಸ್ಥೆಯು ಬರುತ್ತದೋ ಆ ಪ್ರಕಾರವಾಗಿ ಈ ದೇಹವು ಹೋದರೂ ಬೇರೆ ದೇಹವು ಬರುತ್ತದೆ. ಆದುದರಿಂದ ಭೀಷ್ಮಾದಿಗಳ ದೇಹವು ಹೋಗುತ್ತದೆ ಎಂದು ದುಃಖ ಪಡುವದು ಯುಕ್ತವಲ್ಲ." (ಸತ್ಯಧ್ಯಾನರು).*

ಇನ್ನು ಯುದ್ಧ ಮಾಡಿದ ಪಕ್ಷದಲ್ಲಿ ಭೀಷ್ಮ–ದ್ರೋಣಾದಿಗಳ ಭಿನ್ನಭಿನ್ನವಾದ ದೇಹಗಳ ದರ್ಶನದಿಂದ ದುಃಖವು ಬರುತ್ತದೆ. ಆದಕಾರಣ ಯುದ್ಧಮಾಡುವದಿಲ್ಲೆಂದು ಅರ್ಜುನನು ವಾದಿಸಿದರೆ ಅದಕ್ಕೆ ಉತ್ತರ ಕೊಡುತ್ತಾನೆ :—

**मात्रा स्पर्शास्तु कौंतेय शीतोष्णसुखदुःखदाः ॥**
**आगमापायिनो नित्यास्तांतितिक्षस्व भारत ॥ १४ ॥**

ಎಲೈ ಅರ್ಜುನನೇ! ಶೀತ–ಉಷ್ಣಗಳೆಂಬ ವಿಷಯಗಳ ಅನುಭವದ ದ್ವಾರದಿಂದ ಸುಖ–ದುಃಖಗಳನ್ನು ಕೊಡತಕ್ಕ ವಿಷಯಗಳ ಮತ್ತು ಇಂದ್ರಿಯಗಳ ಸಂಬಂಧವು ಆಗೊಮ್ಮೆ ಈಗೊಮ್ಮೆ ಬರುತ್ತದೆ ಹೋಗುತ್ತದೆ. ಆದುದರಿಂದ ವಿಷಯೇಂದ್ರಿಯ ಸಂಬಂಧವು ಶೀತ ಉಷ್ಣ ಮೊದಲಾದ ವಿಷಯಗಳ ಅನುಭವದಿಂದ ಮಾತ್ರ ಸುಖದುಃಖಗಳನ್ನು ಕೊಡುವದೆಂದು ತಿಳಿಯುವಿರ? (ಇಲ್ಲ). (ಇದು ನನ್ನದು ಎಂಬ ಅಭಿಮಾನದಿಂದ ಕೂಡಿದರಯೇ) ಸುಖ–ದುಃಖಗಳನ್ನು ಕೊಡುತ್ತದೆ. ಎಲೈ ಅರ್ಜುನನೇ! ಭಿನ್ನಭಿನ್ನವಾದ ಭೀಷ್ಮಾದಿಗಳ ದೇಹಗಳಿಗೂ ನಿನ್ನ ಇಂದ್ರಿಯಗಳಿಗೂ ಆಗುವ ಸಂಬಂಧವನ್ನು ಅಥವಾ ಅದರ ಜ್ಞಾನವನ್ನು ಸುಖ–ದುಃಖಗಳನ್ನು ಕೊಡದ ಹಾಗೆ ಮಾಡಿಕೋ!

---

*ಯಮನು ಮರಣದ ವಿಷಯದಲ್ಲಿ ಕಠೋಪನಿಷತ್ತಿನಲ್ಲಿ ಹೀಗೆ ಹೇಳುತ್ತಾನೆ.—

**हंत त इदं प्रवक्ष्यामि गुह्यं ब्रह्मसनातनम् । यथामरणं प्राप्यात्मा भवति गौतम ॥ ६ ॥ योनिमन्ये प्रपद्यंते शरीरत्वाय देहिनः । स्थाणुमन्येनुसंयंति यथाकर्म यथाश्रुतम् ॥ ७ ॥**

ಹೇ ಗೌತಮ (ನಚಿಕೇತ) ಅತಿ ಗೌಪ್ಯನಾದ ಏಕರೂಪನಾದ ಈ ಪರಬ್ರಹ್ಮನನ್ನು ನಿನಗೆ ಹೇಳುತ್ತೇನೆ. ಜೀವನು ಮರಣವನ್ನು ಹೊಂದಿ ಹೇಗೆ ಆಗುತ್ತಾನೆ ಅದನ್ನು ಹೇಳುತ್ತೇನೆ ॥೬॥ ಶರೀರಧಾರಣಮಾಡಲಿಕ್ಕೆಯೋಗ್ಯರಾದ ಜೀವರು ಶರೀರವನ್ನು ಹೊಂದುವದಕ್ಕೋಸ್ಕರ ತಮ್ಮ ತಮ್ಮ ಜ್ಞಾನಕರ್ಮಗಳನ್ನು ಅನುಸರಿಸಿ ಮನುಷ್ಯಾದಿ ಜನ್ಮವನ್ನು ಹೊಂದುತ್ತಾರೆ. ಕೆಲವರು ಸ್ಥಾವರ ದೇಹವನ್ನು ಹೊಂದುತ್ತಾರೆ."

**ವಿಶೇಷ ಟಿಪ್ಪಣಿಗಳು :**

ಈ ಶ್ಲೋಕದೊಳಗಿನ ವಾಕ್ಯದ ಅನ್ವಯ ಮತ್ತು ಅದರ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳಬೇಕಾದರೆ ಆಚಾರ್ಯರ ಗೀತಾ ಭಾಷ್ಯ ಮತ್ತು ತಾತ್ಪರ್ಯಗಳನ್ನು ಕ್ರೋಡೀಕರಿಸಿ ಸರಳವಾಗಿ ಸುಲಭವಾಗಿ ಹಂತಹಂತವಾಗಿ ತಾತ್ಪರ್ಯವನ್ನು ಸ್ಪಷ್ಟಪಡಿಸುವ ರಾಘವೇಂದ್ರರ ವಿವೃತ್ತಿ ಅಥವಾ ಅರ್ಥಸಂಗ್ರಹವನ್ನು ನೋಡಬೇಕು. "ಈಗ ಅರ್ಜುನನಿಗೆ ಶೋಕದ ಕಾರಣವೆಂದರೆ ಅವನಿಗೆ ಸುಖ ಕೊಡತಕ್ಕ ಭೀಷ್ಮ–ದ್ರೋಣಾದಿಗಳ ಸಹವಾಸ, ಅವರ ಕೂಡ ಮಾತು ಕಥೆ, ಅವರ ಪಾದಸ್ಪರ್ಶ ಮೊದಲಾದವುಗಳು ಅವರ ದೇಹ ನಾಶಹೊಂದುವದರಿಂದ ದೊರೆಯದಂತೆ ಆಗುತ್ತವೆ. ಮೇಲಾಗಿ ಯುದ್ಧದಲ್ಲಿ ಛಿನ್ನಭಿನ್ನವಾದ ಅವರ ವಿಕೃತದೇಹವನ್ನು ನೋಡಿ ಅವನಿಗೆ ಅತ್ಯಂತ ದುಃಖವಾಗುತ್ತದೆ

ಈ ಆಕ್ಷೇಪಕ್ಕೆ ಶ್ರೀ ಕೃಷ್ಣನು ಉತ್ತರವನ್ನು ಹೇಳುತ್ತಾನೆ.– **मीयते इति मात्राः** ಗಂಧ ರೂಪ ರಸ ಸ್ಪರ್ಶ ಶಬ್ದಗಳೆಂಬ ಜ್ಞಾನವಿಷಯಗಳು. ಇವುಗಳ ಸ್ಪರ್ಶವು ಎಂದರೆ ಸಂಬಂಧವು ಶೀತೋಷ್ಣವೆಂದರೆ ಶೀತವಾದ ಸ್ಪರ್ಶವು, ಮತ್ತು ಉಷ್ಣವಾದ ಸ್ಪರ್ಶವು. ಎಂದರೆ ಗಂಧ ರೂಪ ರಸ ಮೊದಲಾದವುಗಳ ಅನುಭವವು ಕಣ್ಣು ಕಿವಿ ಮೂಗು ಮೊದಲಾದವುಗಳಿಂದ ರೂಪ ಶಬ್ದ ಗಂಧ ಮೊದಲಾವುಗಳ ಸಂಬಂಧವು ಸುಗಂಧ ಸುರಸಗಳಿದ್ದಾಗ ಸುಖವನ್ನೂ ದುರ್ಗಂಧ ದುಷ್ಟ ರಸಗಳಿದ್ದಾಗ ದುಃಖವನ್ನೂ ಕೊಡುತ್ತವೆನ್ನುವದು ನಿನ್ನ ಆಶಯವೇ ? (**तु** ಶಬ್ದದಿಂದ) ಎಂದು ಆಕ್ಷೇಪವೆತ್ತುವ ಪ್ರಶ್ನೆ. ಇಂದ್ರಿಯಗಳಿಗೂ ವಿಷಯಗಳಿಗೂ ಸಂಬಂಧ ಮಾತ್ರದಿಂದ ಅರ್ಜುನ! ನಿನಗೆ ಸುಖ–ದುಃಖಗಳು ಎನಿಸುವದಿಲ್ಲ. ಯಾಕೆಂದರೆ ಆ ಸಂಬಂಧಗಳು ಒಮ್ಮೆ ಸುಖಗಳನ್ನು ಹುಟ್ಟಿಸುತ್ತವೆ, (**आगम**) ಒಮ್ಮೆ ಹುಟ್ಟಿಸುವದಿಲ್ಲ. ಇದಕ್ಕೆ ಕಾರಣವೆಂದರೆ ಸುಷುಪ್ತಿಯಲ್ಲಿ, ಮೂರ್ಛೆಯಲ್ಲಿ ಈ ಸಂಬಂಧಗಳು ಸುಖ–ದುಃಖಗಳನ್ನು ಕೊಡುವದಿಲ್ಲ ಅಭಿಮಾನವು ಜಾಗ್ರತವಿದ್ದಾಗ ಮಾತ್ರ ಸುಖ–ದುಃಖಗಳನ್ನು ಹುಟ್ಟಿಸುತ್ತದೆ."

ಅಭಿಮಾನವನ್ನು ಬಿಟ್ಟವರಿಗೆ ಈ ಇಂದ್ರಿಯ ವಿಷಯ ಸಂಬಂಧವು ಸುಖ–ದುಃಖವನ್ನು ಹುಟ್ಟಿಸುವದಿಲ್ಲ. ಮನೆಯಲ್ಲಿ ಒಳ್ಳೆಯ ಮುಂದೆ ಕುಳಿತ ತಾಯಿಯು ಹೊರಗೆ ಯಾರೋ 'ಮೋಟರಿನ ಗಾಲಿ ಬುಡಕ್ಕೆ ಸಿಕ್ಕು ಕೂಸು ಸತ್ತಿತೆಂದು ಕೂಗುವರು. ತಾಯಿಯು ಇದನ್ನು ಕೇಳಿ ಗಾಬರಿಯಾಗಿ ರೊಟ್ಟಿ ಬಡಿಯುವದನ್ನು ಬಿಟ್ಟು ಹಾಗೆ ಕೈಹಿಟ್ಟು ಮುಣಿಗಿಸಿಕೊಂಡು ಹೊರಕ್ಕೆ ನುಗ್ಗಿ ಮೋಟರಿನ ಗಾಲಿಯ ಹತ್ತಿರ ಬಂದು ನೋಡುತ್ತಾಳೆ—"ಅಯ್ಯೋ ಇದು ನನ್ನ ಕೂಸಲ್ಲ" ವೆಂದು ಹಾಗೇ ತಿರಗುತ್ತಾಳೆ; ಅವಳಿಗೆ ದುಃಖವಾಗಿಲ್ಲ; ನಿಜವಾದ ತಾಯಿ ಮಾತ್ರ ತನ್ನ ಕೂಸು

ಸತ್ತದ್ದನ್ನು ನೋಡಿ ಎದೆ ಎದೆ ಬಡಿದುಕೊಂಡು ಅಳುತ್ತಾಳೆ. ಮೊದಲಿನ ತಾಯಿಗೆ ತನ್ನದೆಂಬ ಅಭಿಮಾನವಿಲ್ಲ, ಎರಡನೆ ನಿಜವಾದ ತಾಯಿಗೆ ತನ್ನದೆಂಬ ಅಭಿಮಾನವದೆ. ಅದರಿಂದ ಈ ಅಭಿಮಾನವನ್ನು ಬಿಡುವದರಿಂದ ಈ ದುಃಖವು ಉಂಟಾಗುವದಿಲ್ಲ,

ಶಂಕರಾಚಾರ್ಯರು ರಾಮಾನುಜಾಚಾರ್ಯರು ಈ ಶ್ಲೋಕವನ್ನು ಸರಳವಾದ ರೀತಿಯಲ್ಲಿ ಅನ್ವಯಿಸಿ ಅದರ ತಾತ್ಪರ್ಯವನ್ನು ಸುಲಭವಾಗಿ ತೆಗೆದಿದ್ದಾರೆ. "ಮಾತ್ರಾಸ್ಪರ್ಶಗಳು—ಶಬ್ದ ಮೊದಲಾದ ವಿಷಯಗಳೊಡನೆ ಸಂಬಂಧವು ಶೀತವನ್ನೂ ಉಷ್ಣವನ್ನೂ ಸುಖವನ್ನೂ ದುಃಖವನ್ನೂ ಕೊಡುತ್ತವೆ. ಅಥವಾ ಸ್ಪರ್ಶಗಳೆಂದರೆ ಶಬ್ದಾದಿ ವಿಷಯಗಳು. ಇಂದ್ರಿಯಗಳೂ ವಿಷಯಗಳೂ ಇವು ಶೀತೋಷ್ಣ ಸುಖ–ದುಃಖದಾಃ —ಒಮ್ಮೆ ಶೀತವು ಸುಖವನ್ನು ಕೊಡುತ್ತದೆ ಒಮ್ಮೆ ದುಃಖವನ್ನು ಕೊಡುತ್ತದೆ ಅದರಂತೆ ಉಷ್ಣವೂ ಅನಿತ್ಯ ಸ್ವರೂಪದ್ದು ಆದರೆ ಸುಖ–ದುಃಖಗಳು ನಿಯತ ರೂಪವುಳ್ಳವು. ಆದುದರಿಂದ ಅವುಗಳನ್ನು ಬೇರೆಯಾಗಿ ಹೇಳಿದ್ದಾರೆ ಹೀಗೆ ಆಗಮಾಪಾಯಿಯಾದ ಅದಕ್ಕೆ ಅನಿತ್ಯವಾದ ಈ ಶೀತೋಷ್ಣಗಳನ್ನು ಸಹಿಸು" ಎಂದು ಉಪದೇಶಿಸುತ್ತಾನೆಂದು ಹೇಳುತ್ತಾರೆ. ಮಧ್ವಾಚಾರ್ಯರು ಅವರ ಅನುಯಾಯಿಗಳು 'ಈ ವಾಕ್ಯ ಇದು ವಿಧಾನವಲ್ಲ, ಇದು ಕಾಕುಸ್ವರದ ಪ್ರಶ್ನಾರ್ಥಕವಾದುದರಿಂದ ಅದು ನಿಷೇಧದಲ್ಲಿ ಪರ್ಯವಸಾನ ಹೊಂದಿ ಸುಖ–ದುಃಖಗಳಿಗೆ ಕಾರಣವು ಬರೀ ಇಂದ್ರಿಯ ವಿಷಯ ಸಂಬಂಧವಲ್ಲ; ಆದರೆ ಅದು ಅಭಿಮಾನದಿಂದ ಸಹಿತವಾದುದು. ಅಭಿಮಾನ ರಹಿತವಾದ ಇಂದ್ರಿಯ ವಿಷಯ ಸಂಬಂಧವು ಸುಖ–ದುಃಖಾದಿಗಳನ್ನು ಹುಟ್ಟಿಸುವದಿಲ್ಲ' ಎಂದು ಅರ್ಥ ಕೊಡುತ್ತದೆಂದು ಹೇಳುತ್ತಾರೆ.

ಶಂಕರಾಚಾರ್ಯರ ಮತ್ತು ರಾಮನುಜಾಚಾರ್ಯರ ಅರ್ಥವು ಸರಳವಾದುದೆನ್ನುವದರಲ್ಲಿ ವಾದವೇ ಇಲ್ಲ. ಮಧ್ವಾಚಾರ್ಯರು ಯೋಜಿಸಿದ ಅನ್ವಯ ಕಷ್ಟಕರವಾದುದು. ಆದರೆ ಶಂಕರಾಚಾರ್ಯರ ಅರ್ಥವು ಬಹಳ ಸಾಮಾನ್ಯವಾಗಿದೆ ಬಹಳ ಬಡವಾಗಿದೆ. ಇಂಥ ಸಾಮಾನ್ಯ ಮಾತುಗಳನ್ನು ಕೃಷ್ಣನು ಏಕೆ ಹೇಳಬೇಕೆಂದು ಆಕ್ಷೇಪವೂ ಬರುತ್ತದೆ ಆದರೆ ಮಧ್ವಾಚಾರ್ಯರ ಅನ್ವಯವು ಸಮೃದ್ಧ ಮತ್ತು ಸಮಯೋಚಿತ ಅರ್ಥವನ್ನು ಕೊಡುತ್ತದೆ. ಸುಖ–ದುಃಖದ ಮೀಮಾಂಸೆಯಲ್ಲಿ ಅಭಿಮಾನದ ಪಾತ್ರವು ಎಲ್ಲರ ಒಪ್ಪಿತ ವಿಷಯು. ಅದನ್ನು ಬಹು ಚಾತುರ್ಯದಿಂದ ಲಕ್ಷಣಾವೃತ್ತಿಯಿಂದ ಯೋಜಿಸಿ ಮನೋವಿಜ್ಞಾನದ ರಹಸ್ಯತತ್ವವನ್ನು ಅರ್ಜುನನಿಗೆ ಯೋಗ್ಯ ಪ್ರಸಂಗದಲ್ಲಿ ಅವಗಾಹನೆಗೆ ಇಟ್ಟಿದ್ದಾನೆ. ಬಹುಗಂಭೀರವಾದ ಪ್ರಯೋಜನವು ಸಾಹಿತ್ಯದಲ್ಲಿ ಅಭಿದಾವೃತ್ತಿಯನ್ನು ಬಿಟ್ಟು ಲಕ್ಷಣಾವೃತ್ತಿಗೆ ಅನುಮತಿಯನ್ನು ನೀಡಿದೆ

**अनित्याः — आगमापायिनः** ಹೋಗುವ ಬರುವ ಸ್ವಭಾವವುಳ್ಳವು ಎಂದು ಹೇಳವದರಿಂದಲೆ ಅನಿತ್ಯವೆಂಬ ಅರ್ಥವು ಬರುತ್ತಿರಲಿಕ್ಕೆ ಮತ್ತೇಕೆ ಅನಿತ್ಯವೆಂಬ ಶಬ್ದವೆಂದು ಶಂಕಿಸಬಹುದು ಆದರೆ ಸ್ವರೂಪದಿಂದ ಅನಿತ್ಯವಾದರೂ ಪ್ರವಾಹದಿಂದ ನಿತ್ಯವಿರಬಹುದು. ನದಿಯ ನೀರು ಮುಂದೆ ಹೋದಂತೆ ತೆರವಾದ ಸ್ಥಳಕ್ಕೆ ಅವಿಚ್ಛಿನ್ನವಾಗಿ ಹಿಂದಿನ ನೀರು ಬರುವದರಿಂದ ಅದು ಪ್ರವಾಹದ ದೃಷ್ಟಿಯಿಂದ ನಿತ್ಯವೆನಿಸುತ್ತದೆ. ಆದರೆ ವಿಷಯಸಂಬಂಧಗಳು ಪ್ರವಾಹತಃ ಸಹ ನಿತ್ಯವಲ್ಲ ಸುಖ–ದುಃಖಗಳು ಸುಷುಪ್ತಿಯಲ್ಲಿ ನಿಂತು ಹೋಗುತ್ತದೆ ಪ್ರವಾಹಕ್ಕೆ ವಿಚ್ಛಿತ್ತಿ ಬರುತ್ತದೆ. ಅದನ್ನೇ ಅನಿತ್ಯವೆಂಬ ಶಬ್ದದಿಂದ ತೋರಿಸಿದ್ದಾರೆ.

ಈಗ ಅದ್ವೈತ ಮತದ ಮಧುಸೂದನ ಸರಸ್ವತಿಯವರು ಈ ಶ್ಲೋಕದ ಅನ್ವಯವನ್ನು ಹೇಗೆ ಹಚ್ಚುತ್ತಾರೆ ಮತ್ತು ಅದರ ತಾತ್ಪರ್ಯವನ್ನು ಹೇಗೆ ತೆಗೆಯುತ್ತಾರೆ ನೋಡೋಣ ಅವರು ಹೇಳುತ್ತಾರೆ— "ನಾವು ಆತ್ಮನು ವಿಭು ಮತ್ತು ನಿತ್ಯನು ಎನ್ನುವದನ್ನು ಒಪ್ಪುತ್ತೇವೆ, ಆದರೆ ಅವನು ಪ್ರತಿದೇಹದಲ್ಲಿ ಭಿನ್ನನು ಎನ್ನುವದನ್ನು ಸಹಿಸುವದಿಲ್ಲ. ಆದರೆ ವೈಶೇಷಿಕರು ನೈಯ್ಯಾಯಿಕರು ಮೀಮಾಂಸಕರು ಮೊದಲಾದವರು ಆತ್ಮನು ನಿತ್ಯನಾಗಿದ್ದರೂ ಪ್ರತಿ ದೇಹದಲ್ಲಿ ಭಿನ್ನನು ಎಂದು ಒಪ್ಪುತ್ತಾರೆ. ಯಾಕೆಂದರೆ ಪ್ರತಿಯೊಬ್ಬನಿಗೆ ಬೇರೆ ಬೇರೆಯಾಗಿ ಸುಖ–ದುಃಖಗಳ ಅನುಭವವು ಬರುತ್ತದೆ ಅರ್ಜುನನು ಈ ಅಭಿಪ್ರಾಯವನ್ನು ಇಟ್ಟುಕೊಂಡು ತನಗೆ ಭೀಷ್ಮ–ದ್ರೋಣಾದಿಗಳ ಮರಣದಿಂದ ದುಃಖ ಬರುತ್ತದೆಂದು ವಾದಿಸುತ್ತಾನೆ.

ಮಧುಸೂದನ ಸರಸ್ವತಿಯವರ ಅಭಿಪ್ರಾಯದಂತೆ ಶ್ರೀಕೃಷ್ಣನ ಉತ್ತರವು ಈ ರೀತಿಯಾಗಿ ಇದೆ: ಮಾತ್ರಾಸ್ಪರ್ಶಾಃ ಎಂದರೆ ಇಂದ್ರಿಯಗಳಿಗೂ ವಿಷಯಗಳಿಗೂ ಇರುವ ಸಂಬಂಧವು ಅತಃಕರಣಕ್ಕೆ (ಶೀತೋಷ್ಣ ದ್ವಾರದಿಂದ) ಸುಖ–ದುಃಖಗಳನ್ನು ಕೊಡುತ್ತದೆ. ಯಾಕೆಂದರೆ ಸುಖ–ದುಃಖಗಳು ಅತಃಕರಣಕ್ಕೆ ಮಾತ್ರ ಆಗುತ್ತವೆ. ನಿತ್ಯ ಮತ್ತು ವಿಭುವಾದ ಆತ್ಮನಿಗೆ ಅಲ್ಲ. ಹೀಗೆ ಒಂದು ಅಂತಃಕರಣವೆಂದರೆ ಮನಸ್ಸನ್ನು ಇನ್ನೊಂದರಿಂದ ಬೇರ್ಪಡಿಸುತ್ತದೆ. ಈ ಅಂತಃಕರಣದ ನೋವನ್ನು ಸಹಿಸಲಿಕ್ಕೆ ಕೃಷ್ಣನು ಉಪದೇಶಿಸುತ್ತಾನೆ.

ಆದರೆ ಶ್ರೀ ಕೃಷ್ಣ ಇಲ್ಲಿಯವರೆಗೆ ಎಲ್ಲ ಆತ್ಮನು ಒಬ್ಬನೇ ಎಂಬ ವಾದವನ್ನು ಮಂಡಿಸಿದ್ದಾನೆಂಬುದು ಯಾರಿಗೂ ಗೊತ್ತಾಗುವದಿಲ್ಲ; ಅದರ ಹಾಗೆ ಜೀವನು ವಿಭು ಎಂದರೆ ಸರ್ವವ್ಯಾಪ್ತನು ಎನ್ನುವದೂ ಎಲ್ಲಿ ಹೇಳಲ್ಪಟ್ಟಿದೆನ್ನುವದು ಗೊತ್ತಾಗುವದಿಲ್ಲ. ಸುಖ–ದುಃಖಗಳು ಮನಸ್ಸಿಗಾದರೂ ಆತ್ಮನು ಅವುಗಳನ್ನೂ ಅನುಭವಿಸಿ ಅವುಗಳಿಂದ ಪರಿಣಾಮ ಹೊಂದುತ್ತಾನೆ. ಅರ್ಜುನನು ವ್ಯಾವಹಾರಿಕ ಸ್ಥಿತಿಯಲ್ಲಿ ದುಃಖ ಪಡುವದರಿಂದ ಅವನಿಗೆ ಪಾರಮಾರ್ಥಿಕ ಸ್ಥಿತಿಯಲ್ಲಿ ಜೀವನು

ಪರಮಾತ್ಮನೊಡನೆ ಐಕ್ಯ ಹೊಂದುತ್ತಾನೆಂದು ಹೇಳುವದು ಉತ್ತರವಾಗಲಾರದು. ಮಧುಸೂದನ ಸರಸ್ವತಿಯವರು ದೊಡ್ಡ ವಿದ್ವಾಂಸರಾದರೂ ಅದ್ವೈತದ ಪ್ರಾಶಸ್ತ್ಯಕ್ಕಾಗಿ ಶ್ಲೋಕಾರ್ಥವನ್ನು ವಿಕಾರಗೊಳಿಸುವದನ್ನು ನೋಡಿದರೆ ಆಶ್ಚರ್ಯವಾಗುತ್ತದೆ ಆತ್ಮದೃಷ್ಟಿಯಿಂದ ಭೀಷ್ಮರೂ ಅರ್ಜನನೂ ಒಂದೇ ! ಆದರೆ ಅಂತಃಕರಣ ದೃಷ್ಟಿಯಿಂದ ಅವರಿಬ್ಬರೂ ಬೇರೆ ಬೇರೆ ಆದುದರಿಂದ ಅರ್ಜುನನಿಗೆ ದುಃಖ ಈ ದುಃಖ ನಿವಾರಣೆಗೆ ಅರ್ಜುನ ಭೀಷ್ಮರು ಒಂದೆಂಬ ಮಾತು ಉತ್ತರವಾಗಲಾರದು.

ಲೋ. ಟಿಳಕರು ಮಾತ್ರಾ ಶಬ್ದಕ್ಕೆ ಶಂಕರಾಚಾರ್ಯರಿಂದ ಬೇರೆಯಾಗಿ ಮಧ್ವಾಚಾರ್ಯರಂತೆ ಮಾತ್ರಾ ಶಬ್ದಕ್ಕೆ ರೂಪ ರಸ ಗಂಧ ಮೊದಲಾದ ವಿಷಯಗಳು ಎಂದು ಅರ್ಥ ಮಾಡಿದ್ದಾರೆ. ಅವುಗಳ ಸ್ಪರ್ಶವೆಂದರೆ ಇಂದ್ರಿಯಗಳ ಕೂಡ ಸಂಬಂಧವೆಂದು ಇಟ್ಟುಕೊಂಡಿದ್ದಾರೆ. ಆದರೆ ಅವರ ಅದ್ವೈತದಲ್ಲಿಯ ಅಂಧ ಶ್ರದ್ಧೆಯು ಅವರ ತೀಕ್ಷ್ಣವಾದ ತರ್ಕಬುದ್ಧಿಯನ್ನು ಮಂಕುಗೊಳಿಸಿದೆ. ಏನೂ ಆಧಾರವಿಲ್ಲದೆ ಇಲ್ಲಿ ಅದ್ವೈತದ ಪ್ರಸ್ತಾವವನ್ನು ಮಾಡಿದ್ದಾರೆ "ಯಾರಿಗೆ ಬ್ರಹ್ಮಾತ್ಮೈಕ್ಯಜ್ಞಾನವಾದರೂ ನಾಮರೂಪಾತ್ಮಕ ಜಗತ್ತು ಮಿಥ್ಯಾ ಎಂದು ತಿಳಿದಿಲ್ಲ, ಅಂಥವನು ಬಾಹ್ಯ ಪದಾರ್ಥಕ್ಕೂ ಇಂದ್ರಿಯಕ್ಕೂ ಸಂಬಂಧವಾಗುವದರಿಂದ ಆಗುವ ಶೀತೋಷ್ಣ ಅಥವಾ ಸುಖ–ದುಃಖಾದಿ ವಿಕಾರಗಳು ಸತ್ಯವೆಂದು ತಿಳಿಯುತ್ತಾನೆ. ಮತ್ತು ಈ ವಿಕಾರಗಳು ಆತ್ಮನಿಗೆ ಆಗುತ್ತವೆಂದು ಆರೋಪಿಸುತ್ತಾನೆ. ಆ ನಿಮಿತ್ತವಾಗಿ ಅವರಿಗೆ ದುಃಖವಾಗುತ್ತದೆ ಆದರೆ ಈ ಎಲ್ಲ ವಿಕಾರಗಳು ಪ್ರಕೃತಿ ನಿಮಿತ್ತಕವೆಂದು ತಿಳಿದು ಆತ್ಮನು ಅಕರ್ತನಿದ್ದಾನೆಂದು ಭಾವಿಸಿದರೆ ಅವನಿಗೆ ಸುಖ- ದುಃಖಗಳು ಒಂದೇ ಆಗುತ್ತವೆ. ಈ ಸಮಬುದ್ಧಿಯಿಂದ ನೀನು ಅವುಗಳನ್ನು ಸಹಿಸು ಎಂದು ಭಗವಂತನು ಅರ್ಜುನನಿಗೆ ಉಪದೇಶಿಸುತ್ತಾನೆ" ಎಂದು ಈ ಶ್ಲೋಕದ ಮೇಲೆ ಟಿಪ್ಪಣಿಯನ್ನು ಬರೆದಿದ್ದಾರೆ ಇಲ್ಲಿ ಅಪಸಿದ್ಧಾಂತವನ್ನು ನೋಡಿರಿ ಬ್ರಹ್ಮೈಕ್ಯಜ್ಞಾನವಾದ ಮೇಲೆ ಎಂದರೆ 'ಬ್ರಹ್ಮ' ಸತ್ಯಂ ಎಂದೂ ಜ್ಞಾನವಾದ ಮೇಲೆ ಜಗತ್ತು 'ಮಿಥ್ಯಾ' ಎಂದೂ ಜ್ಞಾನ ಬಂದೇ ಬರುವದು. ಇದು ಬಾರದಿದ್ದರೆ ಮುಂದೆ ಈ ಮಿಥ್ಯಾಜ್ಞಾನವು ಯಾವದರಿಂದ ಬರಬೇಕು ? ಆದುದರಿಂದ ಅದ್ವೈತ ಸಿದ್ಧಾಂತದಲ್ಲಿ ಬ್ರಹ್ಮಾತ್ಮೈಕ್ಯ ಜ್ಞಾನವಾದೊಡನೆ ಜಗನ್ಮಿಥ್ಯಾ ಎಂಬ ಜ್ಞಾನ ಬಂದೇ ಬರುತ್ತದೆಂದು ಹೇಳಿದ್ದಕ್ಕೆ ವಿರುದ್ಧವಾಗಿ ಮಿಥ್ಯಾಜ್ಞಾನ ಐಕ್ಯಜ್ಞಾನವಾದರೂ ಬಂದಿಲ್ಲವೆಂಬ ಪಕ್ಷವನ್ನು ಇಟ್ಟುಕೊಳ್ಳುವದು ಸಿದ್ಧಾಂತಕ್ಕೆ ವಿರುದ್ಧವಾದ ಮಾತು ಇದು ಅಲ್ಲದೆ ಐಕ್ಯಜ್ಞಾನಕ್ಕೆ ಇಲ್ಲಿ ಆಸ್ಪದವೆಲ್ಲಿದೆ? ಅದನ್ನು ಈ ಮೊದಲೇ ತಿಳಿಸಿದ್ದಾಗಿದೆ *

*ಬುದ್ಧಿರಾಜರು ತಮ್ಮ ಗೀತೆಯ ಮೇಲಿನ ಗ್ರಂಥದಲ್ಲಿ "ಮಾತ್ರಾಸ್ಪರ್ಶಾಃ" ಎಂಬುದಕ್ಕೆ ಸಮಾನಾರ್ಥಕ ಬೌದ್ಧ ಗ್ರಂಥಗಳನ್ನು ಉದ್ಧರಿಸಿ ಹೇಳುತ್ತಾರೆ, ಇಲ್ಲಿ ೫ನೇ ಅಧ್ಯಾಯದ

ಮಹದೇವ ದೇಸಾಯಿಯವರು ತಮ್ಮ Gospel of selfless action ದಲ್ಲಿ ಈ ಶ್ಲೋಕದ ಕೆಳಗೆ ಸಮಾನಾರ್ಥಕವಾದ ಶೆಲ್ಲಿಯ ಹಾಯಿಪಿರೀಯನ್ನದೊಳಗಿನ ಮೂರು ಸಾಲುಗಳನ್ನು ಉದಾಹರಿಸಿದ್ದಾರೆ

"To bear all naked Truths
And to envisage circumstance, all clam,
That is the top of Sovereignty".

**यं हि न व्यथयन्त्येते पुरुषं पुरुषर्षभ ।**
**समदु:खसुखं धीरं सोऽमृतत्वाय कल्पते ॥ १५ ॥**

ಪುರುಷ ಶ್ರೇಷ್ಠನಾದ ಅರ್ಜುನನೇ! ಸುಖ-ದುಃಖದಲ್ಲಿ ಸಮನಾಗಿರುವ ಧೀರನಾದ ಯಾವ ಪುರುಷನನ್ನು ಇವು ದುಃಖಕ್ಕೆ ಈಡು ಮಾಡುವದಿಲ್ಲವೋ ಅವನು ಅಮರತ್ವಕ್ಕೆ ಯೋಗ್ಯನಾಗುವನು ॥೧೫॥

**ವಿಶೇಷ ಟಿಪ್ಪಣಿಗಳು :—**

**एते** ಇವು ಎಂದರೆ ವಿಷಯಗಳಿಗೆ ಇಂದ್ರಿಯಗಳಿಂದ ಸಂಬಂಧಗಳು.

**धीर** ಮನಸಿನ ಸ್ಥೈರ್ಯವುಳ್ಳವನು ದುಃಖಕ್ಕೆ ಸಾಕಷ್ಟು ಕಾರಣಗಳಿದ್ದರೂ ಅಭಿಮಾನವನ್ನು ಬಿಟ್ಟು ದುಃಖವನ್ನು ಉಂಟು ಮಾಡಿಕೊಳ್ಳದ ಧೈರ್ಯಶಾಲಿಯು.
**विकारहेतौसति विक्रियंते येषां न चेतांसित एव धीराः** (ಕುಮಾರ ಸಂಭವ).

**समदु:खसुखं** — ಹೇಗೆ ದುಃಖವು ಪುರುಷಾರ್ಥವಲ್ಲದ್ದರಿಂದ ಇಚ್ಛಿಸಲಿಕ್ಕೆ ಯೋಗ್ಯವಲ್ಲವೊ ಅದರಂತೆ ವಿಷಯಾನುಭವದಿಂದ ಪ್ರಾಪ್ತವಾವ ಐಹಿಕ ಸುಖವೂ

---

೨೨ನೇ ಶ್ಲೋಕವನ್ನೂ ಜೋಡಿಸಿಕೊಳ್ಳಬೇಕು. (**येहि संस्पर्शजा भोगादु:खयोनय एव ते**). ಸ್ಪರ್ಶಕ್ಕೆ ಬೌದ್ಧ ಧರ್ಮದಲ್ಲಿ ಫಸ್ಸ ಎನ್ನುತ್ತಾರೆ. ಮಿಲಿಂದನ ಪ್ರಶ್ನೆಗಳಿಂದ ಉದ್ಧೃತವಾಗಿದೆ —"ಫಸ್ಸರ ಅಸಾಧಾರಣ ಲಕ್ಷಣವೇನು? ರಾಜನೇ! ನನಗೆ ಒಂದು ದೃಷ್ಟಾಂತ ವನ್ನು ಕೊಡು" ಎಂದಾಗ "ಎರಡು ಟಗರುಗಳು ಡಿಕ್ಕಿ ಹೊಡೆದಂತೆ ಇದೆ. ಎರಡರಲ್ಲಿ ಕಣ್ಣು ಒಂದು; ಪದಾರ್ಥ ಮತ್ತೊಂದು. ಒಂದಕ್ಕೊಂದರ ಸಂಪರ್ಕವು ಎರಡೂ ಡಿಕ್ಕಿ ಹೊಡೆದ ಹಾಗೆ" ಯಾವಾಗ ವಿಷಯವೂ ಇದೆ ಕಣ್ಣೂ ಇದೆ, ನೋಟ ಸಂಭವಿಸುತ್ತಿದೆ. ನೋಟದಿಂದ ಕಣ್ಣಿನ ದ್ವಾರದಿಂದ ಸಂಪರ್ಕವಾಗುತ್ತದೆ. ಸಂಪರ್ಕದಿಂದ ಅರಿವು, ಅರಿವಿನಿಂದ ಗ್ರಹಣ, ಗ್ರಹಣದಿಂದ ಭಾವ, ಭಾವದಿಂದ ಜನ್ಮ, ಮುಪ್ಪು, ಮರಣ ಮತ್ತು ದುಃಖ ಮೊದಲಾದವು ಹುಟ್ಟುತ್ತವೆ."

"ಒಂದು ಮೂಲದಿಂದ ಮೂರು ಹೂವಿನ ಸಸ್ಯ ಹುಟ್ಟುತ್ತವೆ—"ಕ್ಷಣಿಕತ್ವ, ದುಃಖ, ಅನಾತ್ಮ ಇವು ಮೂರು ಬುದ್ಧನ ಜಗತ್ತನ್ನು ಆಕ್ರಮಿಸಿವೆ" ಎಂದು ಹೇಳುತ್ತಾರೆ.

ಮೋಕ್ಷಕ್ಕೆ ವಿರೋಧಿಯಾದುದರಿಂದ ಇಚ್ಛಿಸಲಿಕ್ಕೆ ಅಯೋಗ್ಯವಾದದ್ದು. ಇಂಥವನೇ ಸಮದುಃಖ ಸುಖನು[1]. ಇದು ಸ್ವಲ್ಪ ಎತ್ತರದ ಸ್ಥಿತಿ ಆದರೆ ಅಭಿಮಾನವನ್ನು ಬಿಡುವದು ಇದಕ್ಕೂ ಎತ್ತರದ ಸ್ಥಿತಿಯು ತನಗೆ ಮಿತ್ರರು ಯಾರೂ ಇಲ್ಲ, ದ್ವೇಷಿಗಳು ಯಾರೂ ಇಲ್ಲ ಮನೋವಿಕಾರಗಳಿಗೆ ತುತ್ತಾಗದೆ ಮನಸನ್ನು ಶಾಂತ ಸ್ಥಿತಿಯಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ. ಆದುದರಿಂದ ಅವನು ಸಿತ ಪ್ರಜ್ಞನಂತೆ ಇರಬೇಕಾಗುತ್ತದೆ[2]

---

[1]Earnest wood ın 'the Bhagavad Glta Explaıned' says, "Sımılar" ın reference to rhe paır of opposıtes (ın thıs verse) in the fieled of sensatıons ıs extremes that tıouble us So to avoıd 'the paırs of opposıtes' does not mean to avoıd the whole world————but to avoıd the extremes.

——– Both extremes of cold and heat trouble us and the mıddle range of both are comfortable As we move away from that mıddle range ıt ıs dangerous and fatal " "ಸಮಾನ ಅಥವಾ ಸದೃಶ' ಎಂಬುದು ಈ ದ್ವಂದ್ವಗಳ ಸಂಬಂಧದಲ್ಲಿ ಅನಿಸಿಕೆಗಳಿಗೆ ಸಂಬಂಧಪಟ್ಟಾಗ 'ಅತಿಶಯಿತ ತುದಿ' (ಯಾವದು ನಮಗೆ ತೊಂದರೆ ಕೊಡುತ್ತದೆ) ಎನಿಸುತ್ತದೆ. 'ದ್ವಂದ್ವಗಳನ್ನು ತಪ್ಪಿಸಿಕೊಳ್ಳುವದು' ಎಂದರೆ ಇಡೀ ಜಗತ್ತನ್ನು ಬಿಟ್ಟು ಓಡುವದಲ್ಲ, ಆದರೆ ಅವುಗಳ ಅತಿಶಯಿತತೆಗಳನ್ನು ತಪ್ಪಿಸಿಕೊಳ್ಳುವದು ಶೀತ ಉಷ್ಣಗಳ ಅತಿಶಯಿತೆಗಳು ನಮಗೆ ಹಿಂಸೆ ಕೊಡುತ್ತವೆ. ಎರಡೂದರ ಮಧ್ಯಭಾಗವು ಸುಖದಾಯಕವಿರುತ್ತದೆ ಈ ಮಧ್ಯ ಭಾಗದಿಂದ ಮುಂದೆ ಮುಂದೆ ಹೋದಂತೆ ಹಿಂಸೆ ಪ್ರಾರಂಭಿಸುತ್ತದೆ ಮತ್ತು ಮರಣದಾಯಕವೂ ಆಗುತ್ತದೆ "

[2]ಅದೇ woodರೇ ಹೇಳುತ್ತಾರೆ There are five stages of enjoyment. These are bodıly, emotıonal mental, moral or ethıcal, and spırıtual. We may represent the relatıvc proportıons of these interests ın the consciousness of an average elementary man by an up rıght cone thus.



**ಪುರುಷಂ —** ಅಭಿಮಾನ ರಹಿತನಾದ ಜೀವನು. ಅವನು ಸ್ತ್ರೀ ಇರಬಹುದು ಅಥವಾ ಪುರುಷನಿರಬಹುದು. ಯಾವನು ನಿದ್ರೆಯಲ್ಲಿ ಅಥವಾ ಮೂರ್ಛೆಯಲ್ಲಿ ಇಲ್ಲ ಅಂಥವನು. ಇಂದ್ರಿಯಗಳನ್ನು ಆಕರ್ಷಿಸುವ ವಿಷಯಗಳ ಮಧ್ಯದಲ್ಲಿದ್ದರೂ ಅವುಗಳಿಂದ ಬಾಧಿತನಾಗದವನು ಅವನು ಮುಕ್ತಿಗೆ ಅರ್ಹನು. ಆದರೆ ಮುಕ್ತಿಗೆ ಅರ್ಹನಾಗಲಿಕ್ಕೆ ಜ್ಞಾನ ಬೇಕಾಗುತ್ತದೆ **(तमेवं विद्वान् अमृत इह भवति)** ಆದುದರಿಂದ ಪುರುಷನೆಂದರೆ 'ಪೂರ್ಣವನ್ನು ತಿಳಿದವನು' ಎಂದೂ ಅರ್ಥ ವಾಗುತ್ತದೆ.

**ಅಮೃತತ್ವ —** ಇದು ಗಮ್ಯವು. ಇಷ್ಟಾನಿಷ್ಟಗಳ ಪರಿತ್ಯಾಗವೇ ಸಾಧನ. ರಾಗದ್ವೇಷಗಳು ನಮ್ಮನ್ನು ಬಂಧನದಲ್ಲಿಟ್ಟಿವೆ. ಇವುಗಳಿಂದ ಮುಕ್ತರಾದವರು ಮುಕ್ತರು

**ಪುರುಷರ್ಷಭ—** ಆದರೆ ಅರ್ಜುನನು ಪುರುಷ ಶ್ರೇಷ್ಠನಾಗಲಿಕ್ಕೆ ಅರ್ಹನಿಲ್ಲವೆಂದು ರಾಮಾನುಜಾಚಾರ್ಯರ ಮತ. ಆದುದರಿಂದ ಈ ಶಬ್ದವನ್ನು ಅಣಕು ಅರ್ಥವಲ್ಲಿ ಎಂದರೆ ವಿಪರೀತ ಅರ್ಥದಲ್ಲಿ ಉಪಯೋಗಿಸಿದ್ದಾರೆಂದು ತಿಳಿಯುತ್ತಾರೆ. **(त्वादृशोऽतु ख असहिष्णुः)**·

ಈ ಶ್ಲೋಕದ ತಾತ್ಪರ್ಯವು— ಹಿಂದಿನ ಶ್ಲೋಕದಲ್ಲಿ ಅಭಿಮಾನ ಬಿಟ್ಟು ದುಃಖವನ್ನು ಸಹಿಸಿಕೊಳ್ಳಲಿಕ್ಕೆ ಹೇಳಿದ್ದಾಯಿತು. ಅದರ ಮೇಲೆ ಯುದ್ಧದಲ್ಲಿ ಆಸಕ್ತನಾಗಿ ಅದರಿಂದ ಭಿನ್ನ ಭಿನ್ನರಾದ ದ್ರೋಣಾದಿಗಳನ್ನು ನೋಡಿ ಆದ ದುಃಖ ವನ್ನು ಅಭಿಮಾನ ಬಿಟ್ಟು ಸಹಿಸುವದರಕಿಂತ ಯುದ್ಧವನ್ನೇ ಮಾಡದಿರುವದು ಒಳ್ಳೆದಲ್ಲವೇ **प्रक्षालनाद्धि पंकस्य दूरादस्पर्शनं वरं** ಕೆಸರನ್ನು ತುಳಿದು ಕಾಲು ತೊಳೆದುಕೊಳ್ಳುವದರಕಿಂತ ಕೆಸರನ್ನು ತುಳಿಯದೇ ಇರುವದು ಬುದ್ಧಿವಂತಿಕೆಯು ಎಂಬ ಆಕ್ಷೇಪಕ್ಕೆ ಈ ಶ್ಲೋಕದಿಂದ ಉತ್ತರ ಕೊಡುತ್ತಾರೆ. ತಮ್ಮ ತಮ್ಮ

---

In the course of our lives our consciousness slides up and down but in each person there is a level where it most often or habitually dwells.

" ಅನುಭವದ ಐದು ಮೆಟ್ಟಿಲುಗಳು ಇವೆ ಅವು ಶಾರೀರಿಕ, ಭಾವನಾತ್ಮಕ, ಬೌದ್ಧಿಕ, ನೈತಿಕ ಮತ್ತು ಆಧ್ಯಾತ್ಮಿಕ ಒಬ್ಬ ಸಾಮಾನ್ಯ ಮನುಷ್ಯನ ಅರುವಿನಲ್ಲಿರುವ ತುಲನಾತ್ಮಕ ಆಸಕ್ತಿಗಳ ಪಟ್ಟಿಯನ್ನು ಮಾಡಿದರೆ ಅದು ಒಂದು ಸಮಭುಜ ತ್ರಿಕೋನದ ಆಕಾರದಲ್ಲಿ ಬರಬಹುದು ನಮ್ಮ ಜೀವನದ ಕ್ರಮದಲ್ಲಿ ನಮ್ಮ ಅರಿವು ಅಥವಾ ಪ್ರಜ್ಞೆ ಮೇಲೆ ಕೆಳಗೆ ಸರಿದರೂ ಬಹಳ ಸಾರೆ ಅದು ತನ್ನ ಒಂದು ರೂಢಿಯ ಮೆಟ್ಟಿಲಿಗೆ ನಿಲ್ಲುತ್ತದೆ.

ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮಗಳನ್ನು ಮಾಡತಕ್ಕ ಕಾಲದಲ್ಲಿ ದುಃಖಕ್ಕೆ ಕಾರಣಗಳು ಉಂಟಾದರೆ ಅವುಗಳನ್ನು ಅಭಿಮಾನ ಬಿಟ್ಟು ಸಹಿಸಿಕೊಂಡು ಪರಮಾತ್ಮನಿಗೆ ಅರ್ಪಿಸಬೇಕು ಎಂದರೆ ಮೋಕ್ಷವು ತಪ್ಪದೇ ದೊರೆಯುತ್ತಿದೆ ಅರ್ಜುನನು ಕ್ಷತ್ರಿಯನಾದುದರಿಂದ ಅವನು ಯುದ್ಧ ಮಾಡಲೇಬೇಕು ಆ ಯುದ್ಧದಿಂದ ದ್ರೋಣ–ಭೀಷ್ಮರು ಛಿನ್ನಭಿನ್ನರಾದರೆ ಅದರಿಂದ ಆದ ದುಃಖವನ್ನು ಸಹಿಸಿಕೊಂಡು ಜ್ಞಾನದ ದ್ವಾರದಿಂದ ಮೋಕ್ಷವನ್ನು ಹೊಂದಬೇಕು ಎಂದು ಭಗವಂತನ ಉಪದೇಶದ ತಾತ್ಪರ್ಯವು

ಲೋಕಮಾನ್ಯರು ತಮ್ಮ ಗೀತಾರಹಸ್ಯದಲ್ಲಿ ಈ ಶ್ಲೋಕಕ್ಕೆ ಟಿಪ್ಪಣಿ ಬರೆಯುವಾಗ "ಯಾವ ಪುರುಷನಿಗೆ ಬ್ರಹ್ಮಾತ್ಮೈಕ್ಯ ಜ್ಞಾನವಾದ ಮೇಲೆ ಈ ನಾಮರೂಪಾತ್ಮಕ ಜಗತ್ತು ಸುಳ್ಳು ಎಂದು ಅನಿಸುವದಿಲ್ಲವೋ ಅವನು ಬಾಹ್ಯವಿಷಯುಗಳಿಗೂ ಇಂದ್ರಿಯಕ್ಕೂ ಸಂಯೋಗವಾಗುವದರಿಂದ ಉಂಟಾದ ಶೀತೋಷ್ಣ ಅಥವಾ ಸುಖ–ದುಃಖವನ್ನು ಸತ್ಯವೆಂದು ಭಾವಿಸಿ ಅದನ್ನು ಆತ್ಮನಲ್ಲಿ ಆರೋಪಿಸುತ್ತಾನೆ. ಅದರಿಂದ ಅವನಿಗೆ ದುಃಖವಾಗುತ್ತದೆ. ಅದನ್ನು ಈಗ ಸಮಬುದ್ಧಿಯಿಂದ ಸಹಿಸು ಎಂದು ಅರ್ಜುನನಿಗೆ ಹೇಳುತ್ತಾನೆ" ಎಂದು ಸಂಗತಿಯನ್ನು ಹಚ್ಚಿದ್ದಾರೆ ಹಿಂದೆ ಎಲ್ಲಿಯೂ ಈ ಅದ್ವೈತ ವಾದಕ್ಕೆ ಪ್ರಸಕ್ತಿಯಿಲ್ಲದೆ ಅದನ್ನು ಜೋಡಿಸಿ ಅದ್ವೈತದಲ್ಲಿ ತಮ್ಮ ಪಕ್ಷಪಾತವನ್ನು ತೋರಿಸಿದ್ದಾರೆ ಇದೂ ಅವರ 'ಓಢಾತಾಣದ' ಉದಾಹರಣೆಯಾಗಬಹುದಲ್ಲವೇ ?

ಜಯತೀರ್ಥರು ತಮ್ಮ ಪ್ರದೀಪದಲ್ಲಿ ಹೀಗೆ ಹೇಳುತ್ತಾರೆ— **यं पुरुषं नव्यथयंति.** ಯಾವ ಪುರುಷನಿಗೆ ದುಃಖ ಕೊಡುವದಿಲ್ಲವೊ ಅವನಿಗೆ ಮುಕ್ತಿಯಾಗುತ್ತದೆಂದು ಹೇಳಿದ್ದಾರೆ. ಪುರಷನಿಗೆ ಎಂದರೆ **पुरिशय** ಎಂದು ಅರ್ಥ ಶರೀರ ಸಂಬಂಧವುಳ್ಳವನು ಎಂದರೆ ಜಾಗ್ರದಾವಸ್ಥೆಯಲ್ಲಿ ಇದ್ದವನು. ಯಾಕೆಂದರೆ ಗಾಢನಿದ್ರೆಯಲ್ಲಿ ಎಲ್ಲ ಅಜ್ಞರಿಗೂ ಸಹ ಅಭಿಮಾನ ತ್ಯಾಗ ಮಾಡಿರುವದರಿಂದ ದುಃಖವಾಗದ್ದರಿಂದ ಅವರಿಗೂ ಮೋಕ್ಷವಾಗಬೇಕಾದೀತು." ಎಚ್ಚತ್ತು ಬುದ್ಧಿಪೂರ್ವಕವಾಗಿ ದುಃಖದ ಕಾರಣಗಳನ್ನು ಅಭಿಮಾನತ್ಯಾಗಪೂರ್ವಕವಾಗಿ ಸಹಿಸುತ್ತಾನೆ. ಅವನಿಗೆ ಅಮೃತತ್ವ ದೊರೆಯುತ್ತದೆಂದು ಅವರ ಹೇಳುತ್ತಾರೆ.

ಇದೇ ಕಾರಣದಿಂದ ರಾಘವೇಂದ್ರರು ತಮ್ಮ ವಿವೃತಿಯಲ್ಲಿ **पुरुष** ಶಬ್ದಕ್ಕೆ ಎರಡು ವ್ಯುತ್ಪತ್ತಿಗಳನ್ನು ತೋರಿಸಿದ್ದಾರೆ,—

१) **पुरं देहं सरतिगच्छति प्रत्यक्षतः जानाति** ಸಾಕ್ಷಾತ್ತಾಗಿ ದೇಹವನು ತಿಳಿಯುತ್ತಾನೆ

२) **यद्वा पुरुपूर्णं ब्रह्म तत् सरति अवगच्छति इति ब्रह्मज्ञानी.** ಪೂರ್ಣ ಬ್ರಹ್ಮನನ್ನು ಯಾವನು ತಿಳಿಯುತ್ತಾನೆ ಅವನು ಪುರುಷನು; ಅವನು ಮೋಕ್ಷವನ್ನು ಹೊಂದುತ್ತಾನೆ. **पुरुब्रह्मगुणाधिक्यात् तज्ज्ञानात् पुरुषः स्मृतः**

Swami Chidbhavananda corroborates this derivation "The indweller in the puri —— in the body looked upon as a city is called Purusha Pleasure and pain occur inevitably in the body because of the contact of the senses with their objects He who identifies himself with the body is bound to be grieved. But his mind does not waver who gets fixed in the self"

ಪ್ರಭುಪಾದರು ಈ ಶ್ಲೋಕದ ಅರ್ಥವನ್ನು ಸನ್ಯಾಸಕ್ಕೆ ಅನ್ವಯಿಸುತ್ತಾರೆ. "ಯಾವನು ತನ್ನ ಜೀವನವನ್ನು ಪೂರ್ಣಗೊಳಿಸಲಿಕ್ಕೆ ಆತುರನಾಗಿದ್ದಾನೆ. ಅವನು ಸನ್ಯಾಸವನ್ನು ಸ್ವೀಕರಿಸುತ್ತಾನೆ. ಬಂಧು-ಬಾಂಧವರ ಸಂಬಂಧ ಕಡಿದುಕೊಳ್ಳಬೇಕಾದುದರಿಂದ ಪ್ರಸಂಗವು ವ್ಯಥೆಯನ್ನುಂಟು ಮಾಡುತ್ತದೆ. ಹೆಂಡರು-ಮಕ್ಕಳನ್ನು ಅಗಲಬೇಕಾಗುತ್ತದೆ. ಈ ವ್ಯಥೆಯನ್ನು ಸಹಿಸಲಿಕ್ಕೆ ಸಮರ್ಥನಾದವನು ಸನ್ಯಾಸದ ದಾರಿಯನ್ನು ಸುಗಮವಾಗಿ ಕಾಣುತ್ತಾನೆ ಹಾಗೆಯೇ ಕ್ಷತ್ರಿಯನಾದ ಅರ್ಜುನನಿಗೆ ಸ್ವಕರ್ತವ್ಯ ನಿರ್ವಾಹದಲ್ಲಿ ಬಂಧು-ಬಾಂಧವರನ್ನು ಕೊಲ್ಲಬೇಕಾದರೂ ವ್ಯಥೆಬಡುವ ಕಾರಣವಿಲ್ಲ ಚೈತನ್ಯರು ೨೪ನೇ ವರ್ಷಕ್ಕೆ ಚಿಕ್ಕ ಹೆಂಡತಿ, ಮುದಿ ತಾಯಿಯನ್ನು ಬಿಟ್ಟು ಸನ್ಯಾಸ ಸ್ವೀಕರಿಸಿದರು. ಮಹತ್ತರವಾದ ಕಾರ್ಯಕ್ಕಾಗಿ ಸನ್ಯಾಸಿಯಾದರು. ಆ ನಿಷ್ಠೆಯಲ್ಲಿ ದೃಢವಾಗಿ ಸಾಗಿದರು" ಇವರ ಹಾಗೆ ಶಂಕರಾಚಾರ್ಯರು, ರಾಮಾನುಜರು, ಮಧ್ವರು ಸನ್ಯಾಸ ಸ್ವೀಕರಿಸಿ ಬಂಧು-ಬಾಂಧವರ ನಿಮಿತ್ತವಾಗಿ ಬಂದ ವ್ಯಥೆಯನ್ನು ಸಹಿಸಿದರು.

ಶ್ರೀಕೃಷ್ಣನು ಕರ್ಮಯೋಗವನ್ನು ಉಪದೇಶಿಸಿದರೂ ತುರೀಯಾಶ್ರಮವಾದ ಸನ್ಯಾಸವನ್ನು ನಿಂದಿಸಿಲ್ಲ. ವಿರಕ್ತರಾದವರು ಸನ್ಯಾಸವನ್ನು ಸ್ವೀಕರಿಸಿ ಸ್ವಾಶ್ರಮ ವಿಹಿತನಾದ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೇ ಆಚರಿಸಿ ಅದನ್ನು ಪರಮಾತ್ಮನಿಗೆ ಅರ್ಪಿಸುವದೇ ಕರ್ಮಯೋಗ **यं सन्यासमिति प्राहुः योगं तं विद्धिपांडव.** (६-२).

**नासतो विद्यते भावो ना भावो विद्यते सतः ।**
**उभयोरपि दृष्टोंतस्तनयोस्तत्वदर्शिभिः ॥ १६ ॥**

ಅಸಾಧುವಾದ (ದುಷ್ಟವಾದ) ಕರ್ಮಗಳಿಂದ ಸುಖವು ಇಲ್ಲ. ಸಾಧುವಾದ (ಶಾಸ್ತ್ರವಿಹಿತವಾದ) ಕರ್ಮಗಳಿಂದ ನಾಶವು (ದುಃಖವು) ಇಲ್ಲ ತತ್ವಜ್ಞಾನಿಗಳಿಂದ ಈ ಎರಡೂ ವಿಷಯಗಳ ನಿರ್ಣಯವು ತಿಳಿಯಲ್ಪಟ್ಟಿದೆ.

**ವಿಶೇಷ ಟಿಪ್ಪಣಿಗಳು :**

ಈ ಅರ್ಥವನ್ನು ಮಧ್ವಾಚಾರ್ಯರು ಗೀತಾ ತಾತ್ಪರ್ಯದಲ್ಲಿ ಹೇಳಿದ್ದಾರೆ ಆದರೆ ಭಾಷ್ಯದಲ್ಲಿ ಇನ್ನೊಂದು ಅರ್ಥವನ್ನು ಹೇಳಿದ್ದಾರೆ.— "**असत:** ಎಂದರೆ ಅವ್ಯಕ್ತವಾದ ಮೂಲ ಪ್ರಕೃತಿಗೆ, ಅಭಾವ ಎಂದರೆ ಅದು ಹುಟ್ಟುವ ಮೊದಲಿರುವ ಅಭಾವ (ಪ್ರಾಗಭಾವ ಪ್ರಧ್ವಂಸಗಳು) ಇರುವದಿಲ್ಲ. **सत:** ಎಂದರೆ ಬ್ರಹ್ಮನಿಗೂ ಅಭಾವವು (ಪ್ರಾಗಭಾವ ಪ್ರಧ್ವಂಸಗಳು) ಇರುವದಿಲ್ಲ ಇವೆರಡರ ನಿರ್ಣಯವನ್ನು ತತ್ವಜ್ಞಾನಿಗಳು ಕಂಡುಹಿಡಿದಿದ್ದಾರೆ.*

ಈ ಎರಡು ಅರ್ಥಗಳಿಗೂ ಬೇರೆ ಬೇರೆ ಸಂಗತಿಗಳನ್ನು ಕಲ್ಪಿಸಲಾಗಿದೆ. ೧) ಭೀಷ್ಮ–ದ್ರೋಣಾದಿಗಳ ಸಂಹಾರದಿಂದ ಕುಲಧರ್ಮಾದಿಗಳು ನಾಶವಾಗುವವು. ಅದರಿಂದ ಅತ್ಯಂತ ದುಃಖವಾಗುತ್ತದೆಂದರೆ– ಹೇಗೆ ಶಾಸ್ತ್ರಕ್ಕೆ ವಿರುದ್ಧವಾದ ಕರ್ಮಗಳಿಂದ ದುಃಖ ತಪ್ಪುವದಿಲ್ಲವೋ ಹಾಗೆ ಶಾಸ್ತ್ರವಿಹಿತವಾದ ಕರ್ಮಗಳಿಂದ ಸುಖವು ತಪ್ಪುವದಿಲ್ಲ. ಯುದ್ಧವೆಂಬ ಕರ್ಮವು ಕ್ಷತ್ರಿಯನಿಗೆ ಸತ್ಕರ್ಮವಾಗಿದೆ. ಆದುದರಿಂದ ಇದರಿಂದ ಪಾಪವೂ ದುಃಖವೂ ಬರುವದಿಲ್ಲೆಂದು ಕೃಷ್ಣನು ಉಪದೇಶಿಸುತ್ತಾನೆ. ೨) ಆತ್ಮನು ನಿತ್ಯನೆಂದು ಹೇಳಿದ್ದಾಯಿತು. ಅದೊಂದೇ ನಿತ್ಯ ಪದಾರ್ಥವೋ ಅಥವಾ ಬೇರೆ ನಿತ್ಯ ಪದಾರ್ಥಗಳು ಇವೆಯೋ ಎಂಬ ಪ್ರಶ್ನೆಗೆ ಉತ್ತರ ಇಲ್ಲಿ ಇದೆ. ಆತ್ಮನ ಜೊತೆಗೆ ಮೂಲ ಪ್ರಕೃತಿಯೂ ನಿತ್ಯ ಪದಾರ್ಥವದೆ ಎಂದು ಹೇಳುತ್ತಾರೆ.

---

*Wood ರು ಹೇಳುತ್ತಾರೆ— "So the unmainfest is not to be thought of as nothing. It has an unmanifest existence of its own. In the spread out world we see nothing but reality, but not the whole of it. In modern terms we are aware of only relative or partial truth" "ಅವ್ಯಕ್ತವಾದದ್ದು ಈ ಜಗತ್ತಿನಲ್ಲಿ ಇಲ್ಲವೆಂದು ತಿಳಿಯಬಾರದು. ಅದಕ್ಕೆ ತನ್ನದೇ ಆದ ಅವ್ಯಕ್ತವಾದ ಸತ್ತೆಯು ಇದೆ. ಈ ವಿಸ್ತಾರವಾದ ಪ್ರಪಂಚದಲ್ಲಿ ನಾವು ತತ್ವದ ಹೊರತು ಬೇರೆ ಏನನ್ನೂ ಕಾಣುವದಿಲ್ಲ. ಆದರೆ ನಾವು ಪೂರ್ಣತತ್ವವನ್ನು ಕಾಣಲಾರೆವು. ಆಧುನಿಕ ಶಬ್ದಗಳಲ್ಲಿ ಹೇಳಬೇಕೆಂದರೆ ನಮಗೆ ಸಾಪೇಕ್ಷ ಅಥವಾ ಅಂಶತಃ ಸತ್ಯ ಗೋಚರವಾಗುತ್ತದೆ.

ಈ ಶ್ಲೋಕವು ಗೂಢ ಶ್ಲೋಕ (riddle) ವೆಂದು ಕರೆಯಲ್ಪಡುತ್ತದೆ ಡಾ. ಖೈರರವರು ತಮ್ಮ **मूळ गीतेचाशोध** ಯೆಂಬ ಮರಾಠಿಯಲ್ಲಿ ಬರೆದ ಪುಸ್ತಕದಲ್ಲಿ ಗೀತೆಯು ಮೂರು ಬೇರೆ ಬೇರೆ ಕಾಲಗಳಲ್ಲಿ ಮೂರು ಬೇರೆ ಲೇಖಕರಿಂದ ಬರೆಯಲ್ಪಟ್ಟಿದೆ ಎಂದು ಪ್ರತಿಪಾದಿಸುತ್ತಾರೆ. **तथा देहांतर प्राप्तिः** ( ೨–೧೩ ) ಎಂಬ ಶ್ಲೋಕವನ್ನು ವಿಷಯ ಸಾಮ್ಯದಿಂದ ಒಮ್ಮಲೆ ನಾಲ್ಕು ಶ್ಲೋಕಗಳನ್ನು ಬಿಟ್ಟು **अंतवंतइमेदेहाः** ( ೨–೧೮ ) ದೊಡನೆ ಕೂಡಿಸುತ್ತಾರೆ ಮಧ್ಯದಲ್ಲಿ ಬಿಟ್ಟ ನಾಲ್ಕು ಶ್ಲೋಕಗಳಲ್ಲಿ ಈ ಶ್ಲೋಕವು ಒಂದಾಗಿದೆ. ಈ ಶ್ಲೋಕವು ಮೂರನೇ ಇತ್ತೀಚಿನ ಗ್ರಂಥಕಾರನದೆಂದು ಹೇಳುತ್ತಾರೆ ಅದಕ್ಕೆ ಭಾಷೆ, ಬರಹದ ರೀತಿ, ತಾತ್ವಿಕ ವಿವೇಚನೆ, ಶಬ್ದಯೋಜನೆ ಮೊದಲಾದ ಅನೇಕ ಕಾರಣಗಳನ್ನು ತೋರಿಸುತ್ತಾರೆ ಒಟ್ಟಾರೆ ಮೂರನೇ ಗ್ರಂಥಕಾರನು ರಚಿಸಿದ ಶ್ಲೋಕಗಳು ಕ್ಲಿಷ್ಟ ಶ್ಲೋಕಗಳೆಂದು ಅವರ ಮತ.*

---

* ಶ್ರೀಮುತ ಸಾತವಳೇಕರರು "ವೇದ ಉಪನಿಷತ್ತು ಮತ್ತು ಗೀತೆ– ಇವೆಲ್ಲ ಒಂದೇ ತಾತ್ಪರ್ಯವುಳ್ಳವು ಆದುದರಿಂದ ಗೀತೆಯ ಅರ್ಥವನ್ನು ವೇದ–ಉಪನಿಷತ್ತುಗಳ ಸಹಾಯದಿಂದ ಮಾಡಬೇಕು. ಹೀಗೆ ಗೀತೆಯ ಅರ್ಥವನ್ನು ವಿಶದವಾಗಿ ಇವುಗಳ ಸಹಾಯದಿಂದ ಇಲ್ಲಿಯವರೆಗೆ ಯಾರೂ ಮಾಡಿಲ್ಲ, ನಾನು ಮಾತ್ರ ನನ್ನ 'ಪುರುಷಾರ್ಥ ಬೋಧಿನಿ'ಯಲ್ಲಿ ಆ ರೀತಿಯಾಗಿ ಮಾಡಿದ್ದೇನೆ" ಎಂದು ಪ್ರತಿಜ್ಞಾಪೂರ್ವಕವಾಗಿ ಹೇಳಿದ್ದಾರೆ. ಈ ಶ್ಲೋಕದ ಮೇಲೆ ಅವರು ಬರೆದ ಅರ್ಥವನ್ನು ನೋಡೋಣ. "ಯಾವದು ಸತ್ಯವದೆ ಅದನ್ನು ಅಸತ್ಯ ಮಾಡುವದು ಅಸಂಭವನೀಯ ಹಾಗೆಯೇ ಅಸತ್ಯವಿದ್ದುದರಿಂದ ಸತ್ಯವನ್ನು ತಯಾರಿಸುವದೂ ಅಸಾಧ್ಯ ಜನರು ಈ ಲೋಕದ ವ್ಯವಹಾರದಲ್ಲಿ ಸತ್ಯವನ್ನು ಅಸತ್ಯವೆಂದೂ ಅಸತ್ಯವನ್ನು ಸತ್ಯವೆಂದೂ ತೋರಿಸಲಿಕ್ಕೆ ಯತ್ನಿಸುತ್ತಾರೆ. ಆದರೆ **सत्यमेवजयतेनानृतं** ಸತ್ಯ ಜಯಿಸುತ್ತದೆ ಏಕೆಂದರೆ ಸತ್ಯವೇ ಬಾಳುತ್ತದೆ ಸುಳ್ಳು ಅಲ್ಲ"

ಆ ಮೇಲೆ ಸತ್ ಮತ್ತು ಅಸತ್ತುಗಳ ಅರ್ಥದ ವಿಚಾರ ಮಾಡುತ್ತಾರೆ— **सत्** ಇದು ಮೂರು ಕಾಲದಲ್ಲಿ ಒಂದೇ ಸವನೆ ಇರುತ್ತದೆ **असत्** ಇದು ಕಿಂಚಿತ್‌ಕಾಲ ಭಾಸಮಾನವಾಗಿ ತೋರುತ್ತದೆ" ಎಂದು ಹೇಳಿ— "ಮುಂದೆ **असत्** ಎಂದರೆ ಯಾವದರ ಸತ್ತೆಯು ಒಂದೇ ಸವನೇ ಉಳಿಯುವದಿಲ್ಲ, ಎಂದರೆ ಮೊದಲು ಹೇಳಿದ **सत्** ದಿಂದ ಭಿನ್ನವಾದುದು. ಜಗತ್ತಿನಲ್ಲಿ ಒಂದು **सत्**, ಇನ್ನೊಂದು **असत्** ಎರಡೇ ಪದಾರ್ಥಗಳು. — ಈ ವಿಷಯದ ಸಿದ್ಧಾಂತವನ್ನು ತತ್ವದರ್ಶಿಗಳು ಕಂಡಿದ್ದಾರೆ

ಯಾವದು **सत्** ಅದೆ ಅದರ ಅಸ್ತಿತ್ವವು ಕಾಲಾಂತರದಲ್ಲಿ ಸಹ ಅದರ ಅಭಾವವು ಶಕ್ಯವಿಲ್ಲ ಮತ್ತು **असत्** ಎಂದರೆ ಯಾವದಕ್ಕೆ ಅಸ್ತಿತ್ವವಿಲ್ಲ ಅದಕ್ಕೆ ಎಂದೂ **भाव** (ಅಸ್ತಿತ್ವವು) ಆಗುವದು ಶಕ್ಯವಿಲ್ಲ ಈ ಅಚಲ ಸಿದ್ಧಾಂತವನ್ನು ತತ್ವಜ್ಞಾನಿಗಳು ನಿಶ್ಚಯಿಸಿದ್ದಾರೆ.

ಈ ಶ್ಲೋಕವನ್ನು ಯಾರು ಯಾರು ಯಾವ ರೀತಿಯಿಂದ ಅನ್ವಯಿಸಿದ್ದಾರೆ ನೋಡೋಣ ಸಾಂಪ್ರದಾಯಿಕವಾಗಿ ಶಂಕರಾಚಾರ್ಯರು ಹೀಗೆ ಹೇಳುತ್ತಾರೆ— ಈ ಕಾರಣಕ್ಕಾದರೂ ಶೋಕ-ಮೋಹಾದಿಗಳನ್ನು ಬಿಟ್ಟು ಶೀತೋಷ್ಣಗಳನ್ನು ಸಹಿಸುವದೇ ಯುಕ್ತವಾದದ್ದು. ಯಾಕೆಂದರೆ ಕಾರಣದಿಂದ ಹುಟ್ಟುವ ಶೀತೋಷ್ಣಗಳು ವಿಕಾರಿಗಳಾದುದರಿಂದ ಕಾರಣವನ್ನು ಬಿಟ್ಟು ಕಾರ್ಯವು ಇಲ್ಲದಿರುದಿರುವದರಿಂದ ಅವು ಅಸತ್ತುಗಳು ಯಾಕೆಂದರೆ ಹುಟ್ಟುವ ಮೊದಲು, ಸತ್ತಮೇಲೆ ಅವು ಅಸ್ತಿತ್ವದಲ್ಲಿ ದೊರೆಯುವದಿಲ್ಲ. ಎಲ್ಲ ನಾಮರೂಪಗಳು ಕಾರ್ಯಗಳು. ಕಾರ್ಯ

(೧೦೬ನೇ ಪುಟ ನೋಡಿರಿ)

---

೧೭ರಲ್ಲಿ ಈ ಜಗತ್ತನ್ನು ನಿರ್ಮಿಸುವವನು ಅವಿನಾಶಿಯು ಯಾಕೆಂದರೆ ಜಗತ್ತು ನಾಶವಾದರೂ ಅವನು ಇದ್ದೇ ಇರುತ್ತಾನೆ ಜಗತ್ತು ಇದು ಭೂತಕಾಲದಲ್ಲಿ ಇದ್ದಿಲ್ಲ ಆದುದರಿಂದ ಅದರ ಅಸ್ತಿತ್ವವು ಚಂಚಲವಿರುತ್ತದೆ. ಜಗತ್ತಿನೊಳಗಿನ ಪ್ರತ್ಯೇಕ ಪದಾರ್ಥ ತಯಾರಾಗುತ್ತದೆ ಆ ಮೇಲೆ ಕಾಲಾಂತರದಲ್ಲಿ ನಾಶ ಹೊಂದುತ್ತದೆ. ಆದುದರಿಂದ ಜಗತ್ತಿಗೆ **असत्** ಎನ್ನುತ್ತಾರೆ. ಇಂಥ ಪದಾರ್ಥಗಳ ಸಮೂಹರೂಪವಾದ ಜಗತ್ತೂ ಇದರ ಹಾಗೆ ಹುಟ್ಟುತ್ತದೆ, ಸಾಯುತ್ತದೆ ಆದರೆ ಅದರ ಕರ್ತಾ ಮಾತ್ರ ಉಳಿಯುತ್ತಾನೆ. ಆದುದರಿಂದ ಅವನು **सत्.** ಆದರೆ ಕರ್ತಾ ಉಳಿಯುವನೋ ಇಲ್ಲೋ ಸಂಶಯ ಬರುತ್ತದೆ.

**सूर्याचंद्रमसौधाता यथापूर्वमकल्पयत् । दिवंचपृथिवीः चांतरिक्ष-मथोस्वः (ऋ – १०–१९०–२)**

ಅರ್ಥಾತ್ ಈ ಸೃಷ್ಟಿಯು ಬಹಳ ಸಾರೆ ಹುಟ್ಟಿಸಲ್ಪಟ್ಟಿದೆ ಮತ್ತು ಮೊದಲಿನ ಹಾಗೆ ಹುಟ್ಟಿಸಲ್ಪಟ್ಟಿದೆ .ಇವು ಪರಮಾತ್ಮನ ಗುಣಗಳು, ಪರಮಾತ್ಮನಂತೆ ಪರಮಾತ್ಮನ ಗುಣಗಳೂ ಸದಾಕಾಲ ಒಂದೇಸವನೆ ಇರುತ್ತವೆ ಪರಮಾತ್ಮನ ಗುಣವಾದುದರಿಂದ ಈ ಸೃಷ್ಟಿಯು ಪೂರ್ಣವಿರುತ್ತದೆ ಪೂರ್ಣ ಪರಮಾತ್ಮನ ಕೃತಿಯೂಪೂರ್ಣ ( **पूर्णमदः पूर्णमिदं – उ. शांति**).

**पूर्णात् पूर्णमुदंचति पूर्णं पूर्णेनसिच्यते । अथोतदस्यविद्मामयतः तत्परिषिच्यते । अथर्व १०–८–१९**

ಪೂರ್ಣದಿಂದ ಪೂರ್ಣ ಉದಯವಾಗುತ್ತದೆ ಪೂರ್ಣಕ್ಕೆ ಪೂರ್ಣದಿಂದ ಜೀವನ ಸಾಗುತ್ತದೆ, ಈ ಮಂತ್ರದಲ್ಲಿ ಜಗತ್‌ನಿರ್ಮಾಣ ಮಾಡುವವನು ಪೂರ್ಣನಿದ್ದಾನೆಂದು ಈ ಮಂತ್ರದಿಂದ ತಿಳಿಯುತ್ತಿದೆ. ಆದುದರಿಂದ ಜಗದ್ರೂಪ ಕೃತಿಯು ಸಹ ಪೂರ್ಣವಿರುತ್ತದೆ ಈ ಪೂರ್ಣ ಜಗತ್ತು ಮೇಲೆ ಮೇಲೆ ಹುಟ್ಟುತ್ತದೆ ಈ ಜಗತ್ತು ಪೂರ್ವದಲ್ಲಿತ್ತು, ಮುಂದೆ ಇರುತ್ತಿದೆ ನಾಶ ಹೊಂದಿದ ನಂತರ ಒಂದೇಸವನೇ ಇರುತ್ತಿದೆ. **मयाततमिदं सर्वं जगदव्यक्तमूर्तिना ।** ಇದರಿಂದ ಒಬ್ಬ ಅದ್ವಿತೀಯ ಆತ್ಮನು ಜಗತ್ತಿನ ವಿಸ್ತಾರವನ್ನು ಮಾಡಿದ್ದಾನೆ. ಅವನು **अव्यय**ನಿದ್ದಾನೆ; ನಾಶರಹಿತನಿದ್ದಾನೆ ಪೂರ್ಣ ಆತ್ಮನಿಂದ ಪೂರ್ಣ ಜಗತ್ತು ಹುಟ್ಟಿದೆ. ಆದರೂ ಆತ್ಮನು ಪೂರ್ಣನಿದ್ದಾನೆ

ಆದರೆ ಇದು ಅರ್ಜುನನ ಪ್ರಶ್ನೆಗೆ ಉತ್ತರ ಹೇಗೆ?– ಅರ್ಜುನನು ಸೃಷ್ಟಿಕರ್ತನು ಸಾಯುತ್ತಾನೆಂದು ಆಕ್ಷೇಪಿಸಿಲ್ಲ. ಭೀಷ್ಮ–ದ್ರೋಣಾದಿಗಳು ಸಾಯುತ್ತಾರೆಂದು ಆಕ್ಷೇಪಿಸಿದ್ದಾನೆ ಆದುದರಿಂದ ಇದರ ಮನನವನ್ನು ಬೇರೆ ರೀತಿಯಿಂದ ಮಾಡಬೇಕು, ಮತ್ತು ಅದರಲ್ಲಿಯ ತತ್ವವನ್ನು ತಿಳಿಯಬೇಕು

ಪಿಂಡಬ್ರಹ್ಮಾಂಡದಲ್ಲಿ ಒಂದು ನಿಯಮವದೆ— ಉತ್ಪತ್ತಿಕರ್ತನು ಬ್ರಹ್ಮಾಂಡವನ್ನು ವಿಸ್ತರಿಸಿದ್ದರೆ ಇದೇ ನಿಯಮದಂತೆ ಪಿಂಡವನ್ನು ನಡೆಸುವವನು ಪಿಂಡದ ಮೊದಲು, ಪಿಂಡದ ನಂತರ ಉಳಿಯುತ್ತಾನೆ ಆದುದರಿಂದ ಜೀವಾತ್ಮ–ಪರಮಾತ್ಮರಿಗೆ ಅಂಶಾಂಶಿ ಭಾವವದೆ **( ममैवांशो जीवलोके )** ಅಗ್ನಿಯ ಅಂಶವು ಅಗ್ನಿಯಂತೆ ಇರುತ್ತದೆ. ತಂದೆಯ ಅಂಶವು ಪುತ್ರನಿದ್ದಾನೆ. ತಂದೆ-ವ ಗ ಒಂದೇ ನಿಯಮದಿಂದ ಕಾರ್ಯ ಮಾಡುತ್ತಾರೆ. ಮಗನೂ ತಂದೆಯಂತೆ ಆಗುತ್ತಾನೆ. **मत् कर्म कृत मत्परमो – ममसाधर्म्यमागत:** ಜೀವನಿಗೆ ನನ್ನ ಸಾಧರ್ಮ್ಯ ಬರುತ್ತದೆ. ಮಗನು ತಂದೆಯ ಗುಣಗಳನ್ನು ಹೊಂದಿ, ಪುರುಷನು ಪುರುಷೋತ್ತಮನಾಗಬಹುದು. ಈಗ ಅರ್ಜುನನ ಸಂಶಯ ದೂರವಾಯಿತು. ಅವರ ಆತ್ಮ ಅಜರಾಮರವಾಗಿದೆ ಅಥವಾ ಅವರೆಲ್ಲರಲ್ಲಿ ಕೂಡ ಒಂದೇ ಸರ್ವಗತ ಆತ್ಮವದೆ. ಆದುದರಿಂದ ದೇಹಗಳು ನಾಶವಾದರೂ ಅದರ ನಿತ್ಯ ಶುದ್ಧ ಬುದ್ಧ ಮುಕ್ತಸ್ವಭಾವಕ್ಕೆ ಹಾನಿಯಿಲ್ಲ ಇದು ಸಾತವಳೇಕರರ ತರ್ಕತಾಂಡವ. ಅವರ ವಾದವು ಎಷ್ಟೋ ಸಾರೆ ತಪ್ಪಿದ್ದರೂ ನಿರ್ಣಯಗಳು ಅಥವಾ ನಿಗಮನಗಳು ಅವುಗಳ ಮೇಲೆ ಎಡವಿ ಬಿದ್ದ ಹಾಗೆ ಸರಿಯಾಗಿವೆ ಸತ್ತು ಅಸತ್ತುಗಳ ಕಲ್ಪನೆ ನಿರ್ದಿಷ್ಟವಿಲ್ಲದಿದ್ದರೂ 'ಜಗತ್ತಿನಲ್ಲಿ ಒಂದು ಸತ್, ಇನ್ನೊಂದು ಅಸತ್ತು' ಇವೆರಡೇ ಪದಾರ್ಥಗಳು ಎಂಬ ನಿರ್ಣಯ ಸರಿಯಾದದ್ದು. ಶಂಕರಾಚಾರ್ಯರಂತೆ ಸದಸತ್ ಎಂಬ ಮೂರನೇ ಪದಾರ್ಥಕ್ಕೆ ಅವರು ಹೋಗಿಲ್ಲ 'ಮೂರೂ ಕಾಲದಲ್ಲಿ ಒಂದೇಸವನೇ ಇರುವದು ಸತ್ತು, ಯಾವದರ ಸತ್ತೆ ಒಂದೇಸವನೇ ಉಳಿಯುವದಿಲ್ಲ, ಅದು ಅಸತ್ತು ಎಂದು ಹೇಳಿದರೂ ಮೊದಲಿಗೆ, **असत्** ಇದು ಕಿಂಚಿತ್ ಕಾಲದ ವರೆಗೆ ಭಾಸಮಾನವಾಗಿ ತೋರುತ್ತದೆ ಎಂದು ಹೇಳಿದ್ದಾರೆ ಗಡಿಗೆ-ಮಡಿಕೆಗಳ ಹಾಗೆ ನಾಶ ಹೊಂದುವದು ಅಸತ್ತೋ ಅಥವಾ ಶುಕ್ತಿಯಲ್ಲಿ ಬೆಳ್ಳಿಯಂತೆ ತೋರುವದು ಅಸತ್ಯವೋ ಇವರಿಗೆ ಸ್ಪಷ್ಟವಿಲ್ಲ.

ಆ ಮೇಲೆ ಆತ್ಮ ಇದು ಅವಿನಾಶಿಯಾದುದರಿಂದ ಸತ್ತು; ಜಗತ್ತು ಇದು ವಿನಾಶ ಹೊಂದುವದರಿಂದ **असत्** ಎಂದು ಹೇಳಿ **असत्** ಇದು **सत्** ದಿಂದ ಬೇರೆಯಾದದ್ದು ಎಂದು ಹೇಳಿ ಪೂರ್ಣ ಆತ್ಮನಿಂದ ಪೂರ್ಣ ಜಗತ್ತೇ ಹುಟ್ಟುತ್ತದೆಂದು ಪ್ರತಿಪಾದಿಸುತ್ತಾರೆ. ನಾಶ ಹೊಂದುವ ಜಗತ್ತು ಅದು ಹೇಗೆ ಪೂರ್ಣ ? ಉಪನಿಷತ್ತಿನ ಅರ್ಥವೇ ಆಗಿಲ್ಲ. ಉಪನಿಷತ್ತು ಪೂರ್ಣದಿಂದ ಪೂರ್ಣವು ಹುಟ್ಟುತ್ತದೆಂಬುದು ನಿಜ, ಆದರೆ ಅದು ಜಗತ್ತಲ್ಲ, ಜಗತ್ತು ಪೂರ್ಣವೆಂದು ಸಾತವಳೇಕರರನ್ನು ಬಿಟ್ಟು ಯಾರೂ ಕರೆಯುವದಿಲ್ಲ· ಯಾವ ವೇದ–ಉಪನಿಷತ್ತುಗಳೂ ಹೇಳಿಲ್ಲ. ಇಲ್ಲಿ ಪೂರ್ಣದಿಂದ ಪೂರ್ಣ ಹೊರಗೆ ಬಂದುದು ಮೂಲ ಬ್ರಹ್ಮನಿಂದ. ಹೊರಬಂದ ಅವನ ಅನೇಕ ಅವತಾರರೂಪಗಳು, ಮೂಲ ಬ್ರಹ್ಮನಷ್ಟೇ ಪರಿಪೂರ್ಣವಾದುವು ಅಥವಾ ಪರಮಾತ್ಮನ ಅವಯವಗಳು, ಅವನ ಒಂದೊಂದು ಅವಯವವೂ ಅವಯವಿಯಷ್ಟೇ ಪರಿಪೂರ್ಣವಾದುದು, ಮತ್ತು ಅಭಿನ್ನವಾದುದು

ಮುಂದೆ ಸಾತವಳೇಕರರ ವಾದ ಚಾತುರ್ಯವನ್ನು ನೋಡಬೇಕು. ಬ್ರಹ್ಮನಿಂದ ಹುಟ್ಟಿದ ಈ ಜಗತ್ತು ಬ್ರಹ್ಮನಂತೆ ಪೂರ್ಣವಾದುದು. ಯಾಕೆಂದರೆ ಪರಮಾತ್ಮನಂತೆ ಪರಮಾತ್ಮನ ಗುಣಗಳೂ ಸದಾಕಾಲ ಇರುತ್ತವೆ. ಆದುದರಿಂದ ಪರಮಾತ್ಮನಂತೆ ಜಗತ್ತೂ ಪೂರ್ಣವಾದುದು. ಎಂದಮೇಲೆ ಜಗತ್ತು ಪರಮಾತ್ಮನಂತೆ ಅವಿನಾಶಿಯಾಗಿರಬಾರದು ? ಅದು ವಿನಾಶಿಯೆಂದು, ಅದು ಅಸತ್ತು ಎಂದು ಹೇಳಿದ್ದು ಹೇಗೆ ?

ಇಷ್ಟೆಲ್ಲ ಗೊಂದಲ ಹಾಕಿದರೂ ಈ ಸಿದ್ಧಾಂತ ಅರ್ಜುನನ ಪ್ರಶ್ನೆಗೆ ಅನ್ವಯಿಸದಿದ್ದುದರಿಂದ ಅವರಿಗೆ ಮತ್ತೆ ಮನನ ಮಾಡಬೇಕಾಯಿತು. ಅರ್ಜುನನಿಗೆ ಸೃಷ್ಟಿಕರ್ತನ ವಿಷಯದಲ್ಲಿ ಸಂಶಯವಿಲ್ಲ, ಜೀವನ ವಿಷಯದಲ್ಲಿ ಸಂಶಯ, ಆದುದರಿಂದ ಪಿಂಡಾಂಡ ಬ್ರಹ್ಮಾಂಡದ ಆಟವನ್ನು ಹೂಡಿದರು ಇವೆರಡರಲ್ಲಿ ಒಂದೇ ನಿಯಮ ನಡೆಯುತ್ತಿದೆ ಬ್ರಹ್ಮಾಂಡವನ್ನು ಸೃಷ್ಟಿಕರ್ತನು ಹುಟ್ಟಿಸಿದನು; ಜೀವನನ್ನು ಹುಟ್ಟಿಸಲಿಲ್ಲ; (ಅದನ್ನು ನಿಯಮನ ಮಾಡುತ್ತಾನೆ) ಪಿಂಡವನ್ನು ನಿಯಮನ ಮಾಡುತ್ತಾನೆ. ಆದರೂ ಅವುಗಳಲ್ಲಿ ಸಾದೃಶ್ಯ ತೋರಿಸುತ್ತಾರೆ ಪಿಂಡದ ಮೊದಲು ನಂತರ ಉಳಿಯುವದರಿಂದ ನಿತ್ಯನು. ಆದುದರಿಂದ ಜೀವ-ಬ್ರಹ್ಮರಿಗೆ ಅಂಶಾಂಶಿಭಾವ ಎಂದರೆ ಸಾದೃಶ್ಯ ಹೇಳಿದರೂ ಇದು ಸರಿಯೇ !! ಆದರೆ ಅಗ್ನಿಯ ಅಂಶವು ಅಗ್ನಿಯಂತೆ; ಇದರ ಮೇಲಿಂದ ಜೀವನು ಪರಮಾತ್ಮನಂತೆ, ಮಗನಿಗೆ ತಂದೆಯ ಗುಣಗಳೆಲ್ಲ ಬರುವಂತೆ ಪರಮಾತ್ಮನ ಗುಣಗಳೆಲ್ಲ ಜೀವನಿಗೆ ಬರುವದರಿಂದ ಪುರುಷನು ಪುರುಷೋತ್ತಮನಾಗುತ್ತಾನೆ. ಹೀಗೆ ಟಣ್ಣನೆ ಕತ್ತಲೆಯಲ್ಲಿ ಜಿಗಿದು ಐಕ್ಯದ ಕಡೆಗೆ ಮುಟ್ಟುತ್ತಾರೆ. ಇದಕ್ಕೆ ಅವರು ಮನನವೆಂದು ಕರೆಯುತ್ತಾರೆ ವೇದ ಉಪನಿಷತ್ತುಗಳ ಮೇಲಿಂದ ಈ ಅಪೂರ್ವವಾದ ರೀತಿಯಲ್ಲಿ ಗೀತೆಯ ಅರ್ಥವನ್ನು ಹಚ್ಚಿದವರು ತಾವೊಬ್ಬರೇ ಎಂದು ತಮ್ಮ ಡುಬ್ಬ ತಾವೇ ಚಪ್ಪರಿಸಿಕೊಂಡಿದ್ದಾರೆ

ಇವರು ಮಧ್ವಾಚಾರ್ಯರ, ಭಾಷ್ಯವನ್ನಾಗಲಿ ತಾತ್ಪರ್ಯವನ್ನಾಗಲಿ ನೋಡಿದಂತೆ ಕಾಣುವದಿಲ್ಲ, ಮಧ್ವಾಚಾರ್ಯರು ಗೀತೆಯು ಉಪನಿಷತ್ತಿನ ಸಾರವೆಂದೂ, ಶಂಕರಾಚಾರ್ಯರು ಗೀತೆಯು ವೇದಾರ್ಥಸಾರಸಂಗ್ರವೆಂದೂ ಹೇಳಿ ಅದರಂತೆ ಗೀತೆಯ ಅರ್ಥ ಮಾಡಿದ್ದರೂ ಪೂರ್ವದ ಟೀಕಾಕಾರರು ಯಾರೂ ಗೀತೆಯ ಅರ್ಥವನ್ನು ವೇದ ಉಪನಿಷತ್ತುಗಳ ಸಹಾಯದಿಂದ ವಿಶದವಾಗಿ ಮಾಡಿಲ್ಲವೆಂದು ಹೇಳುವ ಸಾಹಸ ಮಾಡಿದ್ದಾರೆ

ಇದೇ ಶ್ಲೋಕದ ಮೇಲಿನ ಮಧ್ವಾಚಾರ್ಯರ ಭಾಷ್ಯವನ್ನು ನೋಡಿರಿ. ಅವರು ವೇದ-ಉಪನಿಷತ್ತು ಪುರಾಣ ಇತಿಹಾಸ ಇವೆಲ್ಲವುಗಳಿಗೂ ಒಂದು ತಾತ್ಪರ್ಯವದೆ ಎಂದು ಸಿದ್ಧ ಮಾಡಲಿಕ್ಕೆ ಬದ್ಧ ಕಂಕಣರಾಗಿದ್ದಾರೆ— ಇದೇ ಶ್ಲೋಕದ ಮೇಲೆ (೨-೧೬) ಹೀಗೆ ಭಾಷ್ಯದಲ್ಲಿ ಬರೆಯುತ್ತಾರೆ— "ಆತ್ಮನು ನಿತ್ಯನೆಂದು ಹೇಳಿದ್ದಾಯಿತು. ಆತ್ಮ ಒಂದೇ ನಿತ್ಯವೇ ಅಥವಾ ಮತ್ತೆ ಯಾವದಾದರೂ ನಿತ್ಯವದೆಯೇ ? ಮತ್ತೊಂದು ಯಾವದೆಂದರೆ ಹೇಳುತ್ತಾರೆ—

**नासतो विद्यते – असतः** ಎಂದರೆ ಕಾರಣವಾದ ಪ್ರಕೃತಿಗೂ **सतः** ಎಂದರೆ ಬ್ರಹ್ಮನಿಗೂ ಅಭಾವವು ಇರುವದಿಲ್ಲ ವಿಷ್ಣು ಪುರಾಣದಲ್ಲಿ **प्रकृतिः पुरुष श्चैव नित्यो कालश्च सत्तम** ಎಂದು ಹೇಳಿದೆ. ಗೀತೆಯಲ್ಲಿ **प्रकृतिं पुरुषं चैव विद्धचनादि उभावपि** (೧೩-೨೦). ಅಸತ್ತಿಗೆ ಕಾರಣತ್ವವನ್ನು ಭಾಗವತದಲ್ಲಿ ಹೇಳಿದೆ. **सदसद्रूपया चासौ गुणमय्या गुणोविभुः ।** ಕಾರ್ಯಕಾರಣ ರೂಪವೂ ಸತ್ವರಜಸ್ತಮೋಗುಣ ರೂಪವೂ ಆದ ಪ್ರಕೃತಿಯಿಂದ ಸತ್ವರಜಸ್ತಮೋಗುಣಗಳಿಲ್ಲದ ಶ್ರೀ ಹರಿಯು ಜಗತ್ತನ್ನು ಸೃಷ್ಟಿಸುತ್ತಾನೆ. ಹೀಗೆ **असत्** ಎಂಬ ಶಬ್ದಕ್ಕೆ ಕಾರಣವೆಂಬ ಅರ್ಥವದೆ. ಹಾಗೆ **असतः सद जायत** ಎಂಬ ಶ್ರುತಿಯಲ್ಲಿ ಅಸತ್ತೆಂದರೆ ಕಾರಣದಿಂದ ಸತ್ತೆಂದರೆ ಕಾರ್ಯವು ಹುಟ್ಟಿದೆಂದು ಶ್ರುತಿಯಲ್ಲಿ ಹೇಳಿದೆ. ಕಾರಣವು ಅವ್ಯಕ್ತಸ್ವರೂಪವಾಗಿರುವದರಿಂದಲೂ ಅಸತ್ತೆನಿಸುತ್ತಿದೆ ಈ ಪ್ರಕೃತಿ ಪುರುಷರ ನಿತ್ಯತ್ವವು ಸಿದ್ಧವಾಗಿದೆಯೆಂದು **उभयोरपि** ಎಂಬುದರಿಂದ ಹೇಳಿದ್ದಾರೆ. ಹೀಗೆ ಗೀತೆಯು

ಗಳಿಗೆ ಅಸ್ತಿತ್ವವಿಲ್ಲ. ಕಾರ್ಯಗಳನ್ನು ಕಾರಣಗಳಿಗೆ ಸಂಬಂಧಿಸುತ್ತ ಹೋದಂತೆ ಕೊನೆಯ ಕಾರಣ ಬ್ರಹ್ಮ. ಅದು ಹೇಗೆಂದರೆ ಬ್ರಹ್ಮನು ಅಧಿಷ್ಠಾನ. ಅದರಲ್ಲಿ ತೋರಿದ್ದು ಈ ಜಗತ್ತು ಶಿಂಪಿನಲ್ಲಿ ಬೆಳ್ಳಿಯು ತೋರಿದಂತೆ ಆದುದರಿಂದ ಜಗತ್ತಿಗೆ ಅಸ್ತಿತ್ವವಿಲ್ಲ ಈ ಸತ್ಯವನ್ನು ತತ್ವಜ್ಞಾನಿಗಳು ಕಂಡಿದ್ದಾರೆ".

ಆದರೆ ಇದು ಕಾರ್ಯಕಾರಣ ಭಾವಕ್ಕೆ ಧಕ್ಕೆಯನ್ನು ತರುತ್ತದೆ. ಕಾರಣದಲ್ಲಿ ಕಾರ್ಯವು ಹುದುಗಿದೆ, ಶಕ್ತಿರೂಪದಲ್ಲಿದೆ ಅದು ಕಾರ್ಯದಲ್ಲಿ (ಅಭಿ)ವ್ಯಕ್ತವಾಗುತ್ತದೆ ಈ ಹುಟ್ಟಿದ ಕಾರ್ಯವನ್ನು ಅಲ್ಲಗಳೆಯುವದೆಂದರೆ ಕಾರ್ಯಕಾರಣ ಭಾವವನ್ನೇ ಅಲ್ಲಗಳೆದಂತೆ

ಇದರಿಂದ ಶಂಕರಾಚಾರ್ಯರು 'ಜಗತ್ತು ಬ್ರಹ್ಮನಂತೆ ಸತ್ಯವೂ ಅಲ್ಲ; ಮೊಲದ ಕೊಂಬಿನಂತೆ ಅಸತ್ಯವೂ ಅಲ್ಲ; ಅದು ಸದಸದ್ವಿಲಕ್ಷಣ' ಎಂದರೆ ಅನಿರ್ವಚನೀಯವೆಂದು ಹೇಳುತ್ತಾರೆ. ಇದಕ್ಕೆ ಮಿಥ್ಯಾ ಎಂದು ಹೇಳುತ್ತಾರೆ. "ಅಸತ್ತಿಗೆ ಬಾವವಿಲ್ಲ ಎಂದರೆ ಜ್ಞಾನಕ್ಕೆ ವಿಷಯವಾಗುವದಿಲ್ಲ; ಮೊಲದ ಕೊಂಬು ಅಸತ್ತು. ಅದು ಜ್ಞಾನಕ್ಕೆ ವಿಷಯವಾಗುವದಿಲ್ಲ. (ಆದರೆ ಜಗತ್ತು ಜ್ಞಾನಕ್ಕೆ ಗೋಚರವಾಗುತ್ತದೆ.) ಬ್ರಹ್ಮನು ಸತ್; ಅವನು ಜ್ಞಾನಕ್ಕೆ ವಿಷಯನಾಗದೆ ಇರುವದಿಲ್ಲ. ಅದು ಯಾವ ಜ್ಞಾನಕ್ಕೂ ವಿಷಯನಾದರೋ ಕಾಣದಾಗುವದಿಲ್ಲ. (ಜಗತ್ತು ಬ್ರಹ್ಮ ಜ್ಞಾನದಿಂದ ಕಾಣದಾಗುತ್ತದೆ) ಆದುದರಿಂದ ಜಗತ್ತು ಬ್ರಹ್ಮನಿಂದ ಬೇರೆ ಯಾದುದು ಆದುದರಿಂದ ಅದು ಸತ್ತೂ ಅಲ್ಲ, ಅಸತ್ತೂ ಅಲ್ಲ. ಸದಸದ್ವಿಲಕ್ಷಣ ಎಂದರೆ ಮಿಥ್ಯಾ

ಆದರೆ ರಾಮಾನುಜರ ಮತ್ತು ಮಧ್ವರ ಅಭಿಪ್ರಾಯದಲ್ಲಿ ವಸ್ತು ಸತ್ತಾದರೂ ಇರುತ್ತದೆ; ಅಸತ್ತಾದರೂ ಇರುತ್ತದೆ ಇವೆರಡರ ಮಧ್ಯದ ವರ್ಗವೇ ಇಲ್ಲವೆಂದು ಹೇಳುತ್ತಾರೆ

ರಾಮಾನುಜರು ಅಸತ್ತೆಂದರೆ ದೇಹವೆಂದೂ ಚೇತನವು ಸತ್ತೆಂದೂ ಹೇಳುತ್ತಾರೆ. ಚೇತನವು ನಿತ್ಯವಾದುದರಿಂದ ಅದಕ್ಕೆ ಅಸತ್ತು ಇಲ್ಲ; ಜಗತ್ತು ಅನಿತ್ಯವಾದುದರಿಂದ ಅದಕ್ಕೆ ಅಸ್ತಿತ್ವವಿಲ್ಲ, ಇವರ ಅಭಿಪ್ರಾಯದಲ್ಲಿ गतासून् ಎಂದು ೧೧ನೇ ಶ್ಲೋಕದಲ್ಲಿ ದೇಹಗಳು ನಶ್ವರವೆಂದೂ ೧೨ರಲ್ಲಿ ಚೇತನವು ನಿತ್ಯವೆಂದೂ ಹೇಳಿದೆ ಮತ್ತೆ ಈಗ ಅದೇ ಅಭಿಪ್ರಾಯವನ್ನು ಪುನರುಚ್ಚರಿಸುವದರಲ್ಲಿ ಪ್ರಯೋಜನವೇನು ?

---

ತುಂಬ ಪ್ರಮಾಣಬದ್ಧವಾಗಿ ಸಾತವಳೇಕರರಿಗಿಂತ ಪೂರ್ವದಲ್ಲಿ ಏಳನೂರು ವರ್ಷಗಳ ಹಿಂದೆಯೇ ಭಾಷ್ಯ - ತಾತ್ಪರ್ಯಗಳನ್ನು ಬರೆದು ವೇದ-ಪುರಾಣಗಳೊಡನೆ ಏಕ ತಾತ್ಪರ್ಯವನ್ನು ಸಿದ್ಧ ಮಾಡಿದ್ದರೂ ಇವರ ಸಾಹಸದ ಮಾತುಗಳಿಂದ ಪ್ರಾಮಾಣಿಕರು ಉದ್ವೇಗಗೊಳ್ಳುತ್ತಾನೆ.

ಲೋ ಟಿಳಕರು " **ಅಸತ್** ಗೆ ಭಾವ ಇಲ್ಲವೆಂದೂ **ಸತ್** ಗೆ ಅಭಾವ ಇಲ್ಲ ವೆಂದೂ ಹೇಳಿ— **ಸತ್** ಎಂದರೆ ಬ್ರಹ್ಮನೆಂದೂ **ಅಸತ್** ಎಂದರೆ ನಾಮರೂಪಾತ್ಮಕ ಜಗತ್ತೆಂದೂ ಇಲ್ಲಿ ತಿಳಿಯಬೇಕೆಂದು ಆಗ್ರಹಪಡಿಸುತ್ತಾರೆ ಯಾವದು ಅದೆ ಅದು ಇಲ್ಲದಂತೆ ಆಗುವದಿಲ್ಲ ಎನ್ನುವದು ಸತ್‌ಕಾರ್ಯ ವಾದದಂತೆ ಕಂಡರೂ ಇಲ್ಲಿ ಸ್ವಲ್ಪ ಬೇರೆ ತಿಳಿಯಬೇಕೆಂದು ಎಚ್ಚರಿಸುತ್ತಾರೆ ಒಂದು ವಸ್ತುವಿನಿಂದ ಇನ್ನೊಂದು ವಸ್ತು ಹುಟ್ಟಿದಾಗ – ಉದಾ— ಬೀಜದಿಂದ ಗಿಡ ಹುಟ್ಟಿದಾಗ – ಸತ್ಕಾರ್ಯವಾದದ ತತ್ವವು ಹೊಂದಿಕೆಯಾಗುತ್ತದೆ. ಆದರೆ ಈ ಶ್ಲೋಕದಲ್ಲಿ ಯಾವದು ಅದೆ ಅದರ ಅಸ್ತಿತ್ವವೂ (ಭಾವವೂ) ಮತ್ತು ಯಾವದು ಇಲ್ಲ ಅದರ ಅಭಾವವೂ – ಎರಡು ನಿತ್ಯವಾಗಿವೆಯೆಂದು ಹೇಳುವದು ತಾತ್ಪರ್ಯ. ಎರಡೂದರ ಭಾವಾ ಭಾವಗಳನ್ನು ನಿತ್ಯವೆಂದು ತಿಳಿಯಬೇಕು ಎಂದು ಟಿಳಕರು ವಾದಿಸುತ್ತಾರೆ. ಈ ನಿತ್ಯತ್ವವು ಶ್ಲೋಕದಲ್ಲಿ ಯಾವ ಪದಗಳಿಂದ ಬೋಧ್ಯವಾಗಿದ ? ಇದು ತಮ್ಮ ತತ್ವವನ್ನು ಹಚ್ಚಲಿಕ್ಕೆ ಎಳೆದು ತಂದು ಹಚ್ಚಿದ ತತ್ವವಲ್ಲವೊ ?

ಮಧ್ವಾಚಾರ್ಯರು **नासतो विद्यतेऽभावः** ಎಂದು ಪದಗಳನ್ನು ಒಡೆದು **ಅಸತ್** ಎಂದರೆ ಅವ್ಯಕ್ತ ಪ್ರಕೃತಿಗೆ ಅಭಾವವೆಂದರೆ ನಾಶವು ಇಲ್ಲೆಂದೂ ಹಾಗೆಯೇ **ಸತ್** ಎಂದರೆ ಆತ್ಮದ ನಾಶವೂ ಆಗುವದಿಲ್ಲೆಂದು ಹೇಳುತ್ತಾರೆ. ಇವೆರಡು ನಿತ್ಯ ವಾದುವುಗಳೆಂದು ತಮ್ಮ ದ್ವೈತಪರವಾದ ಅರ್ಥವನ್ನು ಜಗ್ಗಿ ಎಳೆದು ಹಚ್ಚಿದ್ದಾ ರೆಂದು ಟಿಳಕರು ಆರೋಪಿಸುತ್ತಾರೆ. *

ಟಿಳಕರು ವಿರುದ್ಧವಾದ ಎರಡೂ ನಿತ್ಯವೆಂದು ಹೇಳಬಹುದಾದರೆ ಮಧ್ವಾ ಚಾರ್ಯರು ಹಾಗೆ ಹೇಳಿದರೆ ಅಲ್ಲಿ ಏಕೆ ಜಗ್ಗಾಟ ಬರುತ್ತದೆ ತಿಳಿಯದು. ಹೆಜ್ಜೆ ಹೆಜ್ಜೆಗೆ ಅವರು ಮಧ್ವಾಚಾರ್ಯರ ನಾಮನಿರ್ದೇಶ ಮಾಡಿ ಅವರ ಮೇಲೆ ದೋಷಾರೋಪಣೆ ಮಾಡುವದನ್ನು ನೋಡಿದರೆ ಅವರ ಪಕ್ಷಪಾತವು ಎಷ್ಟು ಆಳ ವಾಗಿದೆನ್ನುವದು ಗೊತ್ತಾಗುತ್ತದೆ.

ನಿಜವಾಗಿ ನೋಡಿದರೆ ಶಂಕರಾಚಾರ್ಯರು ಬ್ರಹ್ಮ ಮತ್ತು ಜಗತ್ತಿನ ನಿತ್ಯತ್ವದ ಪ್ರಸ್ತಾಪವನ್ನೇ ಎತ್ತಿಲ್ಲ ಭಾವ–ಅಭಾವಗಳ ಪ್ರಸ್ತಾಪವನ್ನು ಮಾತ್ರ

---

* ಸಾಂಖ್ಯ ಪ್ರವಚನ—" **न अवस्तुनो वस्तुसिद्धिः** "

ಈ ಶ್ಲೋಕದಲ್ಲಿ ನಡೆದ ವಾದವು ಬೌದ್ಧರ ವಾದವನ್ನು ನಿರಾಕರಿಸುತ್ತದೆಂದು ಹೇಳುತ್ತಾರೆ. ಬೌದ್ಧರು ಯಾವ ಸತ್ತೂ ಕಾರಣವಾಗಿ ಇಲ್ಲದೆ ಕಾರ್ಯ ಹುಟ್ಟುತ್ತದೆಂದು ಹೇಳುತ್ತಾರೆ ಈ ಶ್ಲೋಕದಲ್ಲಿ ಅಸತ್ತಿನಿಂದ ಸತ್ ಕಾರ್ಯವು ಹುಟ್ಟುವದಿಲ್ಲೆಂದು ಹೇಳುತ್ತಾರೆ

ಎತ್ತಿದ್ದಾರೆ ಆದರೆ ಮಧ್ವಾಚಾರ್ಯರು ಇಲ್ಲಿ ನಿತ್ಯತ್ವಕ್ಕೆ ಸಂದರ್ಭವನ್ನು ಒದಗಿಸಿದ್ದಾರೆ. ಹಿಂದೆ ಜೀವನ ನಿತ್ಯತ್ವವನ್ನು ಸಾಧಿಸಲಿಕ್ಕೆ ದೃಷ್ಟಾಂತಕ್ಕೆ ನಿತ್ಯನಾದ ಈಶ್ವರನನ್ನು ಹೇಳಿದ್ದರು. ಆದರೆ ಈಶ್ವರನ ನಿತ್ಯತ್ವವನ್ನು ಒಪ್ಪದವರಿಗೆ ಇನ್ನೊಂದು ನಿತ್ಯವಾದ ದೃಷ್ಟಾಂತ ಬೇಕಾಗಿತ್ತು ಆ ನಿತ್ಯವಾದ ವಸ್ತುವೇ ಪ್ರಕೃತಿಯೆಂದು ಇಲ್ಲಿ ಸಾಧಿಸಿದ್ದಾರೆ

ಟಿಳಕರು ಅಸತ್ತಾದ ಜಗತ್ತು ನಿತ್ಯ ಎಂದು ಹೇಳುತ್ತಾರೆ ಆದರೆ ಅದು ಅನಿತ್ಯ. ಅದ್ವೈತಿಗಳಂತೂ ಅದು ತ್ರಿಕಾಲದಲ್ಲಿಯೂ ಇರುವದಲ್ಲವೆಂದು ಅಭಿಪ್ರಾಯಪಡುತ್ತಾರೆ ಹೀಗೆ ಹೇಳುವದರಿಂದ ಅಪಸಿದ್ಧಾಂತಕ್ಕೆ ಟಿಳಕರು ಗುರಿಯಾಗುತ್ತಾರೆ.

ರಾಘವೇಂದ್ರರು ಸತ್ ಶಬ್ದಕ್ಕೆ ಸತ್ಕರ್ಮವೆಂದೂ ಅಸತ್ ಶಬ್ದಕ್ಕೆ ಅಸತ್ಕರ್ಮವೆಂದೂ ಅರ್ಥ ಮಾಡಿದ್ದಕ್ಕೆ ಪ್ರಮಾಣವನ್ನು ಉದಾಹರಿಸುತ್ತಾರೆ '**सद्भावे साधुभावे च सदित्येतत् प्रयुज्यते । प्रशस्ते कर्मणितथा** ಇತ್ಯಾದಿ

ಟಿಳಕರ ಇನ್ನೊಂದು ಯುಕ್ತಿಯಂತೂ ಬಹು ವಿಚಿತ್ರವಾಗಿ ತೋರುತ್ತದೆ. ಮಧ್ವಾಚಾರ್ಯರು ಮೂಲ ಕಾರಣವಾದ ಪ್ರಕೃತಿಯು ನಿತ್ಯವೆಂದು ಹೇಳಿದರೆ ಅದರ ಅರ್ಥವನ್ನು ವ್ಯಕ್ತ ಸೃಷ್ಟಿಯೂ ನಿತ್ಯವೆಂದು ಭಾವಿಸಿ ಅದು ಅನಿತ್ಯವಿದ್ದುದರಿಂದ ಪ್ರಕೃತಿಯು ನಿತ್ಯವಾಗಲಾರದೆಂಬ ವಾದವು ವಿಚಿತ್ರವಾಗಿದೆ. ಆದರೆ ಅಭಾವದ ಸತ್ಯತ್ವವನ್ನು ಮೊದಲಿಗೆ ತಾವೇ ಒಪ್ಪಿಕೊಂಡಿದ್ದಾರೆ. ಅಲ್ಲಿ ಮಾತ್ರ ಒಂದು ನಿತ್ಯವಾದರೆ ಇನ್ನೊಂದು ಅನಿತ್ಯವಾಗಬೇಕೆಂಬ ನಿಯಮ ಹತ್ತುವದಿಲ್ಲವಂತೆ.*

---

* Woodರು " (II–16) This verse has given thinkers and translators much trouble with its words" being (सत्) and 'existence (bhava). It says there is no existence (भव) of the unreal (असत्) and there is no non-existence (अभाव) of the real (सत्). It says further that this matter has been fully understood by those who see the 'thatness' or true nature of reality and existence (सत् and भाव).

This Sanskrit word here translated is तत्व "Thatness". In the next vesre an attempt is made to state what the that is It says "that" is what spreads out all 'this'. (ಈ ಶ್ಲೋಕವು ವ್ಯಾಖ್ಯಾನಕಾರರಿಗೆ ಭಾಷಾಂತರಕಾರರಿಗೆ ತೊಂದರೆ ಕೊಟ್ಟಿದೆ. "ಅಸತ್ತಿಗೆ ಭಾವವಿಲ್ಲ; ಸತ್ತಿಗೆ ಅಭಾವವಿಲ್ಲ.

अविनाशितु तद्विद्धि येन सर्वमिदं ततम् ।
विनाशमव्ययस्यास्य न कश्चित् कर्तुमर्हसि ॥ १७ ॥
अंतवंत इमे देहा नित्यस्योक्ता शरीरिणः ।
अनाशिनोऽप्रमेयस्य तस्मात् युध्यस्व भारत ॥ १८ ॥

ಯಾವ ಪರಮಾತ್ಮನಿಂದ ಇದೆಲ್ಲ ಜಗತ್ತು ವ್ಯಾಪ್ತವಾಗಿದೆಯೋ ಆ ಪರಮಾತ್ಮನು ನಾಶರಹಿತನು ಎಂದು ತಿಳಿದುಕೋ. ನಾಶರಹಿತನಾದ ಈ ಪರಮಾತ್ಮನ ನಾಶವನ್ನು ಯಾರೂ ಮಾಡಲಾರರು. ನಿತ್ಯವಾದ ಜೀವನ ಈ ದೇಹಗಳು ನಾಶ ಹೊಂದತಕ್ಕವು; ಆದುದರಿಂದ ಎಲೈ ಅರ್ಜುನನೇ ! (ನಾಲ್ಕು ತರಹದ) ನಾಶರಹಿತನಾದ ಅಪ್ರಮೇಯನಾದ (ಪರಮಾತ್ಮನ) ಪೂಜೆಗಾಗಿ ಯುದ್ಧವನ್ನು ಮಾಡು.

**ವಿಶೇಷ ಟಿಪ್ಪಣಿಗಳು :**

ಈಶ್ವರನಂತೆ ಜೀವನು ನಿತ್ಯನೆಂದು ಹೇಳಿದ್ದಾಯಿತು ಈ ಈಶ್ವರನ ಪ್ರೀತಿಗೆ ಯುದ್ಧವನ್ನು ಏಕೆ ಮಾಡಬೇಕೆಂಬ ಅರ್ಜುನನ ಮನಸ್ಸಿನಲ್ಲಿರುವ ಶಂಕೆಗೆ ಭಗವಂತನು ೧೭ ಮತ್ತು ೧೮ ನೇ ಶ್ಲೋಕಗಳಿಂದ ಉತ್ತರ ಕೊಡುತ್ತಾನೆ.

**अविनाशिन्** ಎಂದರೆ ನಾಶರಹಿತನು. ಆ ನಾಶವು ನಾಲ್ಕು ವಿಧವಾಗಿದೆ ೧) ಸ್ವರೂಪನಾಶ, ೨) ದೇಹನಾಶ, ೩) ದುಃಖಪ್ರಾಪ್ತಿ ಮತ್ತು ೪) ಅಪೂರ್ಣತಾ. ಪರಮಾತ್ಮನಿಗೆ ಈ ನಾಲ್ಕೂ ವಿಧದ ನಾಶಗಳು ಇಲ್ಲ.

**ततं** ಪರಮಾತ್ಮನು ಅಂತರ್ಯಾಮಿಯಾಗಿ ಜಗತ್ತಿನಲ್ಲಿ ಎಲ್ಲ ಕಡೆಗೆ ಎಲ್ಲ ಕಾಲದಲ್ಲಿ ಅಪರಿಚ್ಛಿನ್ನವಾದ ಪೂರ್ಣತೆಯಲ್ಲಿ ಇದ್ದಾನೆ. ಜೀವನು ಎಲ್ಲ ಕಾಲದಲ್ಲಿಯೂ ಇದ್ದಾನೆ. ಆದರೆ ಅವನು ಅಣು ಆದುದರಿಂದ ಎಲ್ಲ ದೇಶದಲ್ಲಿಯೂ ಇಲ್ಲ. ಮತ್ತು ಜೀವನಲ್ಲಿ ಪೂರ್ಣತೆಯಿಲ್ಲ. ಲಕ್ಷ್ಮೀದೇವಿಯು ಸರ್ವತ್ರವ್ಯಾಪ್ತಳಾಗಿದ್ದರೂ ನಿತ್ಯಳಾಗಿದ್ದರೂ ಪೂರ್ಣಳಲ್ಲ ವರ್ಣಗಳೂ ಮತ್ತು ದೇಶವೂ ಇಂಥವುಗಳೇ ಆಗಿವೆ. ಈಶ್ವರನು ಮಾತ್ರ ಮೇಲೆ ಹೇಳಿದಂತೆ ಪೂರ್ಣವಾದ ಅರ್ಥದಲ್ಲಿ ವ್ಯಾಪ್ತನು. ಇಲ್ಲಿ ಪರಮಾತ್ಮನ ಅಂತರ್ಯಾಮಿತ್ವವನ್ನು ನಿರ್ದೇಶಿಸಲಾಗಿದೆ.

---

ತತ್ವದರ್ಶಿಗಳು ಇದರ ಅರ್ಥವನ್ನು ತಿಳಿದಿದ್ದಾರೆ" ತತ್ವವೆಂದರೆ ಏನೆಂಬುದನ್ನು ಮುಂದಿನ ಶ್ಲೋಕದಲ್ಲಿ ಹೇಳಿದ್ದಾರೆ— **येन सर्व मिदं तत**). ಈ ಅರ್ಥವನ್ನು ಸ್ವೀಕರಿಸಿದರೆ **सत्**ದ ಅರ್ಥವನ್ನೂ ಹಾಗೇ ಮುಂದಿನ ಶ್ಲೋಕದಿಂದ ಸ್ವೀಕರಿಸಿದರೆ ಒಳ್ಳೆ ಅರ್ಥ ಹೊರಡುತ್ತದೆ.

ಅಂತರ್ಯಾಮಿತ್ವವು ಜಗತ್ತಿನಲ್ಲಿ ಅಣುರೇಣುತೃಣಕಾಷ್ಠಗಳಲ್ಲಿ ಭಗವಂತನು ವಾಸ ಮಾಡಿರುವದರಿಂದ ಎಲ್ಲವೂ ಅವನ ದಿವ್ಯ ತೇಜದಿಂದ ಬೆಳಗುತ್ತವೆ ಈ ಭವ್ಯ ಜಗತ್ತಿನ ನೋಟವು ಪರಮಾತ್ಮನ ಅಂತರ್ಯಾಮಿತ್ವದಿಂದ ಚೇತೋಹಾರಿಯೂ ಸ್ಫೂರ್ತಿದಾಯಕವೂ ಆಗಿದೆ. ಅಮಿತತ್ವ ಅನಂತತ್ವ (infinity) ಕಲ್ಪನೆಯು ನಮಗೆ ಬಾರದಿದ್ದರೂ ಪರಿಮಿತ ಜಗತ್ತಿನ ಹಿನ್ನೆಲೆಯಾಗಿ ಅಂತರ್ಯಾಮಿಯಾಗಿ ಅದು ಇರುವದರ ಕಲ್ಪನೆಯು ಬರುವದು. ಅನಂತತ್ವದ ಕಲ್ಪನೆಯು ಯಾವ ವಿಧ ದಿಂದಲೂ ಬರುವದಿಲ್ಲವೆನ್ನುವವರಿಗೆ ಇದು ತಕ್ಕ ಉತ್ತರವಾಗಿದೆ

ಶಂಕರಾಚಾರ್ಯರು **तत** ಎಂದರೆ ವ್ಯಾಪ್ತಿಯನ್ನು ರಜ್ಜುಸರ್ಪದ ಭ್ರಮೆ ಯಲ್ಲಿ ಅಧಿಷ್ಠಾನವಾದ ರಜ್ಜುವಿನಂತಿರುವ ಬ್ರಹ್ಮನು ಜಗತ್ತೆಂಬ ಭ್ರಮೆಗೆ ಅಧಿ ಷ್ಠಾನನಾಗಿದ್ದಾನೆ ಅವನು ಸರ್ವತ್ರವ್ಯಾಪ್ತನಾಗಿದ್ದು, ಅವನ ಸ್ವಭಾವವು ವಿನಾ ಶನ ಶೀಲವಲ್ಲ (**नविनष्टं शील अस्य**); ಯಾಕೆಂದರೆ ಈ ಬ್ರಹ್ಮನು ಅವ್ಯ ಯನು (**नव्येति उपचयापचयौ न याति**). ಅವಯವಗಳಿಂದ ಹೆಚ್ಚುಕಡಿಮೆ ಯಾಗುವದಿಲ್ಲ. ಯಾಕೆಂದರೆ ಬ್ರಹ್ಮನು ನಿರವಯವನು ಬ್ರಹ್ಮನು ಸ್ವರೂಪ ದಿಂದಲೂ ಉಪಚಯ ಅಪಚಯವನ್ನು ಹೊಂದುವದಿಲ್ಲ; ಅಥವಾ ಆತ್ಮೀಯ ವಸ್ತುವಿನಿಂದಲೂ ಹೆಚ್ಚುಕಡಿಮೆಯಾಗುವದಿಲ್ಲ ದೇವದತ್ತನು ತನ್ನ ಹತ್ತಿರವಿರುವ ದ್ರವ್ಯದಿಂದ ಹೆಚ್ಚುಕಡಿಮೆಯಾಗಬಹುದು ಆದುದರಿಂದ ಈ ಬ್ರಹ್ಮನನ್ನು ಯಾರೂ ನಾಶ ಮಾಡಲಾರರು (**ईश्वरोपि न शक्नोति**) ಈಶ್ವರನು ಸಹ ನಾಶಮಾಡಲಾರನು ಯಾಕೆಂದರೆ ಈಶ್ವರನೂ ಬ್ರಹ್ಮನೇ ! ಆದುದರಿಂದ ಬ್ರಹ್ಮನು ಬ್ರಹ್ಮನಲ್ಲಿ ತನ್ನ ಕ್ರಿಯೆಯನ್ನು ನಡೆಸುವದಿಲ್ಲ. ಕಣ್ಣು ಕಣ್ಣಿನಲ್ಲಿಯ ರೇಖೆಗಳನ್ನು ನೋಡುವದಿಲ್ಲ

ರಾಮಾನುಜಾಚಾರ್ಯರು ಈ ಶ್ಲೋಕವು ಜೀವರುಗಳನ್ನು ವರ್ಣಿಸುತ್ತದೆಂದು ಹೇಳುತ್ತಾರೆ ಇನ್ನು **तत**ಯು ಎಂದರೆ ವ್ಯಾಪ್ತತ್ವವು ಸಾಂಘಿಕವಾಗಿ ಜೀವರು ಗಳದೇ. ಜೀವರು ಸಂಘಶಃ ಎಲ್ಲ ಕಡೆಯಲ್ಲಿಯೂ ಇದ್ದಾರೆ ಈ ಸೂಕ್ಷ್ಮ ಜೀವ ವನ್ನು ನಾಶಗೊಳಿಸುವ ಯಾವ ಶಾಸ್ತ್ರವೂ ಇಲ್ಲ. ಈಶ್ವರನನ್ನು ಬಿಟ್ಟರೆ ಯಾರೂ ಜೀವನನ್ನು ನಾಶಗೊಳಿಸಲಾರರು ದೇವರು ಸರ್ವಸಮರ್ಥನಾದರೂ ಈ ಕೆಲಸ ವನ್ನು ಮಾಡಲಿಕ್ಕೆ ಇಚ್ಛಿಸುವದಿಲ್ಲ ಆದುದರಿಂದ ಜೀವರುಗಳು ವಿನಾಶರಹಿತರು.

ಹೀಗೆ ಶಂಕರಾಚಾರ್ಯರು **नाभावो विद्यते सतः** ಎಂಬುದನ್ನು ಸ್ಪಷ್ಟಪಡಿ ಸಲಿಕ್ಕೆ ಅಧಿಷ್ಠಾನಗತ ಬ್ರಹ್ಮನು ಸರ್ವತ್ರ ಇದ್ದಾನೆಂದು ಹೇಳುತ್ತಾರೆ ಇಡೀ ಶ್ಲೋಕವು ಇವರ ಅಭಿಪ್ರಾಯದಲ್ಲಿ ಬ್ರಹ್ಮನನ್ನೇ ವರ್ಣಿಸುತ್ತದೆ. ರಾಮಾನುಜರ

ಅಭಿಪ್ರಾಯದಲ್ಲಿ ಇಡೀ ಶ್ಲೋಕವು ಜೀವರನ್ನೇ ವರ್ಣಿಸುತ್ತದೆ (**नाभावो विद्यते सतः**).

ಆದರೆ ಮಧ್ವಾಚಾರ್ಯರು ಈ ಶ್ಲೋಕವನ್ನು ಬ್ರಹ್ಮನಿಗೆ ಅನ್ವಯಿಸುತ್ತಾರೆ. ಜಡವಾದ ಪ್ರಕೃತಿಯಂತೆ ನಿತ್ಯವಾದವು ಜೀವರೂ ಅಹುದು, ಬ್ರಹ್ಮನೂ ಅಹುದು. ಜೀವರು ಅಣುವಾದುದರಿಂದ ವ್ಯಕ್ತಿಶಃ ವ್ಯಾಪ್ತರಲ್ಲ. ಬ್ರಹ್ಮನು ಸ್ವರೂಪತಃ ವ್ಯಾಪ್ತನು ಮುಖ್ಯವಾಗಿ ಇದು ಮತ್ತು ಮುಂದಿನ ೧೮ನೇ ಶ್ಲೋಕವನ್ನು ಕೂಡಿಯೇ ಅನ್ವಯಿಸಬೇಕಾಗಿದೆ. ಯಾಕೆಂದರೆ ಆದರ ಕೊನೆಯಲ್ಲಿ **तस्मात् युध्यस्व भारत** (ಆದುದರಿಂದ ಭಾರತ ಶ್ರೇಷ್ಠನೇ ನೀನು ಯುದ್ಧ ಮಾಡು ಎಂದು ಹಿಂದಿನ ಎರಡು ಶ್ಲೋಕಗಳನ್ನು ಹೇತುವಿನಂತೆ ಉಪಯೋಗಿಸಿದ್ದಾರೆ.) ಯುದ್ದ ಮಾಡತಕ್ಕವನು ಜೀವನು ಆವನು ಯಾಕೆ ಯುದ್ಧ ಮಾಡಬೇಕೆನ್ನುವದಕ್ಕೆ ಕಾರಣವೆಂದರೆ ಬ್ರಹ್ಮನು ವ್ಯಾಪ್ತನು, ನಿತ್ಯನು ಅವನ ನಾಶವನ್ನು ಮಾಡಲಿಕ್ಕೆ ಯಾರಿಗೂ ಶಕ್ಯವಿಲ್ಲ ನಾಶವು ನಾಲ್ಕು ತರಹದು ಬ್ರಹ್ಮನು ನಾಲ್ಕೂ ತರಹದ ನಾಶಕ್ಕೆ ಅರ್ಹನಲ್ಲ. ಜೀವನು ಮಾತ್ರ ನಾಲ್ಕೂ ತರಹದ ನಾಶಕ್ಕೆ ಅರ್ಹನು. ಆದುದರಿಂದ ಅವನು ಅಸ್ವತಂತ್ರನು ಪರಮಾತ್ಮನ ಮೇಲೆ ಅವಲಂಬಿಸಿದವನು ಅವನು ದೇವರನ್ನು ಸಂತೋಷಗೊಳಿಸಲಿಕ್ಕೆ ತನ್ನ ಕರ್ತವ್ಯವನ್ನು ಮಾಡಬೇಕಾಗುತ್ತದೆ ಆದುದರಿಂದ ಆ ಕರ್ತವ್ಯ ಮಾಡಲಿಕ್ಕೆ ಯುದ್ಧ ಮಾಡು ಎಂದು ಭಗವಂತನ ವಿಚಾರಸರಣಿಯು

ಮಧ್ವಾಚಾರ್ಯರು ನಿತ್ಯವಸ್ತುಗಳನ್ನು ಹೇಳುವಾಗ ಪ್ರಕೃತಿಜೀವ ಈಶ್ವರರೊಡನೆ ವರ್ಣ ಮತ್ತು ದೇಶ (ಆಕಾಶ)ಗಳನ್ನು ಹೇಳಿದ್ದಾರೆ. ಯಾವದು ದೇಶತಃ ವ್ಯಾಪ್ತವಾಗಿದೆ ಆದು ಅವಿನಾಶಿಯಾಗಿದೆ ಎನ್ನುವದಕ್ಕೆ ಇವು ದೃಷ್ಟಾಂತಗಳು. ವರ್ಣವು ಹೇಗೆ ಸರ್ವವ್ಯಾಪ್ತವೆಂದು ಆಶ್ಚರ್ಯವೆನಿಸಬಹುದು. ವರ್ಣಗಳೆಂದರೆ ಧ್ವನಿ ತರಂಗಗಳು (Sound Vibrations). ಎಲ್ಲ ಮೂಲಾಕ್ಷರಗಳ ತರಂಗಗಳು ಆಕಾಶದಲ್ಲಿ ಸರ್ವತ್ರವ್ಯಾಪ್ತವಾಗಿರುತ್ತವೆ; ಮತ್ತು ಅವು ನಿತ್ಯವಿರುತ್ತವೆ ನಾವು ಉಚ್ಚಾರ ಮಾಡಿದಾಗ ಉಚ್ಚಾರಕ್ರಿಯೆಯು ಹೊಸ ವರ್ಣವನ್ನು ಹುಟ್ಟಿಸುವದಿಲ್ಲ. ಆದರೆ ಆಕಾಶದಲ್ಲಿರುವ ವರ್ಣವನ್ನೇ ಅಭಿವ್ಯಕ್ತಗೊಳಿಸುತ್ತದೆ. ವರ್ಣವನ್ನು ಉಚ್ಚರಿಸಿದಾಗ ಇದು ನಾನು ಮೊದಲು ಉಚ್ಚರಿಸದ ವರ್ಣವೇ ಎಂದು ನೆನಿಸಿಕೊಳ್ಳುತ್ತಾನೆ ಅಕ್ಷರವು ಕ್ಷಣಿಕವಾಗಿದ್ದರೆ ಈ ನೆನಪು ಮಾಡಿಕೊಳ್ಳುವದು (ಪ್ರತ್ಯಭಿಜ್ಞೆಯು) ಅರ್ಥವಿಲ್ಲದ್ದಾಗುತ್ತದ. ಕಾಲವು ನಿತ್ಯವಾಗಿದ್ದರೂ ಖಂಡ ಕಾಲಗಳು (ತಾಸು, ದಿವಸ, ವಾರ, ತಿಂಗಳ ಮೊದಲಾದವು ಅನಿತ್ಯವಾಗಿರುತ್ತವೆ.)

ಅಲ್ಲಿ ಈ ವ್ಯಾಪ್ತಿಗೆ ವ್ಯಭಿಚಾರ ಬಂದರೂ ಸಾಮಾನ್ಯವಾಗಿ ಈ ವ್ಯಾಪ್ತಿಯು ಅವ್ಯಭಚರಿತವಾಗಿದೆ

ಪ್ರಭುಪಾದರು ಮಾತ್ರ ತಮ್ಮ Gita as it is ದಲ್ಲಿ ಈ ಶ್ಲೋಕಕ್ಕೆ ಟಿಪ್ಪಣಿ ಬರೆಯುವಾಗ ಜೀವವು ಅಣು ಎಂದು ಸಾಧಿಸಿ ಆ ಮೇಲೆ ಅದು ನಿತ್ಯ ವಾಗಿದೆ ಯಾಕೆಂದರೆ ಅದು ದೇಹದ ತುಂಬ ವ್ಯಾಪಿಸಿದೆ ಹೃದಯದಲ್ಲಿ ಅಣು ವಾಗಿದ್ದರೂ ಜೀವನು ಚೇತನನಾದುದರಿಂದ ಪ್ರಕಾಶದಂತೆ ಆ ಅರಿವು ದೇಹದ ತುಂಬ ವ್ಯಾಪಿಸಿದೆ ಜೀವವು ಅಣು ಎಂಬ ವಿಷಯದಲ್ಲಿ ಪ್ರಮಾಣಗಳನ್ನು ಉದಾಹರಿಸುತ್ತಾರೆ. ಶ್ವೇತಾಶ್ವತರ ಉಪನಿಷತ್ತಿನಲ್ಲಿ

**बालाग्रशतभागस्य शतधाकल्पितस्यच**
**भगोजीव. स विज्ञेयः सचानत्यायकल्पते ।।**

ಕೂದಲ ತುದಿಯನ್ನು ನೂರು ಭಾಗಗಳಾಗಿ ವಿಭಾಗ ಮಾಡಿದರೆ ಮತ್ತು ಇಂಥ ಪ್ರತಿಯೊಂದು ಭಾಗವನ್ನು ಮತ್ತೆ ನೂರು ಭಾಗಗಳನ್ನಾಗಿ ವಿಭಾಗಿಸಿದರೆ ಇಂಥ ಪ್ರತಿಯೊಂದು ಭಾಗದ ಗಾತ್ರವೇ ಜೀವನ ಗಾತ್ರವು ಭಾಗವತದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಇವೇ ಶಬ್ದಗಳುಳ್ಳ **केशाग्रशतभागस्य** ಎಂಬ ಶ್ಲೋಕವನ್ನೂ ಉದಾಹರಿಸುತ್ತಾರೆ. ಇದೇ ಮಾತನ್ನು ಮುಂಡಕೋಪನಿಷತ್ತಿನಲ್ಲಿ ಈ ರೀತಿ ಯಾಗಿ ಹೇಳಿದ್ದಾರೆ ,—

**एषोऽणुरात्मा चेतसावेदितव्यो ।**
**यस्मिन् प्राणः पंचधा संविवेश ।।**
**प्राणैः चित्तं सर्वं ओतं प्रजानाम् ।**
**यस्मिन्विशुद्धे विभवत्येष आत्मा ।।**

"ಈ ಜೀವನು ಅಣುವಾಗಿದ್ದಾನೆ, ಪೂರ್ಣಬುದ್ಧಿಯಿಂದ ಅವನನ್ನು ತಿಳಿಯ ಬಹುದು. ಯಾರನ್ನು ಪ್ರಾಣಗಳು ಐದಾಗಿ ಪ್ರವೇಶಿಸುತ್ತವೆ (ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ.) ಆ ಜನರ ಮನಸು ಪ್ರಾಣಗಳಿಂದ ತುಂಬಿ ಹೋಗಿರು ತ್ತದೆ ಆ ಚಿತ್ತವು ಶುದ್ಧವಾದ ಮೇಲೆ ಈ ಜೀವನು ಪ್ರಕಾಶ ಹೊಂದುತ್ತಾನೆ"*

---

* ವಿಷ್ಣು ಪುರಾಣದಲ್ಲಿ

**नित्यं सर्वगते विष्णौ अणुः जीवोऽव्यवस्थितः ।**
**न चास्य तदधीनत्वं हेतुतोऽपि विचाल्यते ।।**
**निषेधविधिपात्रत्वात् सनातन इतिस्मृत. ।।**

ವೇದಗಳಲ್ಲಿ ಜೀವನ ಅಣುಸ್ವರೂಪವನ್ನು ಒಪ್ಪಿಕೊಂಡಿದ್ದಾರೆ ಇಂಥ ಅಣುವಾದ ಜೀವನು ವಿಷ್ಣುತತ್ವವು ಎಂದರೆ ವ್ಯಾಪ್ತನಾದುದೆಂದು ಹುಚ್ಚರು ತಿಳಿಯುತ್ತಾರೆ.

ಈ ಅಣುಸ್ವರೂಪಿಯಾದ ಜೀವನು ಪರಮಾತ್ಮನೊಡನೆ ಜೀವನ ಹೃದಯದಲ್ಲಿ ಇರುತ್ತಾನೆ. ಆದುದರಿಂದ ಎಲ್ಲ ದೇಹದೊಳಗಿನ ಉತ್ಸಾಹವು ಹೃದಯದಿಂದ ಹೊರಹೊಮ್ಮುತ್ತದೆ.

ರಾಘವೇಂದ್ರರು ವಿವೃತಿಯಲ್ಲಿ **यद्येनततं तत्सर्वं नित्यमेव** ಎಂಬ ವ್ಯಾಪ್ತಿಯನ್ನು ಹೇಳಿ ಅದಕ್ಕೆ ದೃಷ್ಟಾಂತಗಳೆಂದು **वर्णादिजीवादन्यदपिअस्ति तद्व्यापिग्रहणस्थलं** ಹೇಳಿದ್ದಾರೆ "ಯಾವದರಿಂದ ಇದೆಲ್ಲವೂ ವ್ಯಾಪಿಸಲ್ಪಟ್ಟಿದೆಯೋ ಆ ಅಕಾರಾದಿವರ್ಣಸಮುದಾಯವೂ, ಅವ್ಯಾಕೃತ ಆಕಾಶವೂ ಇದೆಲ್ಲವೂ **अविनाशितु** ನಿತ್ಯವಾದವುಗಳೇ ! ಇದು ಅಲ್ಲದೆ ಅವು ಅನಾದಿ" ಯೆಂದೂ ತಿಳಿಯಬೇಕೆಂದು ಹೇಳಿದ್ದಾರೆ **अविनाशि** ಈ ಪದಕ್ಕೆ ಶೀಲಸ್ವಭಾವವನ್ನು ತೋರಿಸುವ **णिनि** ಪ್ರತ್ಯಯವು ಕೊನೆಗೆ ಹತ್ತಿದ್ದರಿಂದ ಸ್ವಾಭಾವಿಕ ವಿನಾಶವು ಅದಕ್ಕೆ ಇಲ್ಲ ಎಂದು ತಿಳಿದರೂ, ಶಾಪದಿಂದಾಗಲೀ ಬಲವಾದ ಪ್ರಯತ್ನದಿಂದಾಗಲೀ ವಿನಾಶವು ಏಕೆ ಆಗಬಾರದು ಎಂದು ಶಂಕಿಸಿದರೆ ಗೀತಾಕಾರರು **विनाशमव्ययस्यास्य** ಮೊದಲಾಗಿ ಇದರ ವಿನಾಶವನ್ನು ಮಾಡಲು ಯಾರಿಗೂಶಕ್ಯವಿಲ್ಲೆಂದು ಹೇಳುತ್ತಾರೆ.

ಒಟ್ಟಿಗೆ ಶಂಕರಾಚಾರ್ಯರು ಮಧ್ವಾಚಾರ್ಯರು ಈ ಶ್ಲೋಕದಿಂದ ಬ್ರಹ್ಮನು ನಿತ್ಯನೆಂದು ಹೇಳುತ್ತಾರೆ. ರಾಮಾನುಜಾಚಾರ್ಯರು ಈ ಶ್ಲೋಕದಿಂದ ಜೀವರು ನಿತ್ಯರೆಂದು ಹೇಳುತ್ತಾರೆ ಶಂಕರಾಚಾರ್ಯರು 'ಬ್ರಹ್ಮನಲ್ಲಿ ತೋರುವ ಜಗತ್ತಿಗೆ ಅಧಿಷ್ಠಾನವಾಗಿ ಬ್ರಹ್ಮನು ವ್ಯಾಪ್ತನಾದುದರಿಂದ ಅವನು ನಿತ್ಯನು' ಎಂದು ಹೇಳುತ್ತಾರೆ. ಆದರೆ ಮಧ್ವಾಚಾರ್ಯರು ಈ ಭ್ರಮ ಅಥವಾ ಮಾಯಾವಾದಕ್ಕೆ ಗೀತೆಯಲ್ಲಿ ಆಧಾರವೇ ಇಲ್ಲ ಆದುದರಿಂದ ಬ್ರಹ್ಮನು ಸತ್ಯವಾಗಿ ಜಗತ್ತಿನಲ್ಲಿ ವ್ಯಾಪ್ತನಾದುದರಿಂದ ಅವನು ನಿತ್ಯನು ಎಂದು ಸರಳವಾದ ವಾದವನ್ನು ಮುಂದಿಟ್ಟಿದ್ದಾರೆ. ಇನ್ನು ರಾಮಾನುಜರು ಜೀವರು ಕೂಡ ಸಮೂಹದಲ್ಲಿ ವ್ಯಾಪ್ತರು ಎಂದು ಹೇಳಿ ಅವರ ನಿತ್ಯತ್ವವನ್ನು ಸಾಧಿಸುತ್ತಾರೆ. ಅವರ ಅನುಮಾನ ನಿರ್ಣಯವು ಮಧ್ವಾಚಾರ್ಯರಿಗೆ ಸಮ್ಮತವೇ ಆದರೆ ನಿರ್ಣಯಕ್ಕೆ ಬಂದ ರೀತಿಯು ಸರಿಯಲ್ಲವೆಂದು ಅವರ ವಾದ. ಆದರೆ **तत** ಎನ್ನುವದಕ್ಕೆ ಅಣುಸ್ವರೂಪದ ಜೀವಿಗಳು ಸಹ ಸಮೂಹರೂಪದಿಂದ ವ್ಯಾಪ್ತರೆಂದು ಹೇಳುವದು ಸಮಂಜಸವಾಗಲಾರದು. ಹಾಗೆಯೆ ನಿತ್ಯತ್ವಕ್ಕೆ ಸಾಧಕವಾಗಿ ಜೀವನು ಅಣುವಾದರೂ ಪ್ರಕಾಶದಂತೆ ಅರುವಿನಿಂದ ದೇಹ

ವಲ್ಲಿ ವ್ಯಾಪಿಸಿದ್ದಾನೆಂದು ಹೇಳುವದೂ ಸಮಂಜಸವಾಗಿ ತೋರುವದಿಲ್ಲ ಆದುದ ರಿಂದ ಜೀವನ ನಿತ್ಯತ್ವವನ್ನು ಈ ಮೊದಲೇ ಪ್ರಕೃತಿ ಅಥವಾ ಪರಮಾತ್ಮನೊಡನೆ ಹೋಲಿಸಿ ಸಾಧಿಸಿದ್ದಾಗಿದೆ. ಅದನ್ನೇ ಈಗ ಪೂರ್ವೋಕ್ತಿಯ ಮೇಲೆ ಒಂದ ಸಂಶಯಗಳನ್ನು ನಿವಾರಣೆಮಾಡುತ್ತ ಭಗವಂತನು ಗಟ್ಟಿಮಾಡುತ್ತಾನೆ.

೧೮ ನೇ ಶ್ಲೋಕಕ್ಕೆ ಎರಡು ಅರ್ಥಗಳನ್ನು ಹೇಳಿದ್ದಾರೆ :

೧) ಮೇಲೆ ಕೊಟ್ಟಿದ್ದು ಒಂದು ಅರ್ಥ . ಜೀವನ ದೇಹವು ನಾಶಹೊಂದ ತಕ್ಕದ್ದು, ಪರಮಾತ್ಮನದು ನಾಶರಹಿತವಾದುದು ಆದುದರಿಂದ ಅವನ ಪೂಜೆಗಾಗಿ ಯುದ್ಧಮಾಡು.

೨) ಜೀವನ ದೇಹವು ನಾಶಹೊಂದತಕ್ಕದ್ದು ಆದರೆ ಜೀವನು ಪರಮಾತ್ಮನ ಪ್ರತಿಬಿಂಬನು. ಪರಮಾತ್ಮನು ವ್ಯಾಪ್ತನು. ಆದುದರಿಂದ ನೀನು ಯುದ್ಧಮಾಡು ಎಂದು ಎರಡನೇ ಅರ್ಥ.

ಪರಮಾತ್ಮನು ನಿತ್ಯನಾದುದರಿಂದ ಅವನನ್ನು ಪೂಜಿಸಬೇಕೆಂದು ಹೇಳಿದ್ದು ಸರಿಯಲ್ಲ ಯಾಕೆಂದರೆ ಜೀವನೂ ಸಹ ಅವನಂತೆ ನಿತ್ಯನಿದ್ದಾನೆ ಪರಮಾತ್ಮ ನನ್ನೇಕೆ ಪೂಜಿಸಬೇಕು ? ಎಂದರೆ ಜೀವನಕಿಂತ ಹರಿಯು ವಿಶೇಷವಾಗಿದ್ದಾನೆಂದು ಈ ಎರಡು ಶ್ಲೋಕಗಳಿಂದ ಹೇಳುತ್ತಾರೆ ಭಗವಂತನು ದೇಶತಃ ವ್ಯಾಪ್ತನು, ಕಾಲತಃ ವ್ಯಾಪ್ತನು, ಗುಣತಃ ವ್ಯಾಪ್ತನು ಎಲ್ಲ ದೇಶದಲ್ಲಿರುತ್ತಾನೆ, ಎಲ್ಲ ಕಾಲ ದಲ್ಲಿರುತ್ತಾನೆ, ಎಲ್ಲಗುಣಗಳಿಂದ ತುಂಬಿದ್ದಾನೆ. ವರ್ಣ ಮತ್ತು ಆಕಾಶಾದಿಗಳಿಗೆ ದೇಶತಃ ಕಾಲತಃ ವ್ಯಾಪ್ತಿ ಇದ್ದರೂ ಗುಣತಃ ವ್ಯಾಪ್ತಿಯಿಲ್ಲ. ಜೀವನಿಗೆ ಕಾಲತಃ ವಾಪ್ತಿಯಿದ್ದರೂ ದೇಶತಃ ಗುಣಾತಃ ವ್ಯಾಪ್ತಿಯಿಲ್ಲ ಆದುದರಿಂದ ಪರಮಾತ್ಮನು ಎಲ್ಲರಿಗಿಂತ ವಿಶೇಷನು. ಪರಮಾತ್ಮನು ಹಿಂದೆ ಹೇಳಿದಂತೆ ನಾಲ್ಕೂ ತರಹದ ನಾಶ ರಹಿತನು ಮುಕ್ತರು ನಾಶಹೊಂದುವ ದೇಹರಹಿತರಾಗಿ ನಾಶಹೊಂದದ ದೇಹವುಳ್ಳವರೆಂದ ಮೇಲೆ ಪರಮಾತ್ಮನು ನಾಶಹೊಂದದ ದೇಹವುಳ್ಳವನೆಂದು ಏನು ಹೇಳುವದು ? ಆದುದರಿಂದ ಭಗವಂತನು ಪರಮ ಪೂಜ್ಯನು.

ಹೀಗಿದ್ದರೂ ಜೀವನು ಪರಮಾತ್ಮನ ಪ್ರತಿಬಿಂಬನೆಂದು ಶಾಸ್ತ್ರಗಳು ಹೇಳು ತ್ತವೆ ಪ್ರತಿಬಿಂಬಕ್ಕೆ ಒಂದು ಉಪಾಧಿ (medium) ಬೇಕು. ಮುಖದ ಪ್ರತಿ ಬಿಂಬವು ಕನ್ನಡಿಯೆಂಬ ಉಪಾಧಿಯಿಂದ ಹುಟ್ಟುತ್ತದೆ. ಕನ್ನಡಿಯು ಒಡೆದು ಹೋದರೆ ಕನ್ನಡಿಗೂ ಮುಖಕ್ಕೂ ಸಂಬಂಧ ತಪ್ಪಿದರೆ ಪ್ರತಿ ಬಿಂಬವು ನಾಶವಾಗು ತ್ತದೆ. ಎಂದಮೇಲೆ ಜೀವನು ನಿತ್ಯನು ಹೇಗೆ ಎಂದರೆ ಅವನು ನಿತ್ಯವಾದ ಬಿಂಬ ವುಳ್ಳವನು. ಯಾಕೆಂದರೆ ಜೀವನ ಸ್ವರೂಪವೇ ಉಪಾಧಿಯು; ಅದು ನಿತ್ಯ

ವಾದುದು ಮತ್ತು ಪರಮಾತ್ಮನಿಗೂ ಜೀವನಿಗೂ ಸಂಬಧವು ನಿತ್ಯವಾದುದು. ಆದುದರಿಂದಲೇ ಜೀವನಿಗೆ **अप्रमेय** ನೆಂದು ಹೆಸರು.* **प्रमा** ಎಂದರೆ ಪರಿಮಿತಿಯು. ಆ ಪರಿಮಿತಿಯಿಲ್ಲದವನು ಎಂದರೆ ಸರ್ವಗತನು ಎಂದು ಅರ್ಥ ಆದರೆ ಜೀವನು ಅಣುವಾದುದರಿಂದ ಅವನು ಸರ್ವಗತನಾಗಲಾರನೆಂಬ ಸಂದೇಹಬಂದರೆ **अतद्भावे सामानाधिकरण्यं सारूप्यंगमयति** ಎಂಬ ನಿಯಮವಿದೆ. ಒಂದೇ ವಿಭಕ್ತಿಯಲ್ಲಿ ಎರಡು ಪದಗಳನ್ನು ಉಪಯೋಗಿಸುವದು ಒಂದರಲ್ಲಿ ಇನ್ನೊಂದು ಇಲ್ಲದಿದ್ದರೆ ಅವೆರಡರ ನಡುವೆ ಸಾದೃಶ್ಯವನ್ನು ತೋರಿಸುವದು. ಇದಕ್ಕೆ ಉದಾರಣೆಯೆಂದರೆ **सिंहोमाणवकः ;** ಸಿಂಹ ಮತ್ತು ಮಾಣವಕ ಎರಡು ಪದಗಳು ಒಂದೇ ವಿಭಕ್ತಿಯಲ್ಲಿರುವವು ಆದರೆ ಮಾಣವಕನು ಸಿಂಹವಲ್ಲ. ಆದುದರಿಂದ ಸಿಂಹಮಾಣವಕರು ಸದೃಶರು ಎಂದು ಅರ್ಥ. ಜೀವನು ಸರ್ವಗತ ಈಶ್ವರನು ಎಂದಾಗ ಜೀವನು ಸರ್ವಗತ ಈಶ್ವರನು ಆಗಲಾರನು. ಆಗ ಜೀವನು ಸರ್ವಗತ ಈಶ್ವರನಂತೆ ಇರುವನು ಎಂದು ಅರ್ಥವಾಗುವದು ಜೀವನು ಈಶ್ವರನ ಪ್ರತಿಬಿಂಬನು ಎಂದಮೇಲ ನಿತ್ಯನು ಆದುದರಿಂದ ಬಿಂಬನಾದ ಪರ ಮಾತ್ಮನ ಪ್ರೀತ್ಯರ್ಥವಾಗಿ ಯುದ್ಧಮಾಡಬೇಕೆಂದು ರಾಘವೇಂದ್ರರು ತಮ್ಮ ವಿವೃತಿಯಲ್ಲಿ ಹೇಳಿದ್ದಾರೆ

ಆದರೆ ಮುಖ್ಯವಾಗಿ ಈ ಶ್ಲೋಕದ ಅನ್ವಯ ಹಚ್ಚುವದು ಕಠಿಣವಾಗಿದೆ. ಷಷ್ಠಿ ವಿಭಕ್ತಿಯಲ್ಲಿರುವ ಎಲ್ಲ ಪದಗಳೂ ಒಬ್ಬನಿಗೇ ಸಂಬಂಧಿಸಿರಬೇಕು. **नित्यस्य, शरीरिणः, अनाशिनः, अप्रमेयस्य** ಈ ನಾಲ್ಕೂ ಪದಗಳೂ ಒಬ್ಬನನ್ನೇ ಬೋಧಿಸ ಬೇಕು. ಅದು **शरीरिणः** ಎಂಬ ಪದದಿಂದ (ಶರೀರವುಳ್ಳ) ಅದು ಜೀವನೇ ಇರಬೇಕು. ಈಶ್ವರನಲ್ಲವೆಂದು ಗೊತ್ತಾಗುತ್ತದೆ, ಆದರೆ **अप्रमेयस्य** ಎಂಬ ವಿಶೇಷಣವು ಜೀವನಿಗೆ ಹೊಂದಿಕೆಯಾಗುವದಿಲ್ಲ. ಜೀವನು ಅಹಂ ಪ್ರತ್ಯಯದಿಂದ ಬೋಧ್ಯನು, ಈಶ್ವರನು ಸಹ ವೇದಗಳಿಂದ ವೇದ್ಯನು ಆದರೂ ಪೂರ್ತಿಯಾಗಿ ವೇದ್ಯನಲ್ಲವೆಂಬ ಅರ್ಥದಲ್ಲಿ **अप्रमेय** ನು ಎನಬಹುದು. ಹೀಗೆ ಮೊದಲಿನ ಮೂರು ವಿಶೇಷಣಗಳು ಜೀವನಿಗೆ; **अप्रमेय** ವೆನ್ನುವದು ಈಶ್ವರನಿಗೆ ಎಂದು ಹೇಳಿದರೆ ವಾಕ್ಯ ಪೂರ್ತಿಯಾಗುವದಿಲ್ಲ. **अप्रमेयस्य** ಒಂದೆ ಷಷ್ಠಿ ವಿಭಕ್ತಿಯಲ್ಲಿಯ ಪದವು ವಾಕ್ಯಪೂರ್ತಿಗಾಗಿ ಪದಾಂತರವನ್ನು ಅಪೇಕ್ಷಿಸುತ್ತದೆ. ಅದಕ್ಕೆ **अनाशिनः**

---

* ರಾಧಾಕೃಷ್ಣನ್ನರು **अप्रमेय** ನೆಂದರೆ 'ಸಾಮಾನ್ಯ ಜ್ಞಾನ ಸಾಧನೆಗಳಿಂದ ತಿಳಿಯಲ್ಪಡದವನು' (ಜೀವನು) ಎಂದು ಅರ್ಥ ಹೇಳಿದ್ದಾರೆ ( It is incomprehersible because it is not known by the ordinary means of knowledge.)

ಪದವನ್ನು ಜೋಡಿಸಿ **अनाशिनः अप्रमेयस्य (पूजार्थं) तस्मात् युध्यस्व भारत** "ನಾಶರಹಿತನಾದ ಸರ್ವಗತನಾದ ಈಶ್ವರನ (ಗೌರವಾರ್ಥವಾಗಿ) ಯುದ್ಧಮಾಡು "

ಇದು ಗೌಣವೆಂಬ ಅಸ್ವಾರಸ್ಯದಿಂದಲೇ ಮಧ್ವಾಚಾರ್ಯರು ಎಲ್ಲ ವಿಶೇಷಣ ಗಳನ್ನೂ ಜೀವನಿಗೇ ಅನ್ವಯಿಸುವ ಸಾಹಸ ಮಾಡಿದ್ದಾರೆ ನಾಶರಹಿತನು ಮತ್ತು ಪರಮಾತ್ಮನಂತ ಆದ ಜೀವನ ದೇಹಗಳು ನಾಶ ಹೊಂದುವವು, ಶರೀರ ಧಾರಿಯಾದ ನಿತ್ಯನಾದ ನಿತ್ಯಬಿಂಬ ಸಂಬಂಧವುಳ್ಳ ಪರಮಾತ್ಮನ ಪ್ರತಿಬಿಂಬ ನಾದ ಜೀವನ ದೇಹವು ನಶ್ವರವಾದುದು. ಆದುದರಿಂದ (ಅವನ ಪೂಜಾರ್ಥ ವಾಗಿ) ಯುದ್ಧ ಮಾಡು ಎಂದು ಸರಸವಾಗಿ ಅನ್ವಯವನ್ನು ಹಚ್ಚಿದ್ದಾರೆ

ಆದರೆ ಬಿಂಬ ಪ್ರತಿಬಿಂಬಭಾವದ ಸಂಬಂಧವನ್ನು ಪೂರ್ತಿಯಾಗಿ ಜಗ್ಗ ಬಾರದು ಪ್ರತಿಬಿಂಬದ ಅರ್ಥವು ಇಷ್ಟೇ ! ೧) ಜೀವನು ಪೂರ್ತಿಯಾಗಿ ಅಸ್ವ ತಂತ್ರನು ೨) ಬಿಂಬದಿಂದ ಅವನು ಭಿನ್ನನು ೩) ಜೀವನು ಕೆಲವೊಂದು ಅಂಶ ದಲ್ಲಿ ಬಿಂಬನಾದ ಪರಮಾತ್ಮನನ್ನು ಹೋಲುತ್ತಾನೆ. (ಜೀವನು ಪರಮಾತ್ಮನಂತೆ ಸತ್ ಚಿತ್ ಆನಂದನಿದ್ದಾನೆ)

**तस्मात् युध्यस्वभारत** ಅರ್ಜುನನೇ ಈ ಕಾರಣದಿಂದ ಯುದ್ಧ ಮಾಡು. ಯಾವ ಕಾರಣದಿಂದ ?

೧) ಶಂಕರಾಚಾರ್ಯರು ಹೀಗೆ ಹೇಳುತ್ತಾರೆ :- **यस्मात् आत्मा नित्यः अविक्रियश्च तस्मात् युध्यस्व.** ಯಾವ ಕಾರಣದಿಂದ ಆತ್ಮನು ನಾಶ ಹೊಂದುವ ದಿಲ್ಲ, ಮತ್ತು ಯಾವ ವಿಕಾರವನ್ನೂ ಹೊಂದುವದಿಲ್ಲ ಆ ಕಾರಣದ ದಶೆಯಿಂದ **युध्यस्व** ಯುದ್ಧರೂಪ ಕರ್ಮದಿಂದ ಉಪರತಿಯನ್ನು ಹೊಂದಬೇಡ. ಇಲ್ಲಿ ಆತ್ಮನ ಸ್ವರೂಪವನ್ನು ತಿಳಿಸಿ ಯುದ್ಧ ಮಾಡು ಯೆಂದು ಕರ್ಮವನ್ನು ಹೇಳಿದ್ದರಿಂದ ಜ್ಞಾನದಗೂಡ ಕರ್ಮವನ್ನೂ ಹೇಳಿದ್ದರಿಂದ **ज्ञानकर्मसमुच्चय** ವನ್ನು ಹೇಳಿ ದಂತಾಯಿತು ಅದು ಶಾಂಕರ ಸಿದ್ಧಾಂತಕ್ಕೆ ವಿರುದ್ಧವಾದುದು. ಎಂದರೆ **युध्यस्व** ಎಂದು ಹೇಳುವದರಿಂದ ಇಲ್ಲಿ ಯುದ್ಧವನ್ನು ಮಾಡಬೇಕೆಂದು ವಿಧಾನ ಮಾಡುವ ದಿಲ್ಲ ಯುದ್ಧವು ಪ್ರಾರಂಭವಾದಾಗ ಇವನು ಶೋಕ ಮೋಹದಿಂದ ಪ್ರತಿಬದ್ಧ ನಾಗುತ್ತಾನೆ ಯುದ್ಧಕ್ಕಿರುವ ಆ ಪ್ರತಿಬಂಧವನ್ನು ಮಾತ್ರ ಭಗವಂತನು ನಿವಾರಿಸುತ್ತಾನೆ. ಅರ್ಜುನನು ಸ್ವಾಭಾವಿಕವಾಗಿ ಯುದ್ಧದಲ್ಲಿ ಪ್ರವೃತ್ತನಾಗು ತ್ತಾನೆ.

೨) ರಾಮಾನುಜರು ಹೀಗೆ ಹೇಳುತ್ತಾರೆ— "ದೇಹವು ವಿನಾಶಸ್ವಭಾವವುಳ್ಳದ್ದು, ಆತ್ಮನು ನಿತ್ಯಸ್ವಭಾವವುಳ್ಳವನು (ಆತ್ಮ **ಪ್ರಮಾತೃ** ಎಂದರೆ ತಿಳಿಯುತಕ್ಕವನಾದುದರಿಂದ ನಿತ್ಯನು; ದೇಹವು **ಪ್ರಮೇಯ** ಎಂದರೆ ತಿಳಿಯಲ್ಪಡತಕ್ಕವಾದುದರಿಂದ ವಿನಾಶಿಯು). ಆದುದರಿಂದ ಎರಡೂ ಶೋಕಕ್ಕೆ ಕಾರಣಗಳಾಗಲಾರವು ತನ್ನಮೇಲೆ ಮತ್ತು ಪರಕೀಯರ ಮೇಲೆ ಆಗತಕ್ಕ ಮತ್ತು ತಪ್ಪಿಸಲಿಕ್ಕೆ ಬಾರದ ಕಠೋರವಾದ ಶಸ್ತ್ರಗಳ ಹೊಡತಗಳನ್ನು ಧೈರ್ಯದಿಂದ ಸಹಿಸಿಕೊಂಡು ಅಮೃತತ್ವವನ್ನು ಹೊಂದುವ ಸಲುವಾಗಿ ಮನಸಿನಲ್ಲಿ ಇಚ್ಛೆಮಾಡದೆ ಇದ್ದ ಫಲವುಳ್ಳ ಯುದ್ಧವೆಂಬ ಕರ್ಮವನ್ನು ಮಾಡು."

೩) ರಾಘವೇಂದ್ರಸ್ವಾಮಿಗಳು ತಮ್ಮ ಗೀತಾ ವಿವೃತ್ತಿಯಲ್ಲಿ ಹೀಗೆ ಹೇಳಿದ್ದಾರೆ— "ಪರಮಾತ್ಮನೆಂಬ ಬಿಂಬ ಮತ್ತು ಜೀವವೆಂಬ ಸ್ವರೂಪ ಉಪಾಧಿ ಮತ್ತು ಅವುಗಳ ಸಂಬಂಧವು ನಾಶವಾಗದಿರುವದರಿಂದ, ಈ ನಿಮಿತ್ತಕವಾಗಿ ಜೀವ ಚೇತನನು ನಾಶ ಹೊಂದುತ್ತಾನೆಂಬ ಶಂಕೆಗೆ ಅವಕಾಶವೇ ಇಲ್ಲ, ಅನುಮಾನದಿಂದಲೂ ಈ ಹಿಂದೆ ಜೀವನು ನಿತ್ಯನೆಂದು ಸಿದ್ಧವಾದುದರಿಂದ, ಮುಪ್ಪಿನ ದೇಹ ಹೋದರೂ ಒಳ್ಳೆ ಆರೋಗ್ಯಕರವಾದ ಬೇರೆ ದೇಹವು ಬರುವದರಿಂದ ಬಂಧುಗಳೊಡನೆ ದರ್ಶನ ಸ್ಪರ್ಶ ಭಾಷಣಗಳು ಇಲ್ಲದಿರುವದರಿಂದ ಆಗತಕ್ಕ ಶೋಕವನ್ನು, ಒಳ್ಳೇ ಪುರುಷಾರ್ಥಕ್ಕೆ ಕಾರಣವಾದ, ಅಭಿಮಾನತ್ಯಾಗದಿಂದ ನಿವಾರಣೆ ಮಾಡಲಿಕ್ಕೆ ಶಕ್ಯವಿರುವದರಿಂದ, ಭಗವಂತನ ಪೂಜೆಯೆಂದು ತಿಳಿದು ಯುದ್ಧವನ್ನು ಮಾಡು."

ಒಟ್ಟಾರೆ ಪರಮಾತ್ಮನು ಚತುರ್ವಿಧ ನಾಶರಹಿತನಾದುದರಿಂದ ಜೀವನು ದೇಹ ಹಾನಿರೂಪನಾಶವುಳ್ಳವನಾದುದರಿಂದ ಅಥವಾ ದೇಹವು ನಾಶ ಹೊಂದುವದೇ ಆದುದರಿಂದ ಆ ಪರಮಾತ್ಮನ ಪೂಜೆಗಾಗಿ ಯುದ್ಧ ಮಾಡು ಎಂದು ಹೇಳುವದು ಇವೆಲ್ಲವುಗಳಲ್ಲಿ ಸಾಮಾನ್ಯವಾಗಿದೆ. ಆದರೆ ಅದ್ವೈತಿಗಳ ವ್ಯಾಖ್ಯಾನದ ವಿಷಯದಲ್ಲಿ ಎರಡು ಮೂರು ಮಾತುಗಳನ್ನು ನೆನಪಿನಲ್ಲಿಡಬೇಕು.

೧) ಎಲ್ಲ ಶ್ಲೋಕಗಳಲ್ಲಿ ದೇಹಗಳು ಬಿಸಲ್ಗುದುರೆಯಂತೆ ನಶ್ವರವಾಗಿದ್ದರೆ ಆತ್ಮನು ನಿತ್ಯನಾಗಿದ್ದರೆ ೧೨, ೧೩ ಮತ್ತು ೧೬ನೇ ಶ್ಲೋಕಗಳಲ್ಲಿ ಹೇಳಿದ್ದೇ ಈ ಎರಡು ಶ್ಲೋಕಗಳಲ್ಲಿ ಪುನರುಕ್ತವಾಗಿದೆ. **ಕ್ಷಮೆ** ಎನ್ನುವದಕ್ಕೆ ಏನೂ ಅರ್ಥವೇ ಉಳಿಯುವದಿಲ್ಲ.

೨) ವ್ಯಾವಹಾರಿಕ ಸತ್ಯ, ಪ್ರಾತಿಭಾಸಿಕ ಸತ್ಯ ಎಂಬ ಸತ್ಯದಲ್ಲಿಯ ಭೇದಗಳಿಗೆ ಆಧಾರವೇ ಇಲ್ಲ.

೩) **अंत** ಮತ್ತು **नित्य** ಇವುಗಳನ್ನು ವ್ಯಾವಹಾರಿಕ ಸತ್ಯತೆಯಲ್ಲಿ ವಿಚಾರಿಸುತ್ತಾರೆ. **अनाशिनः अप्रमेयस्य** ಇವುಗಳನ್ನು ಪಾರಮಾರ್ಥಿಕ ಸತ್ಯತೆಯಲ್ಲಿ ವಿಚಾರಿಸುತ್ತಾರೆ, **युध्यस्व** ಇದನ್ನು ಮತ್ತೆ ವ್ಯಾವಹಾರಿಕ ಸತ್ಯತ್ವದಲ್ಲಿ ಎಣಿಸುತ್ತಾರೆ. ಮನಸಿಗೆ ಬಂದಹಾಗೆ ಸತ್ಯತ್ವದ ಅಂತಸ್ತುಗಳನ್ನು ಹೀಗೆ ಬದಲು ಮಾಡುವದು ಯಾವ ರೀತಿಯಿಂದಲೂ ಸರಿಯಾದುದಲ್ಲ,

೪) **युध्यस्व** ಇದರ ಅರ್ಥ ಯೋಜನೆಯಂತೂ ತೀರ ಸ್ವತಂತ್ರ ರೀತಿಯದಾಗಿದೆ. ಇದೇ ಮಾತನ್ನೇ ಪ್ರಭುಪಾದರು ಮತ್ತೊಂದು ವಿಧದಿಂದ ಹೇಳುತ್ತಾರೆ– " ಅರ್ಜುನನು ಆತ್ಮನನ್ನು ಕೊಲ್ಲಲಿಕ್ಕೆ ಬರುವದಿಲ್ಲ, ದೇಹವನ್ನು ಉಳಿಸಲಿಕ್ಕೆ ಬರುವದಿಲ್ಲ. ಅಣುರೂಪಿಯಾದ ಜೀವಾತ್ಮವು ಪುಣ್ಯಕರ್ಮದಿಂದ ಒಳ್ಳೇ ದೇಹವನ್ನು ದೊರಕಿಸುತ್ತದೆ ಆದುದರಿಂದ ಈ ನಿನ್ನ ಪಾಂಚಭೌತಿಕ ದೇಹವನ್ನು ತ್ಯಾಗ ಮಾಡಿಯಾದರೂ ಯುದ್ಧಮಾಡಿ ಪುಣ್ಯವನ್ನು ಸಂಪಾದಿಸು "

**य एनं वेत्ति हंतारं यश्चैनं मन्यते हतं ।**
**उभौ तौ न विजानीतो नायं हंतिन हन्यते ।। १९ ।।**

ಯಾರು ಇವನು (ಜೀವನು) ಮತ್ತೊಬ್ಬ ಜೀವನನ್ನು ಸ್ವತಂತ್ರವಾಗಿ ಕೊಲ್ಲುವವನೆಂದು ತಿಳಿದುಕೊಳ್ಳುತ್ತಾನೆಯೋ ಮತ್ತು ಯಾರು ಈ ಜೀವನು ಕೊಲ್ಲಲ್ಪಟ್ಟವನೆಂದು ತಿಳಿಯುತ್ತಾನೆಯೋ ಇಬ್ಬರೂ ಅಜ್ಞಾನಿಗಳು ಈ ಜೀವನು (ಅಸ್ವತಂತ್ರನಾದುವರಿಂದ) ಸ್ವತಂತ್ರವಾಗಿ ಕೊಲ್ಲುವವನಲ್ಲ. ಜೀವನು ನಿತ್ಯನಾದುದರಿಂದ ಕೊಲ್ಲಲ್ಪಡುವವನಲ್ಲ.

**ವಿಶೇಷ ಟಿಪ್ಪಣಿಗಳು :**

ಈ ಶ್ಲೋಕದಿಂದ ಗೊತ್ತಾಗುವ ಅಂಶವೇನೆಂದರೆ "ಯಾವ ಆತ್ಮನೂ ಕೊಲ್ಲುವದೂ ಇಲ್ಲ, ಕೊಲ್ಲಲ್ಪಡುವದೂಇಲ್ಲ " ಎಂದಮೇಲೆ ಇದರಲ್ಲಿ ಹೊಸದೇನೂ ಇಲ್ಲ.

ಶಂಕರಾಚಾರ್ಯರು– **"युद्धेभीष्मादयः मया हन्यंते । अहमेवतेषांहंता"** ಭೀಷ್ಮ ಮೊದಲಾದವರು ನನ್ನಿಂದ ಕೊಲ್ಲಲ್ಪಡುತ್ತಾರೆ, ನಾನು ಅವರನ್ನು ಕೊಲ್ಲುತ್ತೇನೆ ಎಂಬ ಬುದ್ಧಿಯು ಸುಳ್ಳು. ಈ ಎರಡೂ ಜ್ಞಾನವುಳ್ಳವರು ಆತ್ಮನನ್ನು ತಿಳಿದಿಲ್ಲ ಆತ್ಮನಲ್ಲಿ ಹನನ ಕರ್ತೃತ್ವವನ್ನು ಅಥವಾ ಕರ್ಮತ್ವವನ್ನು ಆರೋಪಿಸುವವನು ಆತ್ಮನನ್ನು ತಿಳಿದಿಲ್ಲ, ಅವನಲ್ಲಿ ಈ ಎರಡೂ ಧರ್ಮಗಳೂ ಇಲ್ಲ ಅವನು

ಅವಿಕಾರಿಯು. ಅವನಲ್ಲಿ ಜನನ-ಮರಣ ರೂಪ ಯಾವ ವಿಕಾರಗಳೂ ಇಲ್ಲ. ಮಧು ಸೂದನ ಸರಸ್ವತಿಯವರೂ ಶಂಕರಾನಂದರೂ ಯಾವವಿಕಾರಗಳೂ ಆತ್ಮನಿಗೆ ಇಲ್ಲದ್ದ ರಿಂದ ಅವನಿಗೆ ಪಾಪಗಳು ತಟ್ಟುವದಿಲ್ಲವೆಂಬುದನ್ನು ಜೋಡಿಸುತ್ತಾರೆ.

ರಾಮಾನುಜಾಚಾರ್ಯರು-"ಆತ್ಮನು ನಿತ್ಯನಾದುದರಿಂದ ಅವನು ಕೊಲ್ಲಪಡೂ ಇಲ್ಲ; ಕೊಲ್ಲಲ್ಪಡುವದೂ ಇಲ್ಲ. ಆತ್ಮನ ಅವಿನಾಶಿತ್ವವನ್ನೂ, ಯಾವ ಭೌತ ವಸ್ತುವೂ ಆತ್ಮನನ್ನು ಕೊಲ್ಲಲಿಕ್ಕೆ ಇಲ್ಲವೆಂದೂ ಈ ಶ್ಲೋಕವು ಸ್ಪಷ್ಟಪಡಿಸುತ್ತ ದೆಂದು ಹೇಳುತ್ತಾನೆ

ಆದರೆ ಅರ್ಜುನನು ಕೊಲ್ಲುವದು ಪಾಪವೆಂದಾಗ ಶ್ರೀ ಕೃಷ್ಣನು ಕೊಂದ ಪಾಪವು ಆತ್ಮನಿಗೆ ತಗಲುವದಿಲ್ಲವೆಂದು ಹೇಳಿದರೆ ಸಮಾಜದಲ್ಲಿ ನೀತಿಯ ನಿರ್ಬಂಧವೇ ಉಳಿಯಲಾರದು ಮನುಷ್ಯನು ಏನೂ ಪಾಪ ಮಾಡಲಾರನೆಂದು ಹೇಳಿದಂತೆ ಆಗುತ್ತದೆ ಇದೇ ಮಾತನ್ನೇ Prof Ranade ಮತ್ತು Dr Belwalkar ಅವರು ತಮ್ಮ History of Indian philosophy vol II 350 ರಲ್ಲಿ ಹೀಗೆ ಹೇಳುತ್ತಾರೆ —To say that Atman dies not is legitimate; to say that weapons cannot cut him nor fire burn him is also legitimate verying of the phrase But to argue that therefore the murderes is no murderer and there is no body really responsible for his action is to carry this **शास्वत अक्रिय** doctrine to a point which if seriously preached would be subversive of all established social institutions and religions sacraments" (ಆತ್ಮನು ಸಾಯುವದಿಲ್ಲೆಂದು ಹೇಳುವದು ನ್ಯಾಯವೇ! ಶಸ್ತ್ರಗಳು ಆತ್ಮನನ್ನು ಕಡಿಯಲಾರವು ಮತ್ತು ಬೆಂಕಿಯು ಆತ್ಮನನ್ನು ಸುಡಲಾರದು ಎಂದು ಹೇಳುವದೂ ಶಬ್ದವಿನ್ಯಾಸಮಾಡಿದ ನ್ಯಾಯವೇ! ಆದರೆ ಆ ಕಾರಣದಿಂದ ಕೊಲೆಗಡಕನು ಕೊಲೆಗಡಕನಲ್ಲ ಮತ್ತು ಆ ಕೊಲೆಪಾತಕಿಯ ದುಷ್ಕರ್ಮಕ್ಕೆ ಯಾರೂ ಹೊಣೆಗಾರರಿಲ್ಲ ಎಂದು ಹೇಳುವ ಈ ಶಾಶ್ವತ ಮತ್ತು ಅಕ್ರಿಯ ತತ್ವಗಳಿಗೆ ಈ ರೂಪವನ್ನೂ ಕೊಟ್ಟರೆ ನಿಜವಾಗಿ ಅದು ಎಲ್ಲ ಸ್ಥಾಪಿತ ವಾದ ಸಾಮಾಜಿಕ ಸಂಸ್ಥೆಗಳನ್ನೂ ಧಾರ್ಮಿಕ ವಿಧಿಗಳನ್ನೂ ನಾಶಪಡಿಸುವದು.*

ಅದಕ್ಕೆ ಮಧ್ವಾಚಾರ್ಯರು ಈ ಶ್ಲೋಕಕ್ಕೆ ಈ ರೀತಿಯಾಗಿ ಅರ್ಥ ಹಚ್ಚಿರು ವರು—೧೨ನೇ ಶ್ಲೋಕದಲ್ಲಿ ಜೀವನು ನಿತ್ಯನು ಎಂದು ಹೇಳಲಾಯಿತು (**नत्वेवाहं**)

---

* Edgerton says—"It is painful to have to add that this doctrine is here applied to a justification of war, and of killing in

ಅದಕ್ಕೆ ಕಾರಣವೆಂದರೆ ಅವನು ಈಶ್ವರನಂತೆ ಅನಾದಿಯಾಗಿದ್ದಾನೆ. ೧೬ನೇ ಶ್ಲೋಕದಲ್ಲಿ ಅವ್ಯಕ್ತವಾದ ಜಡಪ್ರಕೃತಿ ಮೊದಲಾದ ನಿತ್ಯವಸ್ತುಗಳನ್ನು ಉದಾಹರಿಸಲಾಯಿತು. ೧೭ನೇ ಶ್ಲೋಕದಲ್ಲಿ ದೇಶ ಮತ್ತು ವರ್ಣಗಳೂ ನಿತ್ಯವೆಂದು ಸಾರಲಾಯಿತು ೧೮ನೇ ಶ್ಲೋಕದಲ್ಲಿ ದೇಹವು ವಿನಾಶಿಯಾದರೂ ಪ್ರತಿಬಿಂಬಭೂತವಾದ ಜೀವನಿಗೆ ಸ್ವರೂಪವೇ ಉಪಾಧಿಯಾದುದರಿಂದ ಅವನು ನಾಶರಹಿತನೆಂದು ನಿರ್ಣಯಿಸಲಾಯಿತು ಆಮೇಲೆ ಇದರಿಂದ ಪರಮಾತ್ಮನು ಯಾವ ದೇಹ ಸಂಯೋಗ–ವಿಯೋಗಗಳು ಇಲ್ಲದೆ ನಿರಂತರ ನಾಶಶೂನ್ಯನಾದುದರಿಂದ ಅವನು ಸ್ವತಂತ್ರನು ತನ್ನ ಇಚ್ಛೆಗೆ ವಿರುದ್ಧವಾಗಿ ಜೀವನು ತನ್ನ ದೇಹವನ್ನು ಕಳೆದುಕೊಳ್ಳುವದರಿಂದ ಮತ್ತು ಆ ನಿಮಿತ್ತವಾಗಿ ದುಃಖಗಳನ್ನು ಅಸಹಾಯನಾಗಿ ಅನುಭವಿಸಬೇಕಾದುದರಿಂದ ಅವನು ಪರತಂತ್ರನು. ರಾಘವೇಂದ್ರರು ಇದರ ಮೇಲೆ ಆಕ್ಷೇಪವನ್ನು ಈ ರೀತಿಯಾಗಿ ಎತ್ತುತ್ತಾರೆ. ಜೀವನಿಗೆ ಈ ರೀತಿಯಾಗಿ ಬಂದ ನಿತ್ಯತ್ವವೂ ಪಾರತಂತ್ರ್ಯವೂ ಸರಿಹೊಂದುವದಿಲ್ಲ

ಯಾಕೆಂದರೆ ಲೋಕದಲ್ಲಿ 'ಒಬ್ಬನು ಇನ್ನೊಬ್ಬನನ್ನು ಕೊಲ್ಲುತ್ತಾನೆ; ಒಬ್ಬನಿಂದ ಇನ್ನೊಬ್ಬನು ಕೊಲ್ಲಲ್ಪಡುತ್ತಾನೆ ಎಂಬ ವ್ಯವಹಾರವಿದೆ ಈ ವ್ಯವಹಾರದಲ್ಲಿ ಜೀವನು ಕೊಲ್ಲುವದರಲ್ಲಿಯೂ ಕೊಲ್ಲಲ್ಪಡುವದರಲ್ಲಿಯೂ ಸ್ವತಂತ್ರನಿದ್ದಾನೆಂದು ಗೊತ್ತಾಗುತ್ತದೆ ಈ ಆಕ್ಷೇಪಕ್ಕೆ ಈ ಶ್ಲೋಕದಿಂದ ಉತ್ತರ ಕೊಡುತ್ತಾನೆ ಭಗವಂತ "ಯಾವ ಮನುಷ್ಯನು ಜೀವನು ಇನ್ನೊಬ್ಬ ಜೀವನನ್ನು ಸ್ವತಂತ್ರವಾಗಿ ಕೊಲ್ಲುತ್ತಾನೆ; ಅಥವಾ ಇನ್ನೊಬ್ಬನಿಂದ ಸ್ವತಂತ್ರವಾಗಿ ಕೊಲ್ಲಲ್ಪಡುತ್ತಾನೆಂದು ತಿಳಿಯುತ್ತಾನೆ ಅವನು ಏನೂ ತಿಳಿದಿರುವದಿಲ್ಲ ಜೀವನು ನಿತ್ಯನು ಎಂಬುದನ್ನಾಗಲಿ ಅಥವಾ ಭಗವಂತನ ಸ್ವಾತಂತ್ರ್ಯವನ್ನಾಗಲಿ ಅವನು ತಿಳಿದಿರುವದಿಲ್ಲ. ಅವನು ಭ್ರಾಂತನು, ಯಾಕೆಂದರೆ ಅವನು ತಿಳಿದುಕೊಂಡದ್ದು ತಪ್ಪು ಎಂದು ಗೊತ್ತಾಗುತ್ತದೆ ಅವನು ಜೀವವನ್ನು ಕೊಲ್ಲುವದಿಲ್ಲ ಯಾಕಂದರೆ ಜೀವನು ಪ್ರತಿಬಿಂಬನು, ಬಿಂಬನಾದ ಪರಮಾತ್ಮನು ನಿತ್ಯನು, ಪ್ರತಿಬಿಂಬ ಮೂಡಲಿಕ್ಕೆ ಬೇಕಾದ ನಡುವಿನ ಮಧ್ಯಮವು (ಉಪಾಧಿಯು) ಜೀವನ ಸ್ವರೂಪವೇ ಆದುದರಿಂದ

---

general, since the soul cannot be killed and the body does not matter, therefore fight'' Says shri Krishna (2 18) A charitable explantion would be that this is a concession to the dramatic situation of the poem, as inserted in the Mahabharata. While various texts in Gita are hostite to violence But there are other inconses tencies in the Gita.

ಅದೂ ನಿತ್ಯವಾಗಿದೆ ಪರಮಾತ್ಮನು ಜೀವನಿಗೆ ನಿತ್ಯಸಂಬದ್ಧನಾದುದರಿಂದ ಯಾವ ರೀತಿಯಿಂದಲೂ ಜೀವನು ನಾಶಹೊಂದುವದಿಲ್ಲ. ಆದುದರಿಂದ ಒಬ್ಬನು ಇನ್ನೊಬ್ಬನನ್ನು ಕೊಲ್ಲಲಾರನು ಮತ್ತು ಜೀವನು ಕೊಲ್ಲಲ್ಪಡುವದಿಲ್ಲ. ಜೀವನು ಪ್ರತಿಬಿಂಬನಾದುದರಿಂದ ಸ್ವತಂತ್ರವಾಗಿ ಜೀವನು ಯಾರನ್ನೂ ಕೊಲ್ಲಲಾರನು (ಸ್ವತಂತ್ರವಾಗಿ ಯಾವ ಕೆಲಸವನ್ನೂ ಮಾಡಲಾರನು). ಆದುದರಿಂದ ಜೀವನು ಕೊಲ್ಲುತ್ತಾನೆ. ಕೊಲ್ಲಲ್ಪಡುತ್ತಾನೆಂದು ತಿಳಿದುಕೊಳ್ಳುವದು ಭ್ರಮೆ.

ಇದು ಯಾಕೆ ಭ್ರಮೆ ? ಹಾಗೆ ತಿಳಿದುಕೊಳ್ಳುವವರಿಗೆ ಆತ್ಮನ ವಿಷಯ ಏನೂ ಯಾಕೆ ತಿಳಿದಿಲ್ಲ ? ಮತ್ತು ರಾನಡೆಯವರು ಎತ್ತಿದ ಆಕ್ಷೇಪಕ್ಕೆ ಉತ್ತರ ವೇನು ? ಇದನ್ನು ವಿಚಾರಿಸಬೇಕಾಗಿದೆ. ಅದಕ್ಕೆ ಉತ್ತರ ಈ ರೀತಿಯಾಗಿದೆ,—

ದೇವರೊಬ್ಬನೇ ಸ್ವತಂತ್ರಕರ್ತಾ ಈಗ ಅ ಇವನು ಬನನ್ನು ಕೊಲ್ಲುತ್ತಾನೆ. ದೇವರ ಇಚ್ಛೆ ಇಲ್ಲದಿದ್ದರೆ ಅನು ಬನನ್ನು ಕೊಲ್ಲಲಾರ, ಅವನ ಇಚ್ಛೆಯಾದ ಅನ ಕರ್ಮವು ಅವನಿಗೆ ಬನನ್ನು ಕೊಲ್ಲಲಿಕ್ಕೆ ಹಚ್ಚುತ್ತದೆ. ಹಾಗೆ ಬನು ಕೊಲ್ಲಲ್ಪಡಬೇಕಾದರೆ ದೇವರ ಇಚ್ಛೆ ಬೇಕು.

ಇನ್ನು 'ಕೊಲ್ಲು' ಎಲ್ಲ ಕ್ರಿಯೆಗಳ ಪ್ರತಿನಿಧಿಯು; ಇದು ಅದ್ವೈತಿಗಳಿಗೂ ಸಮ್ಮತ, ಆತ್ಮನು ನಿಷ್ಕ್ರಿಯನಾದುದರಿಂದ ಅವನು ಯಾವ ಕ್ರಿಯೆಗಳನ್ನೂ ಮಾಡುವದಿಲ್ಲ ಆದುದರಿಂದ ಅವನು ಯಾವ ಕ್ರಿಯೆಗಳಿಗೂ ಹೊಣೆಗಾರನಾದ ಬಾಧ್ಯಸ್ಥನಾಗುವದಿಲ್ಲ, ಎಂದು, ಹೇಳುತ್ತಾರೆ ಆದರೆ ಮಧ್ವಾಚಾರ್ಯರ ಅಭಿಪ್ರಾಯದಲ್ಲಿ ಜೀವನು ನಿಷ್ಕ್ರಿಯನಲ್ಲ ಅವನು ತಾನು ಮಾಡಿದ ಎಲ್ಲ ಕರ್ಮಗಳಿಗೂ ಬದ್ಧನಾಗಿದ್ದಾನೆ ಮತ್ತು ತನ್ನ ಕರ್ಮಗಳಿಂದ ಪುಣ್ಯ–ಪಾಪಗಳನ್ನು ಗಳಿಸುತ್ತಾನೆ ಆದರೆ ಅವನು ದೇವರು ಕೊಟ್ಟ ಸ್ವಾತಂತ್ರ್ಯದ ಮಿತಿಯಲ್ಲಿ ಕೆಲಸ ಮಾಡುತ್ತಾನೆ. ಬ್ರಹ್ಮ ಸೂತ್ರದಲ್ಲಿ ಜೀವನು **कर्ता शास्त्रार्थवत्वात्** ಕರ್ತಾ ಇದ್ದಾನೆ ಎಂದರೆ ಶಾಸ್ತ್ರದಲ್ಲಿ ಹೇಳಿದ ವಿಧಿ–ನಿಷೇಧಗಳು ಸಫಲವಾಗುತ್ತವೆಂದು ಹೇಳಿದ್ದಾರೆ ಜೀವನು ಹೊಣೆಗಾರನಾದ ಕರ್ಮ ಮಾಡುವವನಾದುದರಿಂದ ಅವನು ಒಳ್ಳೇ ಕರ್ಮಗಳಿಂದ ಪುಣ್ಯವನ್ನು ಗಳಿಸುತ್ತಾನೆ ಕೆಟ್ಟ ಕೆಲಸಗಳಿಂದ ಪಾಪವನ್ನು ಹೊಂದಿ ಅದರಿಂದಾಗತಕ್ಕ ದುಃಖವನ್ನು ಅನುಭವಿಸುತ್ತಾನೆ. ಆದರೂ ಪರಮಾತ್ಮನ ಅಧೀನನಾದುದರಿಂದ ಅವನಿಗೆ ಸ್ವತಂತ್ರವಾದ ಕರ್ತೃತ್ವವು ಇಲ್ಲ.

ಆದುದರಿಂದ ಜೀವನು ತಾನು ಮಾಡಿದ ಎಲ್ಲ ಕರ್ಮಗಳಿಗೂ ಹೊಣೆಗಾರನಾಗಿದ್ದಾನೆಂಬುದನ್ನು ಸಮರ್ಥಿಸಲಿಕ್ಕೆ ಮಧ್ವಾಚಾರ್ಯರ ಆತ್ಮದ ಕಲ್ಪನೆಯು

ಸಮರ್ಥವಾಯಿತು ಅದ್ವೈತವಾಗಿಗಳ ನಿಷ್ಕ್ರಿಯವಾದ ಆತ್ಮನ ಕಲ್ಪನೆಯು ಹೇಗೆ ಸಮಾಜ ವಿಘಾತಕವಾಗಿದೆನ್ನುವದನ್ನು ಇದರಿಂದ ತಿಳಿಯಬಹುದು*

ಇನ್ನು ಯಾರು ಇಬ್ಬರು ತಿಳಿಯದವರು ? ಎಂದರೆ ತಾತ್ಪರ್ಯದಲ್ಲಿ ಮಧ್ವಾಚಾರ್ಯರು ಸ್ಪಷ್ಟಪಡಿಸುತ್ತಾರೆ. ೧) ಯಾವನು ಜೀವನನ್ನು ಸ್ವತ್ರಂತವಾಗಿ ದೇಹದಿಂದ ಹೊರಗೆ ಹಾಕುವೆನೆಂದು ತಿಳಿಯುತ್ತಾನೆ ೨) ಯಾವನು ಈ ಜೀವನನ್ನು ಮತ್ತೊಬ್ಬ ಜೀವನಿಂದ ಹೊರಗೆ ತಳ್ಳಲ್ಪಟ್ಟವನೆಂದು ತಿಳಿಯುತ್ತಾನೆ. ಇವರಿಬ್ಬರು ಅಜ್ಞಾನಿಗಳು ಆದರೆ ಜೀವರು ಪರಮಾತ್ಮನ ಅಧೀನದಲ್ಲಿ ಅವನ ಇಚ್ಛೆಯಂತೆ ಜೀವರನ್ನು ಕೊಲ್ಲಲು ಶಕ್ತರಾಗುತ್ತಾರೆ (**मयैवेते निहताः पूर्वमेव । निमित्तमात्रं भव**) ಇಲ್ಲವಾದರೆ ಭಗವಂತನು ಹೇಳಿದ ಈ ಮಾತು ಹೊಂದಿಕೆ ಯಾಗುವದಿಲ್ಲ.

ಜೀವನಿಗೆ ದೇಹದಿಂದ ಜೀವನನ್ನು ಹೊರಪಡಿಸಬೇಕಾದರೆ ಸ್ವಾತಂತ್ರ್ಯವಿಲ್ಲ; ಆದರೆ ಈಶ್ವರನಿಗೆ ಸ್ವಾತಂತ್ರ್ಯವಿದೆ ಈ ಪಕ್ಷದಲ್ಲಿಯೂ ಜೀವನನ್ನು ಶ್ರೀ ಹರಿಯು ಸಂಹರಿಸುವನೆಂದು ಯಾರು ತಿಳಿಯುತ್ತಾರೋ ಅವನು ಅಜ್ಞನು. ಚೇತನ ಸಂಹಾರ ವನ್ನು ಜೀವನಂತೆ ಈಶ್ವರನೂ ಮಾಡುವದಿಲ್ಲವಾದ ಕಾರಣ **एनं** ಎಂಬ ಪದವು ಜೀವ–ಪರಮಾತ್ಮರಿಬ್ಬರನ್ನೂ ಭೋಧಿಸುತ್ತದೆ.

ಶಂಕರಾಚಾರ್ಯರು ಕೊಲ್ಲುವವನೂ ಕೊಲ್ಲಲ್ಪಟ್ಟವನೂ ಇಬ್ಬರೂ ಅಜ್ಞ ರೆಂದು ಹೇಳುತ್ತಾರೆ. ರಾಮಾನುಜಾಚಾರ್ಯರು ಎಲ್ಲ ಕಡೆಗೆ ಜೀವನ ವಿಷಯವೇ ನಡೆದಿದೆ. ಈಶ್ವರನಿಗೆ ಇಲ್ಲಿ ಸಂಬಂಧವಿಲ್ಲೆಂದು ಹೇಳುತ್ತಾರೆ. ಶಂಕರಾಚಾರ್ಯ

---

* "Now the question arises whether that self is an agent or being itself non-active erroneously ascibes to itself the activities of non-sentient Gunas, soul, by nature is non active. So the soul does not act.

ಬಿಶಪ್ ಕಾಲ್ಡವೆಲ್ಲರೂ ಹೇಳುತ್ತಾರೆ—"ಒಬ್ಬ ಆರೋಪಿಯು ನ್ಯಾಯಾಧೀಶನ ಎದುರಿಗೆ— 'ನಾನು ತಿಳಿದೂ ತಿಳಿದೂ ಕೊಲೆ ಮಾಡಿದ್ದೇನೆ' ಮತ್ತು ಮುಂದೆ, ಜಜ್ಜರಿಗೆ ಮುಂದೆ ಯಾಕೆ ಚೌಕಸಿ ಮಾಡುತ್ತೀರಿ ? ಆತ್ಮನು ಕೊಲ್ಲುವದಿಲ್ಲ, ಮತ್ತು ಕೊಲ್ಲಲ್ಪಡುವದಿಲ್ಲ ಅವನು ನಿತ್ಯ ಮತ್ತು ಅವಿನಾಶಿಯು ಅವನು ಸತ್ತರೆ ಮತ್ತೆ ಹುಟ್ಟುತ್ತಾನೆ. ಹುಟ್ಟಿದರೆ ಮತ್ತೆ ಸಾಯುತ್ತಾನೆ. ಆದುದ ರಿಂದ ನಾನು ಅವನನ್ನು 'ಕೊಂದಿಲ್ಲ,' ಹೀಗೆ ಬಿಶಪ್ಪರು ವಾದ ಮಾಡಿ ಗೀತೆಯು ಇಂಥ ಉಪದೇಶ ಮಾಡಿದೆ ಎಂದು ತಿರಸ್ಕರಿಸಿದ್ದಾರೆ. ಬಿಶಪ್ಪರು ನೆನಪಿಡಬೇಕು— "ಆತ್ಮ ಅಮರವೇ ಇದೆ. ಆದುದರಿಂದ ಅವನಿಗೆ ಫಾಸಿ ಕೊಡಲಿಕ್ಕೆ ಅಡ್ಡಿ ಏನು ? ನಾಶವಂತ ದೇಹ ಯಾವಾಗಾದರೂ ಸಾಯುವದೇ ! ಆದಕ್ಕೆ ಅವನು ಫಾಸಿಗೆ ಒಪ್ಪಲಿ" ಇದು ಬಿಶಪ್ಪರಿಗೆ ಎದುರು ಉತ್ತರ.

ರಿಗೆ ಜೀವ ಈಶ್ವರರೆಂಬ ಭೇದವಿಲ್ಲದ್ದರಿಂದ ಈ ಮಾತು ಇಬ್ಬರಿಗೆ ಸಂಬಂಧಿಸಿದೆ ಅಥವಾ ಇಲ್ಲವೇ ಎಂಬ ಸಂಶಯವೇ ಬರುವದಿಲ್ಲ ಮಧ್ವಾಚಾರ್ಯರು ೧೨ನೇ ಶ್ಲೋಕದಿಂದ ಮುಂದೆ ಶ್ಲೋಕಗಳು ಇಬ್ಬರಿಗೂ ಸಂಬಂಧಿಸುತ್ತವೆಂದು ಹೇಳಿದರು. ಜೀವನೆಂಬ ಪ್ರತಿಬಿಂಬನಿಗೆ ಈಶ್ವರನು ಬಿಂಬನಾದುದರಿಂದ ಇಬ್ಬರಿಗೂ ಸಂಬಂಧ ಬರುತ್ತದೆಂದು ಹೇಳುತ್ತಾರೆ.

ಲೋಕಮಾನ್ಯ ತಿಳಕರು ಈ ಸಂದರ್ಭದಲ್ಲಿ "ಗೀತೆಯಲ್ಲಿ (೧೧, ೩೩) ಭೀಷ್ಮ ದ್ರೋಣಾದಿಗಳನ್ನು ಕಾಲರೂಪದಿಂದ ನಾನೇ ಮೊದಲು ಕೊಂದುಬಿಟ್ಟಿದ್ದೇನೆ. ನೀನು ನಿಮಿತ್ತ ಮಾತ್ರನಾಗು" ಎಂದು ಅರ್ಜುನನಿಗೆ ಹೇಳಿದ ಮಾತನ್ನು ಭಕ್ತಿ ಮಾರ್ಗದ ಭಾಷೆಯಲ್ಲಿ ಮತ್ತೆ ಭಗವಂತನು ಮುಂದೆ ಹೇಳುತ್ತಾನೆ" ಎಂದು ಹೇಳುತ್ತಾರೆ. ತಮಗೆ ವಿರೋಧ ಬರುವ ಮಾತುಗಳನ್ನೂ ಹೀಗೆ "ಭಕ್ತಿಮಾರ್ಗದ ದೃಷ್ಟಿಯಿಂದ ಎಂದರೆ ವ್ಯಾವಹಾರಿಕ ಮಾರ್ಗದಲ್ಲಿ ಎಂದರೆ ಸುಳ್ಳು ಅರ್ಥದಲ್ಲಿ" ಯೆಂದು ಹೇಳಿ ಜಾರಿಕೊಂಡು ಹೋಗುತ್ತಾರೆ.

ಇದರ ಸರಿಯಾದ ನಿಲ್ಗಡೆಯನ್ನು ನಾವು ಭಾಗವತದಲ್ಲಿ ಕಾಣಬಹುದು ೧೧ನೇ ಸ್ಕಂದದಲ್ಲಿ ೧೬ನೇ ಅಧ್ಯಾಯದಲ್ಲಿ ೬ನೇ ಶ್ಲೋಕದಲ್ಲಿ ಭಗವಂತನು ಉದ್ಧವನಿಗೆ ಇದೇ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾನೆ,— **श्रीभगवानुवाचः एनमेतद हृष्टः प्रश्नं प्रश्नविदांवर युयुत्सुना विशसने सपत्नैरर्जुनेनवै ॥ ६ ॥** ಉದ್ಧವಾ ! ಅರ್ಜುನನು ತನ್ನ ವೈರಿಗಳ ಕೂಡ ಯುದ್ಧ ಭೂಮಿಯ ಮೇಲೆ ಯುದ್ಧ ಮಾಡುವ ಮೊದಲು ಇದೇ ಪ್ರಶ್ನೆಯನ್ನು ನನಗೆ ಕೇಳಿದನು ಮುಂದೆ ೭ ಶ್ಲೋಕದಲ್ಲಿ "ಅರ್ಜುನನು ಜ್ಞಾನಿಗಳನ್ನು ರಾಜ್ಯಸಂಪಾದಿಸಲಿಕ್ಕೆ ಕೊಲ್ಲುವದು ನೀಚವಾದ ಪಾಪವೆಂದು ತಿಳಿದು ನಾನು ಕೊಲ್ಲುವವನು ಅವನು ಕೊಲ್ಲಲ್ಪಡುವವನು ಎಂದು ಅಜ್ಞನಂತೆ ಯುದ್ಧದಿಂದ ನಿವೃತ್ತನಾದನು ಆಗ ಶ್ರೀಕೃಷ್ಣನು ಹೇಗೆ ಅರ್ಜುನನಿಗೆ ವಿಭೂತ್ಯಧ್ಯಾಯವನ್ನು ಹೇಳಿ ಅವನಿಗೆ ಬಂದ ಸಂಶಯವನ್ನು ದೂರ ಮಾಡಿದೆನೆಂದು ಹೇಳಿದನು (೧೦ನೇ ಅಧ್ಯಾಯ ಗೀತಾ) ಒಳ್ಳೆದಾದ ಎಲ್ಲ ಪದಾರ್ಥಗಳಲ್ಲಿ ತಾನು ಹೇಗೆ ಇರುತ್ತೇನೆನ್ನುವದನ್ನು ವಿಶದೀಕರಿಸಿದನು. ಆದರಿಂದ ಭಗವಂತನೊಬ್ಬನೇ 'ಸ್ವತಂತ್ರಕರ್ತಾ' ಎಂದು ಗೊತ್ತಾಗುತ್ತದೆ.

ಆದುದರಿಂದು ಜೀವನು ಸ್ವತಂತ್ರ ಕರ್ತನೆಂದು ತಿಳಿದವನೂ, ಜೀವನು ಮರ್ತ್ಯನೆಂದು ತಿಳಿದವನೂ ಇಬ್ಬರೂ ಅಜ್ಞರೆಂದು ಆಚಾರ್ಯರು ಹೇಳಿದ್ದು ಯುಕ್ತವಾಗಿದೆ *

---

* ಇದರ ಮೇಲೆ K N ಉಪಾಧ್ಯಾಯರ Early Budhism and the Bhagavad-

ಭಗವಂತನು, ಜೀವನು ಸ್ವರೂಪತಃ ಹುಟ್ಟುವದಿಲ್ಲ ಸಾಯುವದಿಲ್ಲ ಎಂಬ ವಿಷಯದಲ್ಲಿ ಕಾಠಕೋಪನಿಷತ್ತನ್ನು ಉದಾಹರಿಸುತ್ತಾನೆ.

**नजायते म्रियतेवा कदाचिद्नायं**
**भूत्वा भविता वा न भूयः ॥**
**अजो नित्य. शाश्वतोऽयं पुराणो**
**न हन्यते हन्यमाने शरीरे ॥ २० ॥**

ಈ ಜೀವನು (**अयं**) ಯಾವ ವಿವಕ್ಷೆಯಿಂದಲೂ (**कदाचित्**) ಸ್ವರೂಪದಿಂದ ಹುಟ್ಟುವದಿಲ್ಲ ಮತ್ತು (**वा**) ಸ್ವರೂಪದಿಂದ ಸಾಯುವದಿಲ್ಲ. ಸರ್ವಪ್ರಕಾರದಿಂದ ಇದ್ದು ಮತ್ತೆ ಹುಟ್ಟುವವನೂ ಅಲ್ಲ ಆದರೆ ಈ ಜೀವನು ದೇಹವನ್ನು ಹೊಂದುವವನು (**पुराणः**). ಆದರೂ ಸ್ವರೂಪದಿಂದ ಉತ್ಪತ್ತಿ ಇಲ್ಲದವನು (**अजः**), ಸ್ವರೂಪದಿಂದ ನಾಶವಿಲ್ಲದವನು (**नित्यः**), ಸ್ವರೂಪದಲ್ಲಿ ವಿಕಾರವಿಲ್ಲದವನು (**शाश्वतः**) ದೇಹವು ನಾಶಹೊಂದಿದರೂ ನಾಶ ಹೊಂದದವನು (ಜೀವನು ಇದ್ದಾನೆ).

**ವಿಶೇಷ ಟಿಪ್ಪಣಿಗಳು :**

ಈ ಶ್ಲೋಕಕ್ಕೆ ಎರಡು ವಿಧವಾಗಿ ಅರ್ಥವನ್ನು ಹಚ್ಚುತ್ತಾರೆ;—೧) ಇಡೀ ಶ್ಲೋಕವನ್ನು ಜೀವದ ವರ್ಣನೆಯೆಂದು ತಿಳಿಯುತ್ತಾರೆ ಆಗ ಅದರ ಅರ್ಥವು—

---

gitaದಲ್ಲಿ "ವೇದಾಂತದಲ್ಲಿ ಆತ್ಮನನ್ನು ಒಪ್ಪಿಕೊಂಡು ಅದರ ಪ್ರಾಶಸ್ತ್ಯಕ್ಕಾಗಿ ಅಹಂಕಾರ (Egotism) ವನ್ನೇ ಕಿತ್ತುಹಾಕುವ ಒದಲು ಅದನ್ನು ಬದುಕಿಸಿ ಬೆಳೆಸಿದ್ದಾರೆ ಭಗವದ್ಗೀತಂಯಲ್ಲಿ "But Bhagavadgita speaks of the eradication of the conceit of "I" ness which it calls egotism (ಅಹಂಕಾರ), but one wonders what is meaningfully left in the word self when this egotism in all possible senses of the term is compleiety removed from it, when Bhagavadgita tries to abondon itin the form of अहङ्कार. But it does not know the same is making entry under the guise of an elevcted self (आत्मा). On the basis of this disconceied self Arjuna is asked to kill his enemies ಆದರೆ ಆತ್ಮವೆನ್ನುವ ಸಚ್ಚಿದಾನಂದ ರೂಪಿಯಾದ ದ್ರವ್ಯವೇ ಬೇರೆ, ಅಹಂಕಾರವು ಮನಸಿಗೆ ಅಂಟಿಕೊಂಡ ದೋಷ ಆ ದೋಷದಿಂದ ದೂರಾದ ಆತ್ಮನು ಭಗವಂತನಲ್ಲಿ ಭಕ್ತಿಯಿಂದ ತನಗೆ ಯೋಗ್ಯವಾದ ಯುದ್ಧ ರೂಪ ಕರ್ಮವನ್ನು ಮಾಡುವದರಿಂದ ಈ ಆತ್ಮನಿಗೆ ಪಾಪವು ತಟ್ಟುವದಿಲ್ಲೆಂದು ಗೀತೆಯ ಅಭಿಪ್ರಾಯು.

ಜೀವವು ಹುಟ್ಟುವದಿಲ್ಲ; ನಾಯುವದಿಲ್ಲ. ಅವನು ತಾನು ಇಲ್ಲಿ ಇದ್ದೂ ಮತ್ತೆ ಹುಟ್ಟುವವನಲ್ಲ. ಹುಟ್ಟು-ಸಾವು ಇಲ್ಲದವನ ಪ್ರತಿಬಿಂಬನಿವನು ದೇಹವುಳ್ಳವನಾದರೂ ಅವನು ಕೊಲ್ಲಲ್ಪಟ್ಟರೂ ಸಾಯುವದಿಲ್ಲ. ೨) ಗೀತಾತಾತ್ಪರ್ಯದಲ್ಲಿ ಇನ್ನೊಂದು ಅರ್ಥವನ್ನು ಕೊಡಲಾಗಿದೆ ಇದರಲ್ಲಿ ಈಶ್ವರನ ವರ್ಣನೆಯೂ ಇದೆ (ಜೀವನಂತೆ) ಈಶ್ವರನು ತನ್ನ ಅವತಾರಗಳಲ್ಲಿ ಹುಟ್ಟುವದೂ ಇಲ್ಲ ಸಾಯುವದೂ ಇಲ್ಲ. ಈಶ್ವರನು ಅಜನೂ ನಿತ್ಯನೂ ಶಾಶ್ವತನೂ ಅಹುದು ಅವನ ದೇಹವೂ ಹುಟ್ಟುವದಿಲ್ಲ, ನಾಶಹೊಂದುವದಿಲ್ಲ, ಜೀವನಂತೆ ಅವನ ದೇಹ ತೆಗೆದುಕೊಂಡು ಬರುವದಿಲ್ಲ ದೇಹವನ್ನು ತ್ಯಾಗಮಾಡುವದೂ ಇಲ್ಲ

ಯಾವ ಮಾತನ್ನೂ ಪ್ರಮಾಣ ಉದಾಹರಿಸಿ ಹೇಳಬೇಕು ಇಂದ್ರಿಯಾತೀತ ವಸ್ತುಗಳ ವಿಷಯದಲ್ಲಿ ವೇದದ ಹೊರತು ಬೇರೆ ಪ್ರಮಾಣಗಳಿಲ್ಲ ಆದುದರಿಂದ ಜೀವನು ನಿತ್ಯವೆಂಬ ವಿಷಯದಲ್ಲಿ ಭಗವಂತನು ಕಾಡಕೋಪನಿಷತ್ತನ್ನು ಉದಾಹರಿಸುತ್ತಿದ್ದಾನೆ ಹೀಗಿದ್ದೂ ಕೃಷ್ಣನು ವೇದವನ್ನು ಅಲ್ಲಗಳೆಯುತ್ತಾನೆಂದು ಕೆಲವು ಆಧುನಿಕರು ಅಭಿಪ್ರಾಯ ಪಡುತ್ತಾರೆ. ಗೀತೆಯನ್ನು ಚೆನ್ನಾಗಿ ಪರಿಶೀಲನೆ ಮಾಡದ ಅಪಕ್ವ ವಿಚಾರಿಗಳು ಮಾತ್ರ ಹೀಗೆ ಹೇಳುತ್ತಾರೆ

ಜೀವನು ಯಾಕೆ ನಿತ್ಯನು ಯಾಕೆ ಅಜನು ಎಂದರೆ ಕಡೆ ಎರಡು ಸಾಲುಗಳಲ್ಲಿ ಅವನು ಅಜನೂ ನಿತ್ಯನು ಆದ ಈಶ್ವರನ ಪ್ರತಿಬಿಂಬನು ಎಂದು ಹೇಳಿ ಈಶ್ವರನಂತೆ ಇವನು ಪೂರ್ಣ ನಿತ್ಯನಲ್ಲ. ಈಶ್ವರನು ಹಿಂದೆ ಇದ್ದಾನೆ. ಇಂದು ಇದ್ದಾನೆ. ಮುಂದೆ ಇರುವನು ಜನ್ಮ ಮರಣಗಳಿಂದ ಮಧ್ಯದಲ್ಲಿ ವಿಚ್ಛೇದವಿಲ್ಲ; ಆದರೆ ಜೀವನಿಗೆ ಹಿಂದು ಇಂದು ಮುಂದೆ ಇದ್ದರೂ ಜನನ-ಮರಣಗಳಿಂದ ವಿಚ್ಛೇದವದೆ ಜೀವನ ವಿಷಯದಲ್ಲಿ ಹಿಂದೆ ಇತ್ತು, ಇಂದು ಇದೆ, ಮುಂದೆ ಇರುವದು ಎಂದು ಹೇಳಲಿಕ್ಕೆ ಶಕ್ಯವಿದ್ದರೂ ಈಶ್ವರನ ವಿಷಯದಲ್ಲಿ ಯಾವಾಗಲೂ ಇರುವದರಿಂದ ಹಿಂದೆ ಇಂದು ಮುಂದೆ ಎಂಬುದನ್ನು ವಿಲಕ್ಷಣ ರೀತಿಯಿಂದ ಅವನ ಇಚ್ಛೆಯ ಅಭಿವ್ಯಕ್ತಿಯೆಂದು ಹೇಳುತ್ತಾರೆ ಜೀವನು ಸ್ವರೂಪದಲ್ಲಿ ನಿತ್ಯನು, ನಾಶರಹಿತನು, ಜನ್ಮರಹಿತನು ಏಕೆಂದರೆ ಅವನು ನಿತ್ಯನಾದ ಶಾಶ್ವತನಾದ ಪರಮಾತ್ಮನ ಪ್ರತಿಬಿಂಬನು. ಆದರೂ ಅವನು ಈಶ್ವರನಷ್ಟು ದೊಡ್ಡವನಲ್ಲ ಅವನು ದೇಹದಿಂದ ದೇಹಕ್ಕೆ ಸಂಚಾರ ಮಾಡುವದರಿಂದ **(पुराण)** ಈಶ್ವರನ ಎದುರಿಗೆ ಬಹಳ ಚಿಕ್ಕವನು

ಈ ಶ್ಲೋಕವನ್ನು ಭಗವಂತನು ಪ್ರಮಾಣವೆಂದು ಉದಾಹರಿಸಿದ್ದರಿಂದ ಪುನರುಚ್ಚಾರದ ದೋಷವು ತಟ್ಟುವದಿಲ್ಲ ಆದರೂ ಆ ಶ್ಲೋಕದಲ್ಲಿಯೇ

**नजायते नम्रियते** ಇದಕ್ಕೂ ಮತ್ತು **नित्य** ಎಂದು ಹೇಳಿದ್ದಕ್ಕೂ ಅಂತರ ವನ್ನು ಹೇಳುವದು ಕಷ್ಟವಾಗುತ್ತದೆ

ಒಟ್ಟಾರೆ ಒಂದೇ ಅರ್ಥದ ಮೂರು ಪದಪುಂಜಗಳು ದೊರೆಯುತ್ತಿವೆ;—

१) **न जायते न म्रियते**

२) **नायं भूत्वा भविता न**

३) **अजो नित्यः**

ಒಂದು ಸಮಾಧಾನವೆಂದರೆ ಇವು ಮೂರು ಅನುಮಿತಿಯ ಅಂಗಗಳು. १) **नजायते न म्रियते** ಇದು ಪ್ರತಿಜ್ಞಾ ವಾಕ್ಯವು. २) **नाय भूत्वा भवितान** ಇದು ವಿವರಣೆಯು. ३) **अजोनित्यः** ಇದು ಕೊನೆಯ ನಿರ್ಣಯವು, ಆದರೆ ಈ ಮೂರರಲ್ಲಿ ಎಷ್ಟೂ ಅಂಶದಲ್ಲಿ ಅರ್ಥ ಭೇದವಿಲ್ಲ

ಇದನ್ನು ಶಂಕರಾಚಾರ್ಯರು ಈ ಪುನರುಚ್ಚಾರದ ದೋಷವನ್ನು ಬದಿಗಿರಿಸಿ ಈ ಶ್ಲೋಕವು ಆತ್ಮನಿಗೆ ಆರು ವಿಕಾರಗಳು ಆಗುವದಿಲ್ಲೆಂಬ ಅಭಿಪ್ರಾಯವನ್ನು ತೋರಿಸುತ್ತಾರೆಂದು ಹೇಳುತ್ತಾರೆ **"जायतेऽस्ति वर्धते विपरिणमतेऽपक्षीयते विनश्यतीति षड्भावविकाराः" इति वार्ष्यायणिः** ಯಾಸ್ಕರು ೧) ಹುಟ್ಟು ವದು ಇರುವದು ೨) ಇರುವದು ೩) ಬೆಳೆಯುವದು ೪) ಪರಿಣಾಮ ಹೊಂದುವದು ೫) ಸೊರಗುವದು ೬) ಸಾಯುವದು ಹೀಗೆ ಆರು ವಿಕಾರ ಗಳನ್ನೂ ಹೇಳುತ್ತಾರೆ. **नजायते** ಮತ್ತು **अज** ದಿಂದ ೧ ನೇ ವಿಕಾರವನ್ನು ನಿಷೇಧಿಸುತ್ತಾರೆ ೬ ನೇದನ್ನು **नम्रियते** ಮತ್ತು **नित्य** ದಿಂದ ನಿಷೇಧಿ ಸುತ್ತಾರೆ **पुराण** ವು ೩ ನೇದನ್ನೂ ನಿಷೇಧಿಸುತ್ತದೆ ೫ ನೇದನ್ನು **शाश्वत** ವೆನ್ನುವದು ರದ್ದು ಪಡಿಸುತ್ತದೆ ಇನ್ನು ೨ ನೇದನ್ನು (**अस्तित्व**) ಮಾತ್ರ ಯಾವದರಿಂದಾದರೂ ಸೂಚಿತವಾಗುತ್ತವೆಂದು ತಿಳಿಯಬೇಕು ಇದು **नायं भूत्वा न भविता** ದಿಂದ ಆಗುತ್ತದೆಂದು ಶಂಕರಾನಂದರು ವಿವರಿಸುತ್ತಾರೆ.

ರಾಮಾನುಜಾಚಾರ್ಯರು ಈ ಮೂರು ಪದಪುಂಜಗಳನ್ನು ತಮ್ಮದೇ ಆದ ರೀತಿಯಿಂದ ಬಿಡಿಸುತ್ತಾರೆ ೧೨ ನೇದರ ಅರ್ಥವನ್ನು ವರ್ತಮಾನಕಾಲಕ್ಕೆ ಸಂಬಂಧಿಸಿದಂತೆ ಬಿಡಿಸುತ್ತಾರೆ **वर्तमानतया सर्वेषु देहेषु सर्वैः अनुभूयमाने जननमरणे कदाचिदपि आत्मानं न स्पृशतः** ವರ್ತಮಾನಕಾಲದಲ್ಲಿ ದೇಹಕ್ಕೆ ಆಗತಕ್ಕ ಜನನ ಮರಣಾದಿಗಳು ಆತ್ಮನಿಗೆ ಎಂದೂ ಆಗುವದಿಲ್ಲೆಂದು ಹೇಳುತ್ತಾರೆ.

೨ನೇದರಲ್ಲಿ **अयं कल्पादौ भूत्वा भूयः कल्पांतेचन भविता** ಆತ್ಮನಿಗೆ ಕಲ್ಪದ ಪ್ರಾರಂಭಕ್ಕೆ ಅಥವಾ ಕೊನೆಗೆ ಆ ಜನನ–ಮರಣಗಳು ಬರುವದಿಲ್ಲೆಂದು ಹೇಳುತ್ತಾನೆ ಪ್ರಜಾಪತಿ ಮೊದಲಾದವರಿಗೆ ಕಲ್ಪದ ಪ್ರಾರಂಭಕ್ಕೆ ಆಗತಕ್ಕ ಜನ್ಮವೂ ಕಲ್ಪದ ಕೊನೆಗೆ ಆಗತಕ್ಕ ಮರಣವೂ ಆತ್ಮನಿಗೆ ಆಗುವದಿಲ್ಲೆಂದು ಅರ್ಥ. ೩) ಆದುದರಿಂದ ಎಲ್ಲರ ದೇಹಗಳಲ್ಲಿ ಇರುವ ಆತ್ಮನು, **अजः** ಅಜನು ಆದುದರಿಂದಲೇ **नित्यः ।**

ಮಧ್ವಾಚಾರ್ಯರು ಹೇಳಿದ ಮಾತು ನಿಮಗೆ ಈಗಾಗಲೇ ತಿಳಿದದೆ. ೧ ನೇದು ಜೀವನ ನಿತ್ಯತ್ವವನ್ನು ಸ್ಥಾಪಿಸುತ್ತದೆ. ೨ ನೇದು, ಆದರೆ ಜೀವನಿಗೆ ಪರಮಾತ್ಮನಂತೆ ನಿತ್ಯತ್ವವೂ ಅವಿಕಾರಿತ್ವವೂ ಇಲ್ಲ. ೩ ನೇದರಲ್ಲಿ ಜೀವನ ನಿತ್ಯತ್ವಕ್ಕೆ ಕಾರಣವಾಗಿ ಜೀವನು ಪರಮಾತ್ಮನ ಪ್ರತಿಬಿಂಬನೆಂದು ಹೇಳುತ್ತಾರೆ. ಹುಟ್ಟು ಸಾವುಗಳಿಲ್ಲದ ಪರಮಾತ್ಮನ ಪ್ರತಿಬಿಂಬವಾದುದರಿಂದ ಜೀವನೂ ಹುಟ್ಟು ಸಾವುಗಳಿಲ್ಲದ ನಿತ್ಯಸ್ವರೂಪನು. ಆಚಾರ್ಯರು ತಾತ್ಪರ್ಯದಲ್ಲಿ ಈ ರೀತಿಯಾಗಿ ಹೇಳುತ್ತಾರೆ **अय ना** ಪರಮಪುರುಷನು ಸದಾ ಇದ್ದರೂ ಕೂಡ (**भूत्वा**) ದೇಹಸಂಬಂಧ ರೂಪದಿಂದ ಹುಟ್ಟುವವನಲ್ಲ. ಮರಣವೆಂದರೆ ದೇಹ ವಿಯೋಗವೆಂದು ಪ್ರಸಿದ್ಧವದೆ ಗಡಿಗೆ–ಮಡಿಕೆಗಳು ಮರಣ ಹೊಂದಿದವೆಂದು ವ್ಯವಹಾರವಿಲ್ಲ ಪರಮಾತ್ಮನ ದೇಹಕ್ಕೇ ನಾಶವಿಲ್ಲವಂದಮೇಲೆ ಅವನ ಸ್ವರೂಪಕ್ಕೆ ಸುತರಾಂ ನಾಶವಿಲ್ಲವೆನ್ನುವದು ಸಹಜವಾಗಿಯೇ ಸಿದ್ಧವಾಗುತ್ತದೆ ಇನ್ನು ಈ ಜೀವನೂ ಅಜನು, ನಿತ್ಯನು. ಇದು ಅಲ್ಲದೆ ಜೀವನು ಶಾಶ್ವತನೂ ಅಹುದು. ಯಾಕೆಂದರೆ ಜೀವನ ಸ್ವರೂಪವಾದ ಅಸ್ವತಂತ್ರತೆ ಮೊದಲಾದವುಗಳು ಅವನನ್ನು ಎಂದೂ ಬಿಡುವದಿಲ್ಲ ಆದಕ್ಕೆ ವಿಷ್ಣು ಪುರಾಣದಲ್ಲಿ ಈ ರೀತಿಯಾಗಿ ಹೇಳಲಾಗಿದೆ.‾ **अल्पशक्तिरसार्वज्ञं पारतंत्र्यमपूर्णता । उपजीवकत्वं जीवत्वं ईशत्वं तद्विपर्ययः ।। स्वाभाविकं तयोरेतन्नान्यथास्यात्कथंचन । वदंति शाश्वतौ एतौ अत एवमहाजनाः ।। महाविष्णुपुराणे ।** ಅಲ್ಪಶಕ್ತಿಯು, ಸ್ವಲ್ಪಜ್ಞಾನ, ಪರಾಧೀನತೆಯು, ಅಪೂರ್ಣತೆಯು, ಶ್ರೀಹರಿಯನ್ನು ಅವಲಂಬಿಸಿ ಕೊಂಡು ಇರುವದು ಈ ಮೊದಲಾದವು ಜೀವನ ಧರ್ಮಗಳು, ಇದಕ್ಕೆ ವಿರುದ್ಧವಾದವು ಈಶ್ವರನ ಧರ್ಮಗಳು. ಇವು ಜೀವೇಶ್ವರರಿಗೆ ಸ್ವಾಭಾವಿಕವಾದುದರಿಂದ ಅವು ಎಂದೂ ಬದಲಾಗುವದಿಲ್ಲ ಆದುದರಿಂದಲೇ ಮಹಾಜನರು ಇವರಿಬ್ಬರನ್ನು ಶಾಶ್ವತರೆಂದು ಕರೆಯುತ್ತಾರೆ ಎಂದು ಮಹಾವಿಷ್ಣುಪುರಾಣದಲ್ಲಿ ಹೇಳಿದೆ.

ರಾಘವೇಂದ್ರರು ಈ ಶ್ಲೋಕಕ್ಕೆ ಸುಂದರವಾದ ಸಂಗತಿಯನ್ನು ಸಂಕ್ಷೇಪವಾಗಿ ಕೊಡುತ್ತಾರೆ– "ಜೀವ ಮತ್ತು ಈಶ್ವರರಿಗೆ ಉತ್ಪತ್ತಿ–ವಿನಾಶಗಳು ಇಲ್ಲವೆಂದ

ಹೇಳಿದ್ದಾಯಿತು. ಈಶ್ವರನ ದೇಹವು ಕೂಡ ಹುಟ್ಟುವದಿಲ್ಲವಾದುದರಿಂದ ಅವನು ಸ್ವತಂತ್ರನು ಜೀವನ ಸ್ವರೂಪಕ್ಕೆ ಹುಟ್ಟು-ಸಾವುಗಳಿಲ್ಲದಿದ್ದರೂ ಅವನ ದೇಹಕ್ಕೆ ಹುಟ್ಟು-ಸಾವುಗಳು ಇದ್ದುದರಿಂದ ಅವನು ಅಸ್ವತಂತ್ರನು, ಎಂಬ ವಿಷಯದಲ್ಲಿ ಉಪನಿಷತ್ತಿನಿಂದ ಪ್ರಮಾಣವನ್ನು ಉದಾಹರಿಸುತ್ತಾರೆ"

ಪ್ರಭುಪಾದರು ಆತ್ಮನು ಈ ದೇಹದಲ್ಲಿ ಇದ್ದಾನೆನ್ನುವದನ್ನು ಅದರಲ್ಲಿರುವ ಅರುವಿನಿಂದ (Consciousness) ತಿಳಿದುಕೊಳ್ಳಬೇಕು. ಚೈತನ್ಯವಿದ್ದಲ್ಲಿ (ಅರುವಿದ್ದಲ್ಲಿ) ಆತ್ಮನಿದ್ದಾನೆಂದು ಅವರ ಅಭಿಪ್ರಾಯ ಆದರೆ ಎಲ್ಲರಲ್ಲಿರುವ ಅರಿವು ಒಂದೇ ಬಗೆಯದಲ್ಲ ಜೀವನಲ್ಲಿರುವ ಚೈತನ್ಯ ಪರಮಾತ್ಮನಲ್ಲಿರುವ ಚೈತನ್ಯಕ್ಕಿಂತ ಬೇರೆಯಾಗಿದೆ ಯಾಕೆಂದರೆ ಪರಮಾತ್ಮನ ಅರಿವಿನಲ್ಲಿ ಸರ್ವಜ್ಞತೆ ಇದೆ. ಭೂತ ಭವಿಷ್ಯತ್ ವರ್ತಮಾನ ಜ್ಞಾನವದೆ. ಜೀವನ ಅರುವಿನಲ್ಲಿ ಮರವೂ ಸಹಜವಾಗಿ ಬರುತ್ತದೆ. ಅರ್ಜುನನಲ್ಲಿ ಅದೇತರಹದ ಮರವೂ ಮೋಹವೂ ಅವನನ್ನು ಯುದ್ಧದಿಂದ ಪರಾವೃತ್ತಗೊಳಿಸಿದೆ. ಕೃಷ್ಣನ ದಿವ್ಯವಾದ ಜ್ಞಾನವು ಅರ್ಜುನನಿಗೆ ಬೆಳಕು ನೀಡಿ ಅವನನ್ನು ತನ್ನ ಕರ್ತವ್ಯದ ಕಡೆಗೆ ಎಳೆದೊಯ್ಯುತ್ತಿದೆ

ಅಣುವಾದ ಜೀವಾತ್ಮನೂ ವಿಭುವಾದ ಪರಮಾತ್ಮನೂ ಇಬ್ಬರೂ ಈ ದೇಹದಲ್ಲಿ ಒಂದೇ ಗಿಡದ ಮೇಲೆ ಕುಳಿತುಕೊಂಡಿದ್ದಾರೆಂದು ಉಪನಿಷತ್ತಿನಲ್ಲಿ ವರ್ಣಿಸಿದ್ದಾರೆ.

**ಶಂಕರಾಚಾರ್ಯರು : भूत्वा + अभविता** ಎಂದು ಸಂಧಿ ಬಿಡಿಸಿದ್ದಾರೆ. **अयं आत्मा भूत्वा भवन क्रियां अनुभूय अभविता अभावं गंतान भूयः — तस्मात्नम्रियते** ಈ ಆತ್ಮನು ಹುಟ್ಟಿ ಸಾಯುವದಿಲ್ಲ.

**ರಾಮಾನುಜಾಚಾರ್ಯರು : अयं कल्पादौ भूत्वा कल्पांतेचन, न भविता** ಕೆಲವರು (ಪ್ರಜಾಪತಿ ಮೊದಲಾದವರು) ಕಲ್ಪಾದಿಯಲ್ಲಿ ಹುಟ್ಟಿ ಕಲ್ಪಾಂತದಲ್ಲಿ ಸಾಯುವಂತೆ ಆತ್ಮನು ಹುಟ್ಟುವದೂ ಇಲ್ಲ ಸಾಯುವದೂ ಇಲ್ಲ.

**ಮಧ್ವಾಚಾರ್ಯರು : भूत्वा वा** ಜೀವನು ಸರ್ವಪ್ರಕಾರವಾಗಿಯೂ ಇದ್ದು **भूयः** ಮತ್ತೆ **न भविता** ಹುಟ್ಟುವವನು ಎಂಬ ವ್ಯವಹಾರಕ್ಕೆ ವಿಷಯನಲ್ಲ. ಇದರ ಅರ್ಥವನ್ನು ಸತ್ಯಧ್ಯಾನತೀರ್ಥರು ಈ ರೀತಿಯಾಗಿ ಸ್ಪಷ್ಟಪಡಿಸಿದ್ದಾರೆ :— " ಈಶ್ವರನು ರಾಮ-ಕೃಷ್ಣಾದಿರೂಪಗಳಿಂದ ಯಾವಾಗಲೂ ಇದ್ದರೂ ಕಾಲ ವಿಶೇಷದಲ್ಲಿ ಜನರ ದೃಷ್ಟಿಗೆ ಬೀಳುವದರಿಂದ ' ಹುಟ್ಟಿದನು ' ಎಂಬ ವ್ಯವಹಾರಕ್ಕೆ ವಿಷಯನಾಗುತ್ತಾನೆ. ಆದರೂ ಜೀವನು ಮಾತ್ರ ಹಾಗೆ ಹುಟ್ಟುವನು ಎಂಬ ವ್ಯವಹಾರಕ್ಕೆ ವಿಷಯನಾಗುವದಿಲ್ಲ. " ಇದನ್ನು ಆಚಾರ್ಯರು ಭಾಷ್ಯದಲ್ಲಿ **न च**

**ईश्वरज्ञानवत् भूत्वा भविता** ಎಂದು ವಿವರಿಸಿದ್ದಾರೆ ಇದನ್ನು ಜಯತೀರ್ಥರು ಹೀಗೆ ವಿಶದಪಡಿಸಿದ್ದಾರೆ. "ಜೀವನು ಸ್ವರೂಪದಿಂದ ಇದ್ದರೂ ದೇಹ ಸಂಬಂಧ ದಿಂದ ಹುಟ್ಟೇಹುಟ್ಟುತ್ತಾನೆ ಆದುದರಿಂದ ಆ ಜೀವನು **भूत्वा भविता न** ಹೇಗೆ ? ಆದುದರಿಂದ ಇದನ್ನು ಬೇರೆ ರೀತಿಯಿಂದ ವ್ಯಾಖ್ಯಾನಿಸುತ್ತಾರೆ. 'ಜೀವನು ಹುಟ್ಟದಿದ್ದರೆ, ಹೇಗೆ ಈಶ್ವರನ ಜ್ಞಾನವು ಹೆಚ್ಚು ಕಡಿಮೆಯಾಗದೇ ಯಾವದೋ ಒಂದು ಅಚಿಂತ್ಯವಾದ ಶಕ್ತಿಯಿಂದ 'ಹಿಂದೆ ಆಯಿತು' ಎಂದು ವ್ಯವ ಹಾರಕ್ಕೆ ವಿಷಯವಾಗುತ್ತದೋ ಹಾಗೆ ಜೀವನಲ್ಲಿಯೂ ಒಂದು ಅಂಥ ಶಕ್ತಿಯಿಂದ 'ಜೀವನು ಹುಟ್ಟಿದನು' ಎಂದು ವ್ಯವಹಾರ ನಡೆಯುತ್ತಿದೆಯೆಂದು ನಿಮ್ಮ ಅಭಿ ಪ್ರಾಯವೇ ? ಎಂದು ಕೇಳಿದಾಗ ಅದಕ್ಕೆ ನಿಷೇಧರೂಪವಾದ (ಇಲ್ಲ ಎಂದು) ಉತ್ತರವೆಂದು ಅಭಿಪ್ರಾಯ ಇದರ ಅರ್ಥವೇ 'ಜೀವನು ಅಜನು ನಿತ್ಯನು ಮತ್ತು ಶಾಶ್ವತನು' ಎಂದು. "ಜೀವನು ಶಾಶ್ವತನು' ಎಂದರೆ 'ಪ್ರತಿಬಿಂಬನಾದ ಜೀವನು ಬಿಂಬ ಮತ್ತು ಉಪಾಧಿಯ ಸಂಬಂಧವು ಹುಟ್ಟುವದರ ನಿಮಿತ್ತದಿಂದ ನಾಶವಾಗುವ ನಿಮಿತ್ತದಿಂದ ಹುಟ್ಟು-ಸಾವುಗಳು ಇಲ್ಲದವನು' ಎಂದು ಅರ್ಥ. ಜೀವನಿಗೆ ಹುಟ್ಟು ದೇಹಾಂತರ ನಿಮಿತ್ತಕವೆಂದು ಪುರಾಣ ಶಬ್ದದಿಂದ ಗೊತ್ತಾಗುತ್ತದೆ." *

ಟಿಳಕರು ನಹ ಕಣ್ಣುಮುಚ್ಚಿ ಶಂಕರಾಚಾರ್ಯರಂತೆ **भूत्वा अभविताव** ಎಂದೇ ಸಂಧಿ ಬಿಡಿಸಿ ಅದರ ಅರ್ಥವನ್ನು— 'ಒಮ್ಮೆ ಆಗಿ ಮುಂದೆ ಆಗುವದಿಲ್ಲ ಎಂದು ಅಲ್ಲ' ಎಂದು ಮಾಡಿದ್ದಾರೆ. ಆದರೆ ಹಾಗಂದರೇನೆಂಬುದನ್ನು ಸ್ಪಷ್ಟ ಪಡಿಸಿಲ್ಲ ಬರೆಯುವರು ಮಾತ್ರ 'ಒಮ್ಮೆ ಶರೀರವನ್ನು ಧಾರಣ ಮಾಡಿ ಆ ಮೇಲೆ ಅದನ್ನು ಬಿಟ್ಟು ಎರಡನೆ ಶರೀರವನ್ನು ತೆಗೆದುಕೊಳ್ಳುವದಿಲ್ಲವೆಂದು ಅಲ್ಲ' ಎಂದು ಇದರ ಅರ್ಥವನ್ನು ವಿಶದಪಡಿಸಿದ್ದಾರೆ. ಮತ್ತು ಇದರ ಮೇಲೆ ವಿಶೇಷ ವಿವರಣವನ್ನು ಬರೆಯುವಾಗ "**नायं भूत्वा भविताबान भूय**" ಇದರ ಅರ್ಥವನ್ನು ಬಹಳ ಜನ ಟೀಕಾಕಾರರು "ಆತ್ಮನು ಜನನ-ಮರಣ ರಹಿತನು" ಎಂದೇ ಒಪ್ಪಿಕೊಂಡಿದ್ದಾರೆಂದು ಅವರು ಹೇಳಿ. "**न जायते म्रियते वा कदाचित्**" ಎಂಬ ಪೂರ್ವಾರ್ಧದಕ್ಕಿಂತ ಬೇರೆ ಹೊಸದೇನೂ ಹೇಳ

---

* ಗೀತೆಯು "ಜೀವಾತ್ಮನು ಸ್ವರೂಪದಲ್ಲಿ ಪರಮಾತ್ಮನಿಂದ ಅಭಿನ್ನನು" ಎಂದು ಹೇಳುತ್ತದೆ ಪರತತ್ವವೇ ಜಗತ್ತಿನ ಸೃಷ್ಟಿ ಮೊದಲಾದವುಗಳಿಗೆ ಕಾರಣವೆಂದು ತಿಳಿಯುತ್ತದೆ. ಆ ಪರಬ್ರಹ್ಮನ ಅಜ್ಞಾನವೇ ಬಂಧಕ್ಕೆ ಕಾರಣ, ಅವನ ಜ್ಞಾನವೇ ಮುಕ್ತಿಗೆ ಕಾರಣವೆಂದು ಗೊತ್ತಾಗುತ್ತದೆ. "The entire account of the self in Gita is simply baffling, Radha Krishnan says–About the Nature of the Supreme self the Gita account is puzzling"

ದಿದ್ದದರಿಂದ ಪುನರುಕ್ತಿಯನ್ನು ಮಾಡಿದಂತೆ ತಿಳಿಯುತ್ತದೆಂದು ಆಪಾದಿಸಿದ್ದಾರೆ. ಮತ್ತು "೨–೧೨ ರಿಂದ ಪ್ರಾರಂಭಿಸಿ ಈ ಪ್ರಕರಣದಲ್ಲಿ ಆತ್ಮನ ಅಮರತ್ವದೊಡನೆ ಬಾಹ್ಯಶರೀರದ ನಾಶವನ್ನೇ ಅರ್ಜುನನ ಮನಸಿನಮೇಲೆ ಬಿಂಬಿಸುವದೇ ಕೃಷ್ಣನ ಉದ್ದೇಶವೆಂಬುದನ್ನು ದುರ್ಲಕ್ಷ್ಯ ಮಾಡಿದಂತೆ ತೋರುತ್ತದೆ ಆದುದರಿಂದ **नायं भूत्वा** ಈ ಚರಣಾರ್ಥವು ಜೀವಾತ್ಮನ ದೇಹಕ್ಕೆ ಹತ್ತುವ ಉತ್ಪತ್ತಿ ಮತ್ತು ಲಯ ಪುನರುತ್ಪತ್ತಿ ಮತ್ತು ಪುನರ್ಲಯ ಈ ತಿರುಗುವ ಚಕ್ರವನ್ನು ಉದ್ದೇಶಿಸಿರುತ್ತ ದೆಂದು ನಮಗೆ ಅನಿಸುತ್ತದೆ" ಎಂದು ಹೇಳಿದ್ದು ಯಥಾರ್ಥವಾಗಿದೆ, ( ಗೀತಾ ಪದ್ಮವಿಕಾಸ ).

ಅಮೇರಿಕೆಯ ತತ್ವಜ್ಞಾನಿಗಳೂ ಕವಿಗಳೂ ಆದ Emerson ರು Brahma ಎಂಬ ಕಾವ್ಯದಲ್ಲಿ ಸಮಾನಾರ್ಥಕ ಪದ್ಯವನ್ನು ಬರೆದಿದ್ದಾರೆ—

"If the red slayer thinks he slays
Or if the slain think he is slain
They know not well the subtle ways
I keep and pass and turn again"

**वेदाविनाशिनं नित्य य एनमजमव्ययम् ।**
**कथ सपुरुषपार्थ कं घातयति हंत्तिकम् ॥ २१ ॥**

ಎಲೈ ಅರ್ಜುನನೆ ? ಯಾರು ಈ ಜೀವನನ್ನು ಬೆಳೆಯುವವನು ಅಲ್ಲ (**नित्यं**) ನಾಶ ಹೊಂದುವವನಲ್ಲವೆಂದು, ಜನ್ಮರಹಿತನೆಂದೂ ಆದುದರಿಂದಲೇ ನಾಶ ರಹಿತ ನೆಂದೂ ತಿಳಿದುಕೊಳ್ಳುತ್ತಾರೋ ಆ ಮನುಷ್ಯನು ಹೇಗೆ ಯಾರನ್ನು ಕೊಲ್ಲಿ ಸುತ್ತಾನೆ ? ಯಾರನ್ನು ಹೇಗೆ ಕೊಲ್ಲುತ್ತಾನೆ ?

**ವಿಶೇಷ ಟಿಪ್ಪಣಿಗಳು :**

ಮೊದಲು ಈ ಶ್ಲೋಕದ ಸಂಗತಿಯನ್ನು ತಿಳಿದುಕೊಳ್ಳೋಣ. ಹಿಂದಿನ ೧೯ ನೇ ಶ್ಲೋಕದಲ್ಲಿ ಇಬ್ಬರು (ಜೀವನು ಸ್ವತಂತ್ರಕರ್ತನೆಂದು ತಿಳಿದವನೂ, ಜೀವನು ಮರ್ತ್ಯನೆಂದು ತಿಳಿದವನೂ) ಅಜ್ಞರೆಂದು ಹೇಳಿದರು ಇದರ ವಿಪರೀತ ಅರ್ಥವನ್ನು ಸರಿಯೆಂದು ತೋರಿಸಿದ ಹೊರತು ಈ ಉಪದೇಶವು ಸರಿಯೆಂದು ತಿಳಿಯುವದಿಲ್ಲ ಶ್ರೀಕೃಷ್ಣನು ಈ ಶ್ಲೋಕದಲ್ಲಿ ಆ ಕಾರ್ಯವನ್ನು ಮಾಡುತ್ತಾನೆ. ಯಾಕೆಂದರೆ ಆ ಪರಿಸ್ಥಿತಿಯಲ್ಲಿ ಬುದ್ಧಿವಂತನು ಏನು ಮಾಡುತ್ತಾನೆನ್ನುವದನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ ಹೀಗೆ ಈ ಶ್ಲೋಕವು ೧೯ ಕ್ಕೆ ಪೂರಕ ಶ್ಲೋಕ ವಾಗಿದೆ. ಮಧ್ಯೆ ಇದ್ದ ೨೦ ನೇ ಶ್ಲೋಕವು ಉಪನಿಷತ್ತಿನ ಪ್ರಮಾಣವನ್ನು ಮಾತ್ರ

ಉದಾಹರಿಸುತ್ತದೆ ಗೀತೆಯ ಶ್ಲೋಕದ ಅರ್ಥವನ್ನೇನೂ ಹೆಚ್ಚು ಕಡಿಮೆ ಮಾಡುವದಿಲ್ಲ

ರಾಘವೇಂದ್ರರು ಸಹ ಈ ಸಂಗತಿಗೆ ಸಮ್ಮತಿಯನ್ನು ನೀಡಿದ್ದಾರೆ. ಆದರೆ ಶಂಕರಾಚಾರ್ಯರು "ಆತ್ಮನಿಗೆ ಯಾವದಾದರೂ ಕ್ರಿಯೆಯ ಕರ್ತೃತ್ವವನ್ನೂ ಕರ್ಮತ್ವವನ್ನೂ ನಿಷೇಧಿಸಿದ್ದಾರೆಂದು ಹೇಳುತ್ತಾರೆ. ಈ ಶ್ಲೋಕವು ಆ ಅನುಮಾನದ ನಿರ್ಣಯವನ್ನು ಹೇಳುತ್ತದೆಂದು ಅವರ ಅಭಿಪ್ರಾಯ ಆದರೆ ಅವರ ಅನುಯಾಯಿಗಳಿಗೆ ಈ ಶ್ಲೋಕವು ಬರೀ ನಿರ್ಣಯವನ್ನು ಹೇಳುತ್ತಿದೆಂದರೆ ಅವರಿಗೆ ಸಮಾಧಾನವಿಲ್ಲ, ಆದುದರಿಂದ ಮಧುಸೂದನರೂ ನೀಲಕಂಠರರೂ ೧೯ನೇ ಶ್ಲೋಕದಲ್ಲಿ **नायं हंति नहन्यते** ಎಂದು ಹೇಳಿದ್ದರಲ್ಲಿ **नायंहंति** ೨೦ರಲ್ಲಿ ಎನ್ನುವದನ್ನು ಸಿದ್ಧ ಮಾಡಿದರು ಈಗ **नहन्यते** ಎನ್ನುವದನ್ನು ಸಿದ್ಧಗೊಳಿಸುತ್ತಾರೆಂದು ಬೇರೆ ರೀತಿಯಾಗಿ ಸಂಗತಿಯನ್ನು ಹಚ್ಚುತ್ತಾರೆ ಈ ಶ್ಲೋಕದಲ್ಲಿ ಆತ್ಮನಲ್ಲಿ ಕ್ರಿಯಾದ ಕರ್ಮತ್ವವು ಹೊಂದಿಕೆಯಾಗುವದಿಲ್ಲವೆಂದು ಹೇಳುತ್ತಾರೆ ಸಾಮಾನ್ಯವಾಗಿ ಆತ್ಮವು ಜನನ–ಮರಣಹೀನವಾದುದರಿಂದ ಯಾವ ಕ್ರಿಯಾಸಂಬಂಧಕ್ಕೂ (ಆತ್ಮವು) ಸಿದ್ಧವಿಲ್ಲ. ಈ ತರಹದ ವ್ಯಾಪಕವಾದ ಕ್ರಿಯೆಯನ್ನು ಅಲ್ಲಗಳೆಯುವದರಿಂದ ಅವನ ಕರ್ತೃತ್ವವನ್ನೂ ನಿಷೇಧಿಸಿದಂತಾಯಿತು ಆದುದರಿಂದ ೨೧ನೇ ಶ್ಲೋಕಕ್ಕೆ ನಿಷೇಧಿಸುವದು ಏನು ಉಳಿದಂತಾಯಿತು ?

ಈ ಶ್ಲೋಕಕ್ಕೆ ಈಶ್ವರ ಪರವಾಗಿಯೂ ಅರ್ಥವನ್ನು ಹೇಳುತ್ತಾರೆ.— "ಯಾರು ದೇವರನ್ನು ಪೂರ್ಣವಾಗಿ ಅವಿನಾಶಿಯೆಂದೂ ನಿತ್ಯನೆಂದೂ ಜನ್ಮರಹಿತನೆಂದೂ ಮತ್ತು ಸ್ವತಂತ್ರನೆಂದೂ ತಿಳಿಯುತ್ತಾರೆ, ಹೇಗೆ ಮತ್ತು ಯಾರನ್ನು ಇಂಥ ಜ್ಞಾನಿಯು ಕೊಲ್ಲಲಿಕ್ಕೆ ಹಚ್ಚುತ್ತಾನೆ ಅಥವಾ ಕೊಲ್ಲುತ್ತಾನೆ ?"

ಆದರೆ ಅದ್ವೈತಿಗಳು ಆತ್ಮ ಶಬ್ದವನ್ನು ಜೀವಾತ್ಮನಲ್ಲಿಯೂ ಈಶ್ವರನಲ್ಲಿಯೂ ಕೂಡ ಬಳಸುವದರಿಂದ ಅವರು ಬೇರೆ ಬೇರೆ ಅರ್ಥ ಹೇಳುವ ಗೊಂದಲಕ್ಕೆ ಹೋಗುವದಿಲ್ಲ. ಒಂದು ವ್ಯಾಖ್ಯಾನವನ್ನು ಉದಾಹರಿಸಿದರೆ ಸ್ಪಷ್ಟವಾಗುತ್ತದೆ.—"ಆತ್ಮವನ್ನು ಏನು ಮಾಡಿದರೂ ನಾಶ ಮಾಡುವದಕ್ಕೆ ಆಗುವದಿಲ್ಲ. ಹುತ್ತ ಬಡಿದರೆ ಹಾವು ಸಾಯುವದೇ ? ಎಂಬ ಗಾದೆ ಇದೆ, ಈ ದೇಹ ಒಂದು ಹುತ್ತ. ಇದರಲ್ಲಿರುವ ಹಾವೇ ಜೀವ, ಮೇಲುಗಡೆ ಬೇಕಾದಷ್ಟು ಹುತ್ತನ್ನು ಬಡಿಯಬಹುದು. ಆದರೆ ಒಳಗೆ ಇರುವ ಹಾವಿಗೆ ಏನೂ ಆಗುವದಿಲ್ಲ. ಅವನು ನಿತ್ಯ ಯಾವಾಗಲೂ ಇರುವವನು ಈ ಜೀವನು ನಾಮರೂಪಗಳ ವೇಷ ಹಾಕಿಕೊಳ್ಳುವದಕ್ಕೆ ಮುಂಚೆ ಇದ್ದ, ಹಾಕಿಕೊಂಡ ವೇಷವೆಲ್ಲ ಅಳಿದು ಹೋದರೂ ಅವನು ಇರುವವನು . ..

ಆತ್ಮನ ನೈಜ ಸ್ವಭಾವವನ್ನು ಯಾರು ಅರಿತಿರುವರೋ ಅವರು ಪರಿಪೂರ್ಣರಾಗಿ ಹೋಗುತ್ತಾರೆ." ಇದು ಇಬ್ಬರಿಗೂ ಅನ್ವಯಿಸುತ್ತಿದೆ

**कथं सपुरुष पार्थ कं घातयतिहंतिकम्** ಹೇಗೆ ಮತ್ತು ಯಾರನ್ನು ಕೊಲ್ಲಲಿಕ್ಕೆ ಪ್ರೇರಿಸುತ್ತಾನೆ ಮತ್ತು ಕೊಲ್ಲುತ್ತಾನೆ ? ದೃಷ್ಟಾರನು ಕೊಲ್ಲಿಸಲಾರನು ಮತ್ತು ಕೊಲ್ಲಲಾರನು. ಯಾಕೆಂದರೆ ಜೀವನು ಅವಿನಾಶಿಯಾಗಿದ್ದಾನೆ ಈ ಕೊಟ್ಟ ಕಾರಣವು ಕೊಲ್ಲುವವನು ಅಜ್ಞನಿದ್ದರೂ ಸರಿಹೋಗುತ್ತದೆ. ಕೊಲ್ಲುವವನು ಜ್ಞಾನಿಯಿರಲಿ, ಅಜ್ಞಾನಿಯಿರಲಿ ಕೊಲ್ಲಲ್ಪಡುವವನು ಅವಿನಾಶಿಯಿದ್ದರಾಯಿತು ಆದುದರಿಂದ ಈ ಶ್ಲೋಕವು ದೃಷ್ಟಾರನ ವಿಷಯದಲ್ಲಿ ಅವನ ವಿಚಾರಗಳು, ಮಾತುಗಳು ಮತ್ತು ಕೃತಿಯು ಅಜ್ಞನ ಕೃತಿ ಮಾತು ವಿಚಾರಗಳಿಂದ ಹೇಗೆ ಬೇರೆಯಾಗಿವೆಯೆನ್ನುವದನ್ನು ತಿಳಿಸುತ್ತದೆ. ದೃಷ್ಟಾರನು ಕೊಲ್ಲುವದಿಲ್ಲ ಎಂದರೆ ಅಜ್ಞನೂ ಕೊಲ್ಲುವದಿಲ್ಲ. ಯಾಕೆಂದರೆ ಅವನು ಅಜ್ಞನಿರಲಿ, ಸುಜ್ಞನಿರಲಿ ಅವಿನಾಶಿಯಾದವನನ್ನು ಯಾರೂ ಕೊಲ್ಲಲಾರರು. ಆದುದರಿಂದ ವಾಕ್ಯವನ್ನು ಮೇಲೆ ತೋರುವ ಅರ್ಥದಲ್ಲಿ ಯೋಜಿಸಲಿಕ್ಕೆ ಬರುವದಿಲ್ಲ, ಅದಕ್ಕೆ ಬೇರೆ ಅರ್ಥವಿರಬೇಕು

ಈಗ ಅದ್ವೈತಿಗಳು ಹೇಗೆ ಅರ್ಥಮಾಡುತ್ತಾರೆ ನೋಡೋಣ. ಇಲ್ಲಿ ನಿಷೇಧ ಮಾಡಿದ್ದು ಕೊಲ್ಲುವ ಕರ್ಮವನ್ನು ಅಲ್ಲ. ಕರ್ಮ ಸಾಮಾನ್ಯವನ್ನು, **(विदुषः सर्वकर्म प्रतिषेधः—शं भाष्य)**. ಶಾಸ್ತ್ರದ-ವಿಧಿ ನಿಷೇಧಗಳು ಅಜ್ಞನ ಗೋಸ್ಕರ ಅಜ್ಞನು ಅವುಗಳನ್ನು ಪಾಲಿಸುವವನು, **(अविदुषः कर्माणि विधीयते)** ಆದರೆ ಜ್ಞಾನಿಯು ಐಕ್ಯವನ್ನು ಸಾಕ್ಷಾತ್ಕರಿಸಿಕೊಂಡುದರಿಂದ ಅವನು ಯಾವದನ್ನೂ ಮಾಡುವ ಅವಶ್ಯಕತೆಯಿಲ್ಲ. **(विदुषः सर्वकर्मसन्यासे एव अधिकारः)** ಈ ಜ್ಞಾನಿಯು ಯಾರನ್ನೂ ಕೊಲ್ಲುವದಿಲ್ಲ; ಯಾರಿಂದಲೂ ಕೊಲ್ಲಿಸುವದಿಲ್ಲ. ಯಾಕೆಂದರೆ ಅವನು ಯಾವ ಕ್ರಿಯೆಯಲ್ಲಿಯೂ ಭಾಗವಹಿಸುವದಿಲ್ಲ. ಸನ್ಯಾಸವೇ ಅವನ ಕರ್ತವ್ಯ. ಕರ್ಮಗಳೂ ಕರ್ತವ್ಯಗಳೂ ಅಜ್ಞನಿಗೆ ಮಾತ್ರವೆಂದು ಭಗವಂತನೇ ಹೇಳುತ್ತಾನೆ—ಎಂದು ಶಂಕರಾಚಾರ್ಯರ ಅಭಿಪ್ರಾಯ.

ಮಧುಸೂದನ ಸರಸ್ವತಿಯೂ ನೀಲಕಂಠನೂ ಈ **घातयति** ಎನ್ನುವದರಲ್ಲಿ ಒಂದು ವಿಶೇಷಾರ್ಥವನ್ನು ಕಾಣುತ್ತಾರೆ. ಅರ್ಜುನನು ತಾನು ಯುದ್ಧದಲ್ಲಿ ವೈರಿಗಳನ್ನು ಕೊಲ್ಲುವದರಿಂದ ತನಗೆ ಪಾಪ ಬರುತ್ತದೆಂದೂ ಕೃಷ್ಣನು ನಿಂತು ಕೊಲ್ಲಿಸುವದರಿಂದ ಅವನಿಗೂ ಪಾಪ ಬರುತ್ತದೆಂದೂ ಅಭಿಪ್ರಾಯವನ್ನು ತೋರಿಸುತ್ತಾನೆ. ಆದುದರಿಂದ—"ನಾನು ನಿಜವಾಗಿ ಕೊಲ್ಲಿಸುವವನೂ ಅಲ್ಲ; ನೀನು ಕೊಲ್ಲುವವನೂ ಅಲ್ಲ" ಎಂದು ಈ ಶ್ಲೋಕದಿಂದ ಕೃಷ್ಣನು ಹೇಳುತ್ತಾನೆಂದು ತಾತ್ಪರ್ಯವನ್ನು ತೆಗೆಯು

ತ್ತಾರೆ **(अर्जुनोहिस्वस्मिन्कर्त्र्वत्वं भगवतिच कारयितृत्वं अध्यस्य हिंसानिमित्तं दोषं उभयत्रापि आशशंके भगवानपि विदिताभिप्रायो हंति घातयतीति तदुभयं आचिचिक्षेप आत्मकर्तृत्वम्).**

ಆತ್ಮನು ನಿಷ್ಕ್ರಿಯನೆಂಬ ಅದ್ವೈತಿಗಳ ವಾದವು ನ್ಯಾಯಸಮ್ಮತವಲ್ಲ. ಆತ್ಮನು ಇಚ್ಛಿಸುವದಿಲ್ಲ, ಆಲೋಚಿಸುವದಿಲ್ಲ; ಕರ್ಮಮಾಡುವದಿಲ್ಲ. ಇಚ್ಛೆ, ಆಲೋಚನೆ, ಕರ್ಮಗಳಿಗೆಲ್ಲ ಅದು ಹಿನ್ನೆಲೆ ಮಾತ್ರ. ಆ ಆತ್ಮನಲ್ಲಿ ಇವೆಲ್ಲ ಆರೋಪಿತವಾಗಿವೆ ಈ ವಾದದಿಂದ ಅರ್ಜುನನು ಮತ್ತಿಷ್ಟು ಗೊಂದಲದಲ್ಲಿ ಬೀಳುತ್ತಾನೆ ಶಾಸ್ತ್ರಗಳು ಅಜ್ಞ ಜನರಿಗೆ ಮಾತ್ರ **(अत एव सर्वाणि शास्त्राणि अविद्याधिकारिकाणि)** ಎಂಬ ಮಾತು ಎಂಥ ಸಾಹಸದ ವಿಧಾನವು ! ! ಇದರ ಮಥಿತಾರ್ಥವೆಂದರೆ ಯಾವ ಮೋಕ್ಷೇಚ್ಛುವೂ ಶಾಸ್ತ್ರಗಳ ಕಡೆಗೆ ಹೊರಳಿ ನೋಡುವ ಕಾರಣವಿಲ್ಲವೆಂದು.

ಅದ್ವೈತಿಗಳಿಗೆ ಜ್ಞಾನಕ್ಕೂ ಕರ್ಮಕ್ಕೂ ಘೋರವಾದ ವಿರೋಧವು. ಕತ್ತಲೆಗೂ ಬೆಳಕಿಗೂ ವಿರೋಧವದೆ; ಜ್ಞಾನಕ್ಕೂ ಅಜ್ಞಾನಕ್ಕೂ ವಿರೋಧವದೆ. ಇವುಗಳಿಗೆ ಹೊಂದಾಣಿಕೆಯಾಗುದದಿಲ್ಲವೆನ್ನುವದನ್ನು ನಾವು ಗ್ರಹಿಸುತ್ತೇವೆ. ಆದರೆ ಜ್ಞಾನಕ್ಕೂ ಕರ್ಮಕ್ಕೂ ಇರುವ ವಿರೋಧವು ಎಂತಹದು. ಶುಕ, ಜನಕ, ನಾರದ ಮೊದಲಾದವರು ಜ್ಞಾನಿಗಳಾದರೂ ಕರ್ಮವನ್ನು ಆಚರಿಸಲಿಲ್ಲವೇ ? ಶ್ರೀಕೃಷ್ಣನು ಗೀತೆಯು ತುಂಬ— ' ನಿನ್ನ ಕರ್ತವ್ಯ ಮಾಡು ' ಎಂಬ ನಿರ್ದೇಶವನ್ನು ಸಾರಿದ್ದಾನೆ. ಅರ್ಜುನನು ಸನ್ಯಾಸವನ್ನೂ ಅಪೇಕ್ಷಿಸಿದ್ದಾನೆ. ಅವನನ್ನು ಏಕೆ ಭಗವಂತನು ಅದರಿಂದ ಪರಾವೃತ್ತಗೊಳಿಸಿ ಮತ್ತೆ ಮತ್ತೆ **मामनु स्मरयुध्य च** ಎಂದು ಯುದ್ಧಕ್ಕೆ ಪ್ರೇರಿಸುತ್ತಾನೆ ?

ಶ್ರೀಕೃಷ್ಣನಿಗೆ ಪಾಪದ ಆರೋಪವು ವಿಚಿತ್ರವಾದುದು. ಆ ಆರೋಪ ವನ್ನು ಶ್ರೀಕೃಷ್ಣನು ' ನಾನು ನಿನಗೆ ಯುದ್ಧಮಾಡುವದಕ್ಕೆ ಹೇಳುವದಿಲ್ಲ ' ಎಂದು ಹೇಳಿ ದೂರ ಮಾಡುತ್ತಾನೆ. ಹೀಗೆ ಹೇಳಿ ಪಾಪದಿಂದ ಮುಕ್ತರಾಗಬೇಕಿದ್ದರೆ ಸ್ಪಷ್ಟವಾಗಿ " ನಾನು ಯುದ್ಧಮಾಡಲಿಕ್ಕೆ ಹೇಳುವದಿಲ್ಲ; ನೀನು ಯುದ್ಧಮಾಡಲಿಕ್ಕೆ ಶಕ್ಯವಿಲ್ಲ " ಎಂದು ಯಾಕೆ ಹೇಳಬಾರದು ? ಶ್ರೀಕೃಷ್ಣನಲ್ಲಿ ಪಾಪಶಂಕೆಯೇ ಪಾಪಕರವಾದುದು. ಕೃಷ್ಣನು ಹೇಳಿದಂತೆ ನಿರ್ವಂಚನೆಯಿಂದ ನಡೆಯುವದೇ ಭಕ್ತನ ಕರ್ತವ್ಯವು.

ಆತ್ಮನು ಕ್ರಿಯಾಶೂನ್ಯನೆನ್ನುವದು ಅಸಂಬದ್ಧವಾದ ಮಾತು. ಯಾವ ಕರ್ಮವನ್ನೂ ಆಚರಿಸಲಿಕ್ಕೆ ಬ್ರಹ್ಮನು ಸಹ ಶಕ್ತನಲ್ಲ ಎನ್ನುವ ಮಾತಂತೂ ಹುಚ್ಚು ಮಾತು.

ರಾಮಾನುಜಾಚಾರ್ಯರು **कं घातयति हंति कं** ಇದನ್ನು ಈ ರೀತಿಯಾಗಿ ಯೋಜಿಸಿದ್ದಾರೆ. ಅಜ್ಞಾನಿಯ ಹಾಗೆ ಜ್ಞಾನಿಯು ಶೋಕ ಮಾಡುವದಿಲ್ಲ ಆದರೆ ಜ್ಞಾನಿಗಾಗಲಿ ಅಜ್ಞಾನಿಗಾಗಲಿ ಆತ್ಮನನ್ನು ಕೊಲ್ಲುವದು ಶಕ್ಯವಿಲ್ಲ. ಯಾಕೆಂದರೆ ಅವನು ಅವಿನಾಶಿಯಾಗಿದ್ದಾನೆ ಅವರಿಬ್ಬರಿಗೆ ಭೇದವೆಂದರೆ ಜ್ಞಾನಿಯು ಕೊಂದವರಿಗೂ, ಕೊಲ್ಲಿಸಿದವರಿಗೂ ಅಳುವದಿಲ್ಲ ಅಜ್ಞನು ಹಾಡಿ ಹಾಡಿ ಅಳುತ್ತಾನೆ

ಮಧ್ವಾಚಾರ್ಯರು ಮಾತ್ರ — ಆತ್ಮರು ನಿತ್ಯರು; ಜ್ಞಾನಿಗಳು ಇದನ್ನು ತಿಳಿದಿದ್ದಾರೆ ಆದುದರಿಂದ ಆ ಜ್ಞಾನಿಗಳು - ನಾನು ಕೊಲ್ಲುತ್ತೇನೆ ಅಥವಾ ಕೊಲ್ಲಿಸುತ್ತೇನೆ ಎಂದು ಭಾವಿಸುವದಿಲ್ಲ. ಅಜ್ಞನಿಗೆ (೧೯) ಬಂದ ಮೋಹವು ಅವನಿಗೆ ಬರುವದಿಲ್ಲ.

ಇದನ್ನು ಮಂತ್ರಾಲಯ ಪ್ರಭುಗಳು ಬಹು ತಿಳಿಯಾಗಿ ವಿವೇಚಿಸಿದ್ದಾರೆ;— ಹಿಂದೆ **य एनं** ಎಂಬ ಶ್ಲೋಕದಲ್ಲಿ "ಜೀವ ಚೈತನ್ಯವನ್ನು ಕೊಲ್ಲುವದನ್ನು ಮತ್ತು ಕೊಲ್ಲುವದರಲ್ಲಿ ತನಗೆ ಸ್ವಾತಂತ್ರವನ್ನು ಮನ್ನಿಸುವವನು ತಿಳಿದವನಲ್ಲ ಎಂಬುದಕ್ಕೆ ಎರಡು ಕಾರಣಗಳನ್ನು ತೋರಿಸಿದ್ದಾಯಿತು;– ಜೀವನು ಪರಮಾತ್ಮನ ಪ್ರತಿಬಿಂಬನು. ಪ್ರತಿಬಿಂಬನಾದ ಜೀವನು ನಾಶ ಹೊಂದಬೇಕಾದರೆ ಉಪಾಧಿಗೂ ಪರಮಾತ್ಮನಿಗೂ ಸಂಬಂಧ ತಪ್ಪಬೇಕು ಅಥವಾ ಉಪಾಧಿಯಾದ ಕನ್ನಡಿಯು ನಾಶಹೊಂದಬೇಕು. ಉಪಾಧಿಯು ಜೀವ ಸ್ವರೂಪವೇ ಆದುದರಿಂದ ಅದಕ್ಕೆ ನಾಶವಿಲ್ಲ. ಇದನ್ನು ಅರಿಯದವನೇ ನಾನು ಕೊಲ್ಲುತ್ತೇನೆಂದು ವ್ಯವಹಾರ ಮಾಡುತ್ತಾನೆ. ಎರಡನೇ ಕಾರಣವೆಂದರೆ, ಜೀವನು ನಿತ್ಯನಾದುದರಿಂದ ಅವನು ನಾಶಹೊಂದಲಾರನು; ಅವನು ಅಸ್ವತಂತ್ರನಾದುದರಿಂದ ಯಾರನ್ನೂ ಕೊಲ್ಲಲಾರನು. ಇದನ್ನು ಅಜ್ಞನು ತಿಳಿದಿಲ್ಲ. ಯಾರು ಜೀವಚೈತನ್ಯದ ನಿತ್ಯತ್ವವನ್ನೂ ಭಗವಂತನ ಸ್ವಾತಂತ್ರ್ಯವನ್ನೂ ತಿಳಿಯುತ್ತಾನೆ, ಅವನು ಜ್ಞಾನಿಯು. ಯಾಕೆಂದರೆ ಅವನಿಗೆ 'ನಾನು ಸ್ವತಂತ್ರನು' ಎಂಬ ಅಭಿಮಾನವು ಇರುವದಿಲ್ಲ, 'ನಾನು ಕೊಲ್ಲುವವನು' ಎಂದಾಗಲಿ 'ಇವನನ್ನು ಇವನು ಕೊಲ್ಲುವವನು' ಎಂದಾಗಲೀ ತಿಳಿಯದೇ ಇರಲಿಕ್ಕೆ ಅಭಿಮಾನ ತ್ಯಾಗವೇ ಕಾರಣವೆಂದು ಹೇಳುತ್ತಾನೆ. **वेदाविनाशिनंनित्यं** ಎಂದು 'ಜೀವನು ಬಿಂಬನಾಶ ಮೊದಲಾದ ಕಾರಣಗಳಿಂದ ನಾಶಹೊಂದತಕ್ಕ ಪ್ರತಿಬಿಂಬನು ಅಲ್ಲ. ಹಿಂದೆ **मात्रास्पर्शास्तु** ಎಂಬ ' ಶ್ಲೋಕದಲ್ಲಿ ' ಹೇಳಿದಂತೆ ಜೀವನಿಗೆ ರಾಗದ್ವೇಷ ಸುಖ–ದುಃಖಾದಿಗಳು ಅಭಿಮಾನ ನಿಮಿತ್ತದಿಂದ ಬಂದ ದೋಷಗಳು, ಅವನಿಗೆ ಸ್ವತ; ಈ ದೋಷಗಳಿಲ್ಲ. ಅವಿನಾಶಿ ಎಂದರೆ ಸ್ವರೂಪ ಭೂತವಾದ ದೋಷಗಳಿಲ್ಲದವನು; ನಿತ್ಯನೆಂದರೆ ಸ್ವಾಭಾವಿಕವಾದ ನಾಶವಿಲ್ಲದವನು. ಅಜನೆಂದರೆ ಉತ್ಪತ್ತಿ ಇಲ್ಲದವನು

ಅವ್ಯಯನೆಂದರೆ ಸ್ವರೂಪತಃ ವಿಕಾರ ಹೀನನು ಎಂದು ಅರ್ಥ. **ಇಂಥವನು ಜೀವನು** ಅಥವಾ ನಿತ್ಯನಾದ ಎಂದರೆ ಸ್ವಾಭಾವಿಕ ನಾಶರಹಿತನಾದ ಅಜನೆಂದರೆ ಉತ್ಪತ್ತಿರಹಿತನಾದ, ಅವ್ಯಯ ಎಂದರೆ ನಿರ್ವಿಕಾರನಾದ, ಆದುದರಿಂದಲೇ ಸರ್ವ ಸ್ವತಂತ್ರನಾದ ಈಶ್ವರನನ್ನು ಯಾರು ತಿಳಿಯುತ್ತಾರೆ ಅವನೇ ಜ್ಞಾನಿಯು. ಇಂಥ ಜ್ಞಾನಿಯು ಹೇಗೆ ಯಾರನ್ನು ಕೊಲ್ಲುತ್ತಾನೆ ಮತ್ತು ಯಾರಿಂದ ಕೊಲ್ಲಿಸುತ್ತಾನೆ ? ಇವನಿಂದ ಕೊಲ್ಲಿಸುತ್ತೇನೆ ಎಂದಾಗಲಿ ಇವನನ್ನು ಕೊಲ್ಲುತ್ತೇನೆಂದಾಗಲಿ ಅವನು ತಿಳಿದುಕೊಳ್ಳುವದಿಲ್ಲ "

ಈಗ ಈ ಮೂವರ ಅಭಿಪ್ರಾಯಗಳನ್ನು ನಾವು ತೂಗಿ ನೋಡಬಹುದು ಇವುಗಳಲ್ಲಿ ಒಡೆದು ಕಾಣುವದೆಂದರೆ ರಾಮಾನುಜಾಚಾರ್ಯರಿಗೂ ಮಧ್ವಾಚಾರ್ಯರಿಗೂ ಬಹುಮಟ್ಟಿಗೆ ಹೋಲಿಕೆ ತೋರುತ್ತದೆ. ಈ ಸಂದರ್ಭದ ವಿಷಯದಲ್ಲಿಯೂ ಅವರಿಬ್ಬರಿಗೂ ಒಪ್ಪಿಗೆ ತೋರುತ್ತದೆ. ೧೧ನೇ ಶ್ಲೋಕದಿಂದ ಈಚೆಗೆ ಆತ್ಮನು ನಿತ್ಯನು ಎನ್ನುವ ಮಾತು ಸಾಗಿ ಬಂದಿದೆ ಈ ಮಾತನ್ನು ಮಹಾರಾಷ್ಟ್ರದಲ್ಲಿ ಶ್ರೀ ಖರೆಯನ್ನುವವರು ತಮ್ಮ ಗೀತಾ ಪದ್ಮವಿಕಾಸದಲ್ಲಿ ಈ ರೀತಿಯಾಗಿ ಹೇಳಿದ್ದಾರೆ– "ಭಗವಂತನು ಅರ್ಜುನನಿಗೆ ಆತ್ಮನು ಅಕರ್ತನೆನ್ನುವದನ್ನು ಬಿಂಬಸಬೇಕಾಗಿಲ್ಲ ಆತ್ಮನು ಅಮರನಿದ್ದಾನೆನ್ನುವದನ್ನು ಬಿಂಬಿಸಿಬೇಕಾಗಿದೆ. ಇದನ್ನು ೧೧ನೇ ಶ್ಲೋಕದಿಂದ ೩೦ನೇ ಶ್ಲೋಕದವರೆಗೆ ಹೇಳುತ್ತಾ ಇದ್ದಾನೆ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಅತ್ಯಂತ ಆಗ್ರಹದಿಂದ ಆತ್ಮನ ಅಕರ್ತೃತ್ವವನ್ನು ಭಗವಂತನು ಪ್ರತಿಪಾದಿಸಿದ್ದಾನೇದು ಹೇಳುತ್ತಾರೆ ಮತ್ತು ಶೋಕಕ್ಕೆ ಏನೂ ಕಾರಣವಿಲ್ಲಂದೂ ತೋರಿಸುತ್ತಾನೆ **न त्वं शोचितुमर्हसि** ಎನ್ನುವದೇ ಈ ಅಧ್ಯಾಯದ ಪಲ್ಲವಿ ಇದ್ದಂತೆ ತೋರುತ್ತದೆ ಆದರೆ ಶಂಕರಾಚಾರ್ಯರಿಗೆ ಅರ್ಜುನನನ್ನು ಸದ್ಯಕ್ಕೆ ಮುಕ್ತಿಗೆ ಪ್ರಯೋಜನವಾಗುವಂತೆ 'ಆತ್ಮನು ಅಕರ್ತಾ' ಎಂದು ಆತ್ಮಬೋಧ ಮಾಡಬೇಕಾಗಿದೆಂದು ಹೇಳುತ್ತಾರೆ. ಆದರೆ ಶ್ರೀಕೃಷ್ಣನಿಗೆ ಪ್ರಾಮುಖ್ಯವಾಗಿ ಇದನ್ನೇ ಉಪದೇಶ ಮಾಡಬೇಕಾಗಿದ್ದರೆ "**अव्यक्तोऽयं** ಮೊದಲಾದ ಶ್ಲೋಕಗಳಲ್ಲಿ ಯಾಕೆ ಆತ್ಮನು ಅಕರ್ತನೆಂದು ಹೇಳಲಿಲ್ಲ ? ಶ್ರೀಕೃಷ್ಣನು ಈ ಮಾತನ್ನು ಎಲ್ಲಿಯೂ ಹೇಳಲಿಲ್ಲ "

C. M ಪದ್ಮನಾಭಾಚಾರ್ಯರು ತಮ್ಮ A critical study of Bhagavadgita ದಲ್ಲಿ ಈ ಶ್ಲೋಕದ ಮೇಲೆ ಈ ಮೂವರ ಭಾಷ್ಯಗಳನ್ನು ತುಲನೆ ಮಾಡುತ್ತ ಈ ರೀತಿಯಾಗಿ ಹೇಳಿದ್ದಾರೆ — ಅರ್ಜುನನ ಶೋಕ ಪರಿಹಾರವೇ ಸಂದರ್ಭ. ಈ ಶೋಕವನ್ನು ಪರಿಹರಿಸುವ ಉಪಾಯ ಯೋಜನೆಯೇ ಯೋಗ್ಯವಾದ ಉತ್ತರ. ಎಲ್ಲರ ದೇಹಗಳಲ್ಲಿ ಒಬ್ಬ ಆತ್ಮನಿದ್ದಾನೆ; ಅವನು ನಿಷ್ಕ್ರಿಯ

ನಿದ್ದಾನೆ ಅವನು ಇಚ್ಛಿಸಲಿಕ್ಕೆ ತಿಳಿಯಲಿಕ್ಕೆ ಮಾಡಲಿಕ್ಕೆ ಅಸಮರ್ಥನಿದ್ದಾನೆಂದು ಹೇಳುವ ಮಾತು ಅರ್ಜುನನ ದುಃಖವನ್ನು ಹೋಗಲಾಡಿಸಲಾರದು. ಸಾಧಕನು ಸನ್ಯಾಸ ತೆಗೆದುಕೊಳ್ಳಬೇಕಾಗಿದ್ದರೆ ಅರ್ಜುನನು ಕೂಡಲೇ ಸಿದ್ಧನಾಗುತ್ತಿದ್ದನು ಮತ್ತು ಯುದ್ಧದಲ್ಲಿ ತೊಡಗಬಾರದೆಂದು ನಿಶ್ಚೈಸುತ್ತಿದ್ದನು ಆದುದರಿಂದ ಈ ಶ್ಲೋಕದ ಅರ್ಥವು ಈ ಜೀವ ಅಮರತ್ವವಾದಲ್ಲಿ ಹೊಂದಿಕೆಯಾಗುವಂತೆ ಇರಬೇಕು. ಆದುದರಿಂದ ರಾಮಾನುಜರ ಮತ್ತು ಮಧ್ವರ ಅರ್ಥಕ್ಕೆ ಪ್ರಾಶಸ್ತ್ಯ ದೊರೆಯುವದರಲ್ಲಿ ಸಂಶಯವಿಲ್ಲ.

ಇನ್ನು ಇವರಿಬ್ಬರ ತಾತ್ಪರ್ಯದಲ್ಲಿ ಯಾರ ಅರ್ಥಯೋಜನೆಯು ಸರಿಯಿದೆನ್ನುವದನ್ನು ಪರೀಕ್ಷಿಸಿ ನೋಡಬೇಕು ರಾಮಾನುಜಾಚಾರ್ಯರು ಈ ಸಂದರ್ಭವನ್ನು ಬರೀ ಜೀವನಿಗೆ ಮಾತ್ರ ಮಿತಗೊಳಿಸಿ ಅರ್ಥಯೋಜನೆಯನ್ನು ಕಠಿಣಗೊಳಿಸಿದ್ದಾರೆ. ಈ ಯೋಜನೆಯಿಂದ ಕೆಲವು ಕಡೆ ಪುನರುಕ್ತಿ, ಬಲಾತ್ಕಾರದಿಂದ ಅರ್ಥ ಹಚ್ಚುವದು ನಡೆಯುತ್ತಿದೆ ಮಧ್ವಾಚಾರ್ಯರು ಎಲ್ಲಿ ಸಹಜವಾಗಿ ಜೀವನಿಗೆ ಅನ್ವಯಿಸುವದು ಅಲ್ಲಿ ಜೀವನ ಪರವಾಗಿ ಅರ್ಥ ಹಚ್ಚುವರು ಎಲ್ಲಿ ಈಶ್ವರನ ಪರವಾಗಿ ಸಹಜವಾಗಿ ಅರ್ಥ ಹಚ್ಚಬೇಕಾಗುವದು ಅದನ್ನು ಈಶ್ವರನ ಪರವಾಗಿಯೂ ಯೋಜಿಸಿದ್ದಾರೆ ಆತ್ಮನು ಒಬ್ಬನೇ ಎಂದು ಮನ್ನಿಸುವ ಅದ್ವೈತಿಗಳಿಗೆ ಈ ತೊಂದರೆಯೇ ಬರುವದಿಲ್ಲ. ಆದರೆ ಜೀವನು ಬ್ರಹ್ಮನು ಒಬ್ಬನೇ ಆತ್ಮ ಎಂದು ಹೇಳುವವರು ಹೇಗೆ ಗೀತೆಯ ಭಾವಕ್ಕೇ ಧಕ್ಕೆ ತರುತ್ತಾರೆ ಎನ್ನುವದನ್ನು ಈ ಮೊದಲೇ ತೋರಿಸಿದ್ದಾಗಿದೆ ಮತ್ತೆ ಮುಂದೆಯೂ ಪ್ರಸಂಗ ಬಂದಲ್ಲೆಲ್ಲ ತೋರಿಸಲಾಗುವದು

" ಈ ಶ್ಲೋಕವನ್ನು ರಾಮಾನುಜಾಚಾರ್ಯರು ಜೀವನಿಗೆ ಮಾತ್ರ ಹಚ್ಚಿದ್ದರಿಂದ, ಮಧ್ವಾಚಾರ್ಯರು ಕಲ್ಪಾಂತರವಾಗಿಯಾದರೂ ಜೀವನಿಗೆ ಯೋಜಿಸಿದ್ದರಿಂದ, ಶ್ಲೋಕಾರ್ಥವು ಪರಮಾತ್ಮನಿಗೆ ಮಾತ್ರ ಹಚ್ಚುವದರಿಂದ ಎಷ್ಟು ಮಧುರವಾಗುತ್ತಿತ್ತೋ ಅಷ್ಟು ಮಧುರವಾಗಿಲ್ಲೆಂದು " C M. ಪದ್ಮನಾಭಾಚಾರ್ಯರ ತಕರಾರು. " ಜೀವರು ಅಮರರು ಎಂದು ತಿಳಿದವನಿಗೆ ' ಜೀವರು ಸಾಯುತ್ತಾರೆ ' ಎಂದು ಹೇಳುವದರಿಂದ ಅವರು ಆತ್ಮರು ಸಾಯುತ್ತಾರೆಂದು ತಿಳಿಯುವದಿಲ್ಲ. ಇದು ಚಾರ್ವಾಕರು ಅಥವಾ ಭೌತವಾದಿಗಳು ಮಾಡುವ ಆಪಾದನೆಯು ಆದರೆ ಈ ಶ್ಲೋಕವನ್ನು ಈಶ್ವರ ಪರವಾಗಿ ಹಚ್ಚಿದರೆ ನಿಜವಾದ ಕರ್ತನು ಈಶ್ವರನೆಂದೂ, ಮನುಷ್ಯನು ಅವನಿಗೆ ಅಧೀನನಾದ ಚಿಕ್ಕ ಕರ್ತನೆಂದೂ ನಮಗೆ ಗೊತ್ತಾಗುತ್ತದೆ. ಅರ್ಜುನನು ಯುದ್ಧ ಮಾಡಿ ವೈರಿಗಳನ್ನು ಕೊಲ್ಲಬಹುದು. ಆದರೆ ಅವನು ಬುದ್ಧಿವಂತನಾದರೆ ತನ್ನ ಮೈಮೇಲೆ ಬಂದ ಈ ಪ್ರಸಂಗವನ್ನು ನೀಗಲಿಕ್ಕೆ ತಾನು

ಸ್ವತಂತ್ರ ಕರ್ತನೆಂದು ಭಾವಿಸದೆ ಭಗವಂತನ ಕೈಯೊಳಗಿನ ಸಾಧನೆಯೆಂದು ತಿಳಿಯು ಬೇಕು ಈ ಮಾತು ಅರ್ಜುನನಿಗೆ ಮನಸಿಗೆ ಶಾಂತಿಯನ್ನು ನೀಡುವದು. ಜೀವನು ಅಕರ್ತನು ಎನ್ನುವ ರುಕ್ಷವಾದ ಪಾರದಕ್ಕಿಂತ ಜೀವನು ಅಸ್ವತಂತ್ರನು, ಭಗವಂತನ ಅಧೀನನು ಎನ್ನುವ ಪಾರವು ತುಂಬ ಉತ್ತೇಜಕವಾಗಿದೆ" ಎನ್ನುವದು ಅವರ ವಾದ ಸರಣಿಯು. '

**वासांसि जीर्णानियथा विहाय**
**नवानि गृण्हाति नरोपराणि ।**
**तथा शरीराणि विहाय जीर्णानि**
**अन्यानि संयाति नवानि देही ॥ २२ ॥**

ಮನುಷ್ಯನು ಹೇಗೆ ಹರಿದ ಬಟ್ಟೆಗಳನ್ನು ಬಿಟ್ಟು ಹೊಸದಾದ ಬೇರೆ ಬಟ್ಟೆಗಳನ್ನು ಧರಿಸುತ್ತಾನೋ ಹಾಗೆಯೇ ದೇಹಿಯಾದ ಜೀವನು ಜೀರ್ಣವಾದ ಶರೀರಗಳನ್ನು ಬಿಟ್ಟು ಹೊಸ ದೇಹಗಳನ್ನು ಹೊಂದುತ್ತಾನೆ ॥ ೨೨ ॥

ತಾತ್ಪರ್ಯ — ಭೀಷ್ಮ–ದ್ರೋಣಾದಿಗಳ ಆತ್ಮ ನಾಶವಾಗುವದಿಲ್ಲ, ಇನ್ನು ಅವರ ದೇಹ ನಾಶವಾದರೂ ಅಳುವ ಕಾರಣವಿಲ್ಲೆಂದು ಸಾಮಾನ್ಯವಾಗಿ ತಿಳಿಯು ಬೇಕೆಂದು ಕೃಷ್ಣನು ಹೇಳುತ್ತಾನೆ.[2]

---

[1]ಸ್ವಾಮಿ ಪ್ರಭುಪಾದರು—" ಕೆಲವೊಂದು ಪ್ರಸಂಗದಲ್ಲಿ ಹಿಂಸೆ ಯುಕ್ತವೆನಿಸುತ್ತದೆ ಮನು-ಸ್ಮೃತಿಯಲ್ಲಿ ಕೊಲೆ ಮಾಡಿದವನಿಗೆ ಮರಣದಂಡನೆ ವಿಧಿಸಿದ್ದಾರೆ. ಯಾಕೆಂದರೆ ಈಗಿನ ಮರಣದಂಡನೆ ಯಿಂದ ಅವನು ಮಾಡಿದ ಪಾಪವು ತೊಳೆದುಹೋಗುವದರಿಂದ ಮುಂದಿನ ಜನ್ಮದಲ್ಲಿ ಅವನಿಗೆ ತಾನು ಮಾಡಿದ ಪಾಪಕ್ಕೆ ದುಃಖ ಅನುಭವಿಸಬೇಕಾಗಿಲ್ಲ " ಎಂದು ಹೇಳಿದ್ದಾರೆ " ಹಾಗೆಯೇ ನ್ಯಾಯದಾನಕ್ಕಾಗಿಯೇ ಅರ್ಜುನನಿಗೆ ಶ್ರೀಕೃಷ್ಣನು ಯುದ್ಧ ಮಾಡಲಿಕ್ಕೆ ಹೇಳಿದ್ದರಿಂದ ಈ ತರಹದ ಹಿಂಸೆಯು ವಿಹಿತವಾದುದೇ ಆಗಿದೆ ಆದುದರಿಂದ ಇದಕ್ಕೆ ಪ್ರತಿಯಾಗಿ ಪಾಪವೇನು ಬರುವದಿಲ್ಲ " ಎಂದು ಅವರ ವಾದ

[2]ರಾಘವೇಂದ್ರರು ಬಹು ಸಂಭ್ರಮದಿಂದ ಈ ಶ್ಲೋಕಕ್ಕೆ ಅವತರಣಿಕೆಯ ಮೇಲೆ ಅವತರಣಿಕೆಯನ್ನು ಕೊಡುತ್ತಾರೆ ಶ್ಲೋಕದ ಅರ್ಥವನ್ನು ಸಹ— '**श्लोकार्थस्तुव्यक्तः**' ಎಂದು ಹೇಳಿ ಕೈಬಿಟ್ಟಿದ್ದಾರೆ. ಇದರ ಸ್ಥಳವನ್ನೂ ಅವತರಣಿಕೆಗಳಿಗೆ ಉಪಯೋಗಿಸಿದ್ದಾರೆ ೧) ಪೂರ್ವದಲ್ಲಿ **अजोनित्यः शास्वतोऽयं पुराण** ಎಂದು ಜೀವನು ಪುರಾಣವೆಂದು ಹೇಳಿದ್ದಾಗಿದೆ (II – ೨೦) ಅದರಿಂದ ಅವನು ದೇಹದಿಂದ ದೇಹಾಂತರಕ್ಕೆ ಹೋಗುತ್ತಾನೆಂದು ಗೊತ್ತಾಗಿದೆ ಅದು ದೇಹದಕ್ಕಿಂತ ಬೇರೆಯಾದ ನಿತ್ಯನಾದ ಜೀವನು ಇದ್ದರೆ ಮಾತ್ರ ಸಾಧ್ಯ. **कौमारं यौवनं जरा** ಎಂಬ ಶ್ಲೋಕದಲ್ಲಿ ದೇಹ ಬೇರೆ ಆತ್ಮ ಬೇರೆಯೆಂದು ವಿವೇಚಿ

**ವಿಶೇಷ ಟಿಪ್ಪಣಿಗಳು :**

ಈಗ ಹಿಂದೆ ೧೩ ನೇ ಶ್ಲೋಕದಲ್ಲಿಯೇ (**देहिनोऽस्मिन् यथादेहे**) ಜೀವನಿಗೆ ದೇಹಾಂತರ ಪ್ರಾಪ್ತಿಯನ್ನು ಕೃಷ್ಣನು ಪ್ರಸ್ತಾಪಿಸಿದ್ದಾನೆ ಆದರೆ ಆ ಶ್ಲೋಕದಲ್ಲಿ ' ಹೇಗೆ ಜೀವನು ಶೈಶವದಿಂದ ತಾರುಣ್ಯಕ್ಕೆ ಬರುತ್ತಾನೋ ತಾರುಣ್ಯದಿಂದ ಮುಪ್ಪಿಗೆ ಹೋಗುತ್ತಾನೋ ಹಾಗೆ ಮರಣಾನಂತರ ಮತ್ತೊಂದು ದೇಹಕ್ಕೆ ಹೋಗುತ್ತಾನೆ ' ಎಂದು ಹೇಳಿದೆ ಅದೇ ವಿಷಯವನ್ನೇ ಈ ಶ್ಲೋಕದಲ್ಲಿ ' ಹೆಚ್ಚು ಸ್ಪಷ್ಟಗೊಳಿಸುವ ಉದಾಹರಣೆಗಳಿಂದ ಹೇಳಿದ್ದಾರೆ ಶೈಶವದಿಂದ ತಾರುಣ್ಯಕ್ಕ ಆಕ್ರಮಣವು ಸ್ಪಷ್ಟವಿರುವದಿಲ್ಲ ಹಾಗೆ ತಾರುಣ್ಯದಿಂದ ಮುಪ್ಪಿಗೆ ಗತಿಯು ಕ್ರಮವಾಗಿ ಮೆಲ್ಲನ ಸಾಗುತ್ತದೆ ಆದರೆ ಜನ್ಮಾಂತರವು ಸಾವಿನ ತರುವಾಯ ಸ್ಪಷ್ಟವಾಗಿ ಕಾಣುತ್ತದೆ. ಇದನ್ನು ಸ್ಪಷ್ಟಗೊಳಿಸಲಿಕ್ಕೆ ಇಲ್ಲಿ ಬಟ್ಟೆಯ ಉದಾಹರಣೆಯನ್ನು ಭಗವಂತನು ಹೇಳಿದ್ದಾನೆ ಹಳೆ ಬಟ್ಟೆಗಳನ್ನು ಚಲ್ಲಿ ಚಲೋ ಬಟ್ಟೆಗಳನ್ನು ತೊಡುವದರಲ್ಲಿ ಸ್ಪಷ್ಟತೆ ಇದೆ. ಹೀಗೆ ಮಾಡುವಾಗ ಜೀವನಿಗೆ ದುಃಖವಿಲ್ಲ ಸಂತೋಷವೇ ಎನಿಸುತ್ತಿದೆ.

ಇದರಲ್ಲಿಯ ಮೊದಲನೆ ಪಾಠವೆಂದರೆ ಬಟ್ಟೆಗಳು ಜೀರ್ಣವಾಗುವದನ್ನು ತಡೆಯಲಿಕ್ಕೆ ಸಾಧ್ಯವಿಲ್ಲ ಮತ್ತು ಜೀರ್ಣ ಬಟ್ಟೆಗಳನ್ನು ತ್ಯಜಿಸಲೇ ಬೇಕು ಶಾಂತಿ ಪರ್ವದಲ್ಲಿ ಜೀವನಿಗೂ ದೇಹಕ್ಕೂ ಇರುವ ಭೇದವನ್ನು ಇನ್ನಷ್ಟು

---

ಸಿದ್ದರೂ ಸಹ ಕೌಮಾರ ಮೊದಲಾದ ದೇಹಗಳು ಒಂದರಿಂದ ಒಂದು ಬೇರೆಯಾಗದ್ದರಿಂದ ದೇಹ ಮತ್ತು ಆತ್ಮರು ಒಬ್ಬರಿಂದ ಒಬ್ಬರು ( ಒಬ್ಬರು ವಿನಾಶಿ ಮತ್ತೊಬ್ಬರು ಅವಿನಾಶಿ ) ಎಂದು ಸ್ಪಷ್ಟವಾಗಿ ಭಿನ್ನರೆಂದು ಮನುಷ್ಯನ ಬುದ್ಧಿಯಲ್ಲಿ ಆರೂಢರಾಗುವದಿಲ್ಲ ಆದದುರಿಂದ ಬೇರೆ ದೃಷ್ಟಾಂತವನ್ನು ಕೊಟ್ಟು ಅದನ್ನು ಸ್ಪಷ್ಟಪಡಿಸುತ್ತಾ ಹೇಳುತ್ತಾರೆ **वासांसीति.**

೨) ಅಥವಾ ಈಶ್ವರನು ದೇಹದಿಂದಲೂ ನಿತ್ಯನು, ಸ್ವರೂಪದಿಂದಲೂ ನಿತ್ಯನು ಆದುದರಿಂದ ಅವನ ವಿಷಯದಲ್ಲಿ ಶೋಕವಿಲ್ಲದಿದ್ದರೂ, ಜೀವನ ವಿಷಯದಲ್ಲಿ ಮಾತ್ರ ಶೋಕವು ಹುಟ್ಟೇ ಹುಟ್ಟುತ್ತದೆ ಹಿಂದೆ ಜೀವನು ನಿತ್ಯನು, ಅವನು ದೇಹವನ್ನು ಹೊಂದುವದು, ಬಿಡುವದು ಕೌಮಾರಾದಿ ದೇಹಗಳಂತೆಯೇ ಎಂದು ಹೇಳಿದ್ದರೂ ಸಹ ಲೋಕದಲ್ಲಿ ಜನನ–ಮರಣಗಳು ಪ್ರಸಿದ್ಧವಿರುವದರಿಂದ ಮತ್ತು ಯುದ್ಧದಲ್ಲಿ ಮರಣಕ್ಕೆ ಪ್ರಸಂಗವಿರುವದರಿಂದ, ಆ ಕಾರಣಕ್ಕಾಗಿ ಶೋಕವೆಂದರೆ ಹೇಳುತ್ತಾರೆ **वा सांसीति.** ೩) ಕೌಮಾರ ಮೊದಲಾದವುಗಳಂತೆ ಶರೀರ ಯೋಗ–ವಿಯೋಗಗಳು ಶೋಕಕ್ಕೆ ಕಾರಣವಲ್ಲವೆಂದು ಅಂಗೀಕರಿಸಿದರೆ ಆ ಮೇಲೆ ಜನನ–ಮರಣಗಳೂ ಶೋಕಕ್ಕೆ ಕಾರಣವಾಗಲಾರವು ಯಾಕಂದರೆ ದೇಹ ಯೋಗ–ವಿಯೋಗಗಳೇ ಜನನ-ಮರಣಗಳು ೪) ಅಥವಾ ಬಟ್ಟೆಗಳು ಜೀರ್ಣವಾಗುವಂತೆ ದೇಹಗಳೂ ಮುಪ್ಪಾಗುವದರಿಂದ ಜೀವನು ಅಸ್ವತಂತ್ರನೆಂದು ಸಿದ್ಧವಾಗುತ್ತದೆ. ಇದರಿಂದ ಜೀವನು ಎಲ್ಲ ವಿಷಯದಲ್ಲಿ ಅಸ್ವತಂತ್ರನೆಂದು ಸಿದ್ಧವಾಗುತ್ತದೆ.

ನಿಚ್ಚಳವಾಗಿ ತೋರುವಂತೆ ಮನೆಯ ಉದಾಹರಣೆಯನ್ನು ಕೊಟ್ಟಿದ್ದಾರೆ **यथाहि पुरुषः शालां पुनः संप्रविशेन्नवाम् । एवं जीवः शरीराणि तानि तानिप्रपद्यते ।** ಹೇಗೆ ಮನುಷ್ಯನು ಹಳೆ ಮನೆಯನ್ನು ಬಿಟ್ಟು ಹೊಸದರಲ್ಲಿ ಪ್ರವೇಶಿಸುತ್ತಾನೆ ಹಾಗೆ ಜೀವನು (ಮರಣಾನಂತರ) ಬೇರೆ ಬೇರೆ ದೇಹಗಳನ್ನು ಪ್ರವೇಶಿಸುತ್ತಾನೆ ಮರಣದಿಂದ ದುಃಖವಿಲ್ಲ ಆದರೆ ಸಂತೋಷವೆ ಇದೆ ಎಂದು ಸೂಚಿಸುತ್ತಾರೆ ಹೊಸಮನೆ ಹೊಸ ಬಟ್ಟೆ ಸಂತೋಷವನ್ನೇ ಕೊಡುತ್ತವೆ ಮರಣಕಾಲಕ್ಕೆ ಯಾವದನ್ನು ಚಿಂತಿಸುತ್ತಾನೋ ಆದನ್ನೇ ಮುಂದಿನ ಜನ್ಮದಲ್ಲಿ ಹೊಂದುತ್ತಾನೆ ಇದು ಕರ್ಮದ ನಿಯಮ ನಾವು ಒಂದೇಸವನೆ ಮುಂದಿನ ದೇಹದ ಸಿದ್ಧತೆಯನ್ನು ಮಾಡಿಕೊಳ್ಳುತ್ತೇವೆ ಭಾಗವತ ೧೧ ನೇ ಸ್ಕಂದದಲ್ಲಿ ಶಿವನ ಕುದುರೆಯು ಮುಂದಿನ ಕಾಲುಗಳಿಂದ ಗಟ್ಟಿಯಾಗಿ ಹಿಡಿದುಕೊಂಡು ಹಿಂದಿನ ಕಾಲುಗಳನ್ನು ಕಿತ್ತುತ್ತದೆ ಹೀಗೆ ಜೀವನು ತನ್ನ ದಾರಿಯನ್ನು ನಿರ್ಮಿಸಿಕೊಂಡು ಈ ದೇಹವನ್ನು ಬಿಡುತ್ತಾನೆ.

ನಾವು ಕೆಲವು ಸಾರೆ ತರುಣ ದೇಹಗಳನ್ನು ಬಿಟ್ಟು ದೇಹಾಂತರವನ್ನು ಹೊಂದಿದಾಗ ಸಹ ನಾವು ಬಿಟ್ಟ ದೇಹವು ಮುಂದಿನ ಯಾತ್ರೆಗೆ ಅಸಮರ್ಥವಾದುದರಿಂದ ಅದನ್ನು ಬಿಡುತ್ತೇವೆ, ಮತ್ತು ಸಮರ್ಥವಾದುದನ್ನು ಸ್ವೀಕರಿಸುತ್ತೇವೆ. ಆದುದರಿಂದ ಇದೊಂದು ವಿಕಾಸವು ಅಥವಾ ಉತ್ಕ್ರಾಂತಿಯು ಸಾಮಾನ್ಯವಾಗಿ ನಾವು ಈ ದೇಹಾಂತರದಿಂದ ಹೆಚ್ಚು ಹೆಚ್ಚು ಒಳ್ಳೆ ಸ್ಥಿತಿಗೆ ತೆರಳಿದರೂ ಅಪವಾದವಾಗಿ ನೈತಿಕ ಪತನದಿಂದ ಹೀನ ಸ್ಥಾನಕ್ಕೂ ಹೋಗಬಹುದು.

ಇಲ್ಲಿ **नवानि, अपराणि, अन्यानि,** ಬರೀ **नवानि** ಎಂದು ಹೇಳುವದರಿಂದಲೇ ಅವು ಹಳೆಯದರಕಿಂತ ಬೇರೆಯೆಂದು ಗೊತ್ತಾಗುತ್ತದೆ. ಆದುದರಿಂದ ಉಳಿದೆರಡು ಪದಗಳು ಪುನರುಕ್ತಿಗಳೆಂದು ತೋರುತ್ತವೆ ಆದರ **नव** ಶಬ್ದದಿಂದ ಗೊತ್ತಾದ ಅಂತರವನ್ನೇ ಒತ್ತಿ ಒತ್ತಿ ಹೇಳಲಿಕ್ಕೆ ಇವೆರಡನ್ನೂ ಉಪಯೋಗಿಸಿರಬಹುದು

**ವೇದಾಂತ ದೇಶಿಕರು :–** " ಹೊಸದೆಂದ ಮಾತ್ರಕ್ಕೆ ಸಂತೋಷದ ಸ್ಥಾನವೆಂದು ಸಿದ್ಧಿಸುವದಿಲ್ಲ. ಅರಮನೆಯಲ್ಲಿದ್ದ ಅರಸನಿಗೆ ಸೆರೆ ಮನೆಯು ಹೊಸದಾದರೂ ದುಃಖಕೊಡದೇ ಹೋದೀತೇ ! ! ಹಳೆಯದಾದ ರೇಶಿಮೆ ಬಟ್ಟೆಯು ಹೊಸದಾದ ಗೋಣಿ ತಟ್ಟಿನಗಿಂತ ಮೇಲು. ಆದರೂ ಈ ಶ್ಲೋಕವು ಹೊಸದರ ಸಂತೋಷವನ್ನು ಸೂಚಿಸುತ್ತದೆ. ಆದರೆ ಇಲ್ಲಿ ಮಹಾ

ಭಾರತ ಯುದ್ಧದಲ್ಲಿ ಮಡಿದವರ ವಿಷಯವಾದುದರಿಂದ ಅವರಿಗೆ ಹೀನ ಸ್ಥಿತಿಯು ಹೆದರಿಕೆಗೆ ಕಾರಣವಿಲ್ಲ " ಎಂದು ಹೇಳುತ್ತಾರೆ. [1]

**ಮಧುಸೂದನ ಸರಸ್ವತಿಯವರು** ಇದೇ ಆಕ್ಷೇಪಕ್ಕೆ ಮತ್ತೊಂದು ತರಹದ ಉತ್ತರವನ್ನು ಕೊಡುತ್ತಾರೆ — " ಭೀಷ್ಮ–ದ್ರೋಣರ ವಿಷಯ ಪ್ರಸ್ತುತ ವಾದುದರಿಂದ ಜೀರ್ಣವಾದ ಅವರ ದೇಹಕ್ಕೆ ಮರಣದಿಂದ ಒಳ್ಳೇ ದೇಹವೇ ಬರು ವದರಿಂದ ಅವರಿಗೆ ಸಂತೋಷ ಕಟ್ಟಿಟ್ಟಿದೆ. "

**ಡಾ. ರಾಧಾಕೃಷ್ಣನ್ನರು** · ದೇಹಾಂತರದ ಪ್ರಸಂಗದಲ್ಲಿ ಜೀವನು ಸೂಕ್ಷ್ಮ ದೇಹವನ್ನು ( ಲಿಂಗದೇಹವನ್ನು ) ತೆಗೆದುಕೊಂಡು ಹೋಗುತ್ತಾನೆಂದು ಹೇಳಿ ಅದನ್ನು ಹೀಗೆ ವಿಸ್ತರಿಸಿದ್ದಾರೆ— " The eternal does not move from place to place, but the embodied soul moves from one abode to another It takes birth each time and gathers to itself a mind life and body formed out of the materials of nature according to its past evolution and its need for the future There is an objective connection between the Various forms of life. " Like Corn a mortal ripens, and like corn is he born again " (Katha up) **(सस्यमिवमर्त्यः पच्यते सस्यमिव जायते पुन ॥ ५ ॥** [2]

---

[1] ಬೃಹದಾ ಉ. ೪-೪-೩ ರಲ್ಲಿ " ಕೋರೀಹುಳವು ಒಂದು ಹುಲ್ಲಿನ ಗರಿಯು ದಂಡೆಗೆ ಮುಟ್ಟಿದ ಮೇಲೆ ಎರಡನೆ ಗರಿಗೆ ಹೋಗುವಾಗ ತನ್ನ ದೇಹವನ್ನೆಲ್ಲ ಒಟ್ಟು ಗೂಡಿಸುವಂತೆ ಜೀವನು ದೇಹಾವಸಾನಕಾಲದಲ್ಲಿ ದೇಹವನ್ನು ಒಟ್ಟುಗೂಡಿಸಿಕೊಂಡು ದೇಹಾಂತರಕ್ಕೆ ಹೋಗುತ್ತಾನೆ " ಎಂಬ ದೃಷ್ಟಾಂತವನ್ನು ಕೊಟ್ಟಿದ್ದಾರೆ

[2] ಪ್ರಭುಪಾದರು ತಮ್ಮ Bhagavadgita as it is ದಲ್ಲಿ ಹೀಗೆ ಬರೆಯುತ್ತಾರೆ. Change of body by the atomic individual is an aceepted fact . . Transference of the individual soul to another body is made possible by the grace of the super soul. Swetaswata upanishad compares the soul and the super soul to two friendly birds sitting on the same tree. **(समानंवृक्षंपरिषस्वजाते)**. One of them is eating the fruit of the tree and the other bird (Krishna) is simply watching his friend. One is still the master . (Here Krishna is the witnessing bird and Arjuna is the eating bird. Forget fulness of this relationship is the cause of one's changing

**ಖರೆಯುವರು** :— ಇಲ್ಲಿಯವರೆಗೆ ' ಮರಣವು ಕ್ರಮಪ್ರಾಪ್ತವಾದುದರಿಂದ ಮತ್ತು ಆತ್ಮನು ಅಮರನಾದುದರಿಂದ ಅದಕ್ಕಾಗಿ ದುಃಖ ಪಡುವ ಕಾರಣವಿಲ್ಲವೆಂದು ಹೇಳಿದರು. ಈಗ ಅಶಕ್ತವಾದ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸುವದೇ ಮರಣವಾದುದರಿಂದ ಹಳೆವಸ್ತ್ರ ಬಿಟ್ಟು ಹೊಸವಸ್ತ್ರ ಧರಿಸಿದಂತೆ ಅದು ಆನಂದದಾಯಕ ಸಂಗತಿಯೇ ಆಗಿರುವದು.

**R B ಲಾಲ** – ಅವರು ತಮ್ಮ The Gita in the light of Modern Science ದಲ್ಲಿ ಈ ಶ್ಲೋಕದ ಮೇಲ ಹೀಗೆ ಬರೆಯುತ್ತಾರೆ— " ಬಹು ದುಃಖ ಸಂಭಿನ್ನವಾದುದರಿಂದ ಜನನ–ಮರಣಗಳನ್ನು ತಪ್ಪಿಸಿಕೊಳ್ಳಬೇಕೆಂದು ಹೇಳುತ್ತಾರೆ ಆದರೆ ೨೨ ನೇ ಶ್ಲೋಕದ ಪ್ರಕಾರ ಜನನ–ಮರಣಗಳು ಸುಲಭ ಮತ್ತು ದುಃಖ ಹೀನವೆಂದು ಗೊತಾಗುತ್ತವೆ. ಅವು ಹಳೆ ಬಟ್ಟೆಗಳನ್ನು ಕಳೆದೊಗೆದು ಹೊಸ ಬಟ್ಟೆಗಳನ್ನು ತೊಟ್ಟುಕೊಂಡಂತೆಂದು ಹೇಳುತ್ತಾರೆ ಆದರೆ ನಿಜವಾಗಿ ಮರಣ ಪೂರ್ವದಲ್ಲಿ ರೋಗವಿದ್ದರೆ ಅಥವಾ ಘಾಯವಾಗಿದ್ದರೆ ಮರಣವು ದುಃಖವೆನಿಸುತ್ತದೆ ಆ ದುಃಖವು ಎಚ್ಚರವಿರುವವರೆಗೆ ಮಾತ್ರ ಆತ್ಮನ ನಿರ್ಗಮನವು ಯಾಕೆ ಸುಖದಾಯಕವಿರಬಾರದು ಎನ್ನುವದರಲ್ಲಿ ಏನಾದರೂ ಕಾರಣವಿದೆಯೇ ? ಆದರೆ ಜನನ–ಮರಣಗಳು ತಾಪದಾಯಕವಿದ್ದರೂ ಒಬ್ಬ ಹಲ್ಲು ಕಿತ್ತುವ ಡಾಕ್ಟರನಿಗಿದ್ದಷ್ಟು ಭಗವಂತನಿಗೆ ಬುದ್ಧಿವಂತಿಕೆ ಮತ್ತು ಕರುಣೆಗಳು ಇರಲಿಕ್ಕಿಲ್ಲವೆಂದು ನಿಮ್ಮ ಕಲ್ಪನೆಯೇ ? ಗೀತೆಯಲ್ಲಿ ಹೇಳಿದಂತೆ ಜನನ–ಮರಣಗಳ ಹೆದರಿಕೆಯನ್ನು ನಾವು ಪೂರ್ತಿಯಾಗಿ ಪರಿತ್ಯಜಿಸಬೇಕು ! ! ".

ಸೋಮನಾಥಾನಂದರು ತಮ್ಮ ಗೀತಾಭಾವಧಾರೆಯಲ್ಲಿ — " ಮನೆಯಿಂದ ಆಫೀಸಿಗೆ ಹೋಗುವದು, ಆಫೀಸಿನಿಂದ ಮನೆಗೆ ಬರುವಂತೆ ಜನನ–ಮರಣಗಳು ಸ್ವಾಭಾವಿಕವಾದುವು ಆದರೆ ವ್ಯಾವಹಾರಿಕ ಜಗತ್ತಿನಲ್ಲಿ ಈ ಸ್ವಾಭಾವಿಕ ಘಟನೆಯ ಹಿಂದೆ ಎಷ್ಟೊಂದು ಅಳು–ನಗು ಹುದುಗಿರುವವು ? ಸತ್ತರೆ ಅಳು, ಗೋಳು

---

his position from one tree to another, from one body to another But as soon as he agrees to accept the other bird as the supreme spiritual master, the soul bird immediately becomes free from all lamentations Arjuna is advised by the Lord not to lament for the bodily change of his old graud father . . . one who lays down his life in the proper battle-field is at once elcansed of bodily reactions and promoted to a higher status of life

ಸುತ್ತಲೂ ಹುಟ್ಟಿದ ಮನೆಯಲ್ಲಿ ಅಲ್ಲಿ ಇರುವವರಿಗೆ ಆನಂದ, ಅವರಿಗೆ ಒಂದು ಮಗು ಆಯಿತಲ್ಲ ಎಂದು ಆ ಮಗುವೋ ಅಳುವದು ಇನ್ನೊಂದು ಸಲ ಬಂದೆ ನಲ್ಲ ಈ ಸಂಸಾರಕ್ಕೆ ಇನ್ನೆಷ್ಟು ಅನುಭವಿಸುವದು ಕಾದಿದೆಯೋ ಎಂದು. ಈ ಅಳುವನ್ನು ನೋಡಿ ಹೆತ್ತವರಿಗೆ ಹಿಗ್ಗು. ಮಗು ಬದುಕಿದೆಯೆಂದು ಈ ಅಳುವಿನಿಂದಲೇ ಅವರು ನಿಶ್ಚಯಿಸುವರು ಪಡಬಾರದ ಯಾತನೆಯನ್ನೆಲ್ಲ ಪಟ್ಟು ಸದ್ಯಕ್ಕೆ ಈ ದೇಹದ ನರಕದಿಂದ ಬಿಡುಗಡೆ ಆಯಿತಲ್ಲ ಇಂದು ಎಂದು ಆತ್ಮ ದೇಹದಿಂದ ಬೇರೆಯಾಗುವಾಗ ನಿಟ್ಟುಸಿರು ಬಿಡುವದು ಆದರೆ ಅವನನ್ನೇ ನೆಚ್ಚಿದ ಬಂಧು–ಬಳಗದವರಿಗೆಲ್ಲ ಅಯ್ಯೋ ನಮ್ಮನ್ನಗಲಿ ಹೋದನಲ್ಲ ಎಂಬ ಹೃದಯವನ್ನು ಕರಗಿಸುವ ದೃಶ್ಯ. ಶ್ರೀಕೃಷ್ಣ ಇಲ್ಲಿ ದೊಡ್ಡ ಒಂದು ತಾತ್ವಿಕ ದೃಷ್ಟಿಯನ್ನು ನೀಡುವನು ಇದರ ಮೇಲೆ ನಿಂತು ನೋಡಿದರೆ ಜನನ–ಮರಣ ಗಳೊಂದು ಸ್ವಾಭಾವಿಕ ಘಟನೆಯಾಗಿ ತೋರುವದು " ಎಂದು ಹೇಳುತ್ತಾರೆ *

**नैन छिंदंति शस्त्राणि नैनं दहतिपावकः ।**

**न चैन क्लेदयं त्यापो न शोषयति मारुतः ।। २३ ।।**

ಜೀವನನ್ನು ಶಸ್ತ್ರಗಳು ಕತ್ತರಿಸಲಾರವು, ಅಗ್ನಿಯು ಅದನ್ನು ಸುಡಲಾರದು, ನೀರು ಅದನ್ನು ನೆನೆಯಿಸಲಾರದು ಮತ್ತು ಗಾಳಿಯು ಒಣಗಿಸಲಾರದು.

---

* " ಭಗವಂತನು ದೇಹಕ್ಕೆ ಹಳೆಬಟ್ಟೆಯ ಉಪಮೆಯನ್ನು ಕೊಟ್ಟಿದ್ದಾನೆ **वासांसि-जीर्णानि** ಎಂದು ಇದರಲ್ಲಿ ಒಂದು ಸ್ವಾರಸ್ಯವಿದೆ ಜೀರ್ಣವಾದ ಬಟ್ಟೆಯನ್ನು ಯಾರೂ ಗಟ್ಟಿಮಾಡಲಾರರು. ಬೀಸಾಡುವದೊಂದೇ ಅದಕ್ಕೆ ತಕ್ಕ ವಿನಿಯೋಗ ದುರ್ಗುಣಗಳಿಂದಲೂ ದುರಾಶೆಗಳಿಂದಲೂ .. ಜೀರ್ಣವಾದ ದೇಹವನ್ನು ತೊಳೆದು ನಿರ್ಮಲ ಪಡಿಸುವದು ಯಾರಿಗೂ ಸಾಧ್ಯವಿಲ್ಲ ... ... ಮೃತ್ಯು ಬಂದು ಕಳಚಿಹಾಕಿದ ಹೊರತು ಅದರೊಳಗಿನ ಜೀವಕ್ಕೆ ಪರಿಶುದ್ಧತೆಯ ಆಶೆ ಇರದು ಆದ್ದರಿಂದ ದುಷ್ಟದೇಹವನ್ನು ಧರಿಸಿರುವ ಜೀವಕ್ಕೆ ಆ ದೇಹದ ಅವಸಾನವೇ ಉಪಕಾರವಾದೀತು ! ಪಾಪದೇಹಧಾರಿಗೆ ಮರಣವೇ ಮೋಚಕ. ಆಸುದರಿಂದ ಯುವ್ಧದಲ್ಲಿ ಒದಗಿ ಬರುವ ಮೃತ್ಯುವು ಅಪಕಾರವೆಂದು ಭಾವಿಸಬೇಕಾಗಿಲ್ಲ " ರೋಗಗ್ರಸ್ತನಾಗಿ ಬಳಲಿ ಕೊಳೆಯಲ್ಲಿಯೇ ಇದ್ದು ಬಿಡುತ್ತೇನೆನ್ನುವ ಸೋಮಾರಿಯನ್ನು ನಿರ್ಬಂಧದಿಂದ ಹಿಡಿದೆಬ್ಬಿಸಿ ಹಳೆ ಬಟ್ಟೆ-ಬರೆಗಳನ್ನು ತೆಗೆದು ಹಾಕಿಸಿ ಒಗೆದ ಬಟ್ಟೆಯನ್ನುಡಿಸುವದು ಹೇಗೋ ಯುದ್ಧವು ಯಾರಿಗಾದರೂ ದೇಹವನ್ನು ಬಿಡಿಸುವದು ಹಾಗೆ. ತದನಂತರ ಅವರಿಗೆ ಇನ್ನೂ ವಸ್ತ್ರಲಾಭವಾಗುತ್ತದೆ " (ಡಿ. ವ್ಹಿ. ಜಿ. ಗೀತಾ ತಾತ್ಪರ್ಯದಲ್ಲಿ). ಪಾಪಿಷ್ಠರು, ರೋಗಿಗಳಿಗೆ ಈ ಮಾತಾದರೆ ಇನ್ನು ಪುಣ್ಯವಂತರು ದೇಹಗಳನ್ನು ಬಿಡುವ ಕಾರಣವಿಲ್ಲವೇ ?

**ವಿಶೇಷ ಟಿಪ್ಪಣಿಗಳು :**

ಜೀವನ ಸ್ವರೂಪವನ್ನು ತಿಳಿದಾಗ ಇಲ್ಲಿ ವರ್ಣಿಸಿದ ರೀತಿಯು ಯುಕ್ತವಾದುದೆಂದು ಸುಲಭವಾಗಿ ನಮಗೆ ಗೊತ್ತಾಗುತ್ತದೆ. ಜೀವನು ಪರಮಾತ್ಮನ ಪ್ರತಿಬಿಂಬನು. ಆದರೂ ಅವನು ನಾಶ ಹೊಂದುವದಿಲ್ಲ. ೧) ಯಾಕೆಂದರೆ ಅವನ ಬಿಂಬನಾದ ಪರಮಾತ್ಮನು ನಾಶಹೊಂದುವದಿಲ್ಲ. ೨) ಅವನನ್ನು ಪ್ರತಿಬಿಂಬಗೊಳಿಸಿದ ಉಪಾಧಿಯೂ (ಜೀವನ ಸ್ವರೂಪ) ನಾಶ ಹೊಂದುವದಿಲ್ಲ. ೩) ಪರಮಾತ್ಮನ ಮತ್ತು ಉಪಾಧಿಯ ಸಂಬಂಧವೂ ನಾಶವಾಗುವದಿಲ್ಲ ಹೀಗೆ ಜೀವನು ಸ್ವಾಭಾವಿಕವಾಗಿಯೇ ಅಮರ್ತ್ಯನು. ಇನ್ನು ಹೊರಗಿನ ಯಾವ ಪದಾರ್ಥವೂ ಅವನನ್ನು ನಾಶಗೊಳಿಸಲಾರದು ಅದನ್ನೇ ಈ ಶ್ಲೋಕದಿಂದ ಕೃಷ್ಣನು ವಿಶದ ಪಡಿಸುತ್ತಾನೆ. *

ಮಧ್ವಾಚಾರ್ಯರು ಗೀತಾ ಭಾಷ್ಯದಲ್ಲಿ— ಜೀವಪರವಾಗಿ ಈ ಶ್ಲೋಕವನ್ನು ಹಚ್ಚಿದ್ದಾರೆ; ಆದರೆ ಅವರ ಗೀತಾ ತಾತ್ಪರ್ಯದಲ್ಲಿ, ಅದನ್ನು ಪರಮಾತ್ಮನ ಪರವಾಗಿ ಹಚ್ಚಿದ್ದಾರೆ ಪಂಚಮಹಾಭೂತಗಳು ಚೇತನನಿಗೆ (ಜೀವ ಮತ್ತು ಈಶ್ವರನಿಗೆ) ಗಾಸಿಗೊಳಿಸಲಾರವು ಎನ್ನುವದನ್ನು ಇಲ್ಲಿ ಒತ್ತಿ ಹೇಳಿದ್ದಾರೆ. **एनम्** ಇದನ್ನು ಒಮ್ಮೆ ಉಪಯೋಗಿಸಿದ್ದರೂ ಸಾಕೆನ್ನುವಾಗ ಈ ಶ್ಲೋಕದಲ್ಲಿ ಮೂರುಸಾರೆ ಉಪಯೋಗಿಸಿದ್ದು ಜೋರು ಕೊಡಲಿಕ್ಕೆ ಇರಬಹುದು. ಜೀವ ಪರವಾಗಿ ಹೇಳುವಾಗ **एनं** ಎಂದು ಕೃಷ್ಣನು ಅರ್ಜುನನ ಕಡೆ ಬೆರಳು ಮಾಡಿ ತೋರಿಸುತ್ತಿರಬಹುದು. ಈಶ್ವರನ ಪರವಾಗಿ ಹೇಳುವಾಗ **एनं** ಎಂದು ಕೃಷ್ಣನು ತನ್ನ ಕಡೆಗೆ ಬೆರಳು ಮಾಡಿ ಹೇಳಿರಬಹುದು ಈಶ್ವರನ ಪರವಾಗಿ ಹೇಳುವಾಗ ಮೂರುಸಾರೆ ಉಚ್ಚಾರ ಮಾಡಿದ್ದರಿಂದ * ಈಶ್ವರನು ಯಾವ ರೂಪದಲ್ಲಿಯೂ ಅವತಾರದಲ್ಲಿಯೂ ಅವಿನಾಶಿಯಾಗಿಯೇ ಇದ್ದಾನೆ ಎನ್ನುವದನ್ನು ಕೃಷ್ಣನು ಒತ್ತಿ ಹೇಳುತ್ತಾನೆ. ಇದರಿಂದ ಕೆಲವು ಪಂಗಡದವರು ಪರಮಾತ್ಮನ ಅವತಾರಗಳಲ್ಲಿ ಕೆಲವು ಪೂರ್ಣವೆಂದೂ ಉಳಿದವು ಅಪೂರ್ಣವೆಂದೂ ಹೇಳಿದ್ದು ತಪ್ಪು ಎಂದು ಸೂಚಿಸುತ್ತದೆ.

ರಾಮಾನುಜಾಚಾರ್ಯರು ಈ ಶ್ಲೋಕವು ೧೭ ನೇ ಶ್ಲೋಕದ ವಿವರಣೆಯೆಂದು ಹೇಳುತ್ತಾರೆ. **(अविनाशि तु तद्विद्धि – १७)** ಮುಖ್ಯವಾಗಿ ಅದರಲ್ಲಿ

---

* ಜೀವನಿಗೆ ಕಾಲಕೃತವಾದ ಅಥವಾ ಬಿಂಬನಾಶದಿಂದ ಬರುವ ನಾಶಗಳು ಇಲ್ಲದಿದ್ದರೂ ದಕ್ಷನ ಶಿರಚ್ಛೇದದಂತೆ ಪ್ರಬಲವಾದ ಖಡ್ಗ ಮೊದಲಾದವುಗಳಿಂದ ನಾಶವು ಇದೆ ಎಂಬ ಸಂಶಯ ಬಂದರೆ ಹೇಳುತ್ತಾರೆ, **नैनं** ಎಂದು ಹೀಗೆ ರಾಘವೇಂದ್ರರು ಈ ಶ್ಲೋಕಕ್ಕೆ ಅವತರಣಿಕೆ ಕೊಡುತ್ತಾರೆ

**ತತ** ವೆಂಬ ಪದವನ್ನು ಉಪಯೋಗಿಸಿದ್ದಾರೆ (೧೭). ' ವ್ಯಾಪ್ತ ' ವೆಂದು ಅದರ ಅರ್ಥ. ಎಲ್ಲ ವಸ್ತುಗಳಲ್ಲಿ ಅದು ವ್ಯಾಪ್ತವಾದುದರಿಂದ ಎಲ್ಲ ವಸ್ತುಗಳಕಿಂತ ಅದು ಸೂಕ್ಷ್ಮವಾಗಿದೆ ಎಂದು ಅರ್ಥ. ಆದುದರಿಂದ ಅತ್ಯಂತ ಸೂಕ್ಷ್ಮವಾದ ಈ ಆತ್ಮದಲ್ಲಿ ಶಸ್ತ್ರ–ಅಗ್ನಿ–ಜಲ–ವಾಯುಗಳಾವವೂ ಪ್ರವೇಶಿಸಲಾರವು ಎಂದು ಅರ್ಥ.

ಅದ್ವೈತಿಗಳು ಮಾತ್ರ ತಮ್ಮ ಹಾಡನ್ನೇ ಹಾಡುತ್ತ ಆತ್ಮನು ಅವಿಕ್ರಿಯನು; ಆದುದರಿಂದ ಯಾವವೂ ಆತ್ಮನನ್ನು ವಿಕಾರಕ್ಕೆ ಒಳಪಡಿಸಲಾರವು ದೇಹಿಯಾದ ಜೀವಾತ್ಮನು ನಿರವಯವನು ನಿರವಯವಿಯನ್ನು ಶಸ್ತ್ರ ಮೊದಲಾದವುಗಳು ವಿಕಾರ ಗೊಳಿಸಲಾರವು ಯಾಕೆಂದರೆ ಶಸ್ತ್ರಗಳು ಸಾವಯವಿಯನ್ನೇ ಅವಯವಶಃ ವಿಭಾಗ ಮಾಡುತ್ತವೆ ಅಗ್ನಿಯು ಸಹ ಅವಯವಶಃ ಸುಡುತ್ತದೆ ನೀರು ಸಹ ಸಾವಯವಿಯಾದುದನ್ನೇ ತೊಯಿಸುತ್ತದೆ ವಾಯುವು ಸ್ನೇಹಮಯವಾದ ವಸ್ತುವನ್ನು ಅದರಲ್ಲಿಯ ಸ್ನೇಹವನ್ನು ಒಣಗಿಸಿ, ಒಣಗಿಸುತ್ತದೆ.

ಅದ್ವೈತಿಗಳಾದ ಟೀಕಾಕಾರರು ತಮ್ಮ ಮತಕ್ಕೆ ಅನುಗುಣವಾಗಿ, ಬ್ರಹ್ಮನು ಉಪಾಧಿಗ್ರಸ್ತನಾದರೆ ಜೀವನಾಗುತ್ತಾನೆಂದು ಹೇಳುತ್ತಾರೆ. ಘಟಜಲ ನಾಶವಾದರೆ ಅವುಗಳಲ್ಲಿಯ ಪ್ರತಿಬಿಂಬವು ನಾಶವಾಗುವಂತೆ ಶಸ್ತ್ರದಿಂದ ದೇಹವು ನಾಶವಾದರೆ ಆತ್ಮನು ನಾಶನಾಗುತ್ತಾನೆಂದು ಆಶಂಕಿಸಿದರೆ ಅದಕ್ಕೆ ಉತ್ತರವನ್ನು ಈ ಶ್ಲೋಕವು ಹೇಳುತ್ತದೆಂದು ಅವರ ಅಭಿಪ್ರಾಯ ನೀಲಕಂಠನು ಉಪನಿಷತ್ತನ್ನು ಉದಾಹರಿಸುತ್ತಾನೆ :— **अशब्दमस्पर्शमरूपमव्ययम् । तथाऽरसं नित्यमगंधवच्च यत** (क.ठो. मु. उ.).

ಶಸ್ತ್ರವು ಕತ್ತರಿಸಬೇಕಾದರೆ ಅದು ಸ್ಥೂಲವಿರಬೇಕು ಆದರೆ ಆತ್ಮನು ಸ್ಥೂಲವಿಲ್ಲ ಬೆಂಕಿಯು ಸುಟ್ಟರೆ ಆ ಪದಾರ್ಥದ ಅಣುಗಳು ಕೆಂಪಾಗುತ್ತವೆ ಆದರೆ ಆತ್ಮನಿಗೆ ಅಣುಗಳಿಲ್ಲ ಆದುದರಿಂದ ಅದು ಸುಡಲಾರದು. ಸ್ಪರ್ಶವಾದದ್ದು ತೊಯ್ಯುತ್ತದೆ. ಆತ್ಮನು ಸ್ಪರ್ಶವಾಗಲಾರನು ಆದುದರಿಂದ ಅವನು ತೊಯ್ಯುವದಿಲ್ಲ. ಹಸಿ ಇದ್ದದ್ದು ಒಣಗುತ್ತದೆ, ಆತ್ಮನು ಹಸಿಯಿಲ್ಲ, ಆದುದರಿಂದ ಅವನು ಒಣಗಲಾರ. ಆದರೆ ಈ ಉಪನಿಷತ್ತು ನಮಗೆ ಈಗ ಬೇಕಾದುದನ್ನು ಹೇಳುವದಿಲ್ಲ. ಇದರಿಂದ ಬ್ರಹ್ಮನು ಅಜ್ಞೇಯನೆನ್ನುವದು ತಿಳಿದರೂ ಸದ್ಯಕ್ಕೆ ಬೇಕಾದ ಜೀವನು ಅವಿನಾಶಿಯು ಎನ್ನುವ ಮಾತಿಗೆ ಇದು ಪೋಷಕವಾಗಿಲ್ಲ. ಗೀತೆಯೊಳಗಿನ ಈ ಶ್ಲೋಕವು ಬ್ರಹ್ಮನಿಗೆ ಹತ್ತಲಿ ಬಿಡಲಿ, ಜೀವನಿಗಂತೂ ನಿಶ್ಚಯವಾಗಿ ಅನ್ವಯಿಸುತ್ತದೆ ಮತ್ತು ಜೀವನು ಅಣುವಾಗಿದ್ದಾನೆ ಎನ್ನುವದಕ್ಕೆ ಬ್ರಹ್ಮಸೂತ್ರವೇ ಪ್ರಮಾಣ (**अणुश्च**) ನೀಲಕಂಠನು ಜೀವನು ಅಣುವಾಗಿಲ್ಲವೆಂದೇ ಅವನು ಅದಾಹ್ಯನೆಂದು ವಾದಿಸುತ್ತಾನೆ.

ಹೇಗೇ ಆಗಲಿ; ರಾಮಾನುಜರು ಈ ಶ್ಲೋಕವು ಬರೀ ಜೀವಪರವೆಂದು ಹೇಳುತ್ತಾರೆ. ಅದ್ವೈತಿಗಳು ಬ್ರಹ್ಮಪರವೆಂದು ಹೇಳುತ್ತಾರೆ, ಮಧ್ವಾಚಾರ್ಯರು ಉಭಯಪರವೆಂದು ಹೇಳುತ್ತಾರೆ. ಅಂತೂ ಈ ಶ್ಲೋಕದ ಅರ್ಥವೆಂದರೆ ಆ ವಸ್ತುವು ಅನ್ಯವಾದ ಯಾವದರಿಂದಲೂ ನಾಶಹೊಂದುವದಿಲ್ಲ. ಉದಾಹರಿಸಿದ ಉಪನಿಷತ್ತಿನ ಅರ್ಥವು ಈ ಅರ್ಥಕ್ಕೆ ಸಂಬಂಧಿಸಿಲ್ಲ, ಅದು ಬರೇ ಅವಿದಿತ್ವವನ್ನು ಸಾರುತ್ತದೆ. ಆದರೆ ಲೋ. ಟಿಳಕರು ತಮ್ಮ ಗೀತಾರಹಸ್ಯದಲ್ಲಿ–"ಈ ತತ್ವವನ್ನು ಉಪನಿಷತ್ತಿನಿಂದ ತೆಗೆದುಕೊಂಡಿದ್ದಾರೆ ಇದು ನಿರ್ಗುಣ ಆತ್ಮದ ವರ್ಣನೆ ಯಾಗಿದೆ, ಇದು ಸಗುಣ ಆತ್ಮದ ವರ್ಣನೆಯಲ್ಲ, ಯಾಕೆಂದರೆ ಅವಿಕಾರಿ ಮತ್ತು ಅಚಿಂತ್ಯ ಎಂಬ ವಿಶೇಷಣಗಳು ನಿರ್ಗುಣನಿಗೆ ಅನ್ವಯಿಸುತ್ತಿವೆ; ಅಲ್ಲದೆ ಸಗುಣನಿಗೆ ಅನ್ವಯಿಸುವದಿಲ್ಲ, ಅದ್ವೈತಿಗಳು ಆತ್ಮನ ವಿಷಯದಲ್ಲಿ ತಮ್ಮ ಕೊನೆಸಿದ್ಧಾಂತದಂತೆ ಆತ್ಮನ ವಿಷಯವಾಗಿ ಶೋಕ ಮಾಡಬಾರದೆಂದು ಶ್ರೀ ಕೃಷ್ಣನ ಮತ

ಆದರೆ ಗೀತೆಯಲ್ಲಿ ಬ್ರಹ್ಮನ ವಿಷಯದಲ್ಲಿ ಸಗುರ್ಣ–ನಿರ್ಗುಣ ಭೇದ ವದೆಯೋ ? ಎನ್ನುವದು ವಾದಗ್ರಸ್ತ ವಿಷಯ ಸಾಕಾರ ಬ್ರಹ್ಮನು ಸಹ ಸಂಪೂರ್ತಿ ಯಾಗಿ ತಿಳಿಯಲು ಅಸಾಧ್ಯ. ಹೀಗಿದ್ದಾಗ ನಿರ್ಗುಣ ಬ್ರಹ್ಮನ ವರ್ಣನೆ ಇದು ಎಂದು ಹೇಳುವದು ಸಾಹಸದ ಮಾತು

ಪ್ರಭುಪಾದರು ಹೇಳುತ್ತಾರೆ;—"Nor was it even possible to cut the individual souls from the original Soul The Mayavadi, however, cannot describe how the individual soul evolved from ignorance and consequently became covered by illusory energy. Because they are atomic individual souls (**सनातन**) eternally. They are prone to be covered by the illusory energy. And thus they become separated from the association of the supreme Lord, just as the sparks of the fire, although one in quality with the fire are prone to be existinguished when out of the fire In the Varaha Purana the living entities are described as separated parts and parecls of the supreme. They are eternally so according to the Bhagvadgita So even after being liberated from illusion the living entity remains a separate identity as is evident from the teachings of the Lord to Arjuna Arjuna became liberated by the knowledge received from Krishna, but he never became one with Krishna.

"ಮೂಲ ಆತ್ಮ (ಪರಮಾತ್ಮ) ನಿಂದ ಜೀವಾತ್ಮನನ್ನು ಪೂರ್ಣ ಕತ್ತರಿಸಿ ಬಿಡಿಸುವದು ಎಂದೂ ಸಾಧ್ಯವಿಲ್ಲ, ಈ ಜೀವಾತ್ಮನು ಅಜ್ಞಾನದಿಂದ ಹೊರಬಂದು ಆಮೇಲೆ ಮಾಯೆಯಿಂದ ಮುಚ್ಚಿದವನು ಹೇಗೆ ಆದನೆಂದು ಮಾಯಾವಾದಿಗಳಿಗೆ ಹೇಳಲಿಕ್ಕೆ ಬರುವದಿಲ್ಲ. ಯಾಕೆಂದರೆ ಅವರು ಕೊನೆಯವರೆಗೂ ಅಣುರೂಪಿ ಯಾದ ಆತ್ಮರು ಮತ್ತು ಅವರು ಮಾಯೆಯಿಂದ ಆಚ್ಛಾದಿತರಾಗಿಯೇ ಕೊನೆಯ ವರೆಗೂ ಉಳಿಯುವವರೇ! ಹೀಗೆ ಅವರು ಬೆಂಕಿಯ ಕಿಡಿಗಳಂತೆ ಗುಣದಲ್ಲಿ ಒಂದಾದರೂ ಬೆಂಕಿಯಿಂದ ದೂರಾದಾಗ ಅವು ಆರಿ ಹೋಗುವಂತೆ ಪರಮಾತ್ಮ ನಿಂದ ದೂರಾದ ಜೀವಾತ್ಮರು ಕೊನೆಯವರೆಗೂ ಮಾಯೆಯಲ್ಲಿಯೇ ಮುಳುಗು ವರು ವರಾಹ ಪುರಾಣದಲ್ಲಿ ಜೀವಾತ್ಮರು ಪರಮಾತ್ಮನ ಭಿನ್ನಾಂಶಗಳೆಂದು ವರ್ಣಿತರಾಗಿದ್ದಾರೆ. ಭಗವದ್ಗೀತೆಯಂತೆ ಜೀವರು ಸನಾತನರಾಗಿ ಹಾಗೆ ಇರುತ್ತಾರೆ. ಮಾಯೆಯಿಂದ ಮುಕ್ತರಾದ ಮೇಲೆ ಸಹ ಜೀವರು ಭಿನ್ನವ್ಯಕ್ತಿಗಳಾ ಗಿಯೇ ಉಳಿಯುತ್ತಾರೆ ಇದು ಪ್ರಭುವು ಅರ್ಜುನನಿಗೆ ಹೇಳಿ ಕೊಟ್ಟದ್ದರಲ್ಲಿ ಸ್ಪಷ್ಟವಾಗಿದೆ. ಕೃಷ್ಣನ ಉಪದೇಶದಿಂದ ಜ್ಞಾನಪಡೆದ ಅರ್ಜುನನು ಮುಕ್ತ ನಾದರೂ ಎಂದೂ ಕೃಷ್ಣನೊಡನೆ ಒಂದಾಗಿಲ್ಲ"

ಅವತರಣಿಕೆ—ಗುರುರಾಘವೇಂದ್ರರು ೨೩ನೇ ಶ್ಲೋಕದಲ್ಲಿ ಭಗವಂತನು ವರ್ತಮಾನಕಾಲದಲ್ಲಿ ಆತ್ಮನನ್ನು ಕತ್ತರಿಸುವದಿಲ್ಲ ಮೊದಲಾಗಿ ಹೇಳಿದ್ದಾಯಿತು. ಆತ್ಮನು ಈಗ ಇರುವದರಿಂದ ಭೂತಕಾಲದಲ್ಲಿಯೂ ಅವನಿಗೆ ಏನೂ ಆಗಿಲ್ಲ, ಆದರೆ ಭವಿಷ್ಯ ಕಾಲದಲ್ಲಿ ಅವನಿಗೆ ವಿಪತ್ತು ಬರಬಹುದು ಎಂದರೆ ಈ ಶ್ಲೋಕದಲ್ಲಿ ಅವನು ಕತ್ತರಿಸಲ್ಪಡಲಿಕ್ಕೆ ಎಂದೂ ಅರ್ಹನಲ್ಲವೆಂದು ಭಗವಂತನು ಹೇಳುತ್ತಾನೆಂದು ಸಂಗತಿ ತೋರಿಸಿದ್ದರಿಂದ ಈ ಶ್ಲೋಕವು ಹಿಂದಿನ ಶ್ಲೋಕದ ಪುನರುಕ್ತಿಯೆಂದು ಹೇಳಲು ಬರುವದಿಲ್ಲ.

**अच्छेद्योऽय अदाह्योयं अक्लेद्य अशोष्य एवच ।**
**नित्यः सर्वगतस्थाणुरचलोऽयं सनातनः ॥ २४ ॥**

ಈ ಜೀವನು ಕತ್ತರಿಸಲ್ಪಡಲಿಕ್ಕೆ ಯೋಗ್ಯನಲ್ಲ, ತೋಯಿಸಲ್ಪಡಲಿಕ್ಕೆ ಅರ್ಹನಲ್ಲ; ಮತ್ತು ಒಣಗಿಸಲ್ಪಡತಕ್ಕವನಲ್ಲ. ಇವನು ನಿತ್ಯನು, ಸರ್ವಗತನಾದ ಪರಮಾತ್ಮ ನಲ್ಲಿ ಇರತಕ್ಕವನು; ಮತ್ತು ಅಣುರೂಪನು ಎಂದೂ ಪಾರತಂತ್ರ್ಯ ಮೊದಲಾದ ಧರ್ಮಗಳಿಂದ ಚ್ಯುತಿ ಹೊಂದದವನು. ಈ ಜೀವನು ಅನಾದಿಯಾಗಿ ರುವನು.

**ವಿಶೇಷ ಟಿಪ್ಪಣೆಗಳು :**

ಈ ಶ್ಲೋಕದಲ್ಲಿರುವ ಕೆಲವು ವಿಶೇಷಣಗಳು ಸುಲಭವಾಗಿ ಈಶ್ವರನಿಗೆ ಅನ್ವಯಿಸುತ್ತವೆ **ಸರ್ವಗತ** ಮೊದಲಾದವು ಈ ವರ್ಗಕ್ಕೆ ಸೇರಿದವು ಆದುದರಿಂದ ಮಧ್ವಾಚಾರ್ಯರು ಈ ಶ್ಲೋಕವನ್ನು ಜೀವ–ಪರಮಾತ್ಮರಿಬ್ಬರಿಗೂ ಅನ್ವಯಿಸು ವಂತೆ ಅರ್ಥೈಸಿದ್ದಾರೆ ಜೀವ–ಈಶ್ವರರಿಬ್ಬರೂ ಛೇದನ ಮತ್ತು ದಾಹ ಕ್ರಿಯೆ ಗಳಿಗೆ ಅನರ್ಹರಿದ್ದಾರೆ. ೨೩ ಮತ್ತು ೨೪ ಶ್ಲೋಕಗಳಿಗೆಲ್ಲ ಬೇರೆ ವಿಧದಿಂದಲೂ ಪುನರುಕ್ತಿದೋಷವನ್ನು ತಪ್ಪಿಸುತ್ತಾರೆ. ೨೩ ನೇ ಶ್ಲೋಕವನ್ನು ಈಶ್ವರಪರ ವಾಗಿಯೂ ೨೪ ನೇ ಶ್ಲೋಕವನ್ನು ಜೀವಪರವಾಗಿಯೂ ಯೋಜಿಸುವದರಲ್ಲಿ ಸ್ವಾರಸ್ಯ ಉಂಟು. "ನಾನು ಅಚ್ಛೇದ್ಯನು, ಅದಾಹ್ಯನು ಇದ್ದಂತೆ ನೀನೂ ಅಚ್ಛೇ ದ್ಯನೂ ಅದಾಹ್ಯನೂ ಇರುವಿಯೆಂದು ಕೃಷ್ಣನು ಅರ್ಜುನನ ವಿಷಾದವನ್ನು ಕಳೆಯು ಲಿಕ್ಕೆ ಎತ್ತಿಸುತ್ತಾನೆ. ಅದಕ್ಕೆ ಕಾರಣವನ್ನು ೨೪ ನೇ ಶ್ಲೋಕದ ಎರಡನೇ ಸಾಲಿನಲ್ಲಿ **ಸರ್ವಗತಸ್ಥ:** ಮತ್ತು **ಅಣು** ಎಂಬ ಪದಗಳಿಂದ ಭಗವಂತನು ಹೇಳಿದ್ದಾನೆ ಅಣುಸ್ವರೂಪಿಯಾದ ಜೀವನು ಸರ್ವ ವ್ಯಾಪಿಯಾದ ಪರಮಾತ್ಮನಲ್ಲಿ ಆತನ **ಪ್ರತಿಬಿಂಬನಾಗಿ** ಅವನ ಎಲ್ಲ ಗುಣಗಳನ್ನು ತನ್ನ ಯೋಗ್ಯತಯ ಚೌಕಟ್ಟಿನಲ್ಲಿ ಪ್ರದರ್ಶಿಸುತ್ತಾನೆ. ಹೆಜ್ಜೆ ಹೆಜ್ಜೆಗೆ ಈ ಶ್ಲೋಕದ ಅರ್ಥವನ್ನು ಹಚ್ಚಲು ತೊಂದರೆ ಒರುತ್ತದೆ. **ನಿತ್ಯ** ಪದವು ಅದಕ್ಕೆ ಉದಾಹರಣೆಯು. **ನಿತ್ಯ** ಪದವು **ನಿತ್ಯಸ್ಯ, ನಿತ್ಯಮ್, ನಿತ್ಯ:** ಎಂಬ ರೂಪಗಳಲ್ಲಿ ಬಂದಿವೆ. ಸಮಾನಾರ್ಥಕ ಪದಗಳನ್ನೂ ಈ ಮೊದಲು **(ನ ಚ ಭವಿಷ್ಯಾಮ:)** ಉಪಯೋಗಿಸಿದ್ದಾರೆ. ಹೀಗಿದ್ದಾಗ ಮತ್ತೆ ಆ **ನಿತ್ಯ** ಶಬ್ದವನ್ನು ಇಲ್ಲಿ ಉಪಯೋಗಿಸಿದ್ದಾಗಿದೆ

ಶಂಕರಾಚಾರ್ಯರು **ನಿತ್ಯ: ಸರ್ವಗತ: ಸ್ಥಾಣು: ಅಚಲ:** ಇಲ್ಲಿ ಕಾರಣ ಪರಂಪರೆಯನ್ನು ತೋರಿಸುತ್ತಾರೆ. (ಹೇತುಹೇತುಮದ್ಭಾವ) ಅನ್ಯೋನ್ಯ ನಾಶಕ್ಕೆ ಕಾರಣವಾದ ಭೂತಗಳು ಆತ್ಮನನ್ನು ನಾಶಗೊಳಿಸದೆ ಇರುವದರಿಂದ ಅವನು ನಿತ್ಯನು ಅವನು ನಿತ್ಯನಾದುದರಿಂದ ಸರ್ವಗತನಾಗಿರುತ್ತಾನೆ. ಸರ್ವಗತ ನಾದುದರಿಂದ ಅವನು ಸ್ಥಾಣುವಾಗಿದ್ದಾನೆ (ಸ್ಥಿರನು). ಸ್ಥಿರನಾದುದರಿಂದ ಅಚಲನಾಗಿದ್ದಾನೆ. ಆದುದರಿಂದಲೇ ಚಿರಂತನನಾಗಿದ್ದಾನೆ. ಆದುದರಿಂದ ಪುನ ರುಕ್ತಿಯೇನೂ ಇಲ್ಲ. ಪುನರುಕ್ತಿ ಇದ್ದರೂ ಪ್ರಯೋಜನಕಾರಿಯಾದುದರಿಂದ ಅದು ದೋಷವೆನಿಸುವದಿಲ್ಲ. ಒಂದೇ ವಸ್ತುವನ್ನು ಚನ್ನಾಗಿ ತಿಳಿಸಬೇಕೆಂದು ನಾನಾ ರೀತಿಯಿಂದ ಕೃಷ್ಣನು ಹೇಳುತ್ತಾನೆ

ಇದು ಮಧ್ವಾಚಾರ್ಯರ ಮನಸಿಗೆ ಬರುವದಿಲ್ಲ ಯಾಕೆಂದರೆ ಇಲ್ಲಿ

ತೋರುವ ಪುನರುಕ್ತಿಯು ತೋರಿಕೆಗೆ ಮಾತ್ರ ಹಾಗೆ ತೋರುತ್ತದೆ **नित्य** ಶಬ್ದವು **सर्वगतत्व** ಕ್ಕೆ ವಿಶೇಷಣವು ಈಶ್ವರನು ಯಾವಾಗಲೂ ಸರ್ವತ್ರವ್ಯಾಪ್ತನಾಗಿರುತ್ತಾನೆಂದು ಆಚಾರ್ಯರ ಅಭಿಪ್ರಾಯ. ಮೇಲಾಗಿ ಈ ನಿತ್ಯ ಶಬ್ದವು **सर्वगतस्थ** + **अणु** ಕ್ಕೆ ಹಚ್ಚಿದಾಗ ಜೀವನು ಯಾವಾಗಲೂ ಸರ್ವವ್ಯಾಪ್ತನ ಮೇಲೆ ಅವಲಂಬಿಸಿರುತ್ತಾನೆ ಎಂದು ಅರ್ಥವಾಗುತ್ತದೆ.

ಆಚಾರ್ಯರು ಇಲ್ಲಿ ದೀರ್ಘವಾದ ಭಾಷ್ಯವನ್ನು ಬರೆದಿದ್ದಾರೆ. ಇಲ್ಲಿಯ ಒಂದೊಂದು ಮಾತನ್ನು ಅದರ ಮೂಲದವರೆಗೆ ಮುಟ್ಟಿಸಿ ಅದನ್ನು ನಮಗೆ ಮನವರಿಕೆ ಮಾಡಿದ್ದಾರೆ. ಜೀವನು ಪರಮಾತ್ಮ ಪ್ರತಿಬಿಂಬನೆಂದು ಹೇಳಿದ್ದಾಯಿತು. ಆಚಾರ್ಯರೇ ಸ್ಪಷ್ಟಗೊಳಿಸಿದಂತೆ ಜೀವರು ಪರಮಾತ್ಮನಿಗೆ ಸದೃಶರು ಎಂದು ಇದರ ಅರ್ಥ. ಇದು ಅಲ್ಲದೇ ಜೀವರು ಪರಮಾತ್ಮನ ಅಂಶರು ಎಂದೂ (**अंशो नानाव्यपदेशात्** ಎಂಬಲ್ಲಿ ಮತ್ತು **ममैवांशो जीवलोके जीवभूतः** ಎಂಬಲ್ಲಿ) ಹೇಳಲಾಗಿದೆ. ಪ್ರತಿಬಿಂಬಕ್ಕೂ ಬಿಂಬಕ್ಕೂ (ಕೆಲವರು ಅಭೇದವನ್ನು ಹೇಳಿದರೂ) ಭೇದವು ಆದರೆ ಅಂಶಕ್ಕೂ (ಭಾಗಕ್ಕೂ) ಅಂಶಿಗೂ (ಮೂಲಕ್ಕೂ) ಭೇದಾಭೇದವು. ಇದು ಪರಸ್ಪರ ವಿರುದ್ಧವಾಯಿತು.

೧) ಎಂದರೆ ಆಚಾರ್ಯರು ಹೇಳುತ್ತಾರೆ. ಪರಮಾತ್ಮನಿಗೆ ಪ್ರತಿಬಿಂಬಾಂಶಗಳೆಂದೂ ಸ್ವರೂಪಾಂಶಗಳೆಂದೂ ಎರಡು ತರಹದ ಅಂಶಗಳು. ಜೀವರು ಪ್ರತಿಬಿಂಬಾಂಶರು; ಅವರು ಪರಮಾತ್ಮನ ಅಂಶದಿಂದ ಭಿನ್ನರು; ಸ್ವರೂಪಾಂಶರು ಅವನ ಮತ್ಸ್ಯಕೂರ್ಮಾದಿ ಅವತಾರಗಳು ಅವು ಪರಮಾತ್ಮನಿಂದ ಅಭಿನ್ನವಾದವು ಪರಮಾತ್ಮನ ಅವತಾರರೂ ಪರಮಾತ್ಮನೂ ಅಭಿನ್ನರು ಆದುದರಿಂದ ಇಲ್ಲಿ ಜೀವರು ಪರಮಾತ್ಮನಿಂದ ತೀರಭಿನ್ನರಾದ ಪ್ರತಿಬಿಂಬಗಳೇ ಎಂದು ಗೀತೆಯ ತಾತ್ಪರ್ಯ.

೨) ಇನ್ನು ಎರಡನೆ ಮಾತು. ಪರಮಾತ್ಮನು ಸ್ಥಾಣು ಎಂದು ಹೇಳಲಾಯಿತು. ಸ್ಥಾಣುವೆಂದರೆ ಯಾವ ಪ್ರಕಾರದಿಂದಲೂ ವಿಕಾರ ಶೂನ್ಯನು ಎಂದರ್ಥ. ಇದು ಪರಮಾತ್ಮನನ್ನು ವರ್ಣಿಸುವ ಇತರ ವಾಕ್ಯಗಳಿಗೆ ವಿರುದ್ಧವಾಗುತ್ತದೆ. **तदैक्षत सो कामयत** ಎಂಬಲ್ಲಿ ಪರಮಾತ್ಮನಲ್ಲಿ ನೋಡುವದು ಇಚ್ಛಿಸುವದು ಮೊದಲಾದ ಕ್ರಿಯೆಗಳು ಅವಿಕಾರಿಯಾದ ಪರಮಾತ್ಮನಲ್ಲಿ ಹೇಗೆ ಸಂಗತವಾಗುವವು ? ಎರಡು ವಿಧದಿಂದ ಇಲ್ಲಿ ತಾಳಮೇಳವನ್ನು ಮಾಡಬಹುದು ೧) ಅದರಲ್ಲಿಯು ಒಂದು ವಿರುದ್ಧವಾದ ಗುಣವು ಸುಳ್ಳು ಎಂದು ಹೇಳಿ ಸುಸಂಗತಗೊಳಿಸಬಹುದು. ಇದು ಆಚಾರ್ಯರಿಗೆ ಸಮ್ಮತವಾದ ರೀತಿಯಲ್ಲ. ಅದ್ವೈತಿಗಳು ಈ ಮಾರ್ಗ

ವನ್ನು ಹಿಡಿಯುತ್ತಾರೆ. ಎರಡನೇ ರೀತಿಯೆಂದರೆ ಅಚಿಂತ್ಯ ಅದ್ಭುತ ಶಕ್ತಿಯುಳ್ಳ ಈಶ್ವರನಲ್ಲಿ ಅವೆರಡೂ ವಿರುದ್ಧವಾಗಿದ್ದರೂ ಅವಿರುದ್ಧವಾಗಿವೆ. ಇದಕ್ಕೆ ಕಾರಣ ವೆಂದರೆ ಈಶ್ವರನ ಅಚಿಂತ್ಯ ಅದ್ಭುತವಾದ ಶಕ್ತಿಯು. ಇವೆರಡು ಈಶ್ವರನಲ್ಲಿ ಇವೆಯೆಂದು ಶ್ರುತಿಗಳು ಹೇಳುವದರಿಂದ ನಾವು ಹೀಗೆ ಕಲ್ಪಿಸಬೇಕಾಗಿದೆ.

ಶ್ರುತಿಗಳ ಪ್ರಾಮಾಣ್ಯಕ್ಕೆ ಧಕ್ಕೆ ಬರದಂತೆ ನಾವು ಶ್ರುತಿಗಳಿಗೆ ಅರ್ಥಮಾಡ ಬೇಕು ಆಗ ನಮಗೆ ನಾರಾಯಣನೇ ವೇದಗಳಿಗೆ ಪರಮ ತಾತ್ಪರ್ಯವೆಂದು ಸಿದ್ಧವಾಗುತ್ತದೆ. ಆ ಪರಮಾತ್ಮನ ಜ್ಞಾನದಿಂದ ನಮಗೆ ಮುಕ್ತಿಯು ದೊರೆಯು ತ್ತಿದೆ ಇಂಥ ಶ್ರುತಿಗಳ' ಹೇಳುತ್ತಿರುವ ಗುಣಗಳು ಮಿಥ್ಯೆಯೆಂದು ಹೇಳುವದು ಸರಿಯಲ್ಲವೆಂದು ಆಚಾರ್ಯರ ವಾದ. ನಮ್ಮ ಅಪರಿಪಕ್ವಪ್ರತೀತಿಗಳು ದುಷ್ಟ ವಾದ ಹೇತುಗಳು ಪರಮಾತ್ಮನ ಗುಣಗಳನ್ನು ಗ್ರಹಿಸಲಿಕ್ಕೆ ಸಮರ್ಥರಾಗದ್ದರಿಂದ ಅವು ಪರಸ್ಪರ ವಿರುದ್ಧವಾಗಿ ತೋರುತ್ತಿವೆ ಆ ಪರಮಾತ್ಮನ ಸಾಕ್ಷಾತ್ಕಾರದಿಂದಲೇ ಆ ವಿರೋಧಗಳು ಪರಿಹಾರವಾಗಬೇಕು, ಎಲ್ಲ ಸಂಶಯಗಳು ದೂರಾಗಬೇಕು.

ಜೀವನು ಅಣು ಎಂಬ ವಿಷಯದಲ್ಲಿ ವಿಷ್ಣುಪುರಾಣದಲ್ಲಿ ಹೇಳಿದ ಮಾತು ನಮ್ಮ ಕಣ್ಣನ್ನು ತೆರೆಯಿಸುತ್ತಿದೆ. **नित्यं सर्वगते विष्णौ अणुर्जीवो व्यवस्थितः । न चास्य तदधीनत्वं हेतुतोऽपिविचाल्यते । निषेध विधि- पात्रत्वात् सनातन इति स्मृतः ।।** ಈ ಉಕ್ತಿಯು ಗೀತೆಯು **ಸರ್ವಗತಸ್ಥಾಣು, ಅಚಲ** ಮತ್ತು **ಸನಾತನ** ಕ್ಕೆ ಬರೆದ ವ್ಯಾಖ್ಯೆಯಂತೆ ಅದೆ. "ಅಣುವಾದ ಜೀವನು ಸರ್ವಗತನಾದ ವಿಷ್ಣುವಿನಲ್ಲಿ ಸ್ಥಿರವಾಗಿ ನಿಂತಿದ್ದಾನೆ. ಆ ಪರಮಾತ್ಮನ ಮೇಲೆ ಅವನು ಅವಲಂಬಿಸಿರುವದನ್ನು ಯಾವ ಕಾರಣದಿಂದಲೂ ತಪ್ಪಿಸಲಿಕ್ಕೆ ಬರುವಂತಿಲ್ಲ. "ಬೇಡ ಮತ್ತು ಮಾಡು" ಎಂಬ ಪರಮಾತ್ಮನ ಆಜ್ಞೆಗೆ ಪಾತ್ರನಾದು ದರಿಂದ ಅವನಿಗೆ **ಸನಾತನ** ಎಂದು ಕರೆಯುತ್ತಾರೆ. ಆಚಾರ್ಯರು ಗೀತಾ ತಾತ್ಪರ್ಯ ದಲ್ಲಿ ಹೇಳಿದ ಅರ್ಥಕ್ಕೆ ಈ ಶ್ಲೋಕವು ಮುದ್ರೆಯೊತ್ತಿದಂತೆ ಇದೆ.

ಶಂಕರಾನಂದರು **ಸರ್ವಗತ** ವೆಂದರೆ 'ಪರಿಪೂರ್ಣ' ಎಂದು ಅರ್ಥಮಾಡಿದ್ದಾರೆ ಆದರೆ ಮುಂದೆ ಬ್ರಹ್ಮನಿಗೆ ಕ್ರಿಯಾ ಶಕ್ತಿಯು ಇಲ್ಲವೆಂದು ಹೇಳುತ್ತಾರೆ ಯಾಕೆಂದರೆ ನಿತ್ಯವಾದ ಸರ್ವಗತವಾದ ಆಕಾಶಕ್ಕೂ ಕ್ರಿಯಾಶಕ್ತಿಯಿಲ್ಲೆಂದು ಹೇಳುತ್ತಾರೆ. ಆದುದರಿಂದಲೆ ಅದು ಸ್ಥಾಣು ಮತ್ತು ಅಚಲವೆನಿಸುವದು

**ಸರ್ವಗತ** ಎನ್ನುವ ಶಬ್ದವು ಬಹ್ವರ್ಥಕವಾದದ್ದು **ಗಮ್** ರೂಪಧಾತುವಿನಿಂದ ವ್ಯುತ್ಪತ್ತಿಹೊಂದಿದ ಅನೇಕ ಅರ್ಥಗಳು ಹೊರಡುವದರಿಂದ ಈ ಪದವು ಶ್ರೀಮಂತ

ವೆನಿಸುವದು ೧) ಸರ್ವವನ್ನೂ ತಿಳಿದವನು, ೨) ಸೃಷ್ಟಿ ಮತ್ತು ಸ್ಥಿತಿಕರ್ತನು, ೩) ಧ್ವಂಸಕರ್ತನು ೪) ಜೀವರ ಸಂಸಾರದ ಅಜ್ಞಾನದ ನಿಯಾಮಕನು, ೫) ಜ್ಞಾನ ದಾತನು, ೬) ಗಮ್ಯನೂ ಅವನೇ ಆದುದರಿಂದ ಬ್ರಹ್ಮನ ವಿಷಯದಲ್ಲಿ ಉನ್ನತವಾದ ಅರ್ಥಗಳನ್ನು ಸ್ವೀಕರಿಸೋಣ. ಅವನನ್ನು ಅವನತಿಗೆ ಎಳೆಯುವ ಅರ್ಥಗಳನ್ನು ತ್ಯಾಗ ಮಾಡೋಣ.

ಅದ್ವೈತಿಗಳು ಬಹು ಆದುದರಿಂದ **अचल** ಮತ್ತು **स्थाणु** ಶಬ್ದಗಳಿಗೆ ಗಂಟು ಬೀಳುತ್ತಾರೆ ಯಾಕೆಂದರೆ ಅವನಲ್ಲಿ ಕ್ರಿಯಾಶಕ್ತಿಯನ್ನೂ ಗಮನಶಕ್ತಿ ಯನ್ನೂ ಸುಲಭವಾಗಿ ಅವು ಅಪಹರಿಸುತ್ತವೆ. ಈಶ್ವರನು ಕರ್ತಾನಂತೆ ಕಾಣು ವದು ಮಿಥ್ಯಾ. ಅವನು ಎಂದೂ ಅಲುಗಾಡದ ಕಂಬದಂತೆ ಇದ್ದಾನೆಂದು ಅವರ ಅಭಿಪ್ರಾಯ. ಆದರೆ ಮಧ್ವಾಚಾರ್ಯರು ಮಾತ್ರ **अचल** ಇದು ನಿಷೇದಾರ್ಥಕ ವಿಶೇಷಣವು. ಅದ್ವೈತಿಗಳು ಬ್ರಹ್ಮನಲ್ಲಿ ಪ್ರಾಕೃತ ಧರ್ಮಗಳನ್ನು ಒಪ್ಪುವದಿಲ್ಲ. ಆ ರೀತಿಯಾಗಿ ಬ್ರಹ್ಮನಲ್ಲಿ ಪ್ರಾಕೃತ ಚಲನವು ಇಲ್ಲವೆಂದು ಹೇಳಬಹುದು. ಪ್ರಕೃತಿ ಪ್ರಾಕೃತ ವಸ್ತುವು ಚಲಿಸುವಂತೆ ಅವನು ಚಲಿಸುವದಿಲ್ಲೆಂದು ಅರ್ಥ. ಭೌತನಿಯಮ ಗಳು ಅವನಿಗೆ ಅನ್ವಯಿಸುವದಿಲ್ಲ. ಆದುದರಿಂದ ಅವನು ಚೈತನ್ಯ ಶೂನ್ಯವಾದ ಕ್ರಿಯಾಶಕ್ತಿ ಹೀನವಾದ ಜಡಕಂಬದಂತೆ ಅವನು ಇಲ್ಲ ಬ್ರಹ್ಮನು ಕರ್ತಾ ಎನ್ನು ವದು ಸುಳ್ಳು ಅವನು **स्थाणु** ಎನ್ನುವದು ಸತ್ಯ ಭಾಗವತ ಪುರಾಣವು ಅದಕ್ಕೆ "ಬ್ರಹ್ಮನು ದೂರದಲ್ಲಿದ್ದಾನೆ, ಸಮೀಪದಲ್ಲಿದ್ದಾನೆ" ಎಂದು ಹೇಳುತ್ತಿದೆ. "ಅದು ಹೋಗುತ್ತದೆ, ಅದು ಹೋಗುವದಿಲ್ಲ" ಎಂದು ಉಭಯವಿಧವಾಗಿ ವರ್ಣಿಸುತ್ತಿದೆ.

ಅದ್ವೈತಿ ಟೀಕಾಕಾರರಾದ ವೆಂಕಟನಾಥರು ಬರೆಯುತ್ತಾರೆ;—"**सर्वगतस्थाणु** ಒಂದು ಸಮಾಸವೆಂದು ಹೇಳುವದು ಅಸಂಬದ್ಧ". ಯಾಕೆಂದರೆ ಅಣು ಇದ್ದದ್ದು ನಿತ್ಯವಿರಲಾರದೆನ್ನುವದು ಅದ್ವೈತಿಗಳ ಹಟ, ಜೀವನು ಅಣುವೆನ್ನುವದನ್ನು ಅವರು ಒಪ್ಪುವದಿಲ್ಲ ಈ ವೆಂಕಟನಾಥರು ತಮ್ಮ ವಜ್ರಪಂಜರವೆಂಬ ಗ್ರಂಥದಲ್ಲಿ ಜೀವಾಣುತ್ವವನ್ನೂ ಖಂಡಿಸಿದ್ದೇವೆಂದು ಹೇಳುತ್ತಾರೆ

ಬ್ರಹ್ಮಸೂತ್ರದಲ್ಲಿ ಒಂದು ಅಧಿಕರಣವನ್ನೇ ಜೀವಾಣುತ್ವ ವಾದಕ್ಕೆ ಮೀಸಲು ಇಟ್ಟಿದ್ದಾರೆ. ಆ ಅಧಿಕರಣದಲ್ಲಿ ಬಾದರಾಯಣರು ಜೀವನ ಅಣುತ್ವವನ್ನೇ ಸಾಧಿಸಿದ್ದಾರೆಂದು ರಾಮಾನುಜಾಚಾರ್ಯರೂ ಮಧ್ವಾಚಾರ್ಯರೂ ಒಪ್ಪಿದ್ದಾರೆ. ಶಂಕರಾಚಾರ್ಯರು ಮಾತ್ರ ಇದು ಪೂರ್ಣ ಪಕ್ಷಸೂತ್ರವೆಂದು ತಳ್ಳಿಬಿಟ್ಟಿದ್ದಾರೆ. ಡಾ. ಥೀಬೋರವರು ಶಂಕರ ಭಾಷ್ಯದ ಭಾಷಾಂತರಕ್ಕೆ ಬರೆದ ತಮ್ಮ ಉಪೋದ್ಘಾ ತದಲ್ಲಿ, ಶಂಕರಾಚಾರ್ಯರು ಬಾದರಾಯಣರ ಅಭಿಪ್ರಾಯವನ್ನು ಮನ್ನಿಸುವದಿಲ್ಲ ವೆಂಬುದನ್ನು ತೋರಿಸಿದ್ದಾರೆ. ಯಾಕೆಂದರೆ ಸೂತ್ರಗಳ ಭಾಷೆಯನ್ನು ನೋಡಿ

ಸೂತ್ರಕ್ಕೆ ಅರ್ಥ ಹಚ್ಚಿದರೆ ಅವು ಪೂರ್ವಪಕ್ಷ ಸೂತ್ರಗಳಲ್ಲವೆಂಬುದು ತಾತ್ಪರ್ಯ ಬೋಧಕ ಲಿಂಗಗಳಿಂದ ಸ್ಪಷ್ಟವಾಗುತ್ತದೆ. ಧೀಬೋರವರು ಯಾವ ಪಕ್ಷಕ್ಕೂ ಹೊಂದದೆ ಯಾವ ಪೂರ್ವಗ್ರಹವಿಲ್ಲದೆ ಕೊಟ್ಟ ಅಭಿಪ್ರಾಯವನ್ನು ಮನ್ನಿಸಬೇಕಾಗುತ್ತದೆ.

ವೆಂಕಟನಾಥರ ಇನ್ನೊಂದು ಅಭಿಪ್ರಾಯವನ್ನು ವಿಮರ್ಶಿಸೋಣ. ೨೪ನೇ ಶ್ಲೋಕದಲ್ಲಿ ಮೊದಲಿನ ಸಾಲಿನಲ್ಲಿ ಹೇಳಿದ **अच्छेद्य अदाह्य** ಮೊದಲಾದವುಗಳಿಗೆ ಎರಡನೆ ಸಾಲಿನಲ್ಲಿ ಹೇಳಿದ **नित्य, सर्वगत** ಮೊದಲಾದ ವಿಶೇಷಣಗಳು ಕಾರಣವನ್ನು ಒದಗಿಸುತ್ತವೆಂದು ಹೇಳುತ್ತಾರೆ. ಇದನ್ನು ಒಪ್ಪದ ಮಧ್ವಾಚಾರ್ಯರ ಭಾಷ್ಯವನ್ನು ಅಸಂಬದ್ಧ ಪ್ರಲಾಪವೆಂದು ಕರೆದಿದ್ದಾರೆ. ಗೀತೆಯನ್ನೇ ವಿಮರ್ಶಿಸಿದರೆ ೨೩ ನೇ ಶ್ಲೋಕದಲ್ಲಿ ಈಶ್ವರನು ಅಚ್ಛೇದ್ಯನು, ಅದಾಹ್ಯನು ಎಂದು ಭಗವಂತನು ಹೇಳುತ್ತಾನೆ ಆ ಮೇಲೆ ಆ ವಿಶೇಷಣಗಳನ್ನೇ ೨೪ ನೇ ಶ್ಲೋಕದಲ್ಲಿ ಭಗವಂತನು ಮೊದಲಿನ ಸಾಲಿನಲ್ಲಿ ಜೀವನಿಗೂ ಹಚ್ಚುತ್ತಾನೆ. ಆ ಮೇಲೆ ಎರಡನೇ ಸಾಲಿನಲ್ಲಿ ಜೀವನು ಮತ್ತು ಈಶ್ವರನು ಹಾಗಾದರೆ ಸಮರೇ ಎಂಬ ಸಂಶಯವನ್ನು ದೂರ ಮಾಡಲಿಕ್ಕೆ ಅವನು ಸರ್ವಗತಸ್ಥನು ಎಂದರೆ ಜೀವನು ಸರ್ವತ್ರವ್ಯಾಪ್ತನಾದ ಈಶ್ವರನ ಮೇಲೆ ಯಾವಾಗಲೂ ಅವಲಂಬಿಸಿರುವವನು ಮತ್ತು ಅಣುವುಯೆಂದು ಹೇಳಿದ್ದಾನೆ ಈ ರೀತಿಯಿಂದ ಎರಡನೇ ಸಾಲನ್ನು ಸರಳವಾಗಿ ಹಚ್ಚಲಿಕ್ಕೆ ಬರುತ್ತದೆ

ಇದಕ್ಕೆ ಪ್ರತಿಯಾಗಿ ವೆಂಕಟನಾಥರು— "ಹೀಗಿದ್ದರೆ ೨೫ ನೇ ಸಾಲಿನ ಕೊನೆ ಸಾಲಿನಲ್ಲಿ– **नानुशोचितुमर्हसि** ಎಂದು ಭಗವಂತನು ಹೇಳುತ್ತಾನೆ. ಜೀವನು ಪರಮಾತ್ಮನ ಅಧೀನನಿರುವದಕ್ಕೂ ಶೋಕ ಮಾಡದಿರುವದಕ್ಕೂ ಕಾರ್ಯಕಾರಣ ಭಾವ ಹೇಗೆ ? " ಎಂದು ಕೇಳುತ್ತಾರೆ.

ಇಲ್ಲಿಯೂ ಉತ್ತರ ಸುಲಭವಾಗಿದೆ. ಅರ್ಜುನ ! ಎಲ್ಲ ಜೀವರು ಅಣುಭೂತರೂ ಪರಮಾತ್ಮನಿಗೆ ಅಧೀನರೂ ಇರುವದರಿಂದ ಎಲ್ಲವೂ ಪರಮಾತ್ಮನ ಸಂಕಲ್ಪಕ್ಕೆ ಒಳಪಟ್ಟಿರುವದರಿಂದ, ನೀನು ಯುದ್ಧವನ್ನು ಮಾಡಲಿಕ್ಕಾಗಲೀಬಿಡಲಿಕ್ಕಾಗಲಿ ಸ್ವತಂತ್ರನಿಲ್ಲ. ನೀನು ಭಗವಂತನಲ್ಲಿ ವಿಶ್ವಾಸವಿಟ್ಟು ಯುದ್ಧಮಾಡು, ಎಂದರೆ ಎಲ್ಲ ದುಃಖಗಳನ್ನೂ ದಾಟುವಿ. ಅಷ್ಟೇ ಅಲ್ಲ, ಜನನ–ಮರಣಗಳನ್ನೂ ದಾಟುವಿ" ಎಂದು ಅರ್ಜುನನಿಗೆ ಉಪದೇಶ ಮಾಡಿದ್ದು ಸುಸಂಬದ್ಧವಾಗಿದೆ.

ಇನ್ನೊಂದು ಮಾತು ೧೭ನೇ ಶ್ಲೋಕದಲ್ಲಿ ಈಶ್ವರನು ಸರ್ವವ್ಯಾಪ್ತನೆಂದು ಹೇಳಿದೆ (**येन सर्व मिदं ततं**). ಆದರೆ ೨೪ ನೇ ಶ್ಲೋಕದ ಕೊನೆ ಸಾಲಿನಲ್ಲಿ

ಸರ್ವಗತತ್ವವನ್ನು ಅಣುವಾದ ಜೀವನಿಗೆ ಹೇಳಿದೆ. ಇದು ಹೇಗೆ ? ಈ ವಿರೋಧವು ಕಾಲ್ಪನಿಕ ಮಾತ್ರ; ಯಾಕೆಂದರೆ ೧೭ನೇ ಶ್ಲೋಕದಿಂದ ಮುಂದೆ ಕೆಲವುಸಾರೆ ಜೀವನಿಗೆ ಅನ್ವಯಿಸಿ, ಕೆಲವುಸಾರೆ ಈಶ್ವರನಿಗೆ ಅನ್ವಯಿಸಿ, ಕೆಲವುಸಾರೆ ಉಭಯರಿಗೂ ಅನ್ವಯಿಸಿ ಹೇಳಿದ್ದಾರೆ. ಸಂದರ್ಭಕ್ಕೆ ಅನುಗುಣವಾಗಿ ಅರ್ಥವನ್ನು ಯೋಜಿಸಬೇಕು ರಾಮಾನುಜಾಚಾರ್ಯರ ಹಟದಿಂದ ಎಲ್ಲ ಶ್ಲೋಕಗಳನ್ನೂ ಜೀವರಿಗೆ ಅನ್ವಯಿಸುತ್ತಾರೆ. ಶಂಕರಾಚಾರ್ಯರಿಗೆ ಜೀವ–ಬ್ರಹ್ಮರಿಬ್ಬರೂ ಆತ್ಮರೇ ಆಗಿದ್ದಾರೆ ಮಧ್ವಾಚಾರ್ಯರು ಈಶ್ವರನಿಗೆ ಅನ್ವಯಿಸುವದನ್ನು ಬಹಳ ಸಾರೆ ತೋರಿಸುತ್ತಾರೆ. ಅನ್ವಯಿಸದಿದ್ದಲ್ಲಿ ಜೀವನಿಗೆ ಅನ್ವಯಿಸುತ್ತಾರೆ.

ಕೊನೆಯದಾಗಿ ಯಾಕೆ ಶ್ಲೋಕಗಳನ್ನು ಹಿಂಸಿಸಿ ಅರ್ಥವನ್ನು ಜುಲುಮೆಯಿಂದ ತೆಗೆಯಬೇಕು ? ಸರಳವಾದ ಅರ್ಥವನ್ನು ಯಾಕೆ ಪುರಸ್ಕರಿಸಬಾರದು ? ಎಂದು ಕೇಳಿದರೆ ಎಳೆದು ಹಚ್ಚುವ ಸಂದರ್ಭವೇ ಇಲ್ಲ ವಿಷ್ಣು ಪುರಾಣದ ಶ್ಲೋಕವು ಈ ಶ್ಲೋಕದ ಅರ್ಥವನ್ನು ನಿರ್ಣಯಿಸಿ ಬಿಟ್ಟಿದೆ. ಅದರಂತೆ ಅರ್ಥ ಮಾಡಿದ್ದು ಎಳೆದು ಹಚ್ಚಿದ ಅರ್ಥವಲ್ಲ ಆ ಪುರಾಣ ಪ್ರಮಾಣಕ್ಕೆ ಮಹತ್ವವನ್ನು ಕೊಟ್ಟು ಮೇಲೆ ತೋರುವ ಅರ್ಥವನ್ನು ಬಿಟ್ಟು ಈ ಗೂಢವಾದ ಅರ್ಥವನ್ನು ಸ್ವೀಕರಿಸಲಾಗಿದೆ.

**सर्वगतः** ದ ಮೇಲೆ ಪ್ರಭುಪಾದರು ಒಂದು ಮಹತ್ವದ ಟಿಪ್ಪಣಿಯನ್ನು ಬರೆಯುತ್ತಾರೆ— " This **सर्वगतः** is significant because there is no doubt that living entities are all over God's creation. They live on the land, in the water, in the air, within the earth and even within fire The belief that they are sterilized in fire is not acceptable Because it is clearly stated here that the soul cannot be burnt by fire. Therefore there is no doubt that there are living entities also in the sun planet with suitable bodies to live there. If the sun globe is uninhabited then the word **सर्वगतः**- living every where-- becomes meaningless ". ಈ **सर्वगत** ವು ಬಹಳ ಅರ್ಥವುಳ್ಳ ಶಬ್ದವು. ಯಾಕೆಂದರೆ ಜೀವಂತ ವಸ್ತುಗಳು ಈಶ್ವರನ ಸೃಷ್ಟಿಯು ತುಂಬೆಲ್ಲ ಹರಡಿವೆಯೆಂಬಲ್ಲಿ ಸಂಶಯವಿಲ್ಲ. ಅವು ಭೂಮಿಯ ಮೇಲೆ ಇವೆ, ಜಲದಲ್ಲಿವೆ, ಹವೆಯಲ್ಲಿವೆ, ಭೂಮಿಯ ಒಳಗೆ ಇವೆ, ಬೆಂಕಿಯಲ್ಲಿ ಸಹ ಇವೆ ಬೆಂಕಿಯಲ್ಲಿ ಅವು ನಾಶಗೊಳಿಸಲ್ಪಡುತ್ತವೆಂಬ ನಂಬಿಕೆಯು ಗ್ರಾಹ್ಯವಲ್ಲ ಯಾಕೆಂದರೆ ಇಲ್ಲಿ ಸ್ಪಷ್ಟವಾಗಿ ಆತ್ಮವು ಬೆಂಕಿಯಿಂದ ಸುಡಲಾರದೆಂದು ಹೇಳಿದೆ. ಆದುದರಿಂದ ಸೂರ್ಯಮಂಡಲದಲ್ಲಿ ಸಹ ಸಜೀವ

ವಸ್ತುಗಳು ಅಲ್ಲಿ ಇರಲಿಕ್ಕೆ ಯೋಗ್ಯವಾದ ದೇಹಗಳೊಡನೆ ಇರಲೇಬೇಕೆಂಬುದರಲ್ಲಿ ಸಂಶಯವಿಲ್ಲ. ಸೂರ್ಯಮಂಡಲವು ನಿರ್ವಾಸಿತವಾಗಿದ್ದರೆ **सर्वगत** ಎಂಬ ಶಬ್ದವು ಅರ್ಥಹೀನವಾಗುತ್ತದೆ. "

ಪ್ರಭುಪಾದರ ವಿಚಾರದಲ್ಲಿ ಸ್ವಲ್ಪ ಗೊಂದಲವಿದೆ. ಮೊದಲಿನದಾಗಿ **सर्वगतत्व** ವು ಪರಮಾತ್ಮನಿಗೆ ಹೊರತು ಅಣುರೂಪಿಯಾದ ಜೀವಾತ್ಮನಿಗೆ ಅಲ್ಲ. ಜೀವಾತ್ಮನಿಗೆ ಈ ಶಬ್ದವನ್ನು ಹಚ್ಚಿದಾಗ **(सर्वगस्थ + अणु)** ಅದರ ಅರ್ಥವು ಸರ್ವಗತನಾದ ಪರಮಾತ್ಮನಲ್ಲಿ ' ಬಿಂಬ ಪ್ರತಿಬಿಂಬಭಾವದಿಂದ ಇರುವ ' ಅಥವಾ **सर्वगत** ಎಂದರೆ ಸರ್ವಗತನಾದ ಪರಮಾತ್ಮನಂತೆ ಇರುವ ಎಂದು ಅರ್ಥ ಮಾಡಬೇಕು, ಜೀವಾತ್ಮನು ತನ್ನ ಆತ್ಮಸ್ವರೂಪದಿಂದ ಸರ್ವಗತನೆಂದು ಹೇಳಿದೆ; ದೇಹದಿಂದ ಕೂಡಿದ ಜೀವನು ಸರ್ವಾತ್ಮನಲ್ಲ, ದೇಹದಿಂದ ಕೂಡಿದ ದೇಹಿಯು ಅಚ್ಛೇದ್ಯನಲ್ಲ, ಅದಾಹ್ಯನಲ್ಲ, ಅಕ್ಲೇದ್ಯನಲ್ಲ. ಯಾಕೆಂದರೆ ಅವನ ದೇಹವನ್ನು ಸುಡಲಿಕ್ಕೆ ಕಡಿಯಲಿಕ್ಕೆ ತೊಯಿಸಲಿಕ್ಕೆ ಬರುತ್ತದೆ ಗೀತೆಯು ಸೂರ್ಯಮಂಡಲದಲ್ಲಿರುವ ಚೇತನರು ದೇಹಸಹಿತರಾಗಿದ್ದಾರೆಂದು ಹೇಳಿಲ್ಲ ಆತ್ಮಸ್ವರೂಪದಿಂದ ಎಲ್ಲ ಲೋಕಗಳಲ್ಲಿದ್ದಾರೆ. ಆ ರೂಪವು ಮಾತ್ರ ಅಚ್ಛೇದ್ಯ ಅದಾಹ್ಯವಾಗಿದೆ. *

---

* "ಆತ್ಮನು ಪಂಚಮಹಾಭೂತಗಳಿಂದ ಭಿನ್ನನು; ಅವುಗಳ ಶಕ್ತಿಯು ಆತ್ಮನಿಗೆ ಏನೂ ತೊಂದರೆ ಕೊಡುವದಿಲ್ಲ. ಸಾಂಖ್ಯದರ್ಶನದಲ್ಲಿ ಪ್ರಕೃತಿ ಪುರುಷರು ಸ್ವತಂತ್ರರು ಮತ್ತು ಭಿನ್ನರು. ಪ್ರಕೃತಿಯೇ ಜಗತ್ತನ್ನು ನಿರ್ಮಿಸುವದು ಪುರುಷನು ಸಾಕ್ಷಿಯಾಗಿ ನೋಡುತ್ತ ಉದಾಸೀನನಾಗುವನು. ಗೀತೆಯಲ್ಲಿಯೂ ಆತ್ಮನು ಪಂಚಮಹಾಭೂತಗಳಿಂದ ಭಿನ್ನನು ೨೩ನೇ ಶ್ಲೋಕದಲ್ಲಿ ಈ ಮಾತನ್ನು ಭಗವಂತನು ಸಿದ್ಧಮಾಡುತ್ತಾನೆ "

ಆನಂದಕುಮಾರಸ್ವಾಮಿಯು ಬುದ್ಧನನ್ನು ಇದೇ ರೀತಿಯಾಗಿ ವರ್ಣಿಸಿದ್ದಾನೆ:— ಮಾರನು ತನ್ನ ಸೈನ್ಯದೊಡನೆ ಬೋಧಿಸತ್ತ್ವನನ್ನು ಮುತ್ತಿದನು. ದೊಡ್ಡದಾದ ಸುಂಟರಗಾಳಿಯು ಅವನ ಮೈಮೇಲಿನ ಬಟ್ಟೆಯನ್ನು ಸಹ ಅಲುಗಾಡಿಸಲಿಲ್ಲ. ದೊಡ್ಡ ಮಳೆಯಿಂದ ಬಂದ ಮಹಾಪೂರವು ಅವನನ್ನು ತೋಯಿಸಲಿಲ್ಲ ಮಾರನು ಅವನ ಮೇಲೆ ವಿಷದಿಗ್ಧ ಶಸ್ತ್ರಗಳನ್ನು ಎಸೆದನು; ಸುಡುವ ಕೆಂಡಗಳನ್ನು ಚಲ್ಲಿದನು, ಅವೆಲ್ಲ ಪಾದಗಳ ಮೇಲೆ ಹೂವಿನ ಹಾಗೆ ಬಿದ್ದವು. ಕತ್ತಲು ಮುಸುಕಿತು. ಇವೆಲ್ಲ ಭೋದಿಸತ್ತ್ವನ ಮೇಲೆ ಏನೂ ಪರಿಣಾಮ ಮಾಡದಿರಲು ಮಾರನು ಬಂದು—ಸಿದ್ಧಾರ್ಥನೇ ಏಳು; ಆ ಆಸನವು ನಂದು ಎಂದು ಹೇಳಿದನು.

ಕೇನ ಉಪನಿಷತ್ತಿನಲ್ಲಿ ಸಹ ಬ್ರಹ್ಮನು ಎಲ್ಲ ದೇವತೆಗಳಕಿಂತ ಶ್ರೇಷ್ಠನೆಂಬುವನ್ನು (೩ನೇಖಂಡ) ವರ್ಣಿಸಿದ್ದಾರೆ ಅಗ್ನಿ, ವಾಯು, ಇಂದ್ರರಿಗೆ ಬ್ರಹ್ಮನ ಹೇಳಿಕೆಯಂತೆ ಒಂದು ಹುಲ್ಲುಕಡ್ಡಿಯನ್ನು ಎತ್ತಲಿಕ್ಕೆ ಆಗಲಿಲ್ಲ ಅವರೆಲ್ಲರು ತಮ್ಮ ಶಕ್ತಿಯನ್ನು ಬ್ರಹ್ಮನಿಂದಲೇ ಸಂಪಾದಿಸಿದ್ದಾರೆ. ೭ನೆ ಅಧ್ಯಾಯದಲ್ಲಿ ಈ ಮಾತು ಸ್ಪಷ್ಟವಾಗುತ್ತದೆ.

अव्यक्तोऽयमचिन्त्योऽय मविकार्योऽयमुच्यते ।
तस्मादेवं विदित्वेनं नानु शोचितुमर्हसि ॥ २५ ॥

ಈ ( ಸರ್ವಗತನು ) ತನ್ನ ಇಚ್ಛೆಯಿಲ್ಲದೆ ಇತರರಿಗೆ ಕಾಣಸಿಕೊಳ್ಳತಕ್ಕವನಲ್ಲ; ( ನಮ್ಮ ಮನಸಿನಲ್ಲಿ ) ಚಿಂತಿಸಲಿಕ್ಕೆ ಬಾರದವನು; ಅವನು ಸರ್ವ ವಿಕಾರ ರಹಿತನು ಎಂದು ಕರೆಯಲ್ಪಡುತ್ತಾನೆ. ಹೀಗೆ ( ಈಶ್ವರನನ್ನು, ಜೀವನನ್ನು ) ತಿಳಿದುಕೊಂಡು ನೀನು ಶೋಕಿಸಬಾರದು (೨೫).

**ವಿಶೇಷ ಟಿಪ್ಪಣೆಗಳು :**

ಇಲ್ಲಿ ಅವ್ಯಕ್ತನಾದ, ಅಚಿಂತ್ಯನಾದ, ಅವಿಕಾರಿಯಾದ **अयं** ಯಾರು ? ವ್ಯಾಖ್ಯಾನಕಾರರು ಭಿನ್ನ ಭಿನ್ನ ಅಭಿಪ್ರಾಯವುಳ್ಳವರಾಗಿದ್ದಾರೆ. ಮಧ್ವಾಚಾರ್ಯರು ಮಾತ್ರ ಸರ್ವಗತನಾದ ಪರಮಾತ್ಮನೇ ಈ ಅವ್ಯಕ್ತನು; ಅಚಿಂತ್ಯನು ಮತ್ತು ಅವಿಕಾರಿಯೆಂದು ಹೇಳುತ್ತಾರೆ ಜೀವನು ಈ ಪರಮಾತ್ಮನನ್ನು ಆಶ್ರಯಿಸಿದ್ದರಿಂದ ಏಕೆ ಪರಮಾತ್ಮನು ವ್ಯಕ್ತನಾಗುವದಿಲ್ಲ ? ಅವನ ಸ್ವಭಾವವೇ ಅವ್ಯಕ್ತವಾಗಿದ್ದರೂ ಅದು ಅವನ ಅಚಿಂತ್ಯ ಶಕ್ತಿಯ ಬಲದಿಂದ, ಪರಮಾತ್ಮನು ಯಾವಾಗಲೂ ಎಲ್ಲ ಅವತಾರಗಲ್ಲಿಯೂ ಅವ್ಯಕ್ತನಾಗಿರುತ್ತಾನೆ. ಆದುದರಿಂದ **अयं, अयं** ಎಂದು ಅವನಿಗೆ ಕರೆದಿದ್ದಾರೆ. ಜೀವರ ವಿಷಯದಲ್ಲಿ ಹಿಂದೆ **अच्छेद्योऽयं** ಎಂದು ಹೇಳಿದ್ದು ಎಲ್ಲ ಜೀವರ ವಿಷಯದಲ್ಲಿ. ತಾತ್ಪರ್ಯದಲ್ಲಿ ಆಚಾರ್ಯರು ಇದೆಲ್ಲ ಶ್ರುತಿಸಿದ್ಧವಾದ ಮಾತೆಂದು ಹೇಳುತ್ತಾರೆ. ಅವನು ಭಕ್ತರಿಗೆ ಪ್ರತ್ಯಕ್ಷನಾಗುವದು ಅವನ ಇಚ್ಛೆಯಿಂದ. ಅವನು ಭಕ್ತರ ಧ್ಯಾನದಲ್ಲಿಯೂ ಗೋಚರನಾಗುತ್ತಾನೆ. ಅಹುದು ಇದೆಲ್ಲ ನಿಜವೇ ! ಆದರೂ ಅವನು ಭಕ್ತರ ಮೇಲಿನ ಅನುಗ್ರಹದಿಂದ ಧ್ಯಾನದಲ್ಲಿ ಚಿಂತಿಸಲ್ಪಡುತ್ತಾನೆ ಮತ್ತು ಪ್ರತ್ಯಕ್ಷವಾಗುತ್ತಾನೆ. ಅವನು ಅಚಿಂತ್ಯ ಶಕ್ತಿಯುಳ್ಳವನು.

ಎರಡನೆ ಸಾಲಿನಲ್ಲಿ ಹಿಂದು ನಡೆದ ವಿಚಾರವನ್ನೇ ಮುಂದವರೆಸುತ್ತಾನೆ ಭಗವಂತ. "ಜೀವನು ನಿತ್ಯನೆನ್ನುವದನ್ನು ತಿಳಿ; ಪರಮಾತ್ಮನು ದೊಡ್ಡವನೆನ್ನುವದನ್ನೂ ತಿಳಿ; ಈ ಜ್ಞಾನವು ನಿನ್ನನ್ನು ಈಗ ಬಂದ ದುಃಖದಿಂದ ನಿವಾರಿಸುವದು ಮತ್ತು ಸಂಸಾರದಿಂದ ಬಿಡುಗಡೆ ಮಾಡುವದು".

ಇನ್ನು ಉಳಿದವರು ಅರ್ಥೈಸಿದ್ದನ್ನು ನೋಡೋಣ. ರಾಮಾನುಜಾಚಾರ್ಯರು ಅವರ ಪದ್ಧತಿಯಂತೆ ಇದು ಜೀವಾತ್ಮನ ವರ್ಣನೆಯೆಂದು ಹೇಳುತ್ತಾರೆ. ೧೭ ನೇ ಶ್ಲೋಕದಲ್ಲಿ ಹೇಳಿದ್ದನ್ನೇ ದಾರ್ಢ್ಯಾರ್ಥವಾಗಿ ಮತ್ತೆ ಹೇಳು

ತ್ತಾರೆಂದು ಪುನರುಕ್ತಿಯನ್ನು ಹಗುರಾಗಿ ಒಪ್ಪುತ್ತಾರೆ. ಆತ್ಮನು ನಿತ್ಯನು, ಸರ್ವಗತನು. ಅಣುವಾದ ಜೀವನು, ಎಲ್ಲ ತತ್ವಗಳಲ್ಲಿ ಪ್ರವೇಶಾರ್ಹನು ಎಂಬ ಅರ್ಥದಲ್ಲಿ ಸರ್ವಗತನು ಎಂದು ಉಪಯೋಗಿಸಿದ್ದಾರೆ. ಮತ್ತು ಜೀವನು ಸೂಕ್ಷ್ಮನಾದುದರಿಂದ ಯಾವ ತತ್ವವೂ ಜೀವನಲ್ಲಿ ಪ್ರವೇಶಿಸಲಾರದು. ಜೀವನು ಎಲ್ಲ ತತ್ವಗಳಿಂದ ವಿಜಾತೀಯನಾದುದರಿಂದ, ಆ ಆ ವಸ್ತುಗಳ ಸ್ವಭಾವದಿಂದ ಜೀವನನ್ನು ಚಿಂತಿಸಲಿಕ್ಕೆ ಒರುವಂತಿಲ್ಲ. ಛೇದನ ಯೋಗ್ಯ ಪದಾರ್ಥಗಳು ಹೇಗೆ ಅಭಿವ್ಯಕ್ತವಾಗಿರುತ್ತವೆ ಹಾಗೆ ಜೀವನು ಅಭಿವ್ಯಕ್ತನಾಗುವದಿಲ್ಲ. ಯಾವ ಇಂದ್ರಿಯಗಳಿಂದ ಅಚೇತನ ವಸ್ತುಗಳನ್ನು ತಿಳಿಯುತ್ತೀರಿ ಆ ಇಂದ್ರಿಯಗಳಿಂದ ಜೀವನು ಗೋಚರನಲ್ಲ. ಯಾಕೆಂದರೆ ಜೀವನು ಸ್ವಪ್ರಜ್ಞೆಗೆ ಮಾತ್ರ ಗೋಚರನು

ಇದರಿಂದ ಜೀವನು ಪ್ರಕೃತಿಯಿಂದ ಭಿನ್ನನು ಎಂಬುದು ಸ್ಪಷ್ಟವಾಗುತ್ತದೆ ಅಷ್ಟೇ ! ಆದರೂ ಅವ್ಯಕ್ತವೆಂಬ ವಿಶೇಷಣವನ್ನು ಮೂಲಪ್ರಕೃತಿಗೂ ಹಚ್ಚುತ್ತಾರೆ. ಪ್ರಾಕೃತ ಇಂದ್ರಿಯಗಳಿಗೆ ಜೀವನು ಗೋಚರನಾಗದಿದ್ದರೆ ಅಪ್ರಾಕೃತ ಇಂದ್ರಿಯಗಳಿಗೆ ಪ್ರಕೃತಿಯೂ ಗೋಚರವಾಗುವದಿಲ್ಲ ಸೂಕ್ಷ್ಮಪ್ರಕೃತಿಯು ಆತ್ಮನಂತೆ ಅವಿನಾಶಿಯು. ಆದರೆ ಆತ್ಮವು ಪ್ರಕೃತಿಯಾಗಿ ಪರಿಣಮಿಸುವದಿಲ್ಲ; ಪ್ರಕೃತಿಯು ಆತ್ಮನಾಗಿ ಪರಿಣಮಿಸುವದಿಲ್ಲ, ಆದುದರಿಂದ ಕೆಲಮಟ್ಟಿಗೆ ಈ ವಿಶೇಷಣಗಳೂ ಸೂಕ್ಷ್ಮ ಅಥವಾ ಮೂಲ ಪ್ರಕೃತಿಗೆ ಅನ್ವಯಿಸುತ್ತವೆ.

ಆದರೂ ಪೂರ್ತಿಯಾಗಿ ಆತ್ಮವು ಅಭಿವ್ಯಕ್ತವಾಗುತ್ತದೆ, ಚಿಂತ್ಯವದೆ, ಪೂರ್ತಿಯಾಗಿ ಅದು ಅವಿಕಾರಿಯಾಗಿಲ್ಲ ಅದು ಅಚ್ಛೇದ್ಯ ಅದಾಹ್ಯವಾಗಿದ್ದರೂ ಅದಕ್ಕೆ ಸುಖ-ದುಃಖಗಳಾಗುತ್ತವೆ. ಅದಕ್ಕೂ ಬೇಕಾದಷ್ಟು ಪರಿಳಿತಗಳುಂಟು. ಇಂಥ ಮಿತವಾದ ವಸ್ತುವನ್ನು ಅದು ಅಪೂರ್ಣತೆಯಿಂದ ತುಂಬಿದ್ದರೂ ಅವ್ಯಕ್ತ, ಅಚಿಂತ್ಯ, ಅವಿಕಾರಿ ಎಂದು ಕರೆಯುವದು ಸಾಹಸನ ಮಾತಾಗುತ್ತದೆ. ಆದುದರಿಂದ ಮಧ್ವಾಚಾರ್ಯರು ಈ ವಿಶೇಷಣಗಳನ್ನು ಪರಮಾತ್ಮನಿಗೆ ಯೋಜಿಸಿದ್ದಾರೆ.

ಇನ್ನು ಅದ್ವೈತಿಗಳ ಅಭಿಪ್ರಾಯವನ್ನು ನೋಡೋಣ. ಇವರಲ್ಲಿ ಈ ವಿಷಯದಲ್ಲಿ ಮೂರು ಮತಗಳು ಕಂಡು ಬರುತ್ತವೆ. (೧) ಆತ್ಮವು (ಈಶ್ವರ ಮತ್ತು ಜೀವರಿಬ್ಬರೂ ಒಂದಾದುದರಿಂದ) ಯಾವ ಪ್ರಮಾಣಕ್ಕೂ ಗೋಚರವಾದುದಲ್ಲ **(अप्रमेय)**. (೨) ದಾಹ್ಯ, ಛೇದ್ಯ, ಶೋಷ್ಯ, ಕ್ಲೇದ್ಯ ಈ ನಾಲ್ಕು ವಿಷಯಗಳಲ್ಲಿ ಮಾತ್ರ ಅವು ಅಜ್ಞೇಯವಾಗಿವೆ. (೩) ಇಲ್ಲಿ ಕಲಿಸುವ ಪಾಠವೆಂದರೆ· ಆತ್ಮವು (ಅ) ಸ್ಥೂಲದೇಹದಿಂದ ಭಿನ್ನವಾಗಿದೆ (ಬ) ಲಿಂಗಶರೀರದಿಂದ ಭಿನ್ನವಾಗಿದೆ (ಕ) ಮೂಲ ಅವಿದ್ಯಾ ನಿರ್ಮಿತವಾದ ಕರಣಶರೀರದಿಂದ ಭಿನ್ನವಾಗಿದೆ ಎಂದು.

(೧) ಶಂಕರಾಚಾರ್ಯರು (**सर्वकरण अविषयत्वात्**) ಆತ್ಮನು ಎಲ್ಲ ಸಾಧನಗಳಿಗೂ ಅಗೋಚರನೆಂದು ಹೇಳುತ್ತಾರೆ. ಎಂದರೆ **अप्रमेय** ನೆಂದು ಹೇಳಿದಂತಾಯಿತು, ಈಗಾಗಲೇ ಆತ್ಮನು ಅಪ್ರಮೇಯನೆಂದು ಹೇಳಿದ್ದರಿಂದ (II–18) ಮತ್ತೆ ಹೇಳುವದಕ್ಕೆ ಪ್ರಸಕ್ತಿಯೇ ಇಲ್ಲ. ಆದರೆ ಅದಕ್ಕೆ ಅವರ ಉತ್ತರ ಸಿದ್ಧವದೆ. 'ವಿಷಯ ಕಠಿಣ' ವಿದ್ದುದರಿಂದ ಮತ್ತೆ ಮತ್ತೆ ಹೇಳುತ್ತಾರೆ.

(೨) ಎರಡನೆಯ ಮತವೆಂದರೆ ಮಧುಸೂದನ ಸರಸ್ವತಿಯುವರದು. ಶಂಕರಾಚಾರ್ಯರ ಅರ್ಥವು ಪುನರುಕ್ತಿಗೆ ಗುರಿಯಾದುದನ್ನು ಮಧುಸೂದನ ಸರಸ್ವತಿಯವರು ತಪ್ಪಿಸುತ್ತಾರೆ. ಈ ಶ್ಲೋಕವು ಈ ನಾಲ್ಕು ವಿಶೇಷಣಗಳಿಗೆ ಮಿತವಾಗಿರುತ್ತದೆ ಯಾವದು ಇಂದ್ರಿಯ ಗೋಚರವಾಗುತ್ತದೆ ಅದು ಪ್ರತ್ಯಕ್ಷ ವಾದುದರಿಂದ ವ್ಯಕ್ತವೆನಿಸುತ್ತದೆ. ಈ ಆತ್ಮವೋ ರೂಪಾದಿಹೀನವಾದುದರಿಂದ ಅದು ಪ್ರತ್ಯಕ್ಷವಾಗಲಾರದು ಇನ್ನು ಪ್ರತ್ಯಕ್ಷವಾಗದಿದ್ದರೆ ಅದು ಅನುಮಾನಕ್ಕೆ ಗೋಚರವಾಗಬಹುದೆಂದು ಶಂಕಿಸಿದರೆ ಹೇಳುತ್ತಾರೆ **अचिन्त्योयं** ಎಂದು **चिन्त्य** ವೆಂದರೆ ಅನುಮೇಯವೆಂದು, **अचिन्त्य** ವೆಂದರೆ ಅನುಮಾನಕ್ಕೆ ನಿಲುಕದ್ದು. ಎಲ್ಲೋ ಒಂದುಕಡೆಗೆ ಪ್ರತ್ಯಕ್ಷವಾದ ವಹ್ನಿಯು (ಬೆಂಕಿಯು) ಇದರೊಡನೆ ವ್ಯಾಪ್ತಿಯುಳ್ಳ ಧೂಮದ ದರ್ಶನದಿಂದ ಅನುಮಾನಕ್ಕೆ ವಿಷಯವಾಗುತ್ತದೆ. ಆದರೆ ಬೆಂಕಿಯೇ ಪ್ರತ್ಯಕ್ಷವಿಲ್ಲದಾಗ ಅದು ಅನುಮಾನಕ್ಕೆ ವಿಷಯವಾಗುವ ಸಂಭವವಿಲ್ಲ. ಆತ್ಮನು ವಿಕಾರ ರಹಿತನು ಆದುದರಿಂದ ಅರ್ಥಾಪತ್ತಿಗೂ ವಿಷಯವಾಗುವದಿಲ್ಲ ಶಬ್ದ ಪ್ರಮಾಣಕ್ಕೆ ವಿಷಯವಾಗಬೇಕಾದರೆ ಅದು ಬೇರೊಂದೆಡೆಗೆ ಪ್ರತ್ಯಕ್ಷಕ್ಕೆ ವಿಷಯ ವಾಗಿರಬೇಕು. ಆತ್ಮನಿಗೆ ಪ್ರತ್ಯಕ್ಷವಿಲ್ಲದ್ದರಿಂದ ಅದು ಶಬ್ದಕ್ಕೂ ವಿಷಯವಾಗುವ ದಿಲ್ಲ. ಹೀಗೆ ವಿವರಿಸುವದರಿಂದ ಪುನರುಕ್ತಿ ದೋಷವು ಹೋದರೂ ಮೊದಲು ಅದು **अप्रमेय** ವೆಂದು ಹೇಳಿದ ಮೇಲೆ ಮತ್ತೆ ಈ ರೀತಿಯಾಗಿ ಈ ನಾಲ್ಕರ ವಿಷಯ ದಲ್ಲಿ ವಿವರಿಸುವದಕ್ಕೆ ಕಾರಣವೇನೂ ಇಲ್ಲ.

(೩) ಮೂರನೇ ಅಭಿಪ್ರಾಯವನ್ನು ಶಂಕರಾನಂದರೂ ನೀಲಕಂಠರರೂ ಪ್ರತಿ ನಿಧಿಸುತ್ತಾರೆ· ಆತ್ಮನ ವಿಜ್ಞಾನದಿಂದ ಸಂಸಾರ ನಿವೃತ್ತಿಯಾಗುತ್ತದೆ. ಆತ್ಮ ಜ್ಞಾನವಾದರೂ ಆತ್ಮ–ಅನಾತ್ಮಗಳಿಗೆ ಭೇದವನ್ನು ಗ್ರಹಿಸದೇ ಸಾಧ್ಯವಿಲ್ಲ. ಆ ಶೋಧನವನ್ನು **वासांसि जीर्णानि** ಈ ಮೊದಲಾದ ಶ್ಲೋಕಗಳಿಂದ ಪ್ರಸ್ತಾಪಿಸಿ ದರು. ಆತ್ಮನು ಅನಾತ್ಮಗಳಾದ ಲಿಂಗಶರೀರದಿಂದಲೂ ಕಾರಣಶರೀರದಿಂದಲೂ ಭಿನ್ನನೆಂದು ಗೊತ್ತಾಗುತ್ತದೆ. ನೀಲಕಂಠರು **अव्यक्त** ಪದವು ಆತ್ಮನನ್ನು ಶರೀರ ದಿಂದ ಭಿನ್ನವೆಂದು ಹೇಳುತ್ತಾರೆ. **अचिन्त्य** ವೆಂಬುದು ಲಿಂಗಶರೀರದಿಂದ ಆತ್ಮನು

ಭಿನ್ನನೆಂದು ಮತ್ತು **अविकार्य** ಎಂಬ ಪದವು ಆತ್ಮನು ಕಾರಣಶರೀರದಿಂದ ಭಿನ್ನನೆಂದು ಹೇಳುತ್ತದೆ. ಶಂಕರಾನಂದರು **अव्यक्त** ವು ಲಿಂಗಶರೀರದಿಂದ, **अचिंत्य** ವು. ಕಾರಣಶರೀರದಿಂದ, ಆತ್ಮನು ಭಿನ್ನನು. **अविकार्य** ವು ಆತ್ಮನಿಗೆ ಅವಯುವಗಳೂ ಭಾಗಗಳೂ ಇಲ್ಲವೆಂಬುದನ್ನು ಹೇಳುತ್ತದೆ. ಒಟ್ಟಾರೆ, ಆತ್ಮನು ತನ್ನ ಕೋಶಗಳಿಂದ ಭಿನ್ನನೆಂದು ಈ ಪದಗಳು ತೋರಿಸುತ್ತವೆಂದು ಇವರ ಅರ್ಥವು

ಆದರೆ ಪ್ರಥಮದಲ್ಲಿ (II – 13) **देहिनोऽस्मिन्** ಎಂಬ ಶ್ಲೋಕದಲ್ಲಿ ಈ ವಿಷಯವು ಪ್ರಾರಂಭವಾಗಿ (II – 22) ರಲ್ಲಿ **वासांसिजीर्णानि** ಅದನ್ನೇ ಸಿದ್ಧಿಸಿ ಮತ್ತೆ ಈ ಚರ್ವಿತ ಚರ್ವಣ ಮಾಡುವದನ್ನು ಇಲ್ಲಿ ಮಾಡುವದರಲ್ಲಿ ಉದ್ದೇಶವೇನಿದೆ ?

ಶ್ರೀ ಖರೆಯವರು ಇಲ್ಲಿ ಒಂದು ಸಂದೇಹವನ್ನು ಎತ್ತುತ್ತಾರೆ ಈ ಶ್ಲೋಕದಲ್ಲಿ **अव्यक्त, अविकार्य** ಇತ್ಯಾದಿ ವಿಶೇಷಣಗಳ ಸಂಬಂಧಿ ಯಾವ ಶಂಕೆಯೂ ಬರುವದಿಲ್ಲ. ಆದರೆ **अचिंत्य** ವೆಂಬುದರ ವಿಷಯದಲ್ಲಿ ಹಾಗಿಲ್ಲ. ಆತ್ಮನ ಚಿಂತನ– ಮನನ ಸತತ ಮಾಡಲೇಬೇಕು. (**आत्मावाऽरे द्रष्टव्यो श्रोतव्यो निदिध्यासितव्यः**) ಇದು ಅಧ್ಯಾತ್ಮ ಮಾರ್ಗದೊಳಗಿನ ಅತ್ಯಂತ ರೂಢವಾದ ಪ್ರಾಘಾತವದೆ. ಹಾಗಾದರೆ ಇಲ್ಲಿ ಆತ್ಮನಿಗೆ ಅಚಿಂತ್ಯನೆಂದು ಹೇಗೆ ಹೇಳಿದರು ? ಇದಕ್ಕೆ ಉತ್ತರವೆಂದರೆ— **अचिंत्य** ವೆಂದರೆ ಇದರ ಅರ್ಥವು " ಪೂರ್ತಿಯಾಗಿ ಚಿಂತನ ಮಾಡಲಿಕ್ಕೆ ಬಾರದಿದ್ದ " ಎಂದು ಅಲ್ಲ. ಆದರೆ " ಕೇವಲ ಚಿಂತನೆಯಿಂದ ಯಾವನ ಸ್ವರೂಪವು ಪೂರ್ಣವಾಗಿ ತಿಳಿಯಲು ಶಕ್ಯವಾಗದ " ಎಂದು ಅದೆ ಶ್ರೀ ಖರೆಯವರ ಈ ಅರ್ಥವೇ ಯೋಗ್ಯವಾದುದು ಮಧ್ವಾಚಾರ್ಯರೂ ಈ ಅಭಿಪ್ರಾಯದವರೇ ಆಗಿದ್ದಾರೆ.

ಯಾಕೆಂದರೆ ಈ ಶ್ಲೋಕದಲ್ಲಿಯೇ **उच्यते** ಮತ್ತು **विदित्वा** ಇವುಗಳನ್ನು **अव्यक्त** ಮತ್ತು **अचिंत्य** ದೊಡನೆ ಭಗವಂತನು ಉಪಯೋಗಿಸಿದ್ದಾನೆ. ಇದರ ಮೇಲಿಂದ ದೇವರು ಜ್ಞೇಯ ಮತ್ತು ವಾಚ್ಯನಿದ್ದಾನೆಂದು ಗೊತ್ತಾಗುತ್ತದೆ. ಆದರೂ ಪೂರ್ಣವಾಗಿ ವಾಚ್ಯ ಮತ್ತು ಜ್ಞೇಯನಲ್ಲವೆಂಬುದು ನಿಶ್ಚಿತ. ಆದರೆ ಅವನು ಪೂರ್ತಿಯಾಗಿ ಅವಾಚ್ಯನೂ ಅಜ್ಞೇಯನೂ ಅಲ್ಲವಂಬುದೂ ಇದರಿಂದಲೇ ಸಿದ್ಧವಾಗುತ್ತದೆ. **ईक्षतेर्नाशब्दम्** ಎಂಬ ಸೂತ್ರದಲ್ಲಿ (ಬ್ರಹ್ಮಸೂತ್ರ) ಸಹ ಇದೇ ವಿಚಾರವನ್ನೇ ಚರ್ಚಿಸಿದ್ದಾರೆ.

ಆದುದರಿಂದ ಮಧ್ವಾಚಾರ್ಯರು ಈ ಮೂರು ವಿಶೇಷಣಗಳು ಪರಮಾತ್ಮನಿಗೇ ಅನ್ವಯಿಸುತ್ತವೆಂದು ಅಭಿಪ್ರಾಯಪಡುತ್ತಾರೆ. ಬ್ರಹ್ಮಸೂತ್ರದ ೩ ನೇ

ಅಧ್ಯಾಯದ ಎರಡನೆ ಪಾದದ ೨೩, ೨೪, ೨೫, ೨೬, ೨೭ ಸೂತ್ರಗಳಲ್ಲಿ ಈ ವಿಷಯವನ್ನೇ ಚರ್ಚಿಸುತ್ತಾರೆ. ಪರಮಾತ್ಮನು ಪೂರ್ಣವಾಗಿ ಅವ್ಯಕ್ತನಾಗಿರುತ್ತಾನೆ. ಆದುದರಿಂದ ನಮಗೆ ಪರಮಾತ್ಮನೇ ಪೂರ್ಣ ಆಧಾರವಾದುದರಿಂದ ನಾವು ಅವನನ್ನು ನೋಡಬೇಕೆಂದು ಅಪೇಕ್ಷಿಸಿದರೂ ಅವನು ನಮಗೆ ಪ್ರಕಟನಾಗುವದಿಲ್ಲ. ೨೪ ನೇ ಸೂತ್ರದಲ್ಲಿ ಆರಾಧನೆಯಲ್ಲಿ ಎಷ್ಟು ಸಂರಂಭವನ್ನು ಎಬ್ಬಿಸಿದರೂ ಅವನು ಅವ್ಯಕ್ತನಾಗಿಯೇ ಉಳಿಯುವನು. ೨೫ ನೇ ಸೂತ್ರದಲ್ಲಿ ಪರಮಾತ್ಮನು ಕಟ್ಟಿಗೆಯಿಂದ ಅಗ್ನಿಯನ್ನು ಕಡಿದರೆ ಉತ್ಪನ್ನವಾಗುವಂತೆ ಪ್ರಕಾಶಿತನಾಗುವದಿಲ್ಲವೆಂದು ಹೇಳುತ್ತಾರೆ ೨೬ ಮತ್ತು ೨೭ ರಲ್ಲಿ ಅವನು ನಮ್ಮ ಯಾವ ಪ್ರಯತ್ನದಿಂದಲೂ ಅಭಿವ್ಯಕ್ತನಾಗುವದಿಲ್ಲ ತನ್ನ ಇಚ್ಛೆಯಿಂದ ತಾನೇ ಭಕ್ತರನ್ನು ಉದ್ಧರಿಸಬೇಕೆಂದು ಅಭಿವ್ಯಕ್ತನಾಗುತ್ತಾನೆ ಬ್ರಹಸೂತ್ರಗಳಂತೆ ಗೀತೆಯು ಸಹ ಅವನು ಸರ್ವಗತನಿದ್ದರೂ ಅವ್ಯಕ್ತನಿದ್ದಾನೆಂದು ಸಾರುತ್ತದೆ.

ಮಧ್ವಾಚಾರ್ಯರು ತಾತ್ಪರ್ಯದಲ್ಲಿ ಪರಮಾತ್ಮನ ದೇಹ-ಗುಣಗಳ ವಿಷಯದಲ್ಲಿ ಹೆಚ್ಚಿನ ವಿಮರ್ಶೆಯನ್ನು ಮಾಡುತ್ತಾರೆ.— "ಜೀವನು ಸರ್ವಗತನಾದರೆ ಯಾಕೆ ಹಾಗೆ ಕಾಣಿಸಿಕೊಳ್ಳುವದಿಲ್ಲ ? ಎಂದರೆ ಅವನು ಅವ್ಯಕ್ತನಾಗಿದ್ದಾನೆ. ದೇಹವಿದ್ದರೆ ಅವ್ಯಕ್ತತ್ವ ಹೇಗೆ ಕೂಡುತ್ತದೆ ? ಎಂದರೆ ಅಚಿಂತ್ಯ ಶಕ್ತಿಯಿದ್ದ ಪ್ರಯುಕ್ತ ಆ ಅಚಿಂತ್ಯವಾದ ಶಕ್ತಿಯು ಯಾವಾಗಲೂ ವ್ಯತ್ಯಾಸ ಹೊಂದುವದಿಲ್ಲ. ಏಕೆಂದರೆ **अविकार्येत्वात्** ಅದು ವಿಕಾರವನ್ನು ಹೊಂದಲು ಯೋಗ್ಯವೇ ಅಲ್ಲ. **अव्यक्तोऽयं** ಇತ್ಯಾದಿ ಸ್ಥಳಗಳಲ್ಲಿ **अयं, अयं** ಎಂದು ಅನೇಕ ಸಾರೆ ಹೇಳಿರುವದು ಮೂಲ ರೂಪದಲ್ಲಿರುವ ಈ ಮೂರು ಗುಣಗಳು ಶ್ರೀಹರಿಯ ಎಲ್ಲ ಅವತಾರ ರೂಪಗಳಲ್ಲಿಯೂ ಇವೆ ಎಂದು ತಿಳಿಸುತ್ತಿವೆ ಹಾಗಾದರೆ ಜೀವನಿಗೆ ಹೆಚ್ಚು ರೂಪಗಳು ಇಲ್ಲವೆಂದರೆ ಎಲ್ಲ ಜೀವರಗಳಲ್ಲಿಯೂ ಈ ಮೂರು ಗುಣಗಳು ಸತ್ಯವಾಗಿವೆ ಎಂದು ಆ ರೀತಿಯಾಗಿ **अयं, अयं** ಎಂದು ಹೇಳಿದ್ದಾರೆ.

ಈ ಸಂದರ್ಭದಲ್ಲಿ ಭಗವಂತನ ದೇಹದ ವಿಷಯದಲ್ಲಿ ಅವಶ್ಯವಾಗಿ ತಿಳಿಯಬೇಕಾದ ಕೆಲವು ಸಂಗತಿಗಳನ್ನು ಹೇಳುತ್ತಾರೆ. "ಶ್ರೀಹರಿಯು ಭೇದ ಮೊದಲಾದ ದೋಷಗಳಿಲ್ಲದ ದೇಹವುಳ್ಳವನು; ಪುಣ್ಯಗಂಧವುಳ್ಳವನು; ಹೆಚ್ಚಿನ ಪ್ರಕಾಶವುಳ್ಳವನು" ಮೊದಲಾದ ವಿಷಯದಲ್ಲಿ ಪೈಂಗಿಶ್ರುತಿಯನ್ನು ಪ್ರಮಾಣವಾಗಿ ಉದಾಹರಿಸುತ್ತಾರೆ. ಪರಮಾತ್ಮನಿಗೆ ಇಂಥ ದೇಹವದೆ. ಆದರೆ ಪ್ರಾಕೃತ ದೇಹವಿಲ್ಲದ್ದರಿಂದ ವೇದಗಳಲ್ಲಿ ಅವನು **अदेहः** ಎಂದೂ ಹೇಳಿದ್ದಾರೆ. ಮತ್ತೊಂದಾಗಿ ತನ್ನಿಂದ ಭಿನ್ನವಾದ ಶರೀರವಿಲ್ಲದಿರುವದರಿಂದಲೂ ಅವನಿಗೆ **अदेहः** ಎಂದು ಹೇಳುತ್ತಾರೆ. ಶ್ರೀಹರಿಯುಸ್ವರೂಪ ಭೂತದೇಹವುಳ್ಳವನಾದುದರಿಂದ ಅವನು

ದೇಹವುಳ್ಳವನೆಂದು ಹೇಳಲ್ಪಡುತ್ತಾನೆ. ಮತ್ತೊಂದು ವಿಷಯ : ಪರಮಾತ್ಮನು ಆನಂದಾದಿ ಗುಣಸ್ವರೂಪಿಯಾದರೂ ವಿಶೇಷ ಬಲದಿಂದ ಗುಣವನ್ನು ಭೋಗಿಸುತ್ತಾನೆ. ಆ ವಿಶೇಷವೂ ಪರಮಾತ್ಮನ ಸ್ವರೂಪವೇ ! ಪರಮಾತ್ಮನು ಪರಮೈಶ್ವರ್ಯವುಳ್ಳವನಾದುದರಿಂದ ಎಲ್ಲ ವಿರೋಧಗಳೂ ಅವನಲ್ಲಿ ಸರಿಹೋಗುತ್ತವೆ. ಇನ್ನೂ ಭಗವದ್ರೂಪದ ವಿಷಯದಲ್ಲಿ ಬಹುಭಕ್ತಿಯಿಂದ ಆಚಾರ್ಯರು ತುಂಬ ಬರೆದುಕೊಂಡು ಹೋಗುತ್ತಾರೆ.

ಲೋ. ಟಿಳಕರು ಈ ವರ್ಣನೆಯು ನಿರ್ಗುಣ ಬ್ರಹ್ಮನದೆಂದೂ ಇದನ್ನು ಉಪನಿಷತ್ತಿನಿಂದ ತೆಗೆದುಕೊಂಡಿದ್ದಾರೆಂದೂ ಹೇಳುತ್ತಾರೆ. ಇದು ಸಗುಣ ಬ್ರಹ್ಮನ ವರ್ಣನೆಯಲ್ಲವೆಂದು ಹೇಳುತ್ತಾರೆ ಯಾಕೆಂದರೆ ಅವಿಕಾರ್ಯ ಮತ್ತು ಅವಿಚಿಂತ್ಯ ವಿಶೇಷಣಗಳು ಸಗುಣನಿಗೆ ಹತ್ತುವದಿಲ್ಲವಂತೆ. ಆತ್ಮದ ಸಂಬಂಧದಲ್ಲಿ ವೇದಾಂತ ಶಾಸ್ತ್ರದ ಕೊನೆಯ ಸಿದ್ಧಾಂತವೇ ಇದು, ಆದುದರಿಂದ ಇದನ್ನು ತಿಳಿದು, ಅರ್ಜುನ ! ನೀನು ಶೋಕಮಾಡುವ ಕಾರಣವಿಲ್ಲೆಂದು ಹೇಳುತ್ತಾರೆ. ಲೋ. ಟಿಳಕರು ಇಡೀ ಒಂದು ಪ್ರಕರಣವನ್ನೇ ಅದ್ವೈತ ಸಮರ್ಥನೆಗೆ ಬರೆದು ಅದರಲ್ಲಿ ನಿರ್ಗುಣದಿಂದ ಸಗುಣ ಪ್ರಪಂಚನಿರೂಪಣೆಯನ್ನು ಸಯುಕ್ತಿಕವಾಗಿ ಮಂಡಿಸಲಿಕ್ಕೆ ಎತ್ನಿಸಿದ್ದು ಜಲದಲ್ಲಿ ಹೋಮ ಮಾಡಿದಂತೆ ವ್ಯರ್ಥವಾಗಿದೆನ್ನುವದನ್ನು ಬೇರೆ ಕಡೆಗೆ (ಉಪನ್ಯಾಸ ಭಾಗದಲ್ಲಿ) ನೋಡಬಹುದು.

ಪ್ರಭುಪಾದರು—ತಮ್ಮ ಭಗವದ್ಗೀತಾ (asitis) ದಲ್ಲಿ "ಜೀವವು ಅಣುವಾಗಿದೆ. ಶ್ರುತಿಯೇ ಇದಕ್ಕೆ ಪ್ರಮಾಣ. ಇದನ್ನು ನಾವು ಒಪ್ಪಲೇಬೇಕು. ತಂದೆಯಾರೆಂಬುದನ್ನು ತಾಯಿಯಿಂದ ಮಾತ್ರ ತಿಳಿಯುವಂತೆ ಪರಮಾತ್ಮನ ವಿಷಯದಲ್ಲಿ ವೇದದಿಂದ ಮಾತ್ರ ನಮಗೆ ತಿಳುವಳಿಕೆ. ಜೀವನು ಚೈತನ್ಯನೂ ಅಹುದು; ಚೈತನ್ಯ ಉಳ್ಳವನೂ ಅಹುದು. ಅದಕ್ಕೂ ಶ್ರುತಿಯೇ ಪ್ರಮಾಣ. ಪರಮಾತ್ಮನು ಅನಂತನಾದರೆ (infinite) ಜೀವನು ಅಣು (infini Tsmal). ಆದುದರಿಂದ ಜೀವವು ನಿತ್ಯವಾದರೂ ಅದು ಅನಂತದ ಪಾಸಂಗಕ್ಕೆ ಹತ್ತದು" ಎಂದು ಹೇಳುತ್ತಾರೆ.

ಸ್ವಾಮಿ ಚಿದ್ಭವಾನಂದರು— ತಮ್ಮ ಭಗವದ್ಗೀತೆಯಲ್ಲಿ–"ಪೃಥ್ವಿ, ಅಪ್, ತೇಜ, ವಾಯು ಇವು ವ್ಯಕ್ತವಾಗಿರುವವು. ಆಕಾಶವು ಮಾತ್ರ ಅವಿಕಾರಿಯಾಗಿದೆ. ಈ ಆಕಾಶದಂತೆ ಆತ್ಮವು ಎಂದೂ ಬದಲಾಗುವದಿಲ್ಲ. ಆದರೆ ಆತ್ಮವು ಚೈತನ್ಯವಾದರೆ ಆಕಾಶವು ಅಚೇತನವಾಗಿದೆ. ಇದನ್ನು ಉಳಿದು ಇತರ ವಿಷಯದಲ್ಲಿ ಆತ್ಮವು ಆಕಾಶದಂತೆಯೇ ಇದೆ. ಎರಡೂ ನಿರಂಶಗಳು ಮತ್ತು ಅವಿಕಾರಿಯಾಗಿವೆ" ಎಂದು ಹೇಳಿರುತ್ತಾರೆ.

ಡಾ ರಾಧಾಕೃಷ್ಣನ್ನರು ಟಿಳಕರಿಗೆ ವಿರುದ್ಧವಾಗಿ ಹೇಳುತ್ತಾರೆ— "Right through it is the Purusha of the Sankhya that is described here, not the Brahman of the upanishads The Purusha is beyond the range of form and thought and the changes that affect mind, life, and body do not touch him Even when it is applied to the Supreme self, which is one in all, it is the unthinkable (अचिंत्य) and immutable (अविकार्य) Self that is meant Arjuna's grief is misplaced, as the self cannot be hurt or Slain Forms may change, things may come and go, but that which remains behind them all is for ever")

"ಇದರ ತುಂಬೆಲ್ಲ ಇಲ್ಲಿ ವರ್ಣಿತವಾದುದು ಸಾಂಖ್ಯರ ಪುರುಷನು, ಉಪನಿಷತ್ತುಗಳ ಬ್ರಹ್ಮನಲ್ಲ. ಪುರುಷನು ಆಕಾರದಿಂದ ದೂರನು, ಆಲೋಚನೆಯಿಂದ ಅಗಮ್ಯನು ಮನಸು, ಜೀವನ, ದೇಹಗಳಿಗೆ ಬರುವ ವಿಕಾರಗಳು ಅವನನ್ನು ಮುಟ್ಟುವದಿಲ್ಲ ಪರಮಾತ್ಮನಿಗೆ (ಎಲ್ಲರಲ್ಲಿಯೂ ಒಬ್ಬನೇ) ಇವುಗಳನ್ನು ಹಚ್ಚಿದರೂ ಸಹ ಅದು ಅಚಿಂತ್ಯ ಮತ್ತು ಅವಿಕಾರ್ಯವಾದ ಆತ್ಮವು, ಅರ್ಜುನನು ಶೋಕ ಮಾಡಬಾರದವರಿಗಾಗಿ ಶೋಕಿಸುತ್ತಾನೆ ಯಾಕೆಂದರ ಆತ್ಮನಿಗೆ ಗಾಯ ಮಾಡಲಿಕ್ಕೆ ಬರುವದಿಲ್ಲ ಆಕಾರಗಳು ವಿಕಾರ ಹೊಂದಬಹುದು. ಪದಾರ್ಥಗಳು ಹೋಗಬಹುದು, ಬರಬಹುದು ಆದರೆ ಹಿಂದೆ ಉಳಿಯುವದು ಮಾತ್ರ ನಿತ್ಯವಾಗಿದೆ" *

अथचैनं नित्यजातं नित्यंवामन्यसे मृतम् ।
तथापित्वं महाबाहो नैनं शोचितुमर्हसि ॥ २६ ॥

ಮತ್ತು ಒಂದು ವೇಳೆ ಮಹಾಬಲಿಷ್ಠನಾದ ಅರ್ಜುನನೇ ! ನೀನು ಈ ಜೀವನನ್ನು ಯಾವಾಗಲೂ ದೇಹಸಂಬಂಧರೂಪವಾದ ಜನನವುಳ್ಳವನೆಂದೂ ಮತ್ತು ಯಾವಾಗಲೂ ದೇಹವಿಯೋಗರೂಪವಾದ ಮರಣವುಳ್ಳವನೆಂದೂ ಭಾವಿಸಿದರೂ ಜೀವನನ್ನು ಕುರಿತು ದುಃಖಪಡಲಿಕ್ಕೆ ಅರ್ಹನಲ್ಲ (ಶೋಕಿಸಬಾರದು) ॥ ೨೬ ॥

---

* ಸಾಂಖ್ಯರ ಕಾರಿಕೆಯೊಡನೆ ಹೋಲಿಸಬಹುದು.

मूलप्रकृतिर्न विकृतिः महदाद्याः प्रकृतिविकृतयः सप्त
षोडशकस्तु विकारो न प्रकृतिः न विकृतिः पुरुषः ॥

**ವಿಶೇಷ ಟಿಪ್ಪಣಿಗಳು :**

ತಾತ್ವಿಕ ದೃಷ್ಟಿಯಿಂದ ಜೀವನು ನಿತ್ಯನಾದುದರಿಂದ ಯುದ್ಧದಲ್ಲಿ ಆತ್ಮನಾಶ ವಾಗದಿದ್ದರೂ ದೇಹನಾಶವಾಗುವದನ್ನು ನಾವು ನೋಡುತ್ತೇವೆಂದು ಅರ್ಜುನನು ಶಂಕಿಸಿದರೆ ಅದಕ್ಕೆ ಉತ್ತರ ಇಲ್ಲಿದೆ ಶ್ರೀ ಕೃಷ್ಣನು ಒಂದು ಬೇರೆ ವಾದ ಸರಣಿಯನ್ನೇ ಇಲ್ಲಿ ಅನುಸರಿಸುತ್ತಾನೆ. ಶ್ರೀರಾಘವೇಂದ್ರರು ಅತ್ಯಂತ ಸಂಕ್ಷಿಪ್ತವಾದ ಅವತರಣಿಕೆಯನ್ನು ಕೊಡುತ್ತಾರೆ (ಆಚಾರ್ಯರೂ ಅದೇ ಅವತರ ಣಿಕೆಯನ್ನು ಭಾಷ್ಯದಲ್ಲಿ ಕೊಡುತ್ತಾರೆ) **अस्त्वेवमात्मनो नित्यत्वंअथापि देहयोगवियोग जनिमृतीशतः एव । युद्धेचमृतिः नियता । अतः तन्निमित्तंदुःखं)** ಆತ್ಮನು ನಿತ್ಯನಾಗಿದ್ದರೂ ಕೂಡ ದೇಹಯೋಗರೂಪ ಜನನವೂ ದೇಹವಿಯೋಗ ರೂಪ ಮರಣವೂ ಇದ್ದೇ ಇವೆ ಯುದ್ಧದಲ್ಲಿ ದೇಹನಾಶವು ಆಗುವದರಿಂದ ನನಗೆ ದುಃಖವೆಂದು ಅರ್ಜುನನು ಹೇಳಿದರೆ, ಅದಕ್ಕೆ ಭಗವಂತನು ಉತ್ತರ ಕೊಡುತ್ತಾನೆ ಜನನ–ಮರಣಗಳು ಅಪರಿಹಾರ್ಯವಾದುದರಿಂದ ಆ ವಿಷಯದಲ್ಲಿ ಶೋಕಿಸಿದರೆ ಆಗುವದೇನು ? ಎಂದು

**अथच** ಇದರ ಅರ್ಥದ ವಿಷಯದಲ್ಲಿ ವಿವಾದಕ್ಕೆ ಆಸ್ಪದ ದೊರೆತಿದೆ. ಶಂಕರಾಚಾರ್ಯರು **अथचेत्यभ्युपगमार्थ** ಎಂದು ಹೇಳಿ ಭಗವಂತನು ಇಷ್ಟರ ವರೆಗೆ ಆತ್ಮನು ನಿತ್ಯನೆಂದು ಹೇಳಿ ಅರ್ಜುನನಿಗೆ ಶೋಕಮಾಡಬಾರದೆಂದು ಹೇಳಿದ್ದಾಯಿತು ಈಗ ಅದಕ್ಕೆ ವಿಪರೀತವಾಗಿ ಆತ್ಮನು ಅನಿತ್ಯನೆಂದು ಭಾವಿಸಿದರೂ ಅರ್ಜುನನು ಶೋಕ ಮಾಡುವ ಕಾರಣವಿಲ್ಲವೆಂದು ಹೇಳುತ್ತಾರೆ. ಶಂಕರಾನಂದರೂ ಮಧುಸೂದನ ನರಸ್ವತಿಯವರೂ ಈ ಅಭಿಪ್ರಾಯವನ್ನೆತ್ತಿ ಹಿಡಿಯಲಿಕ್ಕೆ ಅದನ್ನೇ ವಿಸ್ತಾರಗೊಳಿಸಿ ಬರೆದಿದ್ದಾರೆ ಅರ್ಜುನನಿಗೆ ಇಷ್ಟು ಎತ್ತರದ ವೇದಾಂತತತ್ವವು ಹಿಡಿಸದ್ದರಿಂದ ಭಗವಂತನು ಕೆಳಗೆ ಬರಲಿಕ್ಕೆ ಸಿದ್ಧನಾದನೆಂದು ಇವರಿಬ್ಬರೂ ಹೇಳುತ್ತಾರೆ. ೧) ಬೌದ್ಧರು ಆತ್ಮನು ಕ್ಷಣಿಕನೆಂದು ಹೇಳುತ್ತಾರೆ, ೨) ಚಾರ್ವಾಕನು ದೇಹಾತಿರಿಕ್ತ ಆತ್ಮನು ಇಲ್ಲ ವೆಂದು ಹೇಳುತ್ತಾನೆ. ೩) ಉಳಿದವರು "ಆತ್ಮನು ದೇಹದಗೂಡ ಹುಟ್ಟುತ್ತಾನೆ ಮತ್ತು ಸಾಯುತ್ತಾನೆ. ೪) ಆತ್ಮನು ಕಲ್ಪದಿಂದ ಕಲ್ಪಕ್ಕೆ ತಾಳಿದರೂ ಮಹಾ ಪ್ರಳಯದಲ್ಲಿ ಲಯಹೊಂದುತ್ತಾನೆ. ೫) ಆತ್ಮವು ನಿತ್ಯವಾದರೂ ದೇಹಯೋಗ ವಿಯೋಗರೂಪ ಜನಿಮೃತಿಗಳನ್ನು ಹೊಂದುತ್ತದೆಂದು ತಾರ್ಕಿಕರು ಕಲ್ಪಿಸುತ್ತಾರೆ. ಶ್ರೀಧರ ಮತ್ತು ಶಂಕರಾನಂದರು ಈ ಶ್ಲೋಕದಲ್ಲಿ ಭಗವಂತನು ೩ನೇದನ್ನು ಒಪ್ಪಿ ಕೊಳ್ಳುತ್ತಾನೆಂದು ಹೇಳುತ್ತಾರೆ (ಆತ್ಮನು ದೇಹದೊಡನೆ ಸಾಯುತ್ತಾನೆ ಹುಟ್ಟುತ್ತಾನೆ). ರಾಮಾನುಜರು ಚಾರ್ವಾಕರ ಮತವನ್ನು ಕೃಷ್ಣನು ತಕ್ಕಮಟ್ಟಿಗೆ

ಒಪ್ಪಿಕೊಳ್ಳುತ್ತಾನೆಂದು ಹೇಳುತ್ತಾರೆ ನೀಲಕಂಠರನು ೧-೨ ಮತ್ತು ೫ನ್ನು ಒಪ್ಪಿ ಕೊಳ್ಳುತ್ತಾನೆ. ಮಧುಸೂದನರು ಶ್ರೀ ಕೃಷ್ಣನು ಇಲ್ಲಿ ಮೇಲೆ ನಮೂದಿಸಿದ ೫ನ್ನೂ ಒಪ್ಪಿಕೊಳ್ಳುತ್ತಾನೆಂದು ಹೇಳುತ್ತಾರೆ ಮತ್ತು ಅರ್ಜುನನ ದುಃಖಕ್ಕೆ ಉತ್ತರ ಕೊಡಬಯಸುತ್ತಾನೆ. ಮಧುಸೂದನರು **महाबाहो** ಎಂಬ ಸಂಭೋಧನೆ ಯಲ್ಲಿ ಅರ್ಜುನನ ಮೂರ್ಖತನಕ್ಕೆ ಬೈಗಳನ್ನು ಸೇರಿಸಿರುತ್ತಾರೆ.

ಇದೆಲ್ಲ ಒತ್ತಾಯದಿಂದ ಅರ್ಥೈಸುವದು ಇದರಿಂದ ಅರ್ಜುನನು ಧಡ್ಡ ನೆಂದೂ ಅಥವಾ ಭಗವಂತನ ಅನುಗ್ರಹಕ್ಕೆ ಅಪಾತ್ರನೆಂದೂ ಗೊತ್ತಾಗುವದು. ಈ ತರಹದ ಕಲ್ಪನೆಗೆ ಆಧಾರವೇ ಇಲ್ಲ ! ಶಂಕರಾನಂದರು ಅನುಗ್ರಹ ಅಥವಾ ಪ್ರಸಾದ ವನ್ನು ವಾದದಲ್ಲಿ ಜಗ್ಗಿ ತಂದು ಅದರ ಅಭಾವವು ಅರ್ಜುನನಿಗೆ ಇದೆ ಎಂದು ವಾದಿಸುತ್ತಾರೆ. ಬ್ರಹ್ಮನು ನಿರ್ಗುಣನು, ನಿರಾಕಾರನು, ನಿಷ್ಕ್ರಿಯನು. ಆದುದರಿಂದ ಅವನು ಎಂದೂ ಅನುಗ್ರಹಿಸಲಾರನು. ಇನ್ನು ಸಗುಣ ಬ್ರಹ್ಮನು ಮಾತ್ರ (ಎಂದರೆ ಶ್ರೀಕೃಷ್ಣನು) ಅನುಗ್ರಹಿಸಬಲ್ಲನು ಎಂದ ಮೇಲೆ ಅವನೇಕೆ ತನ್ನ ಶಿಷ್ಯನಿಗೆ ಅನುಗ್ರಹಿಸುವದಿಲ್ಲ ? ಇದು ತಿಳಿಯದ ಮಾತು. ಮತ್ತು ಈ ಟಿಪ್ಪಣಿಕಾರರು 'ಶ್ರೀ ಕೃಷ್ಣನು ಇದಕ್ಕೆ ಒಪ್ಪಿದನು ಎಂದು ಏಕೆ ಹೇಳಬೇಕಾಯಿತು ? ಮತ್ತು ಕೃಷ್ಣನನ್ನು ನಾಸ್ತಿಕವಾದಕ್ಕೆ ಯಾಕೆ ತಳ್ಳಬೇಕಾ ಯಿತು ? ಅದಕ್ಕೆ **अथच** ಇಷ್ಟೇ ಶಬ್ದಗಳು ಯಾಕೆ ನಮ್ಮನ್ನು ಇಂಥ ಆಳವಾದ ತಗ್ಗಿನಲ್ಲಿ ನೂಕಬೇಕಾಗುವದು ? ಇವುಗಳಿಗೆ ಬೇರೆ ಅರ್ಥವನ್ನು ಹಚ್ಚಬಹುದು.

ಇನ್ನೊಂದು ಮಾತು. ೨೭ ಮತ್ತು ೨೮ ನೇ ಶ್ಲೋಕಗಳಲ್ಲಿ ಹೊರಟ ಹೊಸ ವಿಚಾರವು ಈ ಶ್ಲೋಕದಲ್ಲಿ ನಾಸ್ತಿಕವಾದವನ್ನು ಪ್ರಸ್ತಾಪಿಸಬೇಕಾಗುತ್ತದೆಂಬ ವಾದವೂ ಸರಿಯಿಲ್ಲ. ಯಾಕೆಂದರೆ ೨೭, ೨೮ ರಲ್ಲಿ ಈ ನಾಸ್ತಿಕವಾದಕ್ಕೆ ಅನುಕೂಲವಿಲ್ಲ; ಇಷ್ಟೇ ಇಲ್ಲ; ಆದರೆ ಇದಕ್ಕೆ ತೀರ ವಿರುದ್ಧವಾಗಿದೆ. ಅವೆರಡೂ ಶ್ಲೋಕಗಳು ಆತ್ಮನ ಸಾವಿಗೆ ವಿರೋಧ ತೋರಿಸುವವು. C. M. ಪದ್ಮನಾಭಾ ಚಾರ್ಯರು ಈ ವಿಷಯದಲ್ಲಿ ಹೀಗೆ ಬರೆಯುತ್ತಾರೆ— If souls are transient and momentary, as Vijnana Vadins say, if the soul is no other than the body, as Charwaka materialists hold or if thongh distinct, they are born and die together, the teaching in the next verse that "he who is dead is bound to be born" is ulterly meaningless. So also is varse no 28 which says that every soul is un manifest in the beginning, malnfest in the middle, and unmanifest at the end. These lessons are based on the footing that the soul is an enduring entity,

born and dead ad infinitum in respect of material frames'', 'ವಿಜ್ಞಾನವಾದಿಯು ಹೇಳುವ ಹಾಗೆ ಆತ್ಮನು ನಶ್ವರನೂ ಕ್ಷಣಿಕನೂ ಇದ್ದರೆ, ಚಾರ್ವಾಕನು ಹೇಳುವಂತೆ ಆತ್ಮವು ದೇಹಾತಿರಿಕ್ತವಲ್ಲದಿದ್ದರೆ ಅಥವಾ ಆತ್ಮನು ದೇಹದಿಂದ ಭಿನ್ನನಾದರೂ ಅವೆರಡೂ ಕೂಡೇ ಹುಟ್ಟುತ್ತವೆ, ಕೂಡೇ ಸಾಯುತ್ತವೆ ಯೆಂದಾದರೆ, ಮುಂದಿನ ಶ್ಲೋಕಗಳಲ್ಲಿ "ಸತ್ತವನು ಹುಟ್ಟಲೇ ಬೇಕೆಂಬ" ಮಾತಿಗೆ ಅರ್ಥವಿಲ್ಲದಾಗುತ್ತದೆ. ಹಾಗೆ ೨೮ನೇ ಶ್ಲೋಕದಲ್ಲಿ– "ಪ್ರತಿಯೊಂದು ಆತ್ಮವು ಪ್ರಾರಂಭದಲ್ಲಿ ಅವ್ಯಕ್ತವಾಗಿಯೂ ಮಧ್ಯದಲ್ಲಿ ವ್ಯಕ್ತವಾಗಿಯೂ ಮತ್ತೆ ಕೊನೆಗೆ ಅವ್ಯಕ್ತವಾಗುತ್ತದೆ." ಈ ಎಲ್ಲ ಪಾಠಗಳು, ಆತ್ಮನು ಅಮರನು ನಿತ್ಯನು ಎಂಬುದರ ಸತ್ಯತೆಯ ಮೇಲೆ ಆವಲಂಬಿಸಿರುತ್ತದೆ; ಕೇವಲ ಅದರ ಪ್ರಾಕೃತ ದೇಹ ಮಾತ್ರ ಕೊನೆಯವರೆಗೂ ಹುಟ್ಟುತ್ತದೆ ಮತ್ತು ಸಾಯುತ್ತದೆ.

ಈಗ ಇದರಿಂದ ಎರಡು ಅನುಪ್ರಮೇಯಗಳು ಹೊರಡುತ್ತವೆ. ೧) ಅರ್ಜುನ ನಿಗೆ ಭಗವಂತನು ಉಪದೇಶ ಮಾಡಿದ್ದು ತಿಳಿಯಲಿಲ್ಲ; ಅಥವಾ ೨) ಅವನು ಹೇಳಿದ್ದನ್ನು ತಿಳಿಕೊಂಡು ತನಗೆ ಬಂದ ಹೊಸ ಆಕ್ಷೇಪಗಳನ್ನು ಮುಂದಿಡುತ್ತಾನೆ. ಆದರೆ ತಾತ್ಪರ್ಯ ತಿಳಿಸತಕ್ಕ ಎಲ್ಲ ನಿಯಮಗಳನ್ನು ಯೋಚಿಸಿದರೆ ಎರಡನೇ ಪಕ್ಷವೇ ಸರಿಯೆಂದು ಗೊತ್ತಾಗುತ್ತದೆ. ಇದನ್ನೇ ಮಧ್ವಾಚಾರ್ಯರು ಹೇಳುತ್ತಾರೆ. "ಆತ್ಮನು ನಿತ್ಯ; ಆದರೂ ದೇಹಯೋಗ, ವಿಯೋಗರೂಪ–ಜನನ–ಮರಣಗಳು ಬರುವದರಿಂದ ಅರ್ಜುನನು ಶೋಕಿಸುತ್ತಾನೆ. ಜಯತೀರ್ಥರು ತಮ್ಮ ಪ್ರದೀಪಿಕೆ ಯಲ್ಲಿ **आत्मनोऽनित्यत्वं अभ्युपगम्य इदमुच्यते इति मायावादिनो व्याख्यानं निरस्तं भवति । ध्रुवंजन्ममृतस्यच इति उत्तरवाक्य विरोधात् । अव्यक्तादीनि इत्यपि विरोधात् ।** 'ಸತ್ತವರು ಮತ್ತೆ ಹುಟ್ಟಲೇಬೇಕು' ಎಂಬ ಕೃಷ್ಣನ ಮಾತು ಹಿಂದಿನ ನಾಸ್ತಿಕವಾದಕ್ಕೆ ಹೊಂದುವ ದಿಲ್ಲ. ನಾಸ್ತಿಕರು ಆತ್ಮವು ದೇಹದೊಡನೆ ನಾಶವಾಗುತ್ತದೆ. ಮುಂದೆ ಉಳಿಯುವ ದಿಲ್ಲವೆಂದು ಹೇಳುತ್ತಾರೆ. ಕೃಷ್ಣನು ಈ ಮಾತನ್ನು ಒಪ್ಪಿದ್ದರೆ ೨೭ರಲ್ಲಿ ಸತ್ತವರು ಹುಟ್ಟಲೇಬೇಕೆಂದು ಹೇಳಲಿಕ್ಕೆ ಶಕ್ಯವಿಲ್ಲ. ಶಂಕರಾಚಾರ್ಯರ ಶಿಷ್ಯರು ಈ ಮಾತಿನ ಬಲವನ್ನು ಅರಿತು ತಮ್ಮ ಗುರುಗಳನ್ನು ಪೂರ್ತಿ ವಿರೋಧಿಸುವದಕ್ಕಿಂತ ಇದನ್ನು ಕಲ್ಪಾಂತರವೆಂದು ಕಲ್ಪಿಸಿ, ಕೃಷ್ಣನ ಮನಸಿನಲ್ಲಿ ಅದೂ ಇತ್ತು ಇದೂ ಇತ್ತು ಎಂದು ವಾದಿಸಿದ್ದಾರೆ.

ಇಲ್ಲಿ ಸಲ್ಪ ಪಾಠಾಂತರವದೆ: **नैनं** ಇದ್ದುದನ್ನು **नैवं** ಎಂದು ಓದುತ್ತಾರೆ. **नैवं** ದಲ್ಲಿ **एवं** ಇದನ್ನು ಬಹುವಾಗಿ ಹಿಂಜಿದ್ದಾರೆ. ರಾಘವೇಂದ್ರತೀರ್ಥರು ವಿವೃತಿಯಲ್ಲಿ **नैवं** ಎಂದೇ ಪಾಠವನ್ನು ಸ್ವೀಕರಿಸಿದ್ದಾರೆ. **एवं** ಎಂದು ಪಾಠವನ್ನು

ಸ್ವೀಕರಿಸಿದವರ ಅಭಿಪ್ರಾಯದಂತೆ 'ಅರ್ಜುನ ! ನೀನು ತೋರಿಸಿದಷ್ಟು ಶೋಕ ವನ್ನು ತೋರಿಸಬಾರದು ಧನುರ್ಬಾಣಗಳನ್ನು ಕೆಳಗೆ ಚೆಲ್ಲಿದಿ, ರಥದೊಳಗೆ ಕುಸಿದು ಬಿದ್ದಿ ವಿಪರೀತವಾಗಿ ಶೋಕಿಸಿದಿ **ಏತ** ಇಷ್ಟು ಅಳುವದು ಒಳ್ಳೇದಲ್ಲ. ಅಲ್ಲಸ್ವಲ್ಪ ಶೋಕಿಸಬಹುದೆಂದು ಕೃಷ್ಣನ ತಾತ್ಪರ್ಯವೆಂದು ಹೇಳುತ್ತಾರೆ

ಒಂದು ಮಿತಿಯಲ್ಲಿ ಅಳಬಹುದೆಂದು ಯಾವ ಶ್ಲೋಕದಲ್ಲಿ ಕೃಷ್ಣನು ಶೋಕಕ್ಕೆ ಮಿತಿ ಹಾಕಿದ್ದಾನೆ ಎನ್ನುವದು ನಿಶ್ಚಿತವಿಲ್ಲ. ಆದರೆ ೨೬, ೨೭, ೨೮ರಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಶೋಕ ಮಾಡಬಾರದೆನ್ನುವದಕ್ಕ ಕಾರಣಗಳನ್ನು ತೋರಿಸಿದ್ದಾನೆ. ಅಷ್ಟು ಇಷ್ಟು ಇಲ್ಲ; ಪೂರ್ತಿಯಾಗಿ ಶೋಕವನ್ನು ಪರಿಹರಿಸಬೇಕೆಂಬುದೇ ಕೃಷ್ಣನ ತಾತ್ಪರ್ಯ, ಆದುದರಿಂದ ಈ ಪಾಠಾಂತರದ ಪ್ರಯೋಜನವನ್ನೇನೂ ನಾವು ಕಾಣು ವದಿಲ್ಲ **ಏತ** ಎನ್ನುವದು ಅರ್ಜುನನ ಇಡೀ ಶೋಕವನ್ನೇ ವಿಷಯೀಕರಿಸಿ ಅದನ್ನು ಮಾಡಬಾರದೆಂದು ನಿಷೇಧಿಸುತ್ತದೆ.

ಪ್ರಭುಪಾದರು ಈ ಶ್ಲೋಕದಲ್ಲಿ ಒಂದು ವಿಚಿತ್ರವಾದ ನಾಸ್ತಿಕ ವಾದವನ್ನು ಪ್ರಸ್ತಾಪಿಸುತ್ತಾರೆ ಈ ನಾಸ್ತಿಕ ವಾದಿಗಳ ಮತದಲ್ಲಿ ಮಾನವ ದೇಹವು ಭೌತ ವಾದ ಮೂಲ ಪದಾರ್ಥಗಳ ಮಿಲನದಿಂದ ಉತ್ಪನ್ನವಾಗುತ್ತದೆಂದು ಹೇಳುತ್ತಾರೆ. ಆಮೇಲೆ ಈ ಭೌತವಸ್ತುಗಳ ಮತ್ತು ರಾಸಾಯನಿಕಗಳ ಮಿಥಃಪರಿಣಾಮಗಳಿಂದ ಒಂದು ಸ್ಥಿತಿಯಲ್ಲಿ ಜೀವ ಚಿನ್ಹಗಳು ಉತ್ಪನ್ನವಾಗುತ್ತವೆ ಇಂಥದೇ ಇನ್ನೊಂದು ಪರಿಪಕ್ವ ಸ್ಥಿತಿಯಲ್ಲಿ ಆತ್ಮವು ಉತ್ಪನ್ನವಾಗಬಹುದು. ಈಗಿನ ಮಾನವ ವಿಜ್ಞಾನ ಗಳ ತತ್ವಜ್ಞಾನ ಇದೇ ಮಾದರಿಯದು. ಈಗಿನ ಮಾನವ ಶಾಸ್ತ್ರವು ಇಂಥ ಭೌತ ತತ್ವಜ್ಞಾನದ ಬುಡಕಟ್ಟನ್ನು ಹೊಂದಿದೆ. ಕೆಲವು ಹೊಸ ಹೊಸ ಧರ್ಮಗಳು ಅಮೇರಿಕಾದಲ್ಲಿ ತಲೆಯೆತ್ತಿವೆ. ಅವೆಲ್ಲ ಈ ತರಹದ ತತ್ವಜ್ಞಾನದ ಮೇಲೆ ಭೌದ್ಧರ ಶೂನ್ಯವಾದ ಇಲ್ಲವೆ ಭಕ್ತಿರಹಿತವಾದ ವಾದವನ್ನೇ ಅನುಸರಿಸುತ್ತಿವೆ. ಅರ್ಜುನನೂ ಇವರಂತ ಆತ್ಮನ ಅಸ್ತಿತ್ವದಲ್ಲಿ ವಿಶ್ವಾಸವಿಡದಿದ್ದರೂ ಶೋಕಕ್ಕೆ ಕಾರಣವಿಲ್ಲೆಂದು ಇವರ ಅಭಿಪ್ರಾಯ. ಆದರೆ ಅರ್ಜುನನು ಹೀಗೆ ನಾಸ್ತಿಕ ವಾದದ ಕಡೆಗೆ ಒಲಿದರೆ ಅಥವಾ ಒಲಿಯ ಬಹುದೆಂದು ಕೃಷ್ಣನು ಭಾವಿಸಿದ್ದರೆ ಮತ್ತು ಆ ನಾಸ್ತಿಕ ವಾದದ ತಳಪಾಯೆಯ ಮೇಲೆ ಅವನಿಗೆ ಸಮಾಧಾನ ಹೇಳಲಿಕ್ಕೆ ಭಗವಂತನು ಹೊರಟಿದ್ದರೆ ಅವರಿಗೆ **ಧ್ರುವಂಜನ್ಮಮೃತಸ್ಯಚ** ಎಂಬ ಜಯತೀರ್ಥರ ಆಕ್ಷೇಪವು ಬಹು ಖಾರವಾಗು ತ್ತದೆ ಆದುದರಿಂದ ಈ ಕಲ್ಪನೆಗೆ ಎಳ್ಳಷ್ಟೂ ಆಧಾರವಿಲ್ಲೆಂದು ತೋರುತ್ತದೆ. ಕೊನೆಗೆ ಪ್ರಭುಪಾದರು ಅರ್ಜುನನು ಕ್ಷತ್ರಿಯನಾದುದರಿಂದ ಅವನು ವೈದಿಕ ಮತ ವನ್ನು ಬಿಡಲಾರನು ಎಂದು ಸಷ್ಟವಾಗಿ ಹೇಳಿದ್ದಾರೆ.

**जातस्यहिध्रुवोमृत्युः ध्रुवंजन्ममृतस्यच ।**
**तस्मादपरिहार्येर्थे न त्व शोचितुमर्हसि ॥ २७ ॥**

ಹುಟ್ಟಿದವನಿಗೆ ಮರಣವು ನಿಶ್ಚಿತವಾದುದು ಮತ್ತು (ಅಪರೋಕ್ಷ ಜ್ಞಾನವನ್ನು ಹೊಂದದೆ) ಮರಣ ಹೊಂದಿದವರಿಗೆ ಜನನವು ನಿಶ್ಚಿತವಾದುದು. ಆದುದರಿಂದ ಪರಿಹರಿಸುವದಕ್ಕೆ ಅಶಕ್ಯವಾದ ಮರಣದ ವಿಷಯದಲ್ಲಿ ನೀನು ದುಃಖಿಸುವದು ಬೇಡ ॥ ೨೭ ॥

**ವಿಶೇಷ ಟಿಪ್ಪಣಿಗಳು :**

ಯುದ್ಧದಲ್ಲಿ ಭೀಷ್ಮಾದಿಗಳು ಸಾಯುತ್ತಿದ್ದರೂ ಯಾಕೆ ಶೋಕಿಸಬಾರದೆಂಬ ಅರ್ಜುನನ ಆಕ್ಷೇಪಕ್ಕೆ ಇದು ಉತ್ತರ ಜನನ–ಮರಣಗಳು ಈ ಜಗತ್ತಿನಲ್ಲಿ ಅನಿವಾರ್ಯ ಸಂಗತಿಗಳು. ತಪ್ಪಿಸಲಿಕ್ಕೆ ಬರುವಂಥ ಸಂಗತಿಗಳ ಸಲುವಾಗಿ ಶೋಕಿಸಬಹುದು. ಎಲ್ಲಿ ಹೋದರೂ ತಪ್ಪದಿದ್ದ ಮರಣದಂಥ ಸಂಗತಿಗಳ ಸಲುವಾಗಿ ಅಳುವದೇಕೆ ? ಇದು ನಿಸರ್ಗದ ನಿಯಮ ಇದಕ್ಕಾಗಿ ಯಾರೂ ಅಳಬಾರದು ಮೇಲಿನಿಂದ ಕಲ್ಲು ಕೆಳಗೆ ಬೀಳುವದೆಂದು ಯಾರಾದರೂ ಅಳುತ್ತಾರೆಯೇ ? ನೀರು ಕೆಳಕ್ಕೆ ಹರಿಯುತ್ತದೆಂದು ಅಳುತ್ತಾರೆಯೇ ? ಇವು ಹೇಗೆ ನಿಸರ್ಗದನಿಯಮಗಳೋ ಹಾಗೆಯೇ ಸಾಯುವದೂ ನಿಸರ್ಗದ ನಿಯಮ ಆದನ್ನು ತಪ್ಪಿಸಲಕ್ಕೆ ಸಾಧ್ಯವಿಲ್ಲ. ಆದುದರಿಂದ ಶೋಕಿಸುವದು ಬೇಡ.

ಶಂಕರಾಚಾರ್ಯರು ಹಿಂದಿನ ಶ್ಲೋಕದಲ್ಲಿ ಆತ್ಮನು ಮರ್ತ್ಯನಿದ್ದರೂ ಶೋಕಿಸುವದು ಬೇಡವೆಂದು ಉಪದೇಶಿಸುತ್ತಾನೆಂದು ಪ್ರಾರಂಭಿಸಿ ಮುಂದಿನ ಶ್ಲೋಕಧಲ್ಲಿ " ಸತ್ತವನು ಹುಟ್ಟುತ್ತಾನೆಂದು " ಹೇಳಲಿಕ್ಕೆ ಹೊರಟಿದ್ದಾರೆ. ಮಧುಸೂದನ ಸರಸ್ವತಿಯವರು ಅವರನ್ನು ಬಿಟ್ಟಿದ್ದಾರೆ. ಯಾಕೆಂದರೆ ಅವರ ಕೊನೆಯ ಅಭಿಪ್ರಾಯದಲ್ಲಿ ಆತ್ಮನು ನಶ್ವರನೆಂಬ ಅಭಿಪ್ರಾಯವನ್ನು ಬಿಟ್ಟಿದ್ದಾರೆ.

ಹುಟ್ಟಿದವನು ಸಾಯುತ್ತಾನೆಂದು ಆಸ್ತಿಕರೂ ನಾಸ್ತಿಕರೂ ಕೂಡಿಯೇ ಹೇಳಬಹುದು. ಆದರೆ ಸತ್ತವನು ಹುಟ್ಟುತ್ತಾನೆಂಬ ಮಾತನ್ನು ನಾಸ್ತಿಕನು ಒಪ್ಪುವದಿಲ್ಲ. ಈ ಅಂಶವನ್ನು ಬಹಳ ಜನ ಆಧುನಿಕರು ಲಕ್ಷ್ಯಕ್ಕೆ ತಂದಿಲ್ಲ. ಈ ಎರಡನೇ ನುಡಿಯಲ್ಲಿ ದೇವರಲ್ಲಿ ವಿಶ್ವಾಸ, ಆತ್ಮದ ನಿತ್ಯತ್ವದಲ್ಲಿ ವಿಶ್ವಾಸ; ಆತ್ಮನಿಗೆ ಜನ್ಮಾಂತರವಿದೆಯನ್ನುವದರಲ್ಲಿ ವಿಶ್ವಾಸ– ಈ ವಿಶ್ವಾಸವಿದ್ದವರೇ ಸತ್ತವನು ತಿರುಗಿ ಹುಟ್ಟುತ್ತಾರೆಂದು ಹೇಳುತ್ತಾರೆ. ಈ ಮಾತು ಲಕ್ಷ್ಯಕ್ಕೆ ಬಾರದೇ ಗಡಿಬಿಡಿಯಲ್ಲಿ ' ಹುಟ್ಟಿದವನು ಸಾಯುವಂತೆ, ಸತ್ತವನು ಹುಟ್ಟುತ್ತಾರೆಂದು ಹೇಳಿ ಬಿಡುತ್ತಾರೆ ' ಮಧ್ವಾ

ಚಾರ್ಯರು ಮಾತ್ರ ಸೂಕ್ಷ್ಮರೀತಿಯಿಂದ ವಿವೇಚಿಸಿ ಈ ಮಾತನ್ನು ಕಂಡುಹಿಡಿದಿದ್ದಾರೆ.

ಆದರೆ ರಾಮಾನುಜಾಚಾರ್ಯರು ಮಾತ್ರ ನಾಸ್ತಿಕ ವಾದದ ಮೇಲೆ ಸಂಶಯು ಮತ್ತು ಅದರ ನಿವೃತ್ತಿ ನಡೆಯುತ್ತಿದೆ ಎಂದು ಆಗ್ರಹದಿಂದ ಅದನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಈ ಶ್ಲೋಕದಲ್ಲಿಯೂ ನಾಸ್ತಿಕ ವಾದದ ಮೇಲೆಯೇ "ಹುಟ್ಟಿದವನು ಸಾಯುತ್ತಾನೆ, ಸತ್ತವನು ಹುಟ್ಟುತ್ತಾನೆ" ಎಂದು ಕೃಷ್ಣನ ವಾದವನ್ನು ನಾಸ್ತಿಕ ವಾದದ ತಳಹದಿಯ ಮೇಲೆ ಸಾಗಿಸುತ್ತಾರೆ. ಆದರೆ 'ಸತ್ತವನು ಹುಟ್ಟುತ್ತಾನೆ' ಎನ್ನುವದನ್ನು ನಾಸ್ತಿಕ ವಾದದ ಮೇಲೆ ಹೇಗೆ ಕೂಡ್ರಿಸಬೇಕು ಎನ್ನುವದರ ಅರಿವು ಅವರಿಗಿದೆ. ಆತ್ಮನು ನಿತ್ಯನಾದುದರಿಂದ ದೇಹ ಹೋದರೂ ಆತ್ಮನು ಉಳಿಯುತ್ತಾನೆ. ಆ ಆತ್ಮನೇ ಮುಂದಿನ ಜನ್ಮದಲ್ಲಿ ಬೇರೆ ದೇಹವನ್ನು ಸ್ವೀಕರಿಸುತ್ತಾನೆಂದು ಆಸ್ತಿಕರು ಹೇಳುತ್ತಾರೆ. ಆದರೆ ನಾಸ್ತಿಕನಿಗೆ ನಿತ್ಯವಾದುದು ಯಾವದೂ ಇಲ್ಲದ್ದರಿಂದ ಕಡೆವರೆಗೆ ಉಳಿಯುವದು ಒಂದೂ ಇಲ್ಲ. ಸತ್ತವನೇ ಹುಟ್ಟಬೇಕಾದರೆ ದೇಹ ನಾಶವಾದ ಮೇಲೆ ಒಂದು ಉಳಿದು ಮತ್ತೆ ಅದಕ್ಕೆ ಬೇರೆ ದೇಹ ಬರಬೇಕು. ಅದು ಒಂದು ಉಳಿಯುವದು ಯಾವದು ? ರಾಮಾನುಜಾಚಾರ್ಯರು ಕಾರ್ಯಕಾರಣ ಭಾವವನ್ನು ವಿಸ್ತರಿಸಿ ಈ ರೀತಿಯಾಗಿ ಹೇಳುತ್ತಾರೆ. **उत्पत्याख्यामवस्थामुपयातस्य द्रव्यस्य तद्विरोध्यवस्थांतरप्राप्ति: विनाश: इत्युच्यते.** ಒಂದು ದ್ರವ್ಯವು ಉತ್ಪನ್ನವಾಯಿತು ಎಂದರೆ ಒಂದು ಅವಸ್ಥೆಯನ್ನು ಹೊಂದುತ್ತದೆ. ಅದಕ್ಕೆ ವಿರೋಧಿಯಾದ ಇನ್ನೊಂದು ಅವಸ್ಥೆಯನ್ನು ಹೊಂದುವದೇ ವಿನಾಶವೆನಿಸುತ್ತದೆ. ಮಣ್ಣು ಎನ್ನುವದು ಒಂದು ದ್ರವ್ಯವು; ಆ ದ್ರವ್ಯಕ್ಕೆ ಅನೇಕ ಅವಸ್ಥೆಗಳು— ೧) ಮುದ್ದಿಯಾಗಿರುವದು, ೨) ಕೊಡವಾಗಿರುವದು, ೩) ಎರಡು ಹೋಳುಗಳಾಗುವದು, ೪) ಪುಡಿಯಾಗುವದು. ಹೀಗೆ ಪರಿಣಾಮಹೊಂದಿದ ದ್ರವ್ಯಕ್ಕೆ ಅನೇಕ ಪರಿಣಾಮಗಳಾಗುತ್ತವೆ. ಇದನ್ನು ತಪ್ಪಿಸಲು ಸಾಧ್ಯವಿಲ್ಲ. ಇದರಲ್ಲಿ ಮೊದಲಿನ ಅವಸ್ಥೆಯಲ್ಲಿದ್ದ ದ್ರವ್ಯಕ್ಕೆ ಮುಂದಿನ ಅವಸ್ಥೆ ಬರುವದಕ್ಕೆ ವಿನಾಶವೆಂದು ಹೆಸರು. ಅದೇ ಅಥವಾ ಆ ಅವಸ್ಥೆಯೆ ಉತ್ಪತ್ತಿ ಎನಿಸುವದು. ಹೀಗೆ ಪರಿಣಾಮ ಹೊಂದುವ ದ್ರವ್ಯಕ್ಕೆ ಅನೇಕ ಪರಿಣಾಮಗಳ ಪರಂಪರೆಯು ಅಪರಿಹಾರ್ಯವಾದುದರಿಂದ ಅದಕ್ಕಾಗಿ ಶೋಕಿಸುವದು ಸರಿಯಲ್ಲವೆಂದು ಕೃಷ್ಣನು ಅರ್ಜುನನಿಗೆ ಉಪದೇಶಿಸಿದನು. ಇದರಲ್ಲಿ ಅರ್ಜುನನ ವಾದದ ರಹಸ್ಯವು ಈ ರೀತಿಯಾಗಿದೆ.

೧) ಅಭಾವದೊಳಗಿಂದ ಯಾವ ಭಾವವೂ ಉತ್ಪನ್ನವಾಗುವದಿಲ್ಲ. ಆದುದರಿಂದ ಹುಟ್ಟಿದ್ದು ಮೊದಲು ಇತ್ತು. ಮೂಲ ಪ್ರಕೃತಿಯು **(Matter)**

ನಿತ್ಯವಾಗಿದೆ. ಮಣ್ಣು ಗಡಿಗೆಯಾಗಿದೆ ಎಂದರೆ; ಮಣ್ಣು ಸತ್ತಿತು, ಗಡಿಗೆ ಹುಟ್ಟಿತು ಎಂದು ಅರ್ಥವಲ್ಲ. ಆದರೆ ಆ ದ್ರವ್ಯವು ಎಲ್ಲ ಪರಿಣಾಮಗಳಲ್ಲಿ ಹಾಗೆ ಉಳಿದಿದೆ ಇದು ಮಹತ್ವದ್ದು.

ನಿಜವಾಗಿ ನೋಡಿದರೆ ಜನನ–ಮರಣಗಳೆನ್ನುವವು ಇಲ್ಲವೇ ಇಲ್ಲ ಒಂದು ಪದಾರ್ಥವು ಹುಟ್ಟುವ ಮೊದಲು ಅದು ಇರುವದಿಲ್ಲ, ಅದು ನಾಶ ಹೊಂದಿದ ಮೇಲೂ ಇರುವದಿಲ್ಲ. ಎಂದೂ ಎಲ್ಲಿಯೂ ಇಲ್ಲದ ಮೊಲದಕೊಂಬೂ ಇಲ್ಲ ವೆಂದು ಹೇಳುತ್ತಾರೆ. ಈ ಅಭಾವವನ್ನು ನೈಯ್ಯಾಯಿಕರು ಪದಾರ್ಥವೆಂದು ತಿಳಿಯುತ್ತಾರೆ. ರಾಮಾನುಜಾಚಾರ್ಯರೂ ಮೀಮಾಂಸಕರೂ ಇದು ಸರಿಯಾದು ದಲ್ಲವೆಂದು ಭಾವಿಸುತ್ತಾರೆ. ಯಾಕೆಂದರೆ ಇವರ ಮತದಲ್ಲಿ ಘಟದ ವಿನಾಶವು ಅದರ ಹೋಳುಗಳ ಜನನದಕಿಂತ ಬೇರೆಯಾಗಿ ಯಾವ ರೀತಿಯಿಂದಲೂ ತೋರು ವದಿಲ್ಲ. ಆದರೆ ಮಧ್ವಾಚಾರ್ಯರು ಮತ್ತು ಅನೇಕರು ತರ್ಕದಿಂದ ಮನೋ ವಿಜ್ಞಾನದಿಂದ ಅಭಾವವು (Negation) ಭಾವದಿಂದ (Positive) ಬೇರೆಯಾಗಿ ರುತ್ತದೆಂದು ಹೇಳುತ್ತಾರೆ. ರಾಮಾನುಜಾಚಾರ್ಯರು ಒಂದು ಭಾವ ವಸ್ತುವಿನ ಎರಡು ರೂಪಗಳೇ ಭಾವ–ಅಭಾವಗಳೆಂದು ಹೇಳಿದುದು ಸರಿಯಲ್ಲವೆಂದು ಹೇಳು ತ್ತಾರೆ.

ಈ ಗೊಂದಲದೊಳಗಿಂದ ವಿಚಾರದ ಪ್ರಾಘಾತವು ಎತ್ತ ನಡೆದಿದೆ ಅದನ್ನು ನೋಡಬೇಕು. ಮೂಲ ಪ್ರಕೃತಿಯು ಅವಿನಾಶಿಯಾಗಿದ್ದರೆ, ಅಭಾವವೂ ಒಂದು ಎಣಿಕೆಗೆ ತರುವ ಸಂಗತಿಯಾಗಿದ್ದರೆ ಕೃಷ್ಣನು ಅದನ್ನು ಯಾಕೆ ಒತ್ತಿ ಹೇಳಿದನು ? ಈ ಮಾತಿನಿಂದ ಅರ್ಜುನನ ದುಃಖವು ಕಡಿಮೆಯಾಗುವದಿಲ್ಲ. ಭೀಷ್ಮರ ದೇಹವು ಸತ್ತಮೇಲೆ ಮಣ್ಣಾಗಿ ಬೂದಿಯಾಗಿ ಉಳಿಯುತ್ತಿದೆಯೆಂದರೆ ಅದರಿಂದ ಅರ್ಜುನನ ದುಃಖ ಹೇಗೆ ಕಡಿಮೆಯಾಗಬೇಕು ? ೧೬ನೇ ಶ್ಲೋಕಕ್ಕೆ ಭಾಷ್ಯ ಬರೆಯುವಾಗ ರಾಮಾನುಜಾಚಾರ್ಯರೇ **सत्कार्यवादस्य असंगतत्वात् न तत्परोऽयं श्लोकः** "ಮೂಲ ಪ್ರಕೃತಿಯು ಅವಿನಾಶಿಯೆಂಬುದು (ಕಾರಣವು ಅವಿನಾಶಿಯೆಂಬುದು) ಇಲ್ಲಿ ಅಪ್ರಸಕ್ತ ವಿಷಯ. ಯಾಕೆಂದರೆ ಅರ್ಜುನನಿಗೆ ದೇಹ ಮತ್ತು ಆತ್ಮದ ವಿವೇಕವಿಲ್ಲದ್ದರಿಂದ ಒಂದ ಮೋಹವು ನಾಶವಾಗಬೇಕಾದರೆ ಒಂದು ನಶ್ವರ, ಇನ್ನೊಂದು ನಿತ್ಯ ಎಂದು ಹೇಳಿ ಆ ವಿವೇಕದಿಂದ ಅವನ ಮೋಹವನ್ನು ಶಾಂತ ಗೊಳಿಸಬೇಕು. ಪ್ರಕೃತಿ ನಿತ್ಯವೆಂದು ಹೇಳುವದರಿಂದ ಶಾಂತಿಯನ್ನು ಹೊಂದುವ ದಿಲ್ಲ. (**देहात्म स्वभावाज्ञानमोहितस्य तन्मोहशांतयेह्यु भययोः नाशित्वानाशित्वरूप स्वभाव विवेक एव वक्तव्य.**) ೧೬ನೇ ಶ್ಲೋಕದಲ್ಲಿ ಹೇಳಿದ ಈ ಮಾತನ್ನು ೨೭ನೇ ಶ್ಲೋಕದಲ್ಲಿ ಯಾಕೆ ಮರೆಯಬೇಕು ತಿಳಿಯುವದಿಲ್ಲ. ಅಲ್ಲಿ

ದೇಹಾತ್ಮ ವಿವೇಕದಿಂದ ಶೋಕವು ಶಾಂತವಾಗುತ್ತಿದ್ದರೆ ಇಲ್ಲಿ ಜನನ–ಮರಣಗಳು ತಪ್ಪಿಸಲಿಕ್ಕೆ ಬಾರದೆ ಇದ್ದುದರಿಂದ **(अपरिहार्य)** ಅವುಗಳ ವಿಷಯಕ್ಕೆ ಶೋಕ ಬೇಡವೆಂದು ಹೇಳುವದು ಕೃಷ್ಣನಿಗೆ ಯುಕ್ತವಾದುದು ಇದರ ಸಲುವಾಗಿ ಪ್ರಕೃತಿ ಅವಿನಾಶಿಯೆಂದು ಹೇಳುವ ಅವಶ್ಯಕತೆ ಇಲ್ಲ.

ರಾಘವೇಂದ್ರರು ಗೀತಾ ವಿವೃತಿಯಲ್ಲಿ ಎಷ್ಟು ಸಂಕ್ಷೇಪವಾಗಿ ಅದರೂ ಅರ್ಥ ಪೂರ್ಣವಾಗಿ ಈ ಶ್ಲೋಕವನ್ನು ಯೋಜಿಸಿದ್ದಾರೆ, ನೋಡಬೇಕು "ಮೊದಲಿನ ಸಾಲಿನಲ್ಲಿ ಅರ್ಜುನನ ಶಂಕೆಯನ್ನು ಅನುವಾದಿಸಿದ್ದಾರೆ 'ಹುಟ್ಟಿದವನಿಗೆ ಸಾವು ಸತ್ತವನಿಗೆ ಹುಟ್ಟು ನಿಶ್ಚಿತ'ವಾಗಿವೆ. ಹಾಗಿದ್ದರೂ ನೀನು ಶೋಕ ಮಾಡುವದು ಉಚಿತವಲ್ಲ; ಯಾಕೆ ಎನ್ನುವ ಕಾರಣವನ್ನು ತೋರಿಸಿಲ್ಲ ಶೋಕ ಮಾಡದಿರಲಿಕ್ಕೆ ಕಾರಣವನ್ನು ಅಪೇಕ್ಷಿಸಿದರೆ— ಮೋಕ್ಷದೊರೆಯುವ ವರೆಗೆ ಜನನ–ಮರಣಗಳು ಮನುಷ್ಯನಿಗೆ ಅಪರಿಹಾರ್ಯವಾದುದರಿಂದ— ಎಂಬ ಹೇತುವನ್ನು ನಿರ್ದೇಶಿಸಿ ನೀನು ಶೋಕ ಮಾಡುವದು ಯೋಗ್ಯವಲ್ಲವೆಂಬುದನ್ನು ತಿಳಿಸುತ್ತಾನೆ".

C M ಪದ್ಮನಾಭಾಚಾರ್ಯರು ಜನನ–ಮರಣಗಳು ಅಪರಿಹಾರ್ಯ ಹೇಗೆ ಎಂಬುದನ್ನು ಸಂಕ್ಷೇಪವಾಗಿ ಹೀಗೆ ತೋರಿಸಿದ್ದಾರೆ—

೧ ಜನನ–ಮರಣಗಳನ್ನು ತಪ್ಪಿಸಲಿಕ್ಕೆ ಯಾರಿಗೂ ಸಾಧ್ಯವಿಲ್ಲ.

೨ ನೀನು ಯುದ್ಧದಿಂದ ನಿವೃತ್ತನಾದರೂ ಭೀಷ್ಮ–ದ್ರೋಣಾದಿಗಳು ಯೋಗ್ಯ ಕಾಲದಲ್ಲಿ ಸಾಯಲೇ ಬೇಕು.

೩ ನೀನು ಸಹ ಮರಣದಿಂದ ಮುಕ್ತನಲ್ಲ. "ನಾನು ಕೊನೆಯು ವರೆಗೆ ಉಳಿಯುವವನಾದುದರಿಂದ ನಾನು ಹೇಗೆ ಇವರ ವಿರಹವನ್ನು ಸಹಿಸಲಿ" ಎಂದು ನೀನು ಅನ್ನಲಾರಿ. ಇಂದಾಗಲಿ, ನಾಳೆ ಆಗಲಿ ನೀನೂ ಸಾಯುತಕ್ಕವನೇ.

೪ ಕ್ಷತ್ರಿಯನಿಗೆ ಯುದ್ಧವು ಅನಿವಾರ್ಯ; ಯುದ್ಧವು ಅವನ ಕರ್ತವ್ಯ. ಅದನ್ನು ತಪ್ಪಿಸಿದರೆ ಪಾಪ.

೫ ನೀನು ಮರಣಕ್ಕೆ ಕಾರಣನಾಗುವಿ ಎನ್ನುವದನ್ನು ನಿನಗೆ ತಪ್ಪಿಸಲಿಕ್ಕೆ ಸಾಧ್ಯವಿಲ್ಲ. ಭಗವಂತನು ನಿನಗೆ ಯುದ್ಧ ಮಾಡಲಿಕ್ಕೆ ಹಚ್ಚುತ್ತಾನೆ. ನೀನು ಸ್ವತಂತ್ರ ಕರ್ತಾ ಅಲ್ಲ. ಈಶ್ವರನು ಅವರಿಗೆ ಮರಣ ಕಲ್ಪಿಸಿರುವಾಗ ನಿನ್ನಿಂದ ಆಗುವ ಮರಣವನ್ನು ನೀನು ತಪ್ಪಿಸಲಾರಿ.

೬. ಇದು (ಜನನ-ಮರಣ)ಅಪರಿಹಾರ್ಯ, ತಪ್ಪಿಸಲಿಕ್ಕೆ ಬಾರದೆ ಇದ್ದುದು ಇಷ್ಟೇ ಅಲ್ಲ. ಅ ಎಂದರೆ ವಿಷ್ಣುವು ಎಂದು ಪ್ರಸಿದ್ಧವದೆ. ಅ ನಿಂದ ವಿಷ್ಣುವಿನ ಅನುಗ್ರಹದಿಂದ ಮಾತ್ರ ಜನನ-ಮರಣರೂಪ ಸಂಸಾರವನ್ನು ತಪ್ಪಿಸಿಕೊಳ್ಳಲಿಕ್ಕೆ ಸಾಧ್ಯವದೆ ಅವನ ಕಾರ್ಯಕ್ಷೇತ್ರದಲ್ಲಿ ಕೈಹಾಕಿ ನೀನು ಶೋಕಿಸುವದೂ ಬೇಡ.

ಇಲ್ಲಿ ಇನ್ನೊಂದು ಮಾತನ್ನು ಪದ್ಮನಾಭಾಚಾರ್ಯರು ನಮ್ಮ ಲಕ್ಷ್ಯಕ್ಕೆ ತಂದಿದ್ದಾರೆ— ಶಂಕರಾನಂದರು ತಮ್ಮ ವ್ಯಾಖ್ಯಾನದಲ್ಲಿ **अपरिहार्य** ಬ್ರಹ್ಮನಿಗೆ ಇದನ್ನು ಬದಲಿಸಲು ಸಾಧ್ಯವಿಲ್ಲವೆಂದು ಹೇಳುತ್ತಾರೆ. ಇದೊಂದು ದೇವರ ಸರ್ವಶಕ್ತಿತ್ವಕ್ಕೆ ಕಲಂಕವು ಇದೆಲ್ಲಿಯ ನ್ಯಾಯ ? ತಾವೇ ಸರ್ವಶಕ್ತನಾದ ಈಶ್ವರನನ್ನು ಕಲ್ಪಿಸಿ ಅವನಿಗೆ ಅದು ಮಾಡಲು ಬರುವದಿಲ್ಲ; ಇದು ಮಾಡಲಿಕ್ಕಾಗುವದಿಲ್ಲ ಎಂದು ಹೇಳುವದು, ಇಂಗ್ಲಿಷಿನಲ್ಲಿ ಹೇಳಿದಂತೆ Name a dog and shoot it. ಏನಾದರೊಂದು ಹೆಸರಿಟ್ಟು ಅದಕ್ಕೆ ಗುಂಡು ಹಾಕು" ಎಂದ ಹಾಗೆ. ಬ್ರಹ್ಮನು ಮಾಡಿದ ನಿಯಮಗಳನ್ನು ಬ್ರಹ್ಮನೂ ಸಹ ಬದಲಿಸಲು ಇಚ್ಛಿಸುವದಿಲ್ಲ. ಇದು ದೇವರಲ್ಲಿರ ತಕ್ಕ ಘನತೆ. ಮಹದೇವ ದೇಸಾಯಿಯವರು King Lear ವಲ್ಲಿಯ ಒಂದು ಸಮಾನಾರ್ಥಕ ಪಂಕ್ತಿಯನ್ನು ಉದಾಹರಿಸುತ್ತಾರೆ.

ಎಡ್ಗರ ಹೇಳುತ್ತಾನೆ—

"Men must endure Their going hence, even as Their Coming here." ಇದರಕಿಂತ Psalms of the Sisters ದಲ್ಲಿ ಒಬ್ಬ ಬುದ್ಧ ಯೋಗಿನಿಯು ತಾಯಂದಿರಿಗೆ ಸಾಂತ್ವನದ ಮಾತುಗಳನ್ನು ಹೇಳುತ್ತಾಳೆ :— (ರಾಧಾಕೃಷ್ಣನ್ನರ– ಭಗವದ್ಗೀತೆ).

Weep not, for such is here the life of man
Unasked he came, unbidden went he hence
Lo ! Ask thyself again whence came thy son,
To bide on earth. This little breathing space
By one way Come and by another gone
So hither and so hence — why Should ye weep ? *

* ಸುತ್ತನಿಪಾತದಲ್ಲಿ — "ಹುಟ್ಟಿದವರು ಸಾಯುವದನ್ನು ತಪ್ಪಿಸುವ ಯಾವ ಸಾಧನೆಯೂ ಇಲ್ಲ."

"ಎಲ್ಲರೂ ಮರಣಾಧೀನರು"

"ಆದುದರಿಂದ ಜಗತ್ತು ಮರಣ ಮತ್ತು ನಾಶಗಳಿಂದ ಪೀಡೆಗೊಳಗಾಗಿದೆ. ಆದುದರಿಂದ ಜ್ಞಾನಿಗಳು ಜಗತ್ತಿನ ಪರಿಸ್ಥಿತಿಯನ್ನು ಕಂಡು ಶೋಕಿಸುವದಿಲ್ಲ."

R B. Lal ರವರು ತಮ್ಮ The Gita in the light of modern Science ದಲ್ಲಿ ಒಂದು ವಿಷಯವನ್ನು **ध्रुवंजन्ममृतस्य च** ದ ಮೇಲ ಎತ್ತಿದ್ದಾರೆ. (Certain is birth for the dead.) ಇದು ಸಾಮಾನ್ಯ ನಂಬಿಗೆಗೆ ವಿರುದ್ಧವಾಗಿದೆ ಆ ನಂಬಿಗೆಯೆಂದರೆ ' ತಿರುಗಿ ಹುಟ್ಟುವದರಿಂದ ಮೋಚನೆಯು (ಮೋಕ್ಷವು) ಮಾನವ ಪ್ರಯತ್ನದ ಗುರಿಯಾಗಿದೆ ' ಶ್ರೀಕೃಷ್ಣನು ಮೇಲೆ ಮೇಲೆ ಹೇಳುತ್ತಾನೆ ಈ ಜಗತ್ತಿನಲ್ಲಿ ಎಲ್ಲ ಪ್ರಾಣಿಗಳು ಅವರ ಪ್ರಯತ್ನಗಳು ಭಗವಂತನಿಂದ ತುಂಬಿ ಹೋಗಿವೆ ಭೂಮಿಯಲ್ಲಿ ಹುಟ್ಟುವದು ಒಂದು ಚಿಕ್ಕ ಪ್ರವಾಸವೆಂದು ನಂಬಿದ್ದಾರೆ ಇಂಥ ಜೀವನವನ್ನು ಒಂದು ಶಿಕ್ಷೆಯೆಂದು ಭಾವಿಸುವದು ಆಧ್ಯಾತ್ಮಿಕ ಪ್ರವೃತ್ತಿಯ ಮಾನವನಿಗೆ ಒಂದು ಅಪಮಾನವು ಆದುದರಿಂದ ಪರಮೇಶ್ವರನಲ್ಲಿ ಭಕ್ತಿಯಿದ್ದವನು ಈ ಜಗತ್ತಿನಲ್ಲಿಯ ಜನ್ಮವು ಒಂದು ಅಪೂರ್ವ ಸುಯೋಗವೆಂದು ಭಾವಿಸುವನು. ತಿರುಗಿ ಹುಟ್ಟಿ ಬರುವದು ಭಗವಂತನ ಇಚ್ಛೆಯು ತುಲಸಿದಾಸರು ಈ ಮಾತನ್ನೇ ಹೇಳಿದ್ದಾರೆ.— " ಇದು ನನ್ನ ಪ್ರಾರ್ಥನೆ ಪ್ರಭುವೇ ! ನನ್ನ ಪೂರ್ವ ಜನ್ಮದ ಕರ್ಮಗಳಿಂದ ನನಗೆ ಎಂಥದೇ ಜನ್ಮ ಬರಲಿ, ನಿನ್ನ ಪ್ರೀತಿ ಅನುಗ್ರಹಗಳು ಮಾತ್ರ ನನ್ನನ್ನು, ಕೂರ್ಮವು ತನ್ನ ತತ್ತಿಗಳನ್ನು ಬಿಡದಂತೆ ಬಿಡದಿರಲಿ " ಈ ಜಗತ್ತು ದೇವನ ನಂದನವನವೆಂದೂ ಹೇಳಿದ್ದಾರೆ ಈ ಜಗತ್ತು ದುಃಖಮಯವಾದುದೆಂದೂ ಹೇಳಿದ್ದಾರೆ. ಎರಡೂ ಸತ್ಯಮಾತುಗಳು. ಯಾವ ಆಧ್ಯಾತ್ಮಿಕತೆಗೂ ವಿರೋಧಬಾರದ ಮಾತುಗಳು ಮಾನವನಿಗೆ ಅಜ್ಞಾನ ಮೋಹಗಳಿರುವವರೆಗೆ ಈ ಜಗತ್ತು ದುಃಖಮಯವಾಗಿಯೇ ತೋರುವದು. ಮನುಷ್ಯನು ಅವುಗಳನ್ನು ನೀಗಿ ದಿವ್ಯಜ್ಞಾನ ಪಡೆದ ಮೇಲೆ ಈ ಜಗತ್ತು ನಿಜವಾಗಿಯೂ ನಂದನವನವಾಗಿಯೇ ಇರುವದು.

**अव्यक्तादीनि भूतानि व्यक्तमध्यानि भारत ।**
**अव्यक्त निधनान्येव तत्र का पारिदेवना ।। २१ ।।**

ಎಲೈ ಅರ್ಜುನನೇ ! ಶರೀರಗಳು ಪ್ರಕೃತಿ ತತ್ವವೇ ಮೂಲ ಕಾರಣವಾಗಿವುಳ್ಳವುಗಳು, ಜನನ–ಮರಣಗಳ ಮಧ್ಯದಲ್ಲಿ ವ್ಯಕ್ತವಾಗುವವು. ಪ್ರಕೃತಿ ತತ್ವದಲ್ಲಿಯೇ ಲಯವನ್ನು ಹೊಂದುವವು. ಇಂಥ ದೇಹಗಳ ವಿಷಯದಲ್ಲಿ ಶೋಕವೇಕೆ ?

**ವಿಶೇಷ ಟಿಪ್ಪಣಿಗಳು :**

ಇಲ್ಲಿ **परिदेवना** ಕ್ಕೆ **परिवेदना** ಎಂದೂ ಪಾಠಾಂತರವದೆ. ಬಹುವಾದ ಪಾಠ **परिदेवना** ಎಂದು ಇದೆ, ಅದ್ವೈತಿ ವ್ಯಾಖ್ಯಾನಕಾರರೆಲ್ಲ **परिदेवना** ಎಂಬ ಪಾಠ

ವನ್ನೇ ಇಟ್ಟುಕೊಂಡಿದ್ದಾರೆ ಪಾಠಾಂತರವದೆಯೆಂದು ಸಹ ತೋರಿಸಿಲ್ಲ ಮಧ್ವಾಚಾರ್ಯರು ಗೀತಾ ಭಾಷ್ಯದಲ್ಲಿ **परिवेदना** ಎಂಬ ಪಾಠವನ್ನೇ ಹಿಡಿದಿದ್ದಾರೆ. ಆದರೆ ರಾಘವೇಂದ್ರ ತೀರ್ಥರು ವಿವೃತಿಯಲ್ಲಿ **परिदेवना** ಎಂಬ ಪಾಠ ಹಿಡಿದಿದ್ದಾರೆ. **परिदेवना** ಶಬ್ದಕ್ಕೆ ಶೋಕವೆಂಬ ಅರ್ಥವನ್ನು ಅಮರಕೋಶಕಾರರೂ ಹೇಳಿದ್ದಾರೆ ಆದರೆ **परिवेदना** ಶಬ್ದಕ್ಕೆ ಶೋಕವೆಂಬ ಅರ್ಥವನ್ನು ಕೋಶಕಾರರುಕೊಟ್ಟಿಲ್ಲ **वेदना** ಶಬ್ದಕ್ಕೆ 'ನೋವು, ದುಃಖ, ಶೋಕ' ವೆಂದು ಕೊಟ್ಟಿದ್ದಾರೆ. ಅದಕ್ಕೆ **परि** ಹಚ್ಚಿದಾಗ "ಅತಿಶಯ, ಮತ್ತೆ ಮತ್ತೆ" ಹಚ್ಚಿಕೊಂಡು 'ಅತಿಶೋಕವೆಂದು' ಅರ್ಥವನ್ನು ಸಂಪಾದಿಸಿದ್ದಾರೆ. ಪ್ರಭುಪಾದರು **परिवेदना** ಎಂಬ ಪಾಠವನ್ನೇ ಇಟ್ಟುಕೊಂಡಿದ್ದಾರೆ ರಾಧಾಕೃಷ್ಣನ್ನನ್ ಮೊದಲಾದ ಆಧುನಿಕರು **परिवेदना** ಎಂಬ ಪಾಠಾಂತರವದೆಯೆಂದು ಸಹ ಕೊಟ್ಟಿಲ್ಲ. ರಾಮಾನುಜಾಚಾರ್ಯರೂ **परिदेवना** ಎಂಬ ಪಾಠವನ್ನೇ ಇಟ್ಟುಕೊಂಡಿದ್ದಾರೆ, *

**भूतानि** ಕೆಲವರು ಇದಕ್ಕೆ ಪಂಚಮಹಾಭೂತಗಳೆಂದು ಅರ್ಥ ಮಾಡಿದ್ದಾರೆ (ಆಕಾಶಾದಿ), ಮಧುಸೂದನ ಸರಸ್ವತಿಯವರೂ ನೀಲಕಂಠರರೂ ಈ ಅರ್ಥವನ್ನು ಸ್ವೀಕರಿಸಿ **अव्यक्त** ಶಬ್ದಕ್ಕೆ ಮಾಯೆಯೆಂದು ಅರ್ಥೈಸಿ ಆಕಾಶ ಮೊದಲಾದ ಜಗತ್ತು ಮಾಯೆಯಿಂದ ಕಲ್ಪಿತವಾದುದರಿಂದ ಮಿಥ್ಯೆ ಎನಿಸುತ್ತದೆ ಎಂದು ಒಟ್ಟು ಅರ್ಥವನ್ನು ಹೇಳಿದ್ದಾರೆ. (**भूतानि वियदादीनि ... न व्यक्तं अव्यक्तं अज्ञानं आदिः येषां तथा विधानि**) ಉಳಿದವರು ಇದಕ್ಕೆ (**भूतानि**) ಜನರ ಮತ್ತು ಪ್ರಾಣಿಗಳ ಶರೀರವೆಂದು ಅರ್ಥಮಾಡಿದ್ದಾರೆ ರಾಮಾನುಜಾಚಾರ್ಯರೂ ಶಂಕರಾನಂದರೂ ಈ ಎರಡನೆ ಅರ್ಥವನ್ನು ಸ್ವೀಕರಿಸುತ್ತಾರೆ.

ರಾಧಾಕೃಷ್ಣನ್ ಮತ್ತು ಮಹದೇವ ದೇಸಾಯಿ ಮೊದಲಾದವರೆಲ್ಲ Beings ಪ್ರಾಣಿಗಳು, ಹುಟ್ಟಿದವುಗಳು. ಮತ್ತು ಆ ವಾಕ್ಯದ ಅರ್ಥವನ್ನು "ಹುಟ್ಟುವ ಮೊದಲು ಪ್ರಾಣಿಗಳೆಲ್ಲ ಅವ್ಯಕ್ತವಾಗಿರುತ್ತವೆ" ಎಂದು ಹೇಳುತ್ತಾರೆ. ರಾಘವೇಂದ್ರರು 'ಪ್ರಾಣಿಗಳ ಶರೀರಗಳು' ಎಂದೇ ಹೇಳುತ್ತಾರೆ. ರಾಧಾಕೃಷ್ಣನ್ನರವರ ಅಭಿಪ್ರಾಯವೂ ಇದೇ ಆಗಿರುತ್ತದೆ.

ಹಿಂದಿನ ಶ್ಲೋಕದಲ್ಲಿ ಜನನ-ಮರಣಗಳು ಅಪರಿಹಾರ್ಯವಾದುದರಿಂದ ಶೋಕ ಮಾಡುವದು ಯುಕ್ತವಲ್ಲವೆಂದು ಹೇಳಿದ್ದಾಯಿತು ಈಗ ಜನನ-ಮರಣ

---

* ಮಹಾಭಾರತದ ಇದೇ ಅರ್ಥದ ಶ್ಲೋಕದಲ್ಲಿ **तत्रकापरिदेवना** ಎಂದು **परिदेवना** ಎಂಬ ಶಬ್ದವನ್ನೇ ಉಪಯೋಗಿಸಿದ್ದಾರೆ.

ಗಳ ಸ್ವರೂಪವನ್ನೇ ಶ್ರೀಕೃಷ್ಣನು ನಿವೇದಿಸುತ್ತಾನೆ ಇನ್ನು **अव्यक्त** ಮತ್ತು **व्यक्त** ಶಬ್ದಗಳ ವಿಷಯದಲ್ಲಿ ವಿವಾದವೆದ್ದಿದೆ. **अव्यक्तं अनुपलब्धिः** ಕಾಣದಿರುವದು. ಕಾರ್ಯಕಾರಣ ಸಂಘಾತಾತ್ಮಕರಾದ ಪುತ್ರಮಿತ್ರ ಕಲತ್ರಾದಿಗಳು ಉತ್ಪತ್ತಿಯ ಮೊದಲು ಕಾಣದಾಗಿರುತ್ತಾರೆ (**अव्यक्त**) ಆದರೆ ಶಂಕರಾನಂದರು **अव्यक्त** ವೆಂದರೆ ಬ್ರಹ್ಮನೆಂದು ಹೇಳುತ್ತಾರೆ. ಯಾಕೆಂದರೆ ಅವನು ಯಾವ ಪ್ರಮಾಣಗಳಿಗೂ ಗೋಚರವಾಗುವದಿಲ್ಲ. ಈ ಪ್ರಪಂಚವು ಅವನಿಂದ ಉತ್ಪನ್ನವಾಗಿದೆ ಬ್ರಹ್ಮನ ಅಜ್ಞಾನದಿಂದ ಈ ಜಗತ್ತು ಹುಟ್ಟುತ್ತದೆ. ಅವನ ಅಜ್ಞಾನವು ಹೋದ ಮೇಲೆ ಈ ಜಗತ್ತು ಕಾಣದಂತಾಗ ತ್ತದೆ. ಈ ಜನನ-ಮರಣಗಳ ಮಧ್ಯದಲ್ಲಿರುವ ಕಾಲದಲ್ಲಿ ಈ ಜಗತ್ತು ತೋರುತ್ತದೆ ಆಗ ಪ್ರಾಣಿಗಳು ವ್ಯಕ್ತವಾಗುತ್ತವೆ ಬ್ರಹ್ಮನ ಜ್ಞಾನವಾದಕೂಡಲೆ ಈ ಜಗತ್ತೆಲ್ಲ ಮಾಯೆಯಿಂದ ತೋರಿದ್ದು ಕಾಣದಾಗುತ್ತದೆ. ಈ ಅದ್ವೈತವನ್ನು ಕಾಣುವವನಿಗೆ ಶೋಕವೆಲ್ಲಿಂದ ಬರಬೇಕು ?

ಮಹಾಭಾರತದಲ್ಲಿ ಬೇರೆ ಶಬ್ದಗಳಲ್ಲಿ ಆದರೆ ಸಮಾನಾರ್ಥದಲ್ಲಿ ಇಂಥದೇ ಒಂದು ಶ್ಲೋಕವು ಇದೆ ಸ್ತ್ರೀಪರ್ವ II–3 ಶ್ಲೋಕ ಈ ರೀತಿಯಾಗಿದೆ ,—

**अभावादीनि भूतानि भावमध्यानि भारत**
**अभावनिधनान्येव तत्र का परिदेवना ।। ३ ।।**

ಜಗತ್ತು ಅಭಾವದಿಂದ ಹುಟ್ಟಿದೆ; ಅದರ ಮಧ್ಯವು ಭಾವವಾಗಿದೆ; ಅದು ಮತ್ತೆ ಅಭಾವದಲ್ಲಿ ಕೊನೆ ಹೊಂದುತ್ತದೆ. ಇನ್ನು ಈ ಅಭಾವದ ಅರ್ಥವೇನು ? ಈ ಅಭಾವಕ್ಕೆ ನೀಲಕಂಠನು ಬ್ರಹ್ಮನೆಂದು ಕರೆಯುತ್ತಾನೆ. ಅಭಾವವು ಬ್ರಹ್ಮನೆಂದು ಹೇಳಿದರೆ ಬೌದ್ಧರ ಶೂನ್ಯಕ್ಕೆ ಅದ್ವೈತ ವಾದವು ತೀರ ಸಮೀಪವಾಯಿತು.

ಅದ್ವೈತ ವಾದದಲ್ಲಿ ಸಿಂಪಿನಲ್ಲಿ ಬೆಳ್ಳಿತೋರುವದಕ್ಕೆ ಕಾರಣವು ಅಜ್ಞಾನವಾದಂತೆ, ಮನಸ್ಸು ತೋರಲಿಕ್ಕೆ ಎಂದರೆ ಹುಟ್ಟು-ಸಾವುಗಳಿಂದ ಕೂಡಿದ ಸಂಸಾರಕ್ಕೆ ಕಾರಣವಾಗುತ್ತದೆ. ಆದುದರಿಂದ ಬ್ರಹ್ಮ ಅವ್ಯಕ್ತವಾದರೆ ವ್ಯಕ್ತವು ಮನಸು ಆಗುತ್ತದೆಂದು ಅವರ ಹೇಳಿಕೆ. ಅದಕ್ಕೆ ಉತ್ತರವಾಗಿ ಕೆಳಗಿನ ವಿಷಯಗಳನ್ನು C M. ಪದ್ಮನಾಭಾಚಾರ್ಯರು ಹೇಳುತ್ತಾರೆ.

೧) ಜಗತ್ತು ಅಭಾಸ ಅಥವಾ ಅಧ್ಯಾಸವೆಂದು ಈ ಸಂದರ್ಭದಲ್ಲಿ ಮೇಲೆ ಮೇಲೆ ಹೇಳುವದರ ಪ್ರಯೋಜನವೇನು ?

೨) ೨೬ ನೇ ಶ್ಲೋಕದಲ್ಲಿ ಭೌತವಾದವನ್ನು ಪ್ರಸ್ತಾಪಿಸಿ ದೇಹ ಆತ್ಮ ಒಂದು ಎಂದು ಹೇಳಿದ ಮೇಲೆ ಆ ಭೌತವಾದಿಗೆ ಈ ಅದ್ವೈತವಾದವನ್ನು ಹೇಗೆ ಉಪದೇಶಿಸುತ್ತೀರಿ ಎಂದು ಶಂಕರಾಚಾರ್ಯರಿಗೆ ಕೆಳಬೇಕು.

೩) ಈಗ ಅರ್ಜುನನು ವ್ಯಾವಹಾರಿಕ ದೃಷ್ಟಿಯಿಂದ ಈ ಸಂದರ್ಭದಲ್ಲಿ–ಯುದ್ಧ, ಭೀಷ್ಮ, ಮರಣ, ಪಾಪ, ದುಃಖ ಮೊದಲಾದ ವಿಷಯುಗಳನ್ನು ಭಗವಂತನ ಎದುರಿಗೆ ಎತ್ತಿದ್ದಾನೆ ಇವುಗಳಿಗೆ ಉತ್ತರವನ್ನೂ ವ್ಯಾವಹಾರಿಕ ದೃಷ್ಟಿಯಿಂದಲೇ ಕೊಡುತ್ತಾನೆ ಇಂಥ ಅರ್ಜುನನ ಎದುರಿಗೆ ಪಾರಮಾರ್ಥಿಕ ದೃಷ್ಟಿಯಿಂದ ಉತ್ತರ ಹೇಳುವದು ಹೇಗೆ ಸಮಂಜಸವಾಗಬೇಕು ಜಗತ್ತು ಸುಳ್ಳು, ಬ್ರಹ್ಮ ಸತ್ಯವೆಂದು ಹೇಳುವದು ಅರ್ಜುನನ ವ್ಯಾವಹಾರಿಕ ಪ್ರಶ್ನೆಗಳಿಗೆ ಉತ್ತರ ಹೇಗಾಗ ಬೇಕು ಇದರಿಂದ ಅವನ ವ್ಯಾವಹಾರಿಕ ದುಃಖದ ನಿವೃತ್ತಿಯು ಹೇಗೆ ?

೪) ಬ್ರಹ್ಮನು ಪೂರ್ತಿಯಾಗಿ ಅವೇದ್ಯನೇ ಆಗಿದ್ದರೆ ಅವನ ವಿಷಯು ಹೇಳುವದರಿಂದ ಪ್ರಯೋಜನವೇನು ? ಅದರಿಂದ ಅರ್ಜುನನ ದುಃಖ ಪರಿಹಾರ ಹೇಗೆ **?**

೫) ಸ್ತ್ರೀ ಪರ್ವದೊಳಗಿನ ಮೇಲೆ ಕೊಟ್ಟ ಸಮಾನಾರ್ಥಕ ಶ್ಲೋಕವು ಅವ್ಯಕ್ತ ಶಬ್ದವನ್ನು ಬ್ರಹ್ಮನಿಗೆ ಹಚ್ಚುವದು ಜುಲುಮೆಯ ಕೆಲಸವಾಗುತ್ತದೆ.

೬) ಬ್ರಹ್ಮನು ಸೃಷ್ಟಿ ಲಯಕರ್ತನೆಂದು ಹೇಳಿದಾಗ ತಪ್ಪದೆ ಅವರು ಸ್ಥಿತಿಕರ್ತನೆಂದೂ ಹೇಳುತ್ತಾರೆ. ಆದರೆ ಶಂಕರಾನಂದರು ಮಾತ್ರ ಸ್ಥಿತಿ ಕರ್ತೃತ್ವ ವನ್ನು ಅಂತಃಕರಣದ ಕೆಲಸವೆಂದು ಹೇಳುತ್ತಾರೆ (**यद्वा प्रमाणैः सर्वैः न व्यज्यते व्यक्तीकर्तुं न शक्यते इति अव्यक्तं परं ब्रह्म । सर्वं व्यंजयतीति व्यक्तं अंत करणं मध्ये स्थिति काले येषां तानि व्यक्तमध्यानि । पितृपुत्रादि भेदं कल्पयित्वा अंतःकरणमेव प्रपंचनिर्वाहं करोति तेन व्यक्तमध्यानि**) ನಿಜವಾಗಿ ಅದ್ವೈತವಾದದಲ್ಲಿ, ಬ್ರಹ್ಮನಲ್ಲಿ ಯಾವ ಕರ್ತೃತ್ವವೂ ಇಲ್ಲ. ಮಾಯೆಯು ಎಲ್ಲವನ್ನೂ ನಡೆಸುವದರಿಂದ ಅದೇ ಕರ್ತೃ ಎನಿಸಿಕೊಳ್ಳುತ್ತದೆ ಆದುದರಿಂದ ನೀಲಕಂಠನು **अव्यक्त** ವೆಂದರೆ ಮಾಯೆಯೆಂದೇ ಹೇಳುತ್ತಾನೆ. ಹಗ್ಗದಲ್ಲಿ ಹಾವು ತೋರುವದರಿಂದ ಅದು ಹಗ್ಗದಲ್ಲಿ ಹುಟ್ಟುತ್ತದೆ ಹಗ್ಗದ ಜ್ಞಾನವಾದಾಗ ಹಾವು ತೋರದಿರುವದರಿಂದ ಆ ಹಗ್ಗದಲ್ಲಿ ಹಾವು ಲಯ ಹೊಂದುತ್ತದೆ, ಮಧ್ಯದಲ್ಲಿ ಮಾತ್ರ ಹಾವು ತೋರುತ್ತದೆ, ಹೀಗೆ ಯಾವನಿಗೆ ಹಗ್ಗ ತಿಳಿದಿಲ್ಲವೋ ಅವನಿಗೆ ಹಾವು ತೋರುತ್ತಿರುವಂತೆ ಯಾವನಿಗೆ ಬ್ರಹ್ಮ ತಿಳಿ ದಿಲ್ಲವೋ ಅವನಿಗೆ ಜಗತ್ತು ತೋರುತ್ತದೆ. ಹೀಗೆ ನಂಬುವದರಕ್ಕಿಂತ ಭ್ರಮೆ

ಯಲ್ಲಿ ಯಾವದು ತೋರುತ್ತದೆ, ಪೂರ್ತಿಯಾಗಿ ಅದು ಸುಳ್ಳು ಇಂದ್ರಿಯಗಳು ಅವುಗಳಲ್ಲಿರುವ ದೋಷ ನಿಮಿತ್ತವಾಗಿ ಹಗ್ಗವನ್ನು ನೋಡಿ ಹಾವೆಂದು ಭ್ರಮಿಸುತ್ತವೆ ನಿಜವಾಗಿ ನೋಡಿದಾಗ ಮಾಯೆ ಅಥವಾ ಅಜ್ಞಾನವು ಜಗತ್ತಿಗೆ ಸೃಷ್ಟಿ ಮೊದಲಾದವುಗಳನ್ನು ಮಧ್ಯಸ್ಥಿತಿಯಲ್ಲಿ ಎಂದೂ ಹುಟ್ಟಿಸುವದಿಲ್ಲ ಮೊದಲು ಕೊನೆಗೆ ಅವ್ಯಕ್ತವಿದ್ದುದು ಮಧ್ಯದಲ್ಲಿಯೂ ಅವ್ಯಕ್ತವಿರಲೇಬೇಕು, ಅವ್ಯಕ್ತ ಮತ್ತು ವ್ಯಕ್ತಪದಗಳು ಪರಸ್ಪರ ವಿರೋಧವನ್ನು ತೋರಿಸುತ್ತವೆ ಹಾಗಾದರೆ ಮಾಯೆಯು ಎಲ್ಲದಕ್ಕೂ ಕಾರಣವಾಗಿದೆ. ಅದು ಜಗತ್ತಿಗೆ ಕಾರಣವಲ್ಲ; ಜಗತ್ತು ಹೇಗೆ ನಡೆಯುತ್ತದೆಂಬುದನ್ನು ಮಾಯೆ ಹೇಳುವದಿಲ್ಲ ಆದರೆ ಜಗತ್ತು ಹೀಗೆ ನಡೆಯುತ್ತದೆಂಬುದರ ಕಲ್ಪನೆಯನ್ನು ಮಾಡಿಕೊಡುತ್ತಿದೆ **व्यक्त**ವು ಜಗತ್ತಿನ ಎಲ್ಲ ಕಾರ್ಯವನ್ನೂ ನಿರ್ವಹಿಸುತ್ತಿದೆ (ಅವ್ಯಕ್ತವು **माया** ಆದಾಗ ವ್ಯಕ್ತವೆಂದರೇನೆಂಬುವದನ್ನು ಇವರು ಸ್ಪಷ್ಟಪಡಿಸಿಲ್ಲ ನಿಜವಾದ ಜಗತ್ತಿನ ಎಲ್ಲ ವ್ಯಾಪಾರಗಳನ್ನೂ ಈ **व्यक्त** ವನ್ನು ಮಾಯೆಯು ನಿರ್ವಹಿಸುತ್ತಿದೆ

ಆದರೆ ಶಂಕರಾಚಾರ್ಯರಾಗಲಿ, ರಾಮಾನುಜಾಚಾರ್ಯರಾಗಲಿ **अव्यक्त**ಕ್ಕೆ 'ಬ್ರಹ್ಮ'ನೆಂದಾಗಲಿ, 'ಅಜ್ಞಾನ'ವೆಂದಾಗಲಿ ಅರ್ಥ ಮಾಡಿಲ್ಲ. ಅವರಿಬ್ಬರೂ ಮುಖ್ಯಾರ್ಥದಲ್ಲಿ "ಪ್ರಕಟವಾಗಿದ್ದ" ಎಂದು ಅರ್ಥೈಸಿದ್ದಾರೆ ಕಡೆಗೆ ಅದರ ಅರ್ಥವು— "ಅಜ್ಞಾತಗತ ಕಾಲದಿಂದ ಮನುಷ್ಯನು ಬರುತ್ತಾನೆ, ಮತ್ತು ಸ್ವಲ್ಪ ಕಾಲ ಬದುಕಿದ್ದು ವ್ಯಕ್ತನಾಗುತ್ತಾನೆ; ಮತ್ತು ಅಜ್ಞಾತಭವಿಷ್ಯದಲ್ಲಿ ಮುಳುಗುತ್ತಾನೆ" ಇದರ ಅರ್ಥವೆಂದರೆ ಮನುಷ್ಯ ಹೇಗೆ ಬಂದನು ಮತ್ತು ಎಲ್ಲಿಗೆ ಹೋಗುತ್ತಾನೆ ಇದು ತಿಳಿಯುವದಿಲ್ಲ ಶೆಕ್ಸ್‌ಪಿಯರನು ಹೇಳುವ ಹಾಗೆ— "It is a little life rounded off with a sleep" (ನಿದ್ರೆಯಿಂದ ಮುಕ್ತಾಯವಾದ ಇದೊಂದು ಚಿಕ್ಕ ಜೀವನ).

ಹೀಗೆ ಜೀವನದ ಪ್ರಾರಂಭವೂ ಮುಕ್ತಾಯವೂ ಅಜ್ಞೇಯವಾದರೆ ಇದೊಂದು ಅಜ್ಞೇಯ ವಾದವೆಂದು ಕಲ್ಪಿಸಲು ಯಾವ ಅಡ್ಡಿಯೂ ಇಲ್ಲ (Agnosticism). ಕೃಷ್ಣನು ಎಂದೂ ಅಜ್ಞೇಯವಾದಿಯಲ್ಲ. ಅವನು ಸರ್ವಜ್ಞನಾದುದರಿಂದ ಅರ್ಜುನನಿಗೆ ಜೀವನದ ಗೂಢರಹಸ್ಯವನ್ನು ಹೊರಗೆಡವಲಿಕ್ಕೆ ಅರ್ಜುನನ ಸಮ್ಮುಖದಲ್ಲಿ ನಿಂತಿದ್ದಾನೆ ಶೋಕತಪ್ತನಾದ ಅರ್ಜುನನಿಗೆ ಎಲ್ಲವೂ ಗೂಢವೆಂದು ಹೇಳುವದು ಸರಿಯಲ್ಲ.

ಆದರೆ ರಾಮಾನುಜಾಚಾರ್ಯರ ಮತ್ತು ಶಂಕರಾಚಾರ್ಯರ ಅಭಿಪ್ರಾಯದಂತೆ ೨೬ನೇ ಶ್ಲೋಕದಿಂದ ೨೮ನೇ ಶ್ಲೋಕ ಪೂರ್ತಿಯಾಗಿ ಭೌತ ಅಥವಾ ನಾಸ್ತಿಕ ಇಲ್ಲವೆ ಚಾರ್ವಾಕ ವಾದವನ್ನು ಕೃಷ್ಣನು ಪ್ರಸ್ತಾಪಿಸಿದ್ದಾನೆಂದು, ದೇಹಾತಿರಿಕ್ತ

ಆತ್ಮನಿಲ್ಲ. ದೇಹ ಹುಟ್ಟುತ್ತದೆ (ಪೂರ್ವದ ಇತಿಹಾಸ ಅಥವಾ ಚರಿತ್ರೆ ಗೊತ್ತಿಲ್ಲ). ಅದರ ಮುಂದಿನ ಜೀವನ ಸ್ಪಷ್ಟವಾಗಿದೆ ರಾಮಾನುಜಾಚಾರ್ಯರು ಮಾತ್ರ ಗಡಿಗೆಯು ಒಡೆದಾಗ ಅದು ತುಣುಕುಗಳ ರಾಶಿಯಾಗಿ ಕಣ್ಣಿಗೆ ಕಾಣುವದು ಮತ್ತು ನಮಗೆ ಶೋಕವಾಗುವದು. ಆದರೆ ಮನುಷ್ಯನು ಸತ್ತಮೇಲೆ ಮಾತ್ರ ಅವನು ಕಾಣದಾಗುತ್ತಾನೆ. ಆದುದರಿಂದ ಅವನಿಗೆ ಶೋಕಕ್ಕೆ ಕಾರಣವಿಲ್ಲ ಎಂದು ಹೇಳುತ್ತಾರೆ.

ಈ ತರ್ಕಸರಣಿಯು ಬುದ್ಧಿಗೆ ಹಿಡಿಸುವದಿಲ್ಲ. ಭೌತ ಅಥವಾ ಚಾರ್ವಾಕ ವಾದದಲ್ಲಿ ದೇಹಾತಿರಿಕ್ತನಾದ ಆತ್ಮನು ಇಲ್ಲದ್ದರಿಂದ ಮನುಷ್ಯನು ಸತ್ತಮೇಲೆ ಉಳಿಯುವದೆಂದರೆ ಬೂದಿ ಅಥವಾ ಮಣ್ಣು. ಮಣ್ಣು ಮಣ್ಣಿನಲ್ಲಿ ಹೋದ. ಇವುಗಳೆಲ್ಲದರ ರಹಸ್ಯವೇನಿದೆ ? ತಿಳಿಯಬಾರದ್ದು ಏನಿದೆ ? ಜನನ ಪೂರ್ವದಲ್ಲಿ ಮರಣಾನಂತರದಲ್ಲಿ ಅಜ್ಞೇಯವಾದ ರಹಸ್ಯವಿರಬೇಕಾದರೆ ಆತ್ಮನಿರಬೇಕು ಆತ್ಮ ನಿಲ್ಲದಾಗ ದೇಹದ ಗತಿಯು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಆದುದರಿಂದ ಈ ತಾತ್ಪರ್ಯಗಳು ತರ್ಕಶುದ್ಧವಾಗಿಲ್ಲ. ಇದರಲ್ಲಿ ರಾಘವೇಂದ್ರ ತೀರ್ಥರ ಟಿಪ್ಪಣಿ ಮಾತ್ರ ಮಧ್ವಾಚಾರ್ಯರ ಅರ್ಥ ವಿವರಣೆಯನ್ನು ಸ್ಪಷ್ಟಪಡಿಸುತ್ತಿದೆ. ಜನನ–ಮರಣಗಳ ಸ್ವರೂಪ ನಿರೂಪಣೆಯಿಂದ ಈ ಅರ್ಥವನ್ನು ಭಗವಂತನು ಸ್ಪಷ್ಟಪಡಿಸುತ್ತಾನೆ. ಜೀವ ಶರೀರಗಳು ಅವ್ಯಕ್ತ ಎಂದರೆ ಪ್ರಕೃತಿಯಿಂದ ಹುಟ್ಟಿರುತ್ತವೆ ಮಧ್ಯದಲ್ಲಿ ಎಂದರೆ ಹುಟ್ಟು–ಸಾವಿನ ನಡುವೆ ಕಾರ್ಯರೂಪದಿಂದ (ದೇಹ ರೂಪದಿಂದ) ಉಳಿಯುತ್ತವೆ ಆಮೇಲೆ ಪುನಃ ಅವ್ಯಕ್ತದಲ್ಲಿ ದೇಹಗಳು ಲಯಹೊಂದುತ್ತವೆ. ದೇಹಗಳ ಪರಿಸ್ಥಿತಿಯು ಹೀಗಿರುವಾಗ ಶೋಕಕ್ಕೆ ಕಾರಣವೇ ಇಲ್ಲ. ಅಥವಾ ೨೬, ೨೭ ಮತ್ತು ೨೮ ಈ ಮೂರೂ ಶ್ಲೋಕಗಳಿಗೆ ಬೇರೆ ತಿರುವನ್ನೇ ಕೊಡುತ್ತಾರೆ ದೇಹ ನಾಶವು ಅವಶ್ಯ ಭಾವಿಯಾದುದರಿಂದ ಅದನ್ನು ಸಾಧಿಸುವ ಕಾರಣವಿಲ್ಲ. ಯಾಕೆಂದರೆ ಅದನ್ನು ನೀನು ಸಹ ಒಪ್ಪಿರುತ್ತೀ. ಆದುದರಿಂದ ಶೋಕ ಮಾಡುವ ಕಾರಣವಿಲ್ಲ. ಈ ಜೀವನು ನಿಯತವಾಗಿ ಹುಟ್ಟುವವನು, ನಿಯತವಾಗಿ ಸಾಯುವವನು ಎಂದು ನೀನು ಭಾವಿಸಿದ್ದರೆ ನೀನು ಶೋಕ ಮಾಡುವ ಕಾರಣವಿಲ್ಲ. ಯಾಕೆಂದರೆ ಅವು ಅಪರಿಹಾರ್ಯವೆಂದು ನೀನೇ ಒಪ್ಪಿರುತ್ತಿ. ಈ ಅರ್ಥವನ್ನೇ ವಿವರಿಸುವವು ಮುಂದಿನ ಎರಡು ಶ್ಲೋಕಗಳು. ಹಿಂದೆ ಹೇಳಿದಂತೆ ಜೀವನು ಅಸ್ವತಂತ್ರನಾದುದರಿಂದ ಅಪರಿಹಾರ್ಯ ಜನಿಮೃತಿಗಳಿಗೆ ಶೋಕವೇಕೆ ? ಆದುದರಿಂದ ಜೀವನ ವಿಷಯದಲ್ಲಿ ಶೋಕವನ್ನು ಹೇಗೆ ಮಾಡಬಾರದೋ ಹಾಗೆ ಜೀವನು ಸ್ವತಂತ್ರನೆಂಬ ಅಭಿಪ್ರಾಯವನ್ನೂ ತಾಳಬಾರದು. ಇದು ಮುಂದಿನ ಎರಡು ಶ್ಲೋಕಗಳ ತಾತ್ಪರ್ಯವೆಂದು ರಾಘವೇಂದ್ರ ತೀರ್ಥರ ಮತ.

ಲೋಕಮಾನ್ಯ ಟಿಳಕರು ಈ ಶ್ಲೋಕದ ಮೇಲೆ ಟಿಪ್ಪಣಿಯಲ್ಲಿ ಈ ರೀತಿಯಾಗಿ ಬರೆದಿದ್ದಾರೆ— **अव्यक्त** ವೆಂದರೆ 'ಇಂದ್ರಿಯಗಳಿಗೆ ಗೋಚರವಾಗದ' ಎಂದು ಅರ್ಥ. ಮೂಲ ಒಂದು ಅವ್ಯಕ್ತ ಪದಾರ್ಥದಿಂದ ಕ್ರಮಾನುಕ್ರಮದಿಂದ ಎಲ್ಲವೂ ವ್ಯಕ್ತವಾಗುತ್ತ ಹೋಗುತ್ತದೆ. ಕೊನೆಗೆ ಪ್ರಲಯಕಾಲಕ್ಕೆ ಎಲ್ಲ ವ್ಯಕ್ತ ಸೃಷ್ಟಿಯು ಅವ್ಯಕ್ತದಲ್ಲಿ ಲಯ ಹೊಂದುತ್ತದೆ (VIII – ೧೮ ಗೀತಾ). ಈ ಸಾಂಖ್ಯ ಸಿದ್ಧಾಂತಕ್ಕೆ ಅನುಸರಿಸಿ ಇಲ್ಲಿ ಯುಕ್ತಿ ವಾದವು ಇರುತ್ತದೆ. ಇವರು ಸ್ತ್ರೀಪರ್ವದಿಂದ ಮತ್ತೊಂದು ಶ್ಲೋಕವನ್ನು ಸಮಾನಾರ್ಥಕವೆಂದು ಉದಾಹರಿಸಿದ್ದಾರೆ. ಹಿಂದೆ **अभाव** ಎಂದು ಹೇಳಿದ ಶ್ಲೋಕ (ಮಹಾ ಸ್ತ್ರೀ ೨–೬) ದ ಮುಂದೆ ಸ್ತ್ರೀ ಪರ್ವದಲ್ಲಿ ೨–೧೩ರಲ್ಲಿ **अदर्शनादापतिताः पुनश्चादर्शनं गता। न तेतव न तेषांत्वं तत्र कापरि देवना ॥** "ಹೀಗೆ ಸಾಂಖ್ಯ ಮತ್ತು ವೇದಾಂತ ಈ ಎರಡೂ ಶಾಸ್ತ್ರಗಳ ರೀತಿಯಿಂದಲೂ ಶೋಕ ಮಾಡುವದು ವ್ಯರ್ಥ. ಹಾಗೆಯೇ ಆತ್ಮನು ಅನಿತ್ಯನೆಂದು ಭಾವಿಸಿದರೂ ಶೋಕ ಮಾಡುವದು ವ್ಯರ್ಥವೆಂದ ಮೇಲೆ ಜನರು ಮರಣದ ವಿಷಯದಲ್ಲಿ ಯಾಕೆ ಶೋಕಿಸುತ್ತಾರೆ ? ಆತ್ಮಸ್ವರೂಪದ ವಿಷಯದಲ್ಲಿರುವ ಅಜ್ಞಾನವೇ ಕಾರಣವೆಂದು ಅದಕ್ಕೆ ಉತ್ತರ" ಎಂದು ಹೇಳಿ ಮುಗಿಸಿದ್ದಾರೆ

ಪ್ರಕಾಂಡ ಪಂಡಿತ ಶ್ರೀಪಾದಶಾಸ್ತ್ರಿ ಜೇರೆ ಇವರು ಗೀತೆಯ ಮೇಲೆ ಬರೆದ "ಜ್ಞಾನಗಂಗೆ' ಎಂಬ ಗ್ರಂಥದಲ್ಲಿ **भूत** ಶಬ್ದಕ್ಕೆ ದೇಹವೆಂದು ಅರ್ಥ ಮಾಡಿದ್ದಾರೆ. "ಪ್ರಾಣಿಗಳ ದೇಹಗಳು ಉತ್ಪನ್ನವಾಗುವ ಮೊದಲು ಇರುವದಿಲ್ಲ. ಮೊದಲು ಬರೇ ಹುಡುಗಿಯಾಗಿದ್ದವಳು ಲಗ್ನವಾಗಿ ಹುಡುಗನನ್ನು ಹೆರೆಯುತ್ತಾಳೆ. ಇದರಿಂದ ಮೊದಲು ಹುಡುಗನಿದ್ದಿಲ್ಲವೆಂದು ಸಿದ್ಧವಾಗುತ್ತದೆ ಮರಣವಾದ ಮೇಲೆ ಈ ಭೂತವೆಂದರೆ ದೇಹವು ಇರುವದಿಲ್ಲ ಎಂದರೆ ಮಧ್ಯ ಕೆಲವು ಕಾಲ ಮಾತ್ರ ಇರುತ್ತದೆ. ನಿಮ್ಮ ಹತ್ತಿರ ಮೊದಲು ಕಪರ್ದಿಕಾಸು ಸಹ ಇಲ್ಲ. ಸ್ವಪ್ನ ಬಿತ್ತು; ಅದರಲ್ಲಿ ಒಂದು ಲಕ್ಷ ರೂಪಾಯಿ ಲಾಟರಿಯಲ್ಲಿ ಬಹುಮಾನ ದೊರಕಿತು ಆ ಲಕ್ಷ ರೂಪಾಯಿಯಿಂದ ಕಾರು ತೆಗೆದುಕೊಳ್ಳಬೇಕು, ಮನೆ ಕಟ್ಟಬೇಕು, ಮದುವೆಯಾಗಬೇಕೆಂದು ಠರಾಯಿಸಿದಾಗ ಎಚ್ಚರವಾಯಿತು. ಆಗ ಪಲ್ಲೆ ತರಲಿಕ್ಕೆ ನಾಲ್ಕು ಪೈಸೆ ಸಹ ಇಲ್ಲ ಆಗ ನಡುವೆ ನಿಮಗೆ ಸಿಕ್ಕ ಲಕ್ಷ ರೂಪಾಯಿ ಖರೆ ಎಂದು ತಿಳಿಯಬೇಕೆ ? ಇಲ್ಲ ! ಹಾಗೆಯೇ ಈ ದೇಹ ಬರೀ ಮಧ್ಯದಲ್ಲಿ ತೋರುವದು ಮಾತ್ರ". ಅಗ್ಗದರದ ಅದ್ವೈತಿಗಳ ದೃಷ್ಟಾಂತಗಳು ಹುರುಳಿಲ್ಲದವು. ಸ್ವಲ್ಪ ವಿಚಾರಿಸಿ ನೋಡಿದರೆ ಇಂಥದೇ ದೃಷ್ಟಾಂತದಿಂದ ಸುಲಭವಾಗಿ ಸ್ವಲ್ಪ ದಿವಸ ಇದ್ದ ಈ ದೇಹ ಸತ್ಯವಾದುದು ಎಂದು ಸಿದ್ಧಪಡಿಸಬಹುದು. ಅದು ಹೇಗಂದರೆ ಹುಡುಗಿಯಲ್ಲಿ ಹುಡುಗನ ದೇಹವಿಲ್ಲದಿದ್ದರೂ ಹುಡುಗಿಯು ಬೆಳೆದು ದೊಡ್ಡವ

ಳಾದ ಮೇಲೆ ಪತಿಯೊಡನೆ ಸಂಗವಾದಾಗ ಶುಕ್ರ-ಶೋಣಿತಗಳು ಬೆರೆತು ಬೀಜ ಸಿದ್ಧವಾಗುವದು ಆ ಸಿದ್ಧವಾದ ಸತ್ಯ ಬೀಜದಿಂದ ಸತ್ಯ ದೇಹ ಹುಟ್ಟುವದು ಸತ್ಯವಾದ ದೇಹ ಬೆಳೆಯುತ್ತ ಉಳಿದು ಮರಣದಿಂದ ಆ ದೇಹವು ಪೃಥಃಕ್ಕರಣ ಹೊಂದಿ ಭೂತಗಳಲ್ಲಿ ಬೆರೆಯುವದು, ಮಣ್ಣಾಗುವದು. ಮಣ್ಣು ಸತ್ಯವೇ ! ಸತ್ಯದಿಂದ ಹುಟ್ಟಿ, ಸತ್ಯವಾಗಿ ಬಾಳಿ, ಸತ್ತ ಮೇಲೆ ಸಹ ದೇಹವು ಅವಸ್ಥಾಂತರ ಹೊಂದುವದು. ಸತ್ಯವಾದ ಪ್ರಕೃತಿಯು ಅವಸ್ಥಾಂತರ ಹೊಂದುವದು, ನಾಶ ಹೊಂದುವದಿಲ್ಲ. Matter is never lost ಇದೇ ವಿಜ್ಞಾನದ ಸಿದ್ಧಾಂತ. ದೇಹ ನಶ್ವರವಾಗಿದ್ದರೂ ವಿಕಾರ ಹೊಂದುತ್ತಿದ್ದರೂ ಸುಳ್ಳಲ್ಲ ಸತ್ಯವಾದುದು ಅದು ಆಭಾಸವಲ್ಲ. ಆದುದರಿಂದ ಪ್ರಪಂಚವೂ ನಶ್ವರ, ವಿಕಾರಶಾಲಿ, ಅಸತ್ಯವಲ್ಲ, ಮಿಥ್ಯಾ ಅಲ್ಲ. ಇದಕ್ಕೆ ದೃಷ್ಟಾಂತವನ್ನು ಹೀಗೆ ಹೇಳಬಹುದು. ಮೊದಲು ಅವನ ಹತ್ತಿರ ದುಡ್ಡು ಇರಲಿಲ್ಲ ಎಂದರೆ ಅದು ನಿಜವಾಗಿ ಇನ್ನೊಂದು ಕಡೆಗೆ ಆ ದುಡ್ಡು ಸತ್ಯವಾಗುತ್ತದೆ. ಆಮೇಲೆ ದೈವಯೋಗದಿಂದ ಸತ್ಯವಾಗಿ ಲಾಟರಿ ಸಂಸ್ಥೆಯಲ್ಲಿದ್ದ ಲಕ್ಷ ರೂಪಾಯಿ ಇವನಿಗೆ ಬರುತ್ತದೆ ಇವನು ಸ್ವಲ್ಪ ದಿವಸ ಅದರೊಡನ ಸುಖಬಡುತ್ತಾನೆ. ಆ ಮೇಲೆ ಒಂದು ದಿನ ದರೋಡೆಯಾಗಿ ದರೋಡೆಗಾರರು ಎಲ್ಲವನ್ನೂ ದೋಚಿಕೊಂಡು ಹೋಗುತ್ತಾರೆ. ಬಹಳ ದುಃಖ ವಾಗುತ್ತದೆ. ಮೊದಲಿದ್ದಂತೆ ನಿಷ್ಕಿಂಚನನಾಗುತ್ತಾನೆ ಆದರೆ ಅವನಿಗೆ ಸಿಕ್ಕು ಕಳೆದುಹೋದ ದುಡ್ಡು ಸತ್ಯವಾದುದು, ಅದರಿಂದ ಅವನಿಗಾದ ಸುಖ–ದುಃಖ ಗಳು ಸಾಕ್ಷಿಗೋಚರವಾದುದರಿಂದ ಸತ್ಯಭೂತವಾದವು ಇಂತಹ ಉದಾಹರಣೆ ಗಳಿಂದ ಸಿದ್ಧಮಾಡಿದ್ದು ತೀಕ್ಷ್ಣತರ್ಕಕ್ಕೆ ನಿಲ್ಲುವದಿಲ್ಲ. ಆದುದರಿಂದ In philo-shophy anology is a bad argument ಎಂದು ಹೇಳುತ್ತಾರೆ ಶೋಕ ಮಾಡದಿರಲಿಕ್ಕೆ ದೇಹವು ಮಿಥ್ಯಾ ಎಂದು ಅಲ್ಲ; ದೇಹವು ಸತ್ಯವಾದುದೇ ಆದರೆ ಅದು ನಶ್ವರವಾದುದೆಂದು ಅದಕ್ಕೆ ಶೋಕ ಮಾಡಬಾರದೆಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ ಮಧ್ಯ ಅದ್ವೈತವಾದವು ಶಿವಪೂಜೆಯಲ್ಲಿ ಕರಡಿಯನ್ನು ಬಿಟ್ಟಂತೆ ಗದ್ದಲವನ್ನು ಎಬ್ಬಿಸುತ್ತಿದೆ. ಅದ್ವೈತ ವಾದದಲ್ಲಿ ಎಲ್ಲ ಮಿಥ್ಯೆಯಾದು ದರಿಂದ ಯುದ್ಧಕ್ಕೆ ಪ್ರಸಕ್ತಿಯೇ ಹುಟ್ಟುವದಿಲ್ಲ. ಯುದ್ಧ ಮಾಡುವದಕ್ಕೆ ಪ್ರೇರ ಣೆಯೇ ದೊರೆಯುವದಿಲ್ಲ.

ಚಿದ್ಭವಾನಂದರು ತಮ್ಮ ಭಗವದ್ಗೀತೆಯಲ್ಲಿ ಸರಿಯಾಗಿ ಹೇಳುತ್ತಾರೆ. "When a body fails to function properly it disintigrates and undergoes the modification called death. But other bodies crop up from the same modified matter. They contain in-herent propelling force called desire which drives them on to activities of life. Birth and death are thus a matter, of course".

ದೇಹವು ತನ್ನ ಕೆಲಸವನ್ನು ಸರಿಯಾಗಿ ಮಾಡಲಿಕ್ಕೆ ಅಸಮರ್ಥವಾದ ಮೇಲೆ ಅದು ಪೃಥಃಕ್ಕರಣ ಹೊಂದುತ್ತದೆ ಆಮೇಲೆ ಮರಣವೆಂಬ ಪರಿಣಾಮವನ್ನು ಹೊಂದುತ್ತದೆ. ಆದರೆ ಅದೇ ವಿಕಾರ ಹೊಂದಿದ ಪ್ರಕೃತಿಯಿಂದ ಇತರ ದೇಹಗಳು ಮೇಲೆ ಬರುತ್ತವೆ. ಅವುಗಳಲ್ಲಿ ಇಚ್ಛೆಯೆಂಬ ಪ್ರಬಲವಾದ ಒಂದು ಪ್ರಚೋದನೆಯು ಇರುತ್ತದೆ. ಅದು ಅವುಗಳನ್ನು ಮತ್ತೆ ಜೀವನದ ಚಟುವಟಿಕೆಗಳಿಗೆ ಹಚ್ಚುತ್ತದೆ ಹೀಗೆ ಜನನ-ಮರಣಗಳು ವ್ಯವಹಾರದಲ್ಲಿ ಸ್ವಾಭಾವಿಕವಾದ ಕ್ರಮಗಳು.

ಆರ್ ಬಿ ಲಾಲ್ ಅವರು ಈ ವಿಷಯದಲ್ಲಿ ಗೀತೆಯ ನಿಶ್ಚಿತ ಅಭಿಪ್ರಾಯವನ್ನು ಹೀಗೆ ಹೇಳುತ್ತಾರೆ— The world is as real as our own hunger and Thirst. There is no other way to God than in and through his creation The ideal, the spirit and the distant goal have to be pursued But in doing so we cannot afford to ignore the demands of the actual. . . There can be no hope of reaching God if the world and its requirements are regarded as unreal''. "ನಮ್ಮ ಹಸಿವೆ, ತೃಷೆ ಇವುಗಳಷ್ಟೇ ಸತ್ಯವಾದುದು ಈ ಜಗತ್ತು. ಅವನ ಸೃಷ್ಟಿಯೊಳಗಿಂದಲೇ ನಮಗೆ ದೇವರ ಕಡೆಗೆ ಹೋಗುವ ಮಾರ್ಗವು ದೊರೆಯುತ್ತಿದೆ. ನಮ್ಮ ಧ್ಯೇಯ, ನಮ್ಮ ಆತ್ಮ ನಮ್ಮ ದೂರದ ಗುರಿಯನ್ನು ನಾವು ಮುಟ್ಟಬೇಕಾಗಿದೆ. ಆದರೆ ಅವುಗಳ ಬೆನ್ನು ಹತ್ತಿದಾಗ ನಾವು ಸದ್ಯದ ಬೇಡಿಕೆಗಳನ್ನು ತಿರಸ್ಕರಿಸಲಾರೆವು. ......ಜಗತ್ತನ್ನು ಮತ್ತು ಅದಕ್ಕೆ ಬೇಕಾದವುಗಳನ್ನು ಅಸತ್ಯವೆಂದು ಭಾವಿಸಿದರೆ ನಮಗೆ ದೇವರನ್ನು ಮುಟ್ಟುವ ಆಶೆಯೇ ಇಲ್ಲ".

ಆದುದರಿಂದ ಅದ್ವೈತವಾದದ ಜಗತ್ತು ಮಿಥ್ಯೆಯೆಂಬ ತತ್ವವನ್ನು ಗೀತೆಯಲ್ಲಿ ಸೇರಿಸಿದರೆ ಆಗುವ ಅನರ್ಥವು ಈಗ ಸ್ಪಷ್ಟವಾಗಿರಬೇಕು. ಶ್ರೀಕೃಷ್ಣನಿಗೆ ಒಂದು ಮತವಿದೆ. ಅದು ಗೀತೆಯಲ್ಲಿ ಪ್ರಶಂಸಿಸಲ್ಪಟ್ಟಿದೆ. ಅದನ್ನು ತಿಳಿದುಕೊಂಡು ಅದರಿಂದ ಜೀವನದಲ್ಲಿ ಮಾರ್ಗದರ್ಶನ ಹೊಂದೋಣ.

**आश्चर्यवत् पश्यति कश्चिदेनं आश्चर्यवद् वदति तथैव चान्यः ।**
**आश्चर्यवच्चैनमन्यः शृणोति श्रुत्वाप्येनं वेद न चैव**
**कश्चित् ॥ २९ ॥**

**ಅವತರಣಿಕೆ :**

ಮಧ್ವಾಚಾರ್ಯರು ಭಾಷ್ಯದಲ್ಲಿ ಅವತರಣಿಕೆಯನ್ನು ಹೀಗೆ ಕೊಡುತ್ತಾರೆ— "ದೇಹ ಯೋಗ-ವಿಯೋಗರೂಪ, ಜನನ-ಮರಣಗಳು ನಿಯತವಾದುದರಿಂದ

ಆತ್ಮನು ಈಶ್ವರನಿಗೆ ಸದೃಶನಾದುದರಿಂದ ಅವನು ಪೂರ್ತಿಯಾಗಿ ನಾಶಹೊಂದಲಾರನು. ಆದುದರಿಂದ ಜೀವನ ವಿಷಯದಲ್ಲಿ ಶೋಕ ಮಾಡುವದು ಬೇಡ ಎಂದು ಉಪಸಂಹಾರ ಮಾಡಲಿಕ್ಕೆ ಈಶ್ವರನ ಅತುಲ ಸಾಮರ್ಥ್ಯವನ್ನು ಮತ್ತೆ ತೋರಿಸುತ್ತಾರೆ (ಈ ಶ್ಲೋಕದಿಂದ).

ಈ ಶ್ಲೋಕವನ್ನು ಜೀವ–ಈಶ್ವರ ಉಭಯ ಪರವಾಗಿ ಯೋಜಿಸಿದ್ದಾರೆ— (೧) (ಜೀವ ಪರವಾಗಿ) ಯಾವನೋ ಒಬ್ಬ (ಸಾತ್ವಿಕ ಜೀವನು) ನು ಈ ಜೀವನನ್ನು ಪೂರ್ವದಲ್ಲಿ ಹೇಳಿದಂತೆ ಸ್ವರೂಪತಃ ನಿತ್ಯನು. ದೇಹಯೋಗ–ವಿಯೋಗರೂಪ, ಜನನ–ಮರಣಗಳನ್ನು ಹೊಂದುವವನು ಈಶ್ವರಾಧೀನನು ಎಂದು ನೋಡುತ್ತಾನೆಯೋ ಆ ಜೀವನು (ಆಶ್ಚರ್ಯವತ್) ಆಶ್ಚರ್ಯನೇ (ದುರ್ಲಭನು) ಮತ್ತು ಮತ್ತೊಬ್ಬ ಜೀವನು, ಹಾಗೆಯೇ— ಜೀವನು ಪರಮಾತ್ಮಾಧೀನನು ಸ್ವರೂಪತಃ ನಾಶವಿಲ್ಲದವನು, ದೇಹನಾಶ ಉಳ್ಳವನು ಎಂದು ಹೇಳುತ್ತಾನೆಯೋ ಆ ಜೀವನು ದುರ್ಲಭನು; ಮತ್ತೊಬ್ಬ ಯಾವ ಜೀವನು ಈ ಜೀವನನ್ನು ಮೊದಲು ಹೇಳಿದಂತೆ ಕೇಳುತ್ತಾನೆಯೋ ಆ ಜೀವನು ಆಶ್ಚರ್ಯನೇ ! (ದುರ್ಲಭನೇ) ಮತ್ತು ಯಾವ ಜೀವನಾದರೂ ಈ ಜೀವನನ್ನು ಕೇಳಿಯೂ (ಹೇಳಿಯೂ, ನೋಡಿಯೂ) ಸರಿಯಾಗಿ ತಿಳಿದುಕೊಳ್ಳುವದೇ ಇಲ್ಲ.*

**ಅವತರಣಿಕೆ :**

ಹಾಗಾದರೆ ಆ ಆಶ್ಚರ್ಯ ಯಾವದು ? ಭಗವಂತನೇ ಎಂದು ಈ ಶ್ಲೋಕದಿಂದ ಹೇಳುತ್ತಾರೆ—

(೨) (ಈಶ್ವರ ಪರವಾಗಿ) ಯಾವನೋ ಒಬ್ಬನು ಆಶ್ಚರ್ಯಕರನಾಗಿಯೇ ಇರುವ ಪರಮೇಶ್ವರನನ್ನು ಆಶ್ಚರ್ಯನೆಂದು ನೋಡುತ್ತಾನೆ, ಹಾಗೆಯೇ ಇನ್ನೊಬ್ಬನು ಆಶ್ಚರ್ಯಕರನಾಗಿಯೇ ಇರುವ ಭಗವಂತನನ್ನು ಆಶ್ಚರ್ಯಕರನೆಂದು ಹೇಳುತ್ತಾನೆ, ಮತ್ತೊಬ್ಬನು ಆಶ್ಚರ್ಯಕರನಾಗಿಯೇ ಇರುವ ಭಗವಂತನನ್ನು ಆಶ್ಚರ್ಯಕರನೆಂದು ಕೇಳುತ್ತಾನೆ. ಹೀಗೆ ಅವನು ಕೇಳಿಯೂ ಸಹ ಅವನನ್ನು ತಿಳಿದಿಲ್ಲ.

**ವಿಶೇಷ ಟಿಪ್ಪಣಿಗಳು :**

ಈ ಶ್ಲೋಕದಲ್ಲಿ **एनं** ಎಂಬ ಸರ್ವನಾಮವನ್ನು ಭಗವಂತನು ಉಪಯೋಗಿಸಿದ್ದಾನೆ. ಆದರೆ ೨೬ನೇ ಶ್ಲೋಕದವರೆಗೆ ಇದರ ಪೂರ್ವಗಾಮಿ ಶಬ್ದವು ದೊರಕು

* "ಈ ಪ್ರಕಾರವಾಗಿ ಜೀವನಸ್ವರೂಪವನ್ನು ತಿಳಿದವರು ದುರ್ಲಭರು ನೀನು ಜೀವನನ್ನು ತಿಳಿಯದೇ ಇರುವದರಿಂದ ಶೋಕ ಪಡುತ್ತೀಯೆ; ಜೀವನಸ್ವರೂಪವನ್ನು ಸರಿಯಾಗಿ ತಿಳಿದವರು ಶೋಕ ಪಡುವದಿಲ್ಲ." (ಸತ್ಯಧ್ಯಾನ ತೀರ್ಥರು)

ವದಿಲ್ಲ. ೨೭ನೇ ಶ್ಲೋಕದಲ್ಲಿ **नैनं शोचितुमर्हसि** ಎಂದು ಜೀವನು ಶೋಕಾರ್ಹನಲ್ಲವೆಂದು ಪ್ರಸಕ್ತನಾಗಿದ್ದಾನೆ. ಹೀಗೆ ಜೀವನ ಪ್ರಸಕ್ತಿ ಇದ್ದಂತೆ ಹಿಂದಿನ ಶ್ಲೋಕಗಳಲ್ಲಿ ಪರಮಾತ್ಮನ ಮಹಾತ್ಮೆಯು ಒಂದು ಒಳಸೆಳವು ನಡದೇ ಇದೆ. ಆದುದರಿಂದ ಮಧ್ವಾಚಾರ್ಯರು ಈ ಶ್ಲೋಕವನ್ನು ಜೀವನಿಗೂ ಅನ್ವಯಿಸುತ್ತಾರೆ. ಪರಮೇಶ್ವರನಿಗೂ ಅನ್ವಯಿಸುತ್ತಾರೆ ಜೀವನು ಆತ್ಮಾನುಭವಕ್ಕೆ 'ನಾನು' ಎಂದು ಗೋಚರನಾಗುತ್ತಾನೆ. ಇದು ಎಲ್ಲರ ಅನುಭವಕ್ಕೆ ಬಂದಿದ್ದರೂ ಜೀವನು ಪರಮಾತ್ಮನ ಮೇಲೆ ಹೇಗೆ 'ಅವಲಂಬಿಸಿದ್ದಾನೆ' ಎನ್ನುವದನ್ನು ಮಾತ್ರ ಬಹು ಜನರು ಅರಿತಿಲ್ಲ ಜೀವನ ಅಸ್ವತಂತ್ರತೆಯು ಅಧ್ಯಾತ್ಮ ಜೀವನದ ತಳಪಾಯವಾಗಿದೆ. ಯಾಕೆಂದರೆ ನಾನು ಅಸ್ವತಂತ್ರನು, ದೇವನು ಸ್ವತಂತ್ರನು ಎಂಬುದೇ ಎಲ್ಲ ಆಧ್ಯಾತ್ಮ ಶಾಸ್ತ್ರದ ಮೂಲ ಮಂತ್ರವು ಆದುದರಿಂದ ಈ ಜ್ಞಾನವಿದ್ದ ಜೀವನು 'ಆಶ್ಚರ್ಯವತ್' ಎಂದರೆ ಅಪರೂಪನು ಎನಿಸುತ್ತಾನೆ. ಯಾಕೆಂದರೆ ಅವನು ಆಶ್ಚರ್ಯಪಡುವ ಹಾಗೆ ಅಪರೂಪನು (ಕ್ವಚಿತ್ತಾಗಿ ದೊರೆಯುತ್ತಾನೆ). ಈ ಚಿಕ್ಕದಾದ ಅಪೂರ್ತಿ ಅಣುವು ಅನಂತ ದೇವನಿಗೆ ಹೋಲಿಸಿದಾಗ ಜೀವನ ಅಲ್ಪತ್ವವು ಮನದಟ್ಟಾಗುತ್ತದೆ.

ಆದರೆ ಸಿ. ಎಮ್ ಪದ್ಮನಾಭಾಚಾರ್ಯರು ಹೇಳಿದ ಹಾಗೆ— He who realises the true character of the Jeeva and Speaks of it to his brothers and even he who cares to hear of it is rare After all one may remain as unwise at the end of a course of instruction as at the beginning, for obvious reasons'' " ಜೀವನ ನಿಜವಾದ ಸ್ವರೂಪವನ್ನು ಅನುಭವಿಸಿ, ಅದನ್ನು ತನ್ನ ಬಾಂಧವರಿಗೆ ಹೇಳುವವನು ಬಹಳ ಅಪರೂಪ, ಮತ್ತು ಯಾವನು ಅದನ್ನು ಕೇಳಲಿಕ್ಕೆ ಇಚ್ಛಿಸುವನೋ ಅವನೂ ಸಹ ಬಹಳ ಅಪರೂಪ. ಏನೇ ಆದರೂ ಎಷ್ಟು ಉಪದೇಶ ಮಾಡಿದರೂ ಉಪದೇಶದ ಮೊದಲು ಇದ್ದಂತೆಯೇ ಕೊನೆಗೂ ಅಷ್ಟೇ ಅಜ್ಞನಾಗಿ ಉಳಿಯಬಹುದು. ಇದಕ್ಕೆ ಕಾರಣಗಳು ಸ್ಪಷ್ಟವಾಗಿವೆ".

ಇನ್ನು **एनं** ಎಂಬುದನ್ನು ದೇವನಿಗೆ ಹಚ್ಚಿದರೆ, ಈ ಶ್ಲೋಕದಿಂದ— "ಆಶ್ಚರ್ಯದಲ್ಲಿ ಆಶ್ಚರ್ಯನಾದ ದೇವನನ್ನು ಸಾಕ್ಷಾತ್ಕರಿಸಿಕೊಂಡವನು ಬಹು ಜನರಲ್ಲಿ ಒಬ್ಬನು. ಎಂದರೆ ಬಹಳ ಅಪರೂಪನು. ಹಾಗೆಯೇ ಉಪದೇಶಿಸುವವನೂ ಉಪದೇಶ ಹೊಂದುವ ಶಿಷ್ಯನೂ ಬಹಳ ಅಪರೂಪ.

ಸಿ ಎಮ್. ಪದ್ಮನಾಭಾಚಾರ್ಯರು ನುರಿತ ವಕೀಲರಂತೆ ಈ ವಿಷಯವನ್ನು ಮೂಲ ಸಂಗತಿಯ ಮೇಲೆ ಆಧಾರಿಸಿ, ಅದರ ಮಿತಿ-ಮಾನಗಳ ಮಧ್ಯದಿಂದ ಆ

ಸಂಗತಿಯನ್ನು ಬೆಳೆಸುತ್ತ ಸುಂದರ ಮತ್ತು ಸುಸಂಗತದ ತರ್ಕಕ್ಕೆ ಜೋಡಿಸಿ ಅದೊಂದು ಕಾವ್ಯದಂತೆ ಬೆಳೆಸಿದ್ದರೂ ಅದು ತನ್ನ ತರ್ಕ ಪರಿಶುದ್ಧತೆಯನ್ನು ಎಳ್ಳಷ್ಟೂ ಕಳಕೊಂಡಿಲ್ಲ. ಒಳ್ಳೇ ಉದಾಹರಣೆಯಿಂದ ಅದನ್ನು ಸ್ಪಷ್ಟಗೊಳಿಸಿದ್ದಾರೆ ದುರ್ಯೋಧನ ಮೊದಲಾದವರು ಶ್ರೀಕೃಷ್ಣನನ್ನು ಪ್ರತಿನಿತ್ಯ ನೋಡಿದ್ದರೂ ಅವನ ವಿಷಯಕ್ಕೆ ಮಾತನಾಡಿದ್ದರೂ ಕೇಳಿದ್ದರೂ ಅವನ ಮಹಿಮೆಯನ್ನು ಎಳ್ಳಷ್ಟೂ ತಿಳಿದಿಲ್ಲ. ಕೃಷ್ಣನು ಅನುಸಂಧಾನಕ್ಕೆ ಬಂದಾಗ ಅವನು ವಿಶ್ವರೂಪವನ್ನು ವ್ಯಕ್ತಗೊಳಿಸಿದನು ದುರ್ಯೋಧನ ಮೊದಲಾದ ಅಸುರರು ಕಣ್ಣು ಮುಚ್ಚಿಕೊಂಡರು ಆದರೆ ಧೃತರಾಷ್ಟ್ರ ಮೊದಲಾದವರು ಕಣ್ಣು ತೆರೆದು ನೋಡಿ ಆಶ್ಚರ್ಯಚಕಿತರಾದರು

**आश्चर्यवत्** ಎನ್ನುವದನ್ನು ಮೂರು ಅರ್ಥಗಳಲ್ಲಿ ಆಚಾರ್ಯರು ಉಪಯೋಗಿಸಿದ್ದಾರೆ. (೧) ಕ್ರಿಯಾವಿಶೇಷಣದಂತೆ ಅದು **पश्यति, वदति, श्रृणोति** ಎಂಬ ಮೂರು ಕ್ರಿಯಾಪದಗಳಿಗೆ ಅನ್ವಯಿಸುತ್ತಿದೆ. ಅವನನ್ನು ಸಾಕ್ಷಾತ್ಕರಿಸುವದು **(पश्यति)** ಆಶ್ಚರ್ಯಕರವಾದುದು ಯಾಕೆಂದರೆ ಅವನು ಅವ್ಯಕ್ತನು. ಅನಂತನೂ ಅವ್ಯಕ್ತನೂ ವ್ಯಕ್ತನಾಗುವದು ಆಶ್ಚರ್ಯವಲ್ಲವೇ ? (ಇದು ೨೮ನೇ ಶ್ಲೋಕದಲ್ಲಿ ಪ್ರಸಕ್ತವಾಗಿದೆ) ಅವನ ವಿಷಯಕ್ಕೆ **(वदति)** ಹೇಳುವದೂ ಕಷ್ಟ ಯಾಕೆಂದರೆ ಅದ್ಭುತನಾದ ಪರಮೇಶ್ವರನ ವರ್ಣನೆ ಮಾಡುವದು ಅಂಥ ಪದಗಳ ಅಭಾವದಿಂದ ಅತ್ಯಂತ ಕಠಿಣವಾದುದರಿಂದ ಆಶ್ಚರ್ಯಕರವಾದುದು. ಇದೇ ಕಾರಣಕ್ಕಾಗಿ ಪರಮಾತ್ಮನ ವಿಷಯವನ್ನು ಅಭ್ಯಾಸ ಮಾಡುವದೂ ಕಷ್ಟ (ಆಶ್ಚರ್ಯಕರ) **(श्रृणोति)**. (೨) **आश्चर्यवत्** ಇದು ನಾಮಪದವದೆ. ಇದು ದ್ವಿತಿಯಾ ವಿಭಕ್ತಿಯಲ್ಲಿದೆ. **एनं** ಎಂಬುದಕ್ಕೆ ಸಂಬಂಧಿಸಿದೆ (ನಪುಂಸಕಲಿಂಗ) ದೇವರು ಅಚಿಂತ್ಯಗುಣಗಳುಳ್ಳವನಾದುದರಿಂದ ಅವನು ಆಶ್ಚರ್ಯವು ಹನ್ನೊಂದನೆಯ ಅಧ್ಯಾಯದಲ್ಲಿ ಅವನ ಅಚಿಂತ್ಯ ರೂಪವನ್ನು ಕಂಡು ಅದನ್ನು ಉದಾಹರಣೆಗಳಿಂದ ವರ್ಣಿಸುತ್ತಾರೆ. ಆದರೆ ದೇವನು ದೇವನಂತೆಯೇ ಇದ್ದಾನೆ. **गगनं गगनाकारं** ಎಂಬಂತೆ ಅವನನ್ನು ಅವನಿಗೇ ಹೋಲಿಸಬೇಕು. ಆದುದರಿಂದ ಅವನು ಅಸದೃಶನಾಗಿದ್ದಾನೆ. ಆದುದರಿಂದ ಅವನು ಆಶ್ಚರ್ಯಕರನಿದ್ದಾನೆ. (೩) **आश्चर्यवत्** ಇದು ನಾಮಪದಕ್ಕೆ ವಿಶೇಷಣವಾಗುತ್ತದೆ ಇಲ್ಲಿ ಇದು **एनं** ಗೆ ವಿಶೇಷಣವಾಗಿ ಅಪರೋಕ್ಷದರ್ಶಿ, ಉಪದೇಶಕ ಮತ್ತು ಶಿಷ್ಯರನ್ನು ಆಶ್ಚರ್ಯಕರರನ್ನಾಗಿ ಮಾಡುತ್ತದೆ.

ರಾಮಾನುಜಾಚಾರ್ಯರಂತೂ ಈ ಅಧ್ಯಾಯದ ೧೧ನೇ ಶ್ಲೋಕದಿಂದ

ಇಲ್ಲಿಯ ವರೆಗಿನ ಎಲ್ಲ ಶ್ಲೋಕಗಳನ್ನು ತಪ್ಪದೇ ಜೀವಕ್ಕೆ ಮಾತ್ರ ಅನ್ವಯಿಸುತ್ತಾರೆ. ಜೀವನು ಜಡದಿಂದ ಸ್ಪಷ್ಟವಾಗಿ 'ಬೇರೆ'ಯಾಗಿರುವದೇ ಈ ಆಶ್ಚರ್ಯಕ್ಕೆ ಕಾರಣ ವಂತೆ. ಆದುದರಿಂದ ಬಹು ಸ್ವಲ್ಪು ಜನರು ಈ ಜೀವದ ಸ್ವರೂಪವನ್ನು ಪ್ರತ್ಯಕ್ಷ ಅನುಭವಿಸುತ್ತಾರೆ ಮತ್ತು ಅದನ್ನು ಉಪದೇಶಿಸುತ್ತಾರೆ. ಅದನ್ನು ಕಲಿಯುತ್ತಾರೆ. ಈ ಅರ್ಥದಲ್ಲಿ ಅದು ದ್ವಿತಿಯಾ ವಿಭಕ್ತಿಯಲ್ಲಿ ಮಾತ್ರ ಉಪಯೋಗವಾದುದನ್ನು ವೇದಾಂತ ದೇಶಿಕರು ಒಪ್ಪುತ್ತಾರೆ ಉಳಿದೆರಡು ಅರ್ಥಗಳನ್ನು ಒಪ್ಪುವದಿಲ್ಲ.

ಜೀವದ ವಿಷಯದಲ್ಲಿ ಅದು ಜಡದಿಂದ ಬೇರೆ ಇದ್ದ ನಿಮಿತ್ತ ಅದು ಆಶ್ಚರ್ಯಕರವಾಗಿದ್ದರೆ, ಜಡ ಪ್ರಕೃತಿಯೂ (Matter) ಸಹ ಜೀವದಿಂದ ಬೇರೆಯಾಗಿರುವದಕ್ಕೆ ಅದೂ ಆಶ್ಚರ್ಯಕರ ಸಂಗತಿಯಾಗಬಹುದು ಮೇಲಾಗಿ ಜೀವನ ವಿಷಯದಲ್ಲಿ ಏನೂ ಗೊತ್ತಿಲ್ಲವೆನ್ನುವದು ಸಾಧ್ಯವಿಲ್ಲ ಯಾಕೆಂದರೆ ಪ್ರತಿಯೊಬ್ಬ ಜೀವನಿಗೆ 'ನಾನು' ಎನ್ನುವ ತನ್ನ ವಿಷಯಕ ಅನುಭವ ಬರುತ್ತದೆಂದು ಎಲ್ಲ ವೇದಾಂತಿಗಳೂ ಒಪ್ಪುತ್ತಾರೆ. 'ಅ'ನಿಗೆ ತನ್ನ ಆತ್ಮದ ಜ್ಞಾನವು ಇರುತ್ತದೆ 'ಬ'ನಿಗೆ ತನ್ನ ಆತ್ಮದ ಜ್ಞಾನವು ಇರುತ್ತದೆ 'ಅ'ನಿಗೆ 'ಬ'ನ ಆತ್ಮದ ಜ್ಞಾನವು ಸಾಕ್ಷಾತ್ತಾಗಿ ಆಗದಿದ್ದರೂ ಅನುಮಾನದ ದ್ವಾರದಿಂದಾದರೂ ಆಗುತ್ತದೆ. ಆದುದರಿಂದ ಬರಿ ಎರಡನೆಯದರಿಂದ ಭೇದವು ಆತ್ಮನನ್ನು ಆಶ್ಚರ್ಯಕರವಸ್ತುವನ್ನು ಮಾಡಲಾರದು, ಆದುದರಿಂದ ಮಧ್ವಾಚಾರ್ಯರು ಜೀವನಿಗೂ ಪರಮಾತ್ಮನಿಗೂ ಇರುವ ಸಮ್ಬಂಧವು ಜೀವಾತ್ಮನನ್ನು ಆಶ್ಚರ್ಯಕರ ವಸ್ತುವನ್ನಾಗಿ ಮಾಡಿದೆಯೆಂದು ವಾದಿಸಿದ್ದಾರೆ. ಎಲ್ಲರಿಗೂ 'ನಾನು' ಎಂದು ತಮ್ಮ ಆತ್ಮದ ಅರಿವಿದ್ದರೂ ಜೀವನಿಗಿರುವ ಪರಮಾತ್ಮನ ಸಂಬಂಧದ ಅರಿವು ಇರುವದಿಲ್ಲ. ಆದುದರಿಂದ ಈ ಸಂಬಂಧವನ್ನು ಅರಿತ ದರ್ಶಿಯು ಬಹಳ ವಿರಳ ಅಥವಾ ಆಶ್ಚರ್ಯಕರ ಎಂದು ಹೇಳುತ್ತಾರೆ

ಅದ್ವೈತಿಗಳಿಗೆ ಈ ಯಾವ ಪ್ರಶ್ನೆಯೂ ಉದ್ಭವಿಸುವದಿಲ್ಲ. ಯಾಕೆಂದರೆ **एनं** ಇದು ಅವರ ಮತದಲ್ಲಿ ಜೀವನಿಗೆ ಹತ್ತಿದರೂ ಅಷ್ಟೇ, ಬ್ರಹ್ಮನಿಗೆ ಹತ್ತಿದರೂ ಅಷ್ಟೇ. ಅವರ ಮತದಲ್ಲಿ ಆತ್ಮವು ಒಂದೇ !

ಶಂಕರಾಚಾರ್ಯರ ಮತಾನುಯಾಯಿಯಾದ ನೀಲಕಂಠನು **एनं** ಎಂಬುದು ಪ್ರಪಂಚಕ್ಕೆ ಹತ್ತುತ್ತದೆಂದು ಹೇಳುತ್ತಾನೆ. ಆಗ ಅವನು **आश्चर्यवत्** ಇದನ್ನು ಮೂರು ಅರ್ಥಗಳಲ್ಲಿ ಉಪಯೋಗಿಸುತ್ತಾನೆ. (೧) ಪ್ರಪಂಚವು ಆಶ್ಚರ್ಯಕರವಾದುದು, (೨) ಅದನ್ನು ಅರಿತವನು, ಮಾತವಾಡುವವನು ಮತ್ತು ಕೇಳುವವನು ಎಲ್ಲರೂ ಆಶ್ಚರ್ಯಕರರು; ಕೊನೆಗೆ (೩) ಅದರ ವಿಷಯವನ್ನು ತಿಳಿಯುವದು,

ಹೇಳುವದು, ಕೇಳುವದು ಎಲ್ಲವೂ ಆಶ್ಚರ್ಯವೇ ಎಂದು ಹೇಳುತ್ತಾನೆ "There are more things in Heaven and Earth than are dreamt in your philosophy" (ನಿಮ್ಮ ತತ್ವಜ್ಞಾನದ ಕಲ್ಪನೆಗೆ ಸಹ ನಿಲುಕದ ಅನೇಕ ವಸ್ತುಗಳು ಸ್ವರ್ಗದಲ್ಲಿ ಮತ್ತು ಭೂಮಿಯ ಮೇಲೆ ಇರುತ್ತವೆ) ಎಂದು ಶೆಕ್ಸಪಿಯರನು ಹೇಳಿದ ಅರ್ಥದಲ್ಲಿ ಅಲ್ಲ. ಆದರೆ ಜಗತ್ತು ಅರ್ಥ ಸತ್ಯ ವಸ್ತುಗಳಿಂದ ತುಂಬಿದ್ದರಿಂದ ಅದು ಅಸತ್ಯವೆಂದು ತಿಳಿಯಬೇಕು ಎಂದು ನೀಲಕಂಠರವರ ಅಭಿಪ್ರಾಯ. ಹೀಗೆ ಜಗತ್ತು ಅಸತ್ಯವಿರುವದರಿಂದ ಅದು ಆಶ್ಚರ್ಯಕರ.

ಸತ್ಯದಂತೆ ತೋರುವ ಜಗತ್ತನ್ನು ಅಸತ್ಯವೆಂದು ತಿಳಿಯುವವನು ಅಪರೂಪ. ಈ ಜ್ಞಾನವೂ ಸಹ ಆಶ್ಚರ್ಯಕರವಾದದ್ದೇ ಇದು ಎಲ್ಲ ಮತ್ತು ಎಲ್ಲರ ಅನುಭವಕ್ಕೆ ವಿರುದ್ಧವಾದುದು ಈ ಜಗತ್ತು ಸತ್ಯವಾಗಿದ್ದರೆ ಅದು ಐಕ್ಯಸಾಕ್ಷಾತ್ಕಾರದಿಂದ ಸುಳ್ಳಾಗುತ್ತಿರಲಿಲ್ಲ ( **सच्चेन्न बाध्येत असच्चेन्न प्रतियेत** ). ಇನ್ನು ಸುಳ್ಳಾಗಿದ್ದರೆ ಕಣ್ಣಿಗೆ ತೋರುತ್ತಿರಲಿಲ್ಲ. ಹೀಗೆ ಉಪದೇಶಿಸುವ ಗುರುವು ಸಿಗುವುದೂ ಕಷ್ಟ ಇದು ನೀಲಕಂಠರ ವಾದ.

ಆದರೆ ಅಸತ್ಯವಾದುದೆಲ್ಲ ಆಶ್ಚರ್ಯಕರವಾದುದಲ್ಲ. ಇದು ತರ್ಕಕ್ಕೆ ಹೊಂದುವದಿಲ್ಲ ಮೇಲಾಗಿ ಈ ಸಂದರ್ಭದಲ್ಲಿ ಈ ಪ್ರಪಂಚದ ಸಂಬಂಧವು ಸಂದರ್ಭಕ್ಕೆ ಹೇಗೆ ಹೊಂದಿಕೆಯಾಗುತ್ತದೆ ನೋಡಬೇಕು. ಶ್ರೀಕೃಷ್ಣನು ಆತ್ಮನು ನಿತ್ಯನೆಂದು ಹೇಳಿದನು. ಆದುದರಿಂದ ಅರ್ಜುನನಿಗೆ ಶೋಕ ಮಾಡದಿರಲಿಕ್ಕೆ ಹೇಳಿದನು ನಾಸ್ತಿಕ ವಾದವನ್ನು ಮುಂದುವರಿಸಿದರೂ ಸಹ ಶೋಕಕ್ಕೆ ಕಾರಣವಿಲ್ಲೆಂದು ತೋರಿಸಿಕೊಟ್ಟನು. ಯಾಕೆಂದರೆ ಅನಿವಾರ್ಯವಾದುದರ ಸಲುವಾಗಿ ಶೋಕವು ಯೋಗ್ಯವಲ್ಲ. ಇದರ ಮುಂದೆಯೇ ಪ್ರಪಂಚವು ಅಸತ್ಯವೆಂಬ ಮಾತು ಯಾವ ರೀತಿಯಿಂದ ಹೊಂದಿಕೆಯಾಗುವದು ?

ಅದ್ವೈತಿಗಳೆಲ್ಲರೂ **एनं** ಎಂದರೆ ಬ್ರಹ್ಮನೆಂದು ತಿಳಿಯುತ್ತಾರೆ. ಯಾಕೆಂದರೆ ಬ್ರಹ್ಮವು ಅಪ್ರಮೇಯವೂ ಅವಾಚ್ಯವೂ ಆಗಿದೆಂದು ಹೇಳುತ್ತಾರೆ. ಮುಂದೆ ಮೂರು ತರಹದ ಆಶ್ಚರ್ಯವೆಂದು ವರ್ಣಿಸುತ್ತಾರೆ ಹೀಗೆ ಬ್ರಹ್ಮವು ಬುದ್ಧಿಗೂ ಮಾತಿಗೂ ಅಗೋಚರವಾದುದರಿಂದ ಆಶ್ಚರ್ಯವು; ಆದರ ಜ್ಞಾನವೂ ಆಶ್ಚರ್ಯವು. ಅದನ್ನು ತಿಳಿದವನೂ ಆಶ್ಚರ್ಯನು ಹಾಗೆಯೇ ಅದನ್ನು ಉಪದೇಶಿಸುವವನೂ ಕೇಳುವವನೂ ಆಶ್ಚರ್ಯರು ಯಾವ ಶಬ್ದಗಳೂ ಬ್ರಹ್ಮನನ್ನು ವರ್ಣಿಸದಿದ್ದರೆ ಈ ಶಬ್ದಗಳಿಂದ ಆ ಬ್ರಹ್ಮನನ್ನು ಹೇಗೆ ವರ್ಣಿಸುತ್ತಾರೆ ?

ಕಠೋಪನಿಷತ್ತಿನಲ್ಲಿ ಇದೇ ಶ್ಲೋಕವೇ ಸ್ವಲ್ಪ ಬೇರೆ ಶಬ್ದಗಳಿಂದ ಬ್ರಹ್ಮ

ನನ್ನು ತಿಳಿದವನನ್ನು ಶ್ಲಾಘಿಸುತ್ತದೆ. ಆದರೆ ಅದರಲ್ಲಿ ಬ್ರಹ್ಮನು ನಿರ್ಗುಣನು ಆದರೂ ಸಗುಣನಾಗಿ ತೋರುತ್ತಾನೆ. ಬ್ರಹ್ಮನು ಜಗತ್ತು, ಆದರೂ ಬೇರೆಯಾಗಿ ತೋರುತ್ತದೆ. ಬ್ರಹ್ಮನು ಜೀವನು, ಆದರೂ ಬೇರೆಯಾಗಿ ತೋರುತ್ತಾನೆಂಬು ದನ್ನು ಉಪನಿಷತ್ತಿನಲ್ಲಿ ಹೇಳಿಲ್ಲ.

ದ್ವೈತಿಗಳೂ ಅದ್ವೈತಿಗಳೂ ಎಲ್ಲ ಆಸ್ತಿಕರೂ ದೇವನು ಅಪ್ರಮೇಯ ನೆಂದು ಹೇಳುತ್ತಾರೆ. ಆದರೆ ಅದರಲ್ಲಿ ಅಂತರವದೆ ಮಧ್ವಾಚಾರ್ಯರು 'ಬ್ರಹ್ಮನನ್ನು ಪೂರ್ಣವಾಗಿ ತಿಳಿಯಲಿಕ್ಕೆ ಆಗುವದಿಲ್ಲ' ಎಂದು ಅದರ ಅರ್ಥವೆಂದು ಹೇಳುತ್ತಾರೆ.* ಅದ್ವೈತಿಗಳು ಮಾತ್ರ 'ಬ್ರಹ್ಮನು ಬುದ್ಧಿಗೂ ಮಾತಿಗೂ ಗೋಚರವಾಗುವದಿಲ್ಲ' ಎಂದು ಹೇಳುತ್ತಾರೆ

ಈ ಶ್ಲೋಕವು ಒಮ್ಮಿಂದೊಮ್ಮೆ ದೇವರು ಅಗೋಚರನೆನ್ನುವದನ್ನು ಹರ್ಷೋದ್ಗಾರದಿಂದ ಹೇಳುತ್ತದೆ ರಾಘವೇಂದ್ರ ತೀರ್ಥರು ಇದರ ಹಿಂದಿನ ಶ್ಲೋಕದಲ್ಲಿ ಜೀವನ ವಿಷಯದಲ್ಲಿ ಶೋಕವನ್ನು ಮಾಡಬಾರದೆಂದು ಹೇಗೆ ಹೇಳಿದರೋ ಹಾಗೆಯೇ ಜೀವನು ಸ್ವತಂತ್ರನೆನ್ನುವದನ್ನೂ ತಿಳಿಯಬಾರದೆಂದು ಹೇಳುತ್ತಾರೆ. ಹಾಗಾದರೆ ಸ್ವಾತಂತ್ರ್ಯವು ಯಾರದು ಎನ್ನುವದನ್ನು **नैन** ಎನ್ನುವ ಶ್ಲೋಕದಿಂದ ಹೇಳಿದ್ದರೂ ಅದು ಭಗವಂತನದೇ. ಮತ್ತೊಬ್ಬರದಲ್ಲವೆಂದು **आश्चर्यवत्** ಶ್ಲೋಕದಿಂದ ಭಗವಂತನು ಹೇಳುತ್ತಾನೆಂದು ರಾಯರು ಸಂಗತಿಯನ್ನು ಕೊಡುತ್ತಾರೆ. ಆ ಭಗವಂತನ ಸ್ವಾತಂತ್ರ್ಯವನ್ನೇ ಈಗ ಉಪಸಂಹರಿಸುತ್ತಾರೆಂದು ಸಂಗತಿಯ ತಾತ್ಪರ್ಯವು.

"ಅಣು ಆತ್ಮನು ಭವ್ಯ ಪ್ರಾಣಿಯ ದೇಹದಲ್ಲಿದೆ; ಅದ್ಭುತವಾದ ಆಲದ ಮರದಲ್ಲಿದೆ, ಅಲ್ಲದೆ ಅತ್ಯಂತ ಸೂಕ್ಷ್ಮಾಣುಗಳ ದೇಹದಲ್ಲಿದೆ" ಎಂಬ ಸಂಗತಿಯು ಆಶ್ಚರ್ಯವೆಂದು ಸ್ವಾಮೀ ಪ್ರಭುಪಾದರು ಹೇಳುತ್ತಾರೆ ಅವರೇ ಮುಂದೆ ರಾಗಾದಿ ವಿಷಯಗಳಲ್ಲಿ ಆಸಕ್ತರಾಗಿ ಆತ್ಮಜ್ಞಾನ ಮಾಡಿಕೊಳ್ಳಲಿಕ್ಕೆ ಯತ್ನಿಸುವದಿಲ್ಲೆಂದು ಹೇಳುತ್ತಾರೆ ಮತ್ತೆ ಕೆಲವರು ಪರಮಾತ್ಮನನ್ನೂ ಜೀವನನ್ನೂ ಒಂದೆಂದು ತಿಳಿಯುತ್ತಾರೆ ಆದುದರಿಂದ ಆತ್ಮನನ್ನು ಅರಿತವರು ಬಹು ವಿರಳ. ಆತ್ಮನನ್ನು ತಿಳಿಯಲಿಕ್ಕೆ ಗೀತೆಯನ್ನು ಓದಬೇಕು. ಅದಕ್ಕೆ ಕೃಷ್ಣನ ಅನುಗ್ರಹ ಬೇಕು ಎಂದು ಅಭಿಪ್ರಾಯಪಡುತ್ತಾರೆ,

* "Through all these apperceptions the Atman remains but partially comprehended or not comprehended at all". (The Bhagavadgita — Chidbhavanand).

ಡಾ. ರಾಧಾಕೃಷ್ಣನ್ನರು Though the truth of the self is free of aceess to all man kind, it is attained only by veryfew who are willing to pay the price in self discipline, steadfastness and non attachment'' ಆತ್ಮನ ತತ್ವವನ್ನು ತಿಳಿಯಲು ಎಲ್ಲರಿಗೂ ತೆರೆದಿಟ್ಟಿದ್ದರೂ ಅದು ಬಹಳ ಸ್ವಲ್ಪ ಜನರಿಗೆ ಮಾತ್ರ ತಿಳಿಯುತ್ತಿದೆ. ಯಾಕೆಂದರೆ ಅವರು ಅದಕ್ಕೆ ಆತ್ಮಸಂಯಮ, ನಿಷ್ಠೆ ಮತ್ತು ಅನಾಸಕ್ತಿರೂಪ ಬೆಲೆಯನ್ನು ತೆತ್ತಬೇಕಾಗುತ್ತದೆಂದು ಹೇಳುತ್ತಾರೆ.

ಮಹಾದೇವ ದೇಸಾಯಿಯವರು— "**अश्चर्यवत्** ಇದು ಈ ಆತ್ಮನಿಗೂ ಈ ಶ್ಲೋಕದೊಳಗಿನ ಎಲ್ಲ ಕ್ರಿಯಾಪದಗಳ ಕರ್ತೃ ಪದಗಳಿಗೂ ಹತ್ತುತ್ತದೆಂದು ಹೇಳುತ್ತಾರೆ. ಶಂಕರಾಚಾರ್ಯರು ಕಠೋಪನಿಷತ್ತನ್ನು ಇಲ್ಲಿ ಉದಾಹರಿಸುವದಿಲ್ಲ. ಆದರೆ ಎರಡೂ ಅನ್ವಯಗಳನ್ನು ಒಪ್ಪಿಕೊಳ್ಳುತ್ತಾರೆ. ಅವರು ಉದಾಹರಿಸುವ ಉಪನಿಷತ್ತಿನ ಸಮಾನಾರ್ಥಕ ಶ್ಲೋಕ ಇದು—*

**श्रवणयापि बहुभिर्यो न लभ्यः ।**
**शृण्वंतोऽपि बहवो यं न विद्युः ।**
**आश्चर्यो वक्ता कुशलोऽस्य लब्धा ।**
**आश्चर्यो ज्ञाता कुशलानुशिष्टः ॥**

(ಖಂಡಾರ್ಥದಂತೆ ಅರ್ಥ)— ಸಾಂಪರಾಯನೆನಿಸಿಕೊಳ್ಳುವ ಭಗವಂತನನ್ನು ಬಹು ಜನರು ಕೇಳಿದರೂ ತಿಳಿಯುವದಿಲ್ಲ. ಕಿವಿಯಿಂದ ಭಗವಂತನ ವಿಷಯವನ್ನು ಕೇಳಿದರೂ ಅವನನ್ನು ತಿಳಿದುಕೊಳ್ಳುವದಿಲ್ಲ, (ಪೂರ್ಣವಾಗಿ ಅಥವಾ ಯಥಾರ್ಥ ವಾಗಿ) (ಯಾಕೆ ತಿಳಿಯುವದಿಲ್ಲ ಎಂದರೆ) ಭಗವಂತನು ಇದ್ದಂತೆ ಹೇಳುವವನೂ ಕೇಳುವವನೂ ಇಬ್ಬರೂ ದುರ್ಲಭರು,

* ಆನಂದವರ್ಧನು ಕಾಶ್ಮೀರ ಪ್ರತಿಯ ತನ್ನ ಟೀಕೆಯಲ್ಲಿ ಈ ಶ್ಲೋಕವನ್ನು ಈ ರೀತಿಯಾಗಿ ಅರ್ಥೈಸಿದ್ದಾನೆ— "ದೇಹಾಹಂಭಾವನಾದಿಂದ ಕೂಡಿದ ಅನಾತ್ಮಜ್ಞನು ನಿನ್ನಂಥವನು ಭೀಷ್ಮಾದಿ ಜೀವವರ್ಗವನ್ನು ಅಸಂಭಾವ್ಯ (**आश्चर्यवत्**) ವೆಂದು ತಿಳಿಯುತ್ತಾನೆ. ದೇಹವಿರುವಾಗ ಕಾಣುತ್ತಾನೆ. ದೇಹವು ನಾಶವಾದ ಮೇಲೆ ಕಾಣುವದಿಲ್ಲ ಹೀಗೆ ಈ ದೃಶ್ಯವಾದ ದೇಹದ ಭ್ರಾಂತಿಯಿಂದ ತತ್ವವನ್ನು ತಿಳಿಯುವದಿಲ್ಲ. ಮತ್ತೊಬ್ಬ ನನ್ನಂಥವನು ಪರಮಾತ್ಮನು ಈ ಮೇಲೆ ಹೇಳಿದ ಜೀವ ವರ್ಗವನ್ನು ಅಸಂಭಾವ್ಯವೆಂದು ತಿಳಿಯುತ್ತಾನೆಂದು ತಿಳಿದಿರುವಿಯಾ ಎಂದು ಕಾಕುಸ್ವರದ ಪ್ರಶ್ನೆ. ಅದು ಯುಕ್ತಿಯಿಂದ ಸಂಭಾವ್ಯವೆಂದೇ ಅದರ ಅರ್ಥ. ಇನ್ನು ಅರ್ಜುನನಿಂದ ಬೇರೆಯವನು ಅರ್ಜುನನಂತೆ ಆಶ್ಚರ್ಯವೆಂದು ಕೇಳುತ್ತಾನೆಯೇ ? ಇವರನ್ನೂ ಅವಿನಾಶಿಯೆಂದು ಕೇಳಿಯೂ ಅದರ ಕಡೆಗೆ ಲಕ್ಷ್ಯಕೊಡುವದಿಲ್ಲ. ಅವನ ವಿಷಯದಲ್ಲಿ ಕೇಳಿ ದರೂ ತಿಳಿಯುವದಿಲ್ಲವೇ ? ಆದರೆ ಎಲ್ಲರೂ ಅಭ್ಯಾಸದಿಂದ ತಿಳಿದೇ ತಿಳಿಯುತ್ತಾರೆ.

ಲೋಕಮಾನ್ಯ ಟಿಳಕರು— "ಅಪೂರ್ವವಾದ ವಸ್ತುವೆಂದು ಆಶ್ಚರ್ಯದಿಂದ ಆತ್ಮನ ವಿಷಯದಲ್ಲಿ ದೊಡ್ಡ ದೊಡ್ಡ ಮನುಷ್ಯರು ಎಷ್ಟೋ ಚರ್ಚಿಸಿದರೂ ಅವನನ್ನು ತಿಳಿಯುವ ಜನರು ಬಹಳ ಸ್ವಲ್ಪ ಜನರು ಇದ್ದುದರಿಂದ ಮೃತ್ಯುವಿನ ವಿಷಯದಲ್ಲಿ ಬಹಳ ಜನರು ಶೋಕಿಸುತ್ತಾರೆ ಆದರೆ ನೀನು ಹಾಗೆ ಮಾಡದೇ ಪೂರ್ಣ ವಿಚಾರ ಮಾಡಿ ಆತ್ಮನ ಸ್ವರೂಪವನ್ನು ಯಥಾರ್ಥವಾಗಿ ತಿಳಿದುಕೊಂಡು ಶೋಕ ಮಾಡುವದನ್ನು ಬಿಡು ಎಂದು ಇದರ ಅರ್ಥವದೆ" ಎಂದು ಈ ಶ್ಲೋಕಕ್ಕೆ ಟಿಪ್ಪಣಿ ಬರೆದಿದ್ದಾರೆ *

ಶ್ರೀ ಖರೆಯವರು— ಈ ಶ್ಲೋಕದಲ್ಲಿ **"पश्यति", "वदति"** ಮತ್ತು **"श्रृणोति"** ಈ ಮೂರು ಕ್ರಿಯಾಪದಗಳಿಗೂ ಸಮಾನವಾಗಿ **"आश्चर्यवत्"** ಎಂಬ ಕ್ರಿಯಾವಿಶೇಷಣವನ್ನು ಯೋಜಿಸಿದ್ದಾರೆ. ಈ ಮೂರೂ ಕ್ರಿಯೆಗಳು ಒಂದೇ ರೀತಿಯಿಂದ ಆಶ್ಚರ್ಯೋತ್ಪಾದಕವಾಗಿವೆ. ಆದರೆ ಮುಂದೆ ಈ ಮೂರೂ ಕ್ರಿಯಗಳನ್ನು ಮಾಡುವವರಲ್ಲಿ ಒಬ್ಬರಿಗೂ ಆತ್ಮನ ಯಥಾರ್ಥಜ್ಞಾನವಾಗಿರುವದಿಲ್ಲ. ಇಂಥ ಆಭಾಸಮಾನ ಜ್ಞಾನದಿಂದ ಸಹ ಜನರು ಇಷ್ಟು ಆಶ್ಚರ್ಯೋತ್ಫುಲ್ಲರಾಗುತ್ತಾರೆಂದಮೇಲೆ ಆತ್ಮನ ಯಥಾರ್ಥಜ್ಞಾನವು ಎಷ್ಟು ಆನಂದದಾಯಕವಿರಬೇಕು ? ಆ ಆತ್ಮನು ಎಷ್ಟು ನಿರುಪಮ ಆನಂದಸ್ವರೂಪನಾಗಿರಬೇಕು ! ಇದನ್ನು ಅರ್ಜುನನ ಮನಸಿನ ಮೇಲೆ ಬಿಂಬಿಸಬೇಕೆಂದು ಶ್ರೀಕೃಷ್ಣನ ಉದ್ದೇಶವದೆ" ಎಂದು ಬರೆದಿದ್ದಾರೆ.

**देही नित्यमवध्योऽयं देहे सर्वस्य भारत ।**
**तस्मात्सर्वाणि भूतानि न त्वं शोचितुमर्हसि ॥ ३० ॥**

ಎಲೈ ಅರ್ಜುನನೇ ! ಸಮಸ್ತ ಜೀವರ ದೇಹವು (ನಾಶಹೊಂದಿದರೂ **वध्यमानेऽपि**) ಈ ಜೀವನು ಯಾವಾಗಲೂ ನಾಶವಿಲ್ಲದವನು. ಆದುದರಿಂದ ನೀನು ಎಲ್ಲ ಭೀಷ್ಮಾದಿ ಜೀವರನ್ನು ಕುರಿತು ದುಃಖಪಡುವದು ಸರಿಯಲ್ಲ.

---

* Wood ರು ತಮ್ಮ ಗೀತೆಯ ಮೇಲಿನ ಪ್ರಬಂಧದಲ್ಲಿ— **"आश्चर्यवत्** ದಲ್ಲಿ **वत्** ಇದು possessive affix ಎಂದು ಹೇಳುತ್ತಾರೆ. ಆದುದರಿಂದ ಆದರ ಅರ್ಥವು "ಆಶ್ಚರ್ಯವುಳ್ಳದ್ದು" ಎಂದು ಅರ್ಥ. "No body can possibly describe the real man He is some thing not only 'out of this world' but 'out of any possible world'. From the stand point of any sort of science whether based on the senses or the super senses he is unreachable",

**ವಿಶೇಷ ಟಿಪ್ಪಣಿಗಳು :**

ಮಧ್ವಾಚಾರ್ಯರು ಭಾಷ್ಯದಲ್ಲಿ "**सर्वस्यदेहे** ಎಂದರೆ **सर्वस्य जीवस्य सूक्ष्मे स्थूले च देहे** ಎಂದರೆ ಜೀವರ ಸ್ಥೂಲ ದೇಹದಲ್ಲಿಯೂ ಸೂಕ್ಷ್ಮ ದೇಹದಲ್ಲಿ ಎಂದರ ಲಿಂಗ ಶರೀರದಲ್ಲಿಯೂ ಚೈತನ್ಯ ಶರೀರದಲ್ಲಿಯೂ ಯಾವಾಗಲೂ ನಾಶ ರಹಿತನಾಗಿದ್ದಾನೆ. ಯಾಕೆಂದರೆ ಶ್ರೀ ಹರಿಯು ಈ ಮೂರೂ ದೇಹಗಳಲ್ಲಿ ರಕ್ಷಕ ನಾಗಿರುತ್ತಾನೆ ಆದುದರಿಂದಲೇ ಅವನು ಅವಧ್ಯನು. ಈಶ್ವರನು ರಕ್ಷಿಸಲಿರುವಾಗ ಯಾರಿಗೂ ಅವನನ್ನು ನಾಶಗೊಳಿಸಲಿಕ್ಕೆ ಶಕ್ಯವಿಲ್ಲೆಂದು ಅರ್ಥ ಇನ್ನು ಒಂದು ಪ್ರಶ್ನೆ ಉದ್ಭವಿಸುತ್ತದೆ. ಜೀವನು ಸ್ವಾಭಾವಿಕವಾಗಿ ನಿತ್ಯನಾಗಿದ್ದರೆ ಅವನು ಪರಮಾತ್ಮನ ಅಧೀನ ಹೇಗೆ ಎಂದರೆ ಉತ್ತರವಾಗಿ ಹೇಳುತ್ತಾರೆ. **द्रव्यंकर्म च कालश्च स्वभावो जीव एवच । यदनुग्रहतः सति न संति यं यदुपेक्षया** ಪ್ರಕೃತಿ ಮೊದಲಾದ ತತ್ವಗಳು ಧರ್ಮ-ಅಧರ್ಮಗಳು ಕಾಲವೂ ಪ್ರಕೃತ್ಯಾದಿಗಳ ಪರಿಣಾಮಗಳು ಮತ್ತು ಇವುಗಳ ಅಭಿಮಾನಿ ಚೇತನರೂ (ಎಲ್ಲ ಚೇತನರೂ) ಶ್ರೀ ಹರಿಯ ಅನುಗ್ರಹದಿಂದಲೇ ಇರುತ್ತವೆ. ಶ್ರೀ ಹರಿಯುನ್ನು ಉಪೇಕ್ಷಿಸಿ ಇರುವದಿಲ್ಲ. ಇದರಿಂದ ನಿತ್ಯ ವಸ್ತುಗಳು ಕೂಡ ಭಗವಂತನ ಅಧೀನವಾಗಿರುತ್ತ ವೆಂದು ತಾತ್ಪರ್ಯ ಸಿ ಎಮ್ ಪದ್ಮನಾಭಾಚಾರ್ಯರು ಹೇಳುವಂತೆ— Shri Madhva is no half hearted theit He is a theist of theists. If souls are eternal Superficial thinkers may argue that they are independent of God Shri Madhva says that the Absolute (**परब्रह्म**) alone is supreme and all else depend upon the Absolute for their very existence including every eternal reality". ಮಧ್ವಾಚಾರ್ಯರು ಪರಬ್ರಹ್ಮನೊಬ್ಬನೇ ಸ್ವತಂತ್ರನು; ಉಳಿದವೆಲ್ಲವೂ ಅವನ ಮೇಲೆ ತಮ್ಮ ಅಸ್ತಿತ್ವಕ್ಕಾಗಿಯೇ— ಇದರಲ್ಲಿ ನಿತ್ಯ ತತ್ವಗಳೂ ಸೇರಿವೆ—ಅವಲಂಬಿ ಸಿರುತ್ತವೆಂದು ಹೇಳುತ್ತಾರೆ.

ಹಿಂದಿನ ಅನೇಕ ಶ್ಲೋಕಗಳನ್ನು ಹಚ್ಚಿದಂತೆ ಈ ಶ್ಲೋಕವನ್ನೂ ಮಧ್ವಾಚಾರ್ಯರು ಈಶ್ವರಪರವಾಗಿ ಹಚ್ಚಿದ್ದಾರೆ— "ಈ ಹರಿಯು ( **अयं** ) ಪ್ರತಿ ಯೊಬ್ಬರ ದೇಹದಲ್ಲಿ (**सर्वस्य देहे**) (ಸ್ಥೂಲ, ಸೂಕ್ಷ್ಮ ಅಥವಾ ಚೈತನ್ಯಮಯ ವಾದ) ಅದರ ರಕ್ಷಕನಂತೆ ಇರುತ್ತಾನೆ. ಆದುದರಿಂದ ದೇಹದ ಸ್ವಾಮಿಯಾದ ಜೀವನು ಯಾವಾಗಲೂ ಅವಧ್ಯನಾಗಿರುತ್ತಾನೆ ಇಲ್ಲಿ **अयं देहे** (**अस्ति**) ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಬೇಕಾಗುತ್ತದೆ. ದೇವನು ಈ ಜೀವರುಗಳ ನಿತ್ಯತ್ವಕ್ಕೂ ಕಾರಣನೆಂದು ಹೇಳಿ ಅವನ ಸರ್ವೋತ್ತಮತ್ವವನ್ನು ಸ್ಥಾಪಿಸಲಾಗಿದೆ.

ಶಂಕರಾಚಾರ್ಯರು ಮಾತ್ರ — "ಭಗವಂತನು ಈ ಪ್ರಕರಣವನ್ನು ಮುಗಿಸುತ್ತಾನೆ — ಶರೀರದಲ್ಲಿರುವ ಆತ್ಮನು (**ದೇಹೀ**) ನಿತ್ಯವಾಗಿ ಎಲ್ಲ ಅವಸ್ಥೆಗಳಲ್ಲಿ ಅವಧ್ಯನಿರುತ್ತಾನೆ ಯಾಕೆಂದರೆ ಅವನು ನಿರವಯವವನು ಮತ್ತು ನಿತ್ಯನು ಅವನು ಎಲ್ಲರ ದೇಹದಲ್ಲಿ ಜಡ ವಸ್ತುಗಳಲ್ಲಿ ಸಹ ಅವನು ಅವಧ್ಯನು ಎಲ್ಲ ಪ್ರಾಣಿಗಳ ದೇಹಗಳು ನಾಶ ಹೊಂದುತ್ತಿದ್ದರೂ ಈ ಆತ್ಮನು ಮಾತ್ರ ಅವಧ್ಯನು. ಆದುದರಿಂದ ಅವರ ಸಲುವಾಗಿ ನೀನು ಶೋಕಿಸುವದು ಬೇಡ ಎಂದು ಹೇಳುತ್ತಾರೆ.

ರಾಮಾನುಜಾಚಾರ್ಯರು ಸಹ ತಮ್ಮ ಕ್ರಮದಂತೆ ಈ ಶ್ಲೋಕವನ್ನು ಜೀವ ಪರವಾಗಿ ಮಾತ್ರ ಹಚ್ಚುತ್ತಾರೆ, ಅದರಲ್ಲಿ ಒಂದು ಮಾತನ್ನು ವಿಶೇಷವಾಗಿ ಹೇಳುತ್ತಾರೆ— "ದೇವರಿಂದ ಪ್ರಾರಂಭಿಸಿ ಸ್ಥಾವರಗಳ ವರೆಗೆ ಎಲ್ಲ ಭೂತಗಳು ಹೊರಗೆ ಬೇರೆ ಬೇರೆ ಆಕಾರವುಳ್ಳವಾಗಿದ್ದರೂ ಸ್ವರೂಪತಃ ಮಾತ್ರ ಒಂದೇ ರೀತಿಯಾಗಿರುತ್ತವೆಂದು ಹೇಳುತ್ತಾರೆ. ಆದರೆ ದೇಹವು ಮಾತ್ರ ವಿಷಮಾಕಾರವುಳ್ಳದ್ದು ಮತ್ತು ಅನಿತ್ಯವಾದುದು, ಆದುದರಿಂದ ಅರ್ಜುನ! ನೀನು ಶೋಕಿಸಬೇಡವೆಂದು ಭಗವಂತನು ಹೇಳುತ್ತಾನೆ — ಎಂದು ಅವರ ಅಭಿಪ್ರಾಯ ಆತ್ಮಸಮಾನತೆ ಇದು ವಿಶಿಷ್ಟಾ-ದ್ವೈತಮತದಲ್ಲಿ ಮಹತ್ವದ ತತ್ವ

ಮಧ್ವಾಚಾರ್ಯರು ಮಾತ್ರ ಪೂರ್ಣವಾಗಿ ಇದನ್ನು ಅಲ್ಲಗಳೆದು ಇಡಿ ಚೇತನ ವರ್ಗದಲ್ಲಿ ಪರಮಾತ್ಮನಿಂದ ಹಿಡಿದು ತೃಣಜೀವಪರ್ಯಂತವಾಗಿ ಒಂದು ತಾರತಮ್ಯದ ಶ್ರೇಣಿಯನ್ನು ಒಪ್ಪುತ್ತಾರೆ ಪ್ರತಿಯೊಬ್ಬ ಜೀವನು ತನ್ನ ಸ್ವರೂಪ ಯೋಗ್ಯತೆಯಲ್ಲಿ ಇನ್ನೊಬ್ಬ ಜೀವನಿಂದ ವಿಶಿಷ್ಟನಾಗಿದ್ದಾನೆನ್ನುವದೇ ಅವರ ಮುಖ್ಯ ತತ್ವ. ಹೀಗೆ ಒಬ್ಬರು ಐಕ್ಯವನ್ನೂ ಇನ್ನೊಬ್ಬರು ಸಮತೆಯನ್ನೂ ಮತ್ತೊಬ್ಬರು ಭೇದವನ್ನೂ ಹೇಳಿದರೆ ಇವುಗಳ ಗುಣ ದೋಷಗಳನ್ನು ಆ ಮೇಲೆ ನೋಡೋಣ ರಾಮಾನುಜಾಚಾರ್ಯರ ಸಾಮ್ಯಕ್ಕೆ ಈ ಶ್ಲೋಕದಲ್ಲಿ ಏನಾದರೂ ಪದವಾಗಲಿ ವಾಕ್ಯವಾಗಲಿ ಆಧಾರವಾಗಿದೆಯೇ ಎನ್ನುವದು ಪ್ರಶ್ನೆ ಇದಕ್ಕೆ ಯಾವ ಆಧಾರವೂ ಇಲ್ಲೆಂದು ವಿಷಾದದಿಂದ ಹೇಳಬೇಕಾಗುತ್ತದೆ

ಜೀವನು ನಿತ್ಯನೆಂದು ಹೇಳುವದರಿಂದ ದೇಹವು ಅನಿತ್ಯವೆಂದು ಹೇಳುವದರಿಂದ ಅರ್ಜುನನು ಭೀಷ್ಮ–ದ್ರೋಣಾದಿಗಳ ಉದ್ದಿಶ್ಯವಾಗಿ ಶೋಕ ಮಾಡುವದು ಬೇಡ. ಕೃಷ್ಣನ ಈ ಸಿದ್ಧಾಂತವು ಮನಸಿಗೆ ಬಂದಂತೆ ಹಿಂಸೆಗೆ ಉತ್ತೇಜನವಾಗಿಲ್ಲ; ಯಾಕೆಂದರೆ ಶಾಸ್ತ್ರವೂ ಪರಮಾತ್ಮನ ಸಂಕಲ್ಪವೂ ಯುದ್ಧರೂಪ ಹಿಂಸೆಯನ್ನು ಪ್ರಸ್ತಾಪಿಸಿದಾಗ ಅದರಲ್ಲಿ ಕೆಲವು ವ್ಯಕ್ತಿಗಳು ಅವರು ಎಷ್ಟೇ ದೊಡ್ಡವರಿರಲಿ–ಸಾಯುತ್ತಾರೆಂದು ಶೋಕಿಸುವಕಾರಣವಿಲ್ಲೆಂದು ಮಾತ್ರ ಕೃಷ್ಣನ ಅಭಿಪ್ರಾಯ.

ಆದುದರಿಂದ ವಿವೃತಿಯಲ್ಲಿ ರಾಘವೇಂದ್ರರು — " ಆತ್ಮನಿಗೆ ದೇಹದ ಸಂಬಂಧ ಮತ್ತು ಅದರ ಅಗಲುವಿಕೆ ಇವು ನಿಯತವಾದುದರಿಂದ ದೇಹನಾಶ ನಿಮಿತ್ತದಿಂದ ಶೋಕ ಮಾಡುವದು ಬೇಡ"ವೆಂದು ಅರ್ಜುನನಿಗೆ ಶ್ರೀಕೃಷ್ಣನು ಹೇಳಿ ಈ ಆತ್ಮ ನಿತ್ಯತ್ವದ ಪ್ರಕರಣವನ್ನು ಮುಗಿಸುತ್ತಾನೆ.

ಮುಂದಿನ ಶ್ಲೋಕಕ್ಕೆ ಅವತರಣಿಕೆಯನ್ನು ಬೇರೆ ಬೇರೆ ಜನರು ಬೇರೆ ಬೇರೆ ಕೊಟ್ಟಿದ್ದಾರೆ. ಆತ್ಮನು ನಿತ್ಯನಾದುದರಿಂದ ಶೋಕ ಮಾಡುವದು ಬೇಡಾದರೂ ಯುದ್ಧವೇಕೆ ಮಾಡಬೇಕೆಂದುದಕ್ಕೆ ಕೃಷ್ಣನು ಈಗ ಕಾರಣವನ್ನು ಹೇಳುತ್ತಾನೆಂದು ಕೆಲವರು ಹೇಳಿದರೆ ಮತ್ತೆ ಕೆಲವರು (ರಾಧಾಕೃಷ್ಣನ್ನರು) ಹೇಳುತ್ತಾರೆ,— " ಮನುಷ್ಯರೆಂದರೆ ಆತ್ಮ ಮತ್ತು ಶರೀರದ ಬೆರಿಕೆಯು ಶರೀರವು ಮರ್ತ್ಯ ಮತ್ತು ಆತ್ಮವು ಅಮರ್ತ್ಯವಾದರೂ ಮರ್ತ್ಯವಾದ ಶರೀರವು ಆತ್ಮದ ಹಿತದ ಸಲುವಾಗಿ ರಕ್ಷಿಸಲ್ಪಡಬೇಕು ಇದಿಷ್ಟೇ ಕಾರಣ ಸಾಲದು; ಆದಕ್ಕೆ ಕೃಷ್ಣನು ಅರ್ಜುನನ ಕರ್ತವ್ಯವನ್ನು ತೋರಿಸುತ್ತಾನೆ " ರಾಘವೇಂದ್ರರು ಎರಡು ವಿಧ ವಾಗಿ ಅವತರಣಿಕೆಯನ್ನು ಕೊಡುತ್ತಾರೆ :— ೧) ಹಿಂದೆ ಅರ್ಜುನನು – **वेपथुश्चशरीरे मे रोमहर्षश्चजायते** ಎಂದು ಹೇಳಿದನು. ಅದು ಸರಿಯಾದುದು ಅಲ್ಲ ಯಾಕೆಂದರೆ ಸ್ವಧರ್ಮದ ಕಡೆಗಾದರೂ ಲಕ್ಷ ಕೊಟ್ಟು ನೀನು ನಡುಗ ಬಾರದು. ೨) ಅಥವಾ ಆತ್ಮನು ನಿತ್ಯನೆಂದಷ್ಟೇ ನೀನು ನಡುಗಬಾರದೆಂದಲ್ಲ, ಆದರೆ ನಿನ್ನ ಧರ್ಮವನ್ನಾದರೂ ಅನುಲಕ್ಷಿಸಿ ನೀನು ನಡುಗಬಾರದು.

ಸತ್ಯಧ್ಯಾನ ತೀರ್ಥರು ಈ ಅವತರಣಿಕೆಯನ್ನೇ ಹೆಚ್ಚು ವಿವೇಚಿಸಿ ಬರೆಯು ಯುತ್ತಾರೆ :— " ಯುದ್ಧ ಮಾಡುವದು ಕ್ಷತ್ರಿಯರಿಗೆ ಸ್ವಧರ್ಮವು. ಯುದ್ಧ ಕ್ಕಿಂತಲೂ ಕ್ಷತ್ರಿಯರಿಗೆ ಶ್ರೇಯಸ್ಕರವಾದುದು ಬೇರೆ ಯಾವದೂ ಇಲ್ಲ. ಯುದ್ಧವು ಪ್ರಸಕ್ತವಾದಾಗ ದೇಹದಲ್ಲಿ ನಡಕವನ್ನು ಹೊಂದಬಾರದು ಆದುದರಿಂದ ಯುದ್ಧವನ್ನು ನೋಡಿ "**वेपथुश्च शरीरेमे**" ನನ್ನ ಶರೀರವು ನಡಗುವದರಿಂದ ಯುದ್ಧ ಮಾಡಲಾರೆನು " ಎಂದು ಹೇಳುವದು ಯುಕ್ತವಲ್ಲವೆಂದು ಹೇಳುತ್ತಾನೆ.

**स्वधर्ममपि चावेक्ष्य नविकंपितुमर्हसि**
**धर्म्याद्धियुद्धाच्छ्रेयोन्यत्क्षत्रियस्य नविद्यते ॥ ३१ ॥**

ಮತ್ತು ಯುದ್ಧವನ್ನು ಕ್ಷತ್ರಿಯರಿಗೆ ಸ್ವಧರ್ಮವೆಂದು ತಿಳಿದುಕೊಂಡು ನೀನು ನಡುಗಬಾರದು. ಯಾಕೆಂದರೆ ಕ್ಷತ್ರಿಯನಿಗೆ ಧರ್ಮಸಾಧನೀಭೂತವಾದ ಅಥವಾ ಧರ್ಮನಾಮಕ ಭಗವಂತನ ಪೂಜಾತ್ಮಕವಾದ ಯುದ್ಧದಕಿಂತಲೂ ಬೇರೆಯಾದ ಶ್ರೇಯಸ್ಸಾಧನವು ಇಲ್ಲ.

**ವಿಶೇಷ ಟಿಪ್ಪಣಿಗಳು :**

ಅರ್ಜುನನು ೨೯ ನೇ ಶ್ಲೋಕದಲ್ಲಿ (೧ ನೇ ಅಧ್ಯಾಯ) **वेपथुश्चशरीरेमे-रोमहर्षश्चजायते** ಎಂದು ಅರ್ಜುನನು ಹೇಳಿದ್ದಾನೆ. ಅರ್ಜುನನು ಹೇಳಿದ ಈ ಮಾತಿಗೆ ಕೃಷ್ಣನು ಈಗ **स्वधर्ममपि चावेक्ष्य न विकंपितुमर्हसि.** 'ನಿನ್ನ ಧರ್ಮವನ್ನು ನೀನು ತಿಳಿದು ನಡಗುವದನ್ನು ಬಿಡು' ಎಂದು ಹೇಳುತ್ತಾನೆ. ಹಾಗೆ ೧ನೇ ಅಧ್ಯಾಯದ ೩೧ ನೇ ಶ್ಲೋಕದ **नच श्रेयोनुपश्यामि हत्वास्वजन-माहवे** ಎಂದು ಅರ್ಜುನನು ಹೇಳಿದ್ದಕ್ಕೆ **धर्म्याद्धियुद्धाच्छ्रेयोन्यत् क्षत्रि-यस्यनविद्यते** 'ಧರ್ಮಕ್ಕೆ ಸಾಧನವಾದ ಯುದ್ಧಗ ಹೊರತು ಕ್ಷತ್ರಿಯನಿಗೆ ಬೇರೆ ಶ್ರೇಯಸ್ಸು ಯಾವದೂ ಇಲ್ಲ ಎಂದು ಕೃಷ್ಣನು ಹೇಳುತ್ತಾನೆ.

೧೧ನೇ ಶ್ಲೋಕದಿಂದ ೩೦ನೇ ಶ್ಲೋಕದ ವರೆಗೆ ಶೋಕ ಮಾಡುವದು ಅಯೋಗ್ಯವೆಂದು ಸೋಪಪತ್ತಿಕವಾಗಿ ಕೃಷ್ಣನು ನಿವೇದಿಸುತ್ತಾನೆ ಅರ್ಜುನನು ತೋರಿಸಿದ ಪಾಂಡಿತ್ಯಕ್ಕೆ ಇಲ್ಲಿಂದ ೮ ಶ್ಲೋಕಗಳಲ್ಲಿ ಅರ್ಜುನನ ಪಾಂಡಿತ್ಯಕ್ಕೆ ಉತ್ತರ ಕೊಡುತ್ತಾನೆ

'ಹಿಂಸಾರೂಪ ಯುದ್ಧವು ಸ್ವಧರ್ಮವು' ಎಂಬ ವಿಷಯವು ಅತ್ಯಂತ ಆಕ್ಷೇಪಾರ್ಹವೆಂದು ಕೆಲವರ ಮತ ಅದರಲ್ಲಿ ಗಾಂಧಿಯವರೂ ಬೌದ್ಧರೂ ಆ ಪಕ್ಷದ ಮುಂದಾಳುಗಳೆಂದು ಹೇಳಬಹುದು ಬೌದ್ಧರ ವಾದವು ಹೀಗಿದೆ— (Early Buddhism and Bhagavadgitaದಲ್ಲಿ ಕೆ ಎನ್ ಉಪಾಧ್ಯಾಯರು ಈ ರೀತಿಯಾಗಿ ಸಂಗ್ರಹಿಸಿದ್ದಾರೆ, (೧) ಬೌದ್ಧರು 'ಸ್ವಧರ್ಮ'ವನ್ನು ಒಪ್ಪುವದಿಲ್ಲ. ಮತ್ತು ನಿಷ್ಕಾಮಯುದ್ಧವನ್ನಂತೂ ಮೊದಲೇ ಒಪ್ಪುವದಿಲ್ಲ ಬ್ರಾಹ್ಮಣರ ಚಾತುರ್ವಣ್ಯದ ವಿರುದ್ಧವಾಗಿ ಒಂದೇ ಒಂದು 'ಲೋಕೋತ್ತರ ಧರ್ಮ' ವನ್ನು ಒಪ್ಪುತ್ತಾರೆ, ಈ ಲೋಕೋತ್ತರ ಧರ್ಮವನ್ನು ಎಲ್ಲರಿಗಾಗಿ ಹೇಳುತ್ತಾರೆ. ಜ್ಞಾನಿಯಾದ ನಿಷ್ಕಾಮ ಕರ್ಮಿಯು ನೈತಿಕ ಪಾಪವನ್ನು (ಹಿಂಸೆಯನ್ನು) ಮಾಡಲಾರ. ಹಿಂಸೆಯನ್ನು ತಪ್ಪಿಸಲಿಕ್ಕೆ ಮೊದಲು ಅವನು ಪ್ರಯತ್ನಿಸುತ್ತಾನೆ. ಮನೋವಿಕಾರಗಳಿಗೆ ಒಳಪಟ್ಟು ಯುದ್ಧದಲ್ಲಿ ಸೇರುತ್ತಾರೆ, ಮತ್ತು ಅದರ ಫಲವನ್ನು ಉಪಯೋಗಿಸುತ್ತಾರೆ, ಆದುದರಿಂದ ಬುದ್ಧನು ಯುದ್ಧದಿಂದಾಗುವ ಭಯಾನಕ ಪರಿಸ್ಥಿತಿ ಇಲ್ಲಿ ಮತ್ತು ನರಕದಲ್ಲಿ ಯಾತನೆಯನ್ನು ಅನುಭವಿಸುತ್ತಾನೆಂದು ಹೇಳುತ್ತಾನೆ ಕ್ಷತ್ರಿಯನು ಅನಾಶಕ್ತಿಯಿಂದ ಯುದ್ಧ ಮಾಡಲಾರನು. (ಇದು ಗೀತೆಗೆ ವಿರುದ್ಧವಾದ ಮತವು). ತಾತ್ವಿಕವಾಗಿ ಬೌದ್ಧರು ನಿತ್ಯನಾದ ಆತ್ಮನನ್ನು ಒಪ್ಪದಿದ್ದುದರಿಂದ ಆತ್ಮತತ್ವದ ಮೇಲೆ ಯುದ್ಧವನ್ನು ಹೂಡುವದು ಶಕ್ಯವಿಲ್ಲವೆಂದು ಅವರ ಮತ.

ಆತ್ಮತತ್ವ ಒಪ್ಪಿದ ಡಾ. ಬೆಳವಲಕರ ಅವರೂ ಡಾ ರಾನಡೆಯವರೂ ಆತ್ಮನು ನಿತ್ಯನಾದುದರಿಂದ ಬೇಕಾದವರು ಕೊಲೆ ಮಾಡಬಹುದೆಂದು ಹೇಳುವದು ಹಾಸ್ಯಾಸ್ಪದವಾದ ಮಾತು ಬೌದ್ಧರಲ್ಲಿ ಈಶ್ವರನನ್ನು ಒಪ್ಪಿಲ್ಲ ದೇವರು ಸೃಷ್ಟಿಸಿದ ಜಗತ್ತಾಗಲಿ, ದೇವರು ಸೃಷ್ಟಿಸಿದ ಜಾತಿ-ಧರ್ಮವಾಗಲಿ ಬುದ್ಧನು ಒಪ್ಪುವದಿಲ್ಲ ನಿಷ್ಕಾಮ ಕರ್ಮವನ್ನೂ ಒಪ್ಪುವದಿಲ್ಲ ಸರಿಯಾಗಿ ಮಾಡಿದ ಕಾರ್ಯ ಫಲಕಾರಿ ಯಾಗುತ್ತದೆ ಅಷ್ಟೇ ! ಬುದ್ಧನು ಕ್ಷತ್ರಿಯನು ಆದರೂ ಸನ್ಯಾಸಿಯಾಗಿದ್ದಾನೆ, ಎಲ್ಲರಿಗೂ ಸನ್ಯಾಸಿಗಳಾಗಲಿಕ್ಕೆ ಹೇಳುತ್ತಾನೆ

ನಿಜವಾದ ಜಯವೆಂದರೆ ಇಂದ್ರಿಯ ಜಯ, ಯುದ್ಧದಲ್ಲಿ ಜಯವಿಲ್ಲ; ದ್ವೇಷ ಮಾಡಿದವನಿಗೆ ಪ್ರೀತಿ ಮಾಡುವದು ಅವಶ್ಯ. ಬಲಕ್ಕೆ ಬಲ ಇದು ಪಾಶವೀ ವೃತ್ತಿಯು ಬುದ್ಧನ ಅಭಿಪ್ರಾಯದಲ್ಲಿ ಧರ್ಮ ಮತ್ತು ಯುದ್ಧ ಕೂಡಿ ನಡೆಯ ಲಾರವು. ಬುದ್ಧನು ದೋಷದೊಡನೆ ರಾಜೀ ಮಾಡಿಕೊಳ್ಳಲಿಕ್ಕೆ ಸಿದ್ಧನಿಲ್ಲ.

ಬುದ್ಧನು ಹಿಂದಿನ ಜನ್ಮದಲ್ಲಿ ಕಾಶಿ ರಾಜನಾಗಿದ್ದನು. ಆಗ ಅವನು ಬೇಕಾ ದಷ್ಟು ಆಕರ್ಷಣೆಗೆ ಒಳಗಾದರೂ ಹಿಂಸೆಗೆ ಒಲಿಯಲಿಲ್ಲ. ಈ ವಿಷಯದಲ್ಲಿ ಮಾತಲಿ ಮತ್ತು ಸಕ್ಕನಿಗೆ ಸಂಭಾಷಣೆ ನಡೆದಿದೆ ಇದು ಅರ್ಜುನನಿಗೂ ಕೃಷ್ಣನಿಗೂ ನಡೆದ ಸಂಭಾಷಣೆಯಂತೆ ಇದೆ. ಅರ್ಜುನನ ಹಾಗೆ ಸಕ್ಕನು ದ್ವೇಷಕ್ಕೆ ಪ್ರೇಮವನ್ನು ನೀಡುತ್ತಾನೆ ಕೃಷ್ಣನ ಹಾಗೆ ಮಾತಲಿಯು ಕೆಟ್ಟ ಮಾಡಿದವರಿಗೆ ಶಿಕ್ಷೆಯನ್ನು ಕೊಡುತ್ತಾನೆ ಅಲ್ಲಿ ಸಕ್ಕನು ಮಾತಲಿಯನ್ನು ಸೋಲಿಸುತ್ತಾನೆ. ಆದರೆ ಭಗವ ದ್ಗೀತೆಯಲ್ಲಿ ಅರ್ಜುನನು ಸೋಲುತ್ತಾನೆ

ಹೀಗೆ ಬೌದ್ಧರ ನೀತಿ ಮಾರ್ಗದಲ್ಲಿ ಯುದ್ಧಕ್ಕೆ ಅವಕಾಶವೇ ಇಲ್ಲ. ಒಳ್ಳೆ ತಿಳುವಳಿಕೆ ಮತ್ತು ಅನುಸಂಧಾನಗಳಿಂದ ಯುದ್ಧವನ್ನು ತಪ್ಪಿಸಬಹುದು ಎಂದು ಬುದ್ಧನ ಮತ. ಆದರೆ ಅತ್ಯಂತವಾಗಿ ಕೆಣಕಿದರೆ ಪೂರ್ಣ ಅಹಿಂಸೆಯನ್ನು ಆಚರಿ ಸುವದು ಬಹು ಕಠಿಣ ಈ ಸಕ್ಕನೇ ಶಾಂತಿಪ್ರಿಯರಾದ ದೇವತೆಗಳ ರಕ್ಷಣೆಗೆ ದೈತ್ಯರ ವಿರುದ್ಧ ಹೋರಾಡಿದ್ದನ್ನು ನಾವು ನೋಡುತ್ತೇವೆ.

ಆದರೆ ದುಷ್ಟ ಜಗತ್ತಿನ ಸ್ಥಿತಿಗೆ ಒಗ್ಗುವಂತೆ ಭಗವದ್ಗೀತೆಯು ನೀತಿಯ ಮಹಾತತ್ವವನ್ನು ಕೆಳಗಿಳಿಸುತ್ತಿದೆ. ಹೀಗೆ ಬೌದ್ಧ ಧರ್ಮ, ಕೆಳಗಿನ ಈ ಜಗತ್ತನ್ನು ಮೇಲೆ ಎತ್ತಲಿಕ್ಕೆ ಯತ್ನಿಸಿದರೆ ಭಗವದ್ಗೀತೆಯು ಮೇಲಿನ ನೀತಿತತ್ವವನ್ನು ಕೆಳಗಿನ ಲೋಕಕ್ಕೆ ಹೊಂದಿಕೆಯಾಗಲಿಕ್ಕೆ ಕೆಳಕ್ಕೆ ಇಳಿಸುತ್ತಿದೆ ಎಂದು ಅವರ ವಾದ.

ಗಾಂಧೀಜಿಯವರು— **I felt that the Bhagavadgita was not a historical work but that under the guise of physical warfare it**

described the dual that perpetually went on in the hearts of man kind and the physical warfare was brought in merely to make the description alluring''. ಭಗವದ್ಗೀತೆಯು ಐತಿಹಾಸಿಕ ಗ್ರಂಥವಲ್ಲವೆಂದೂ ಆದರೆ ಹಿಂಸಾತ್ಮಕ ಯುದ್ಧದ ವೇಷದಲ್ಲಿ, ಮನುಷ್ಯನ ಹೃದಯದಲ್ಲಿ ಸತತವಾಗಿ ನಡೆಯುವ ದ್ವಂದ್ವವನ್ನೇ ವರ್ಣಿಸಿದೆಯೆಂದೂ ಮತ್ತು ಆ ವರ್ಣನೆಯನ್ನು ಆಕರ್ಷಕ ಮಾಡಲಿಕ್ಕೆ ಮಾತ್ರ ಈ ಹಿಂಸಾತ್ಮಕ ಯುದ್ಧವು ತರಲ್ಪಟ್ಟಿದೆಯೆಂದೂ ನನಗೆ ಅನಿಸುತ್ತದೆ" ಎಂದು ಹೇಳುತ್ತಾರೆ

ಆದರೆ ಗಾಂಧೀಜಿಯವರಿಗೆ ಭಗವದ್ಗೀತೆಯಲ್ಲಿ ಅಪಾರ ಭಕ್ತಿ ಮತ್ತು ದೃಢವಾದ ವಿಶ್ವಾಸ. ಬೌದ್ಧರ ಹಾಗೆ ಅವರು ಗೀತೆಯನ್ನು ಅಲ್ಲಗಳೆಯುವದಿಲ್ಲ. ಅದನ್ನು ಅವರು ಮಾತೆಯೆಂದು ವರ್ಣಿಸುತ್ತಾರೆ. ಆದರೆ ಭಗವದ್ಗೀತೆಯಾದರೋ ಸ್ಪಷ್ಟವಾಗಿ ಅರ್ಜುನನಿಗೆ ಯುದ್ಧ ಮಾಡಲಿಕ್ಕೆ ಉಪದೇಶಿಸುತ್ತದೆ. ಗಾಂಧೀಜಿಯವರು ಸ್ಪಷ್ಟವಾಗಿ ಹೇಳುತ್ತಾರೆ— Let it be granted that according to the letter of the Geeta it is possible to say that warfare is consistent with renunciation of fruit But after forty years of un-re-mitting endeavour, fully to enforce the teaching of the Geeta in my own life, I have in all humility felt that perfect renunciation is impossible without perfect observance of Ahinsa in every shape and form''

"ಗೀತೆಯು ಅಕ್ಷರಶಃ ನಿಷ್ಕಾಮ ಕರ್ಮಕ್ಕೆ ಯುದ್ಧವು ಹೊಂದಿಕೆಯಾಗುತ್ತದೆಂದು ಹೇಳಿದೆಯೆಂದು ಒಪ್ಪಿಕೊಳ್ಳೋಣ. ಆದರೆ ನನ್ನ ಜೀವನದಲ್ಲಿ ಗೀತೆಯ ಉಪದೇಶವನ್ನು ಪೂರ್ಣವಾಗಿ ಕಾರ್ಯರೂಪದಲ್ಲಿ ತರಲಿಕ್ಕೆ ನಾಲ್ವತ್ತು ವರ್ಷಗಳ ನನ್ನ ಅಖಂಡ ಪ್ರಯತ್ನವನ್ನು ಮಾಡಿದ ಮೇಲೆ ಪೂರ್ಣ (ಫಲ) ಸನ್ಯಾಸವು, ಪ್ರತಿಯೊಂದು ರೂಪದಲ್ಲಿ ರೀತಿಯಲ್ಲಿ ಪೂರ್ಣ ಅಹಿಂಸೆಯನ್ನು ಆಚರಿಸದೆ ಸಾಧ್ಯವಿಲ್ಲೆಂದು ನನಗೆ ಅನಿಸಿದೆ ಎಂದು ಅತ್ಯಂತ ನಮ್ರನಾಗಿ ಹೇಳುತ್ತೇನೆ" ಹಿಂಸೆಯನ್ನು ಒಪ್ಪದೆ ಗೀತೆಯನ್ನು ಒಪ್ಪುವದೆಂದರೆ ಅದು ರೂಪಕವಾದ ಅಥವಾ ನೈತಿಕವಾದ ಯುದ್ಧವಿರಬೇಕೆಂದು ಅವರ ತಾತ್ಪರ್ಯ.

ರಾಧಾಕೃಷ್ಣನ್ನರೂ ಕೂಡ ಗಾಂಧೀಜಿಯವರೊಡನೆ ದನಿಗೂಡಿಸುತ್ತಾರೆ— "The life of the soul is symbolised by the battle field of Kurukshetra and the Kauravas are the enemies who impede the progress of the soul Arjuna attempts to recapture the kingdom of man by resisting the temptation and controling the passion. The path of progress is through suffering and self abnagation.

Arjuna tries to evade the rigorous ideal by subtle arguments and spacious excuses. Krishna stands for the voice of God, delivering his message in thrilling notes, warning Arjuna against dejection of spirit". ಕುರುಕ್ಷೇತ್ರವು ಜೀವಾತ್ಮನ ಜೀವನವು ಆತ್ಮನ ಪ್ರಗತಿಗೆ ಪ್ರತಿಬಂಧ ಮಾಡುವ ವೈರಿಗಳು ಕೌರವರು ಅರ್ಜುನನು ಮಾನವರಾಜ್ಯವನ್ನು ಮನೋನಿಗ್ರಹದಿಂದ, ಮೋಹಪನ್ನು ಗೆಲ್ಲುವದರಿಂದ, ತಿರುಗಿ ಸಂಪಾದಿಸಬೇಕೆಂದು ಪ್ರಯತ್ನಿಸುತ್ತಾನೆ ಆತ್ಮದ ಪ್ರಗತಿಯು ಕಷ್ಟವನ್ನು ಅನುಭವಿಸುವದು ಸ್ವಾರ್ಥವನ್ನು ಬಿಡುವದರಿಂದ ದೊರೆಯುತ್ತಿದೆ ಅರ್ಜುನನು ಈ ಕಠೋರ ಧ್ಯೇಯವನ್ನು ಶುಷ್ಕತರ್ಕದಿಂದ ಆಪಾತರಮಣೀಯ ನೆವಗಳಿಂದ ತಪ್ಪಿಸಲಿಕ್ಕೆ ಹವಣಿಸುತ್ತಾನೆ. ಕೃಷ್ಣನೆಂದರೆ ಭಗವಂತನ ಧ್ವನಿಯು ಮೈನಿಮಿರುವಂತೆ ತನ್ನ ಸಂದೇಶವನ್ನು ಪ್ರಕಟಿಸುತ್ತ ಅರ್ಜುನನಿಗೆ ವಿಷಾದಕ್ಕೆ ಆಸ್ಪದ ಕೊಡದಿರಲಿಕ್ಕೆ ಮುನ್ನೆಚ್ಚರಿಕೆ ಕೊಡುತ್ತಾನೆ"

ರಾಧಾಕೃಷ್ಣನ್ನರು ವಾಚ್ಯಾರ್ಥವನ್ನೇ ಸ್ವೀಕರಿಸಿದರೆ ಬರುವ ತೊಂದರೆಯನ್ನು ತೋರಿಸುತ್ತಾರೆ. **तस्मात् सर्वेषुकालेषु मामनुस्मरयुध्यच.** 'It is not fight on the mateial plane that is intended here, for it cannot be done at all times' ಇಲ್ಲಿ ಪ್ರಾಕೃತ ಜಗತ್ತಿನ ಮೇಲಿನ ಯುದ್ಧವನ್ನು (ಭಗವಂತನು) ಉದ್ದೇಶಿಸಿಲ್ಲ (ಮಾನಸ ಕ್ಷೇತ್ರದಲ್ಲಿ ಉದ್ದೇಶಿಸಿದ್ದಾನೆ) ಯಾಕೆಂದರೆ ಈ ಯುದ್ಧವನ್ನು ಎಲ್ಲ ಕಾಲದಲ್ಲಿಯೂ ಮಾಡಲಿಕ್ಕೆ ಬರುವದಿಲ್ಲ. ಬಹಳ ಬುದ್ಧಿವಂತರಿಗೂ ಸಣ್ಣ ಮಾತುಗಳು ಎಷ್ಟೋ ಸಾರೆ ತಿಳಿಯುವದಿಲ್ಲವೆನ್ನುವದಕ್ಕೆ ಇದೊಂದು ನಿದರ್ಶನ. **सर्वेषु कालेषु** ಎನ್ನುವದರ ಅನ್ವಯವನ್ನು **अनुस्मर** ದೊಡನೆ ಮಾಡಬೇಕು **युध्य** ದೊಡನೆ ಅಲ್ಲ ಎನ್ನುವದು ಸಾಮಾನ್ಯ ಸಂಸ್ಕೃತ ಬಲ್ಲವನಿಗೂ ಗೊತ್ತಾಗುತ್ತದೆ. "ಎಲ್ಲ ಕಾಲದಲ್ಲಿ ನನ್ನನ್ನು ಸ್ಮರಣೆ ಮಾಡುತ್ತ ಯುದ್ಧ ಮಾಡು" ಎಂದರೆ "ಯುದ್ಧಮಾಡುವಾಗೆಲ್ಲ ನನ್ನನ್ನು ಸ್ಮರಿಸು" ಎಂದು ತಿಳಿಯಬೇಕು. ಇದು ಸುಲಭವಾದ ವಾಚ್ಯಾರ್ಥ. ಈ ಅರ್ಥಕ್ಕೆ ಭಂಗವಿಲ್ಲ. ಆದುದರಿಂದ ಯುದ್ಧವನ್ನು ಮನೋಭೂಮಿಯ ಮೇಲೆ ಮಾಡುವದು ಈ ಕಾರಣಕ್ಕಾಗಿ ಬೇಡ. ಕೃಷ್ಣನು ನಿಜವಾದ ಕುರುಕ್ಷೇತ್ರದ ಮೇಲೆ ಅರ್ಜುನನಿಗೆ ಯುದ್ಧ ಮಾಡಲಿಕ್ಕೆ ಹೇಳಿದ್ದಾನೆ

ಈ ರೂಪಕ ಅರ್ಥವು ಜಾಣತನವನ್ನು ತೋರಿಸುತ್ತಿದ್ದರೂ ಅದು ಎಲ್ಲ ಕಡೆಗೆ ಅನ್ವಯಿಸುವದಿಲ್ಲ. ಅದಕ್ಕೆ ಜಯತಿಲ್ಲೆಕೆಯವರು — "The greater mejority of passages referring to war far from admiting of metaphorical interpretation have sense only when taken literally."

ಯುದ್ಧಕ್ಕೆ ಸಂಬಂಧಪಟ್ಟ ಬಹುಭಾಗ ಪ್ರಬಂಧಗಳು ಆಧ್ಯಾತ್ಮಿಕ ಅರ್ಥಕ್ಕೆ ಎಡೆ ಗೊಡದೆ ವಾಚ್ಯಾರ್ಥದಲ್ಲಿ ಅರ್ಥವಾಗುತ್ತವೆ " ಎಂದು ಹೇಳುತ್ತಾರೆ ಮೇಲಾಗಿ ರೂಪಕ ಅರ್ಥದಲ್ಲಿ ಒಳಿತು ಕೆಡಕುಗಳ ಯುದ್ಧದಲ್ಲಿ ಅರ್ಜುನನಿಗೆ ಹಿಂಸೆ ಎಲ್ಲಿ ಬರುತ್ತದೆ ? ಅವನಿಗೆ ಪಾಪದ ಭಯವೇಕೆ ? ಈ ಪ್ರಶ್ನೆಗಳಿಗೆ ಉತ್ತರ ಕೊಡಲಿಕ್ಕೆ ಆಗುವದಿಲ್ಲ.

ಅರ್ಜುನನು ಕ್ಷತ್ರಿಯ ಬಲವನ್ನು ಬಿಟ್ಟು ಬ್ರಹ್ಮ ತೇಜಸ್ಸಿನ ಬಲವನ್ನು ಉಪಯೋಗಿಸಿದರೂ ಹಿಂಸೆಯಾಗುವದು ತಪ್ಪಿದ್ದಲ್ಲ ಆದರೆ **मामनुस्मर युध्य च** ಇದು ಪೂರ್ಣವಾಗಿ ಸಾಧ್ಯವದೆ ಎಂದು ಅರವಿಂದರು ಹೇಳುತ್ತಾರೆ Only the remembrance of the Divine Being becomes no longer intermittant act of mind but the natural Condition of our activities.'' ದೇವರನ್ನು ನೆನೆಯುವ ಕೆಲಸವು ಮನಸಿನ ಬಿಟ್ಟು ಬಿಟ್ಟು ನಡೆಯುವ ಕೃತಿಯಾಗುವದಿಲ್ಲ. ಆದರೆ ನಿತ್ಯದ ಕೆಲಸಗಳ ಒಂದು ಪದ್ಧತಿಯಾಗಿ ಬೆಳೆಯುತ್ತಿದೆ

ಈ ಸಂದರ್ಭದಲ್ಲಿ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಮಧ್ವಾಚಾರ್ಯರೂ ಮಹಾಭಾರತಕ್ಕೆ ಅದರಂತೆ ಗೀತಗೆ ಅಧ್ಯಾತ್ಮಪರವಾದ ಅರ್ಥವಿದೆಯೆಂದು ಹೇಳುತ್ತಾರೆ. ೨ ನೇ ಅಧ್ಯಾಯ ತಾತ್ಪರ್ಯ ನಿರ್ಣಯದಲ್ಲಿ ಭಾರತಕ್ಕೆ ಮೂರು ಅರ್ಥಗಳಿಂದೂ ೧೪೧–೧೪೯ ರ ವರೆಗೆ ಅಧ್ಯಾತ್ಮ ಪರವಾದ ಅರ್ಥವನ್ನು ಹೇಳಿದ್ದಾರೆ. ಆದರೆ ಈ ಅರ್ಥದಿಂದ ಐತಿಹಾಸಿಕ ಅರ್ಥವನ್ನು ಅಲ್ಲಗಳೆಯುವದಿಲ್ಲ. ಇದು ಆಚಾರ್ಯರ ತಾತ್ಪರ್ಯದ ವೈಶಿಷ್ಟ್ಯ. ಆದುದರಿಂದ ನಿಜವಾದ ಸ್ವಧರ್ಮ ಪ್ರೇರಿತವಾದ ಯುದ್ಧವನ್ನು ಆಚಾರ್ಯರು ಅಲ್ಲಗಳೆಯುವದಿಲ್ಲ.

ಧರ್ಮಯುದ್ಧವನ್ನು ಅರ್ಜುನನು ಮಾಡಲೇ ಬೇಕು ಎಂದು ಭಗವಂತನು ಅರ್ಜುನನಿಗೆ ಹೇಗೆ ಮನಗಾಣಿಸಿಕೊಟ್ಟಿದ್ದಾನೆ ನೋಡಿರಿ ಭಗವಂತನು ರಭಸದಿಂದ ನಿಷ್ಕಾರಣವಾಗಿ ಯುದ್ಧಕ್ಕೆ ಧುಮುಕಲಿಕ್ಕೆ ಅರ್ಜುನನಿಗೆ ಹೇಳಿಲ್ಲ. ಆದರೆ ಧರ್ಮ್ಯಯುದ್ಧವನ್ನು ಮಾಡಲಿಕ್ಕೆ ಹೇಳುತ್ತಾನೆ ( II ೮೧ ). ಈ ಯುದ್ಧವನ್ನು ದುಷ್ಟರ ವಿರುದ್ಧ ಸಾರಲಿಕ್ಕೆ ಹೇಳಿದ್ದಾನೆ, ( I – ೩೬ ) ಧರ್ಮ್ಯಯುದ್ಧವೆಂದರೆ **प्रजारक्षणार्थं** ಪ್ರಜಾಜನರ ರಕ್ಷಣೆಗಾಗಿ ಮಾಡುವ ಯುದ್ಧವೆಂದು ಶಂಕರಾಚಾರ್ಯರು ಹೇಳುತ್ತಾರೆ ರಾಮಾನುಜರು **न्यायतः प्रवृत्तयुद्ध.** ನ್ಯಾಯವಾದ ಯುದ್ಧವೆಂದೂ ಮಧ್ವಾಚಾರ್ಯರು **हरिपूजार्थं युद्धं** ಹರಿಯ ಪೂಜೆಯೆಂದು ಮಾಡುವ ಯುದ್ಧವೆಂದೂ, ಹೇಳುತ್ತಾರೆ. ಒಟ್ಟಿಗೆ ಕರ್ಮಯೋಗಪರವಾದದ್ದು ಗೀತೆ ( ೧೮ – ೪೫ ). ಮೋಕ್ಷ ದೊರಕಿಸಲಿಕ್ಕೆ ತನ್ನ ತನ್ನ ಕರ್ಮ ಮಾಡಬೇಕು. ಕ್ಷತ್ರಿಯನು ಯುದ್ಧದಲ್ಲಿ ಶೂರತನದಿಂದ

ಹೋರಾಡಬೇಕು, ಓಡಿಹೋಗಬಾರದು (೧೮-೪೩) ಜ್ಞಾನ, ಭಕ್ತಿ ಮತ್ತು ಕರ್ಮಗಳ ದೃಷ್ಟಿಯಿಂದ ಯುದ್ಧವನ್ನು ಮಾಡಲೇಬೇಕು (೧) ಆತ್ಮನು ನಿತ್ಯನು; ಅವನಿಗೆ ಸಾವಿಲ್ಲ. ಆತ್ಮನನ್ನು ಯಾರೂ ಕೊಲ್ಲಲಾರರು. ಇದು ಜ್ಞಾನದ ದೃಷ್ಟಿಯಿಂದ ಭಗವಂತನು ಯುದ್ಧ ಮಾಡೆಂದು ಹೇಳುತ್ತಾನೆ (೨–೨೦). (೨) ಭಕ್ತಿಯ ದೃಷ್ಟಿಯಿಂದ ನಿಷ್ಕಾಮ ಕರ್ಮವು ಹರಿಪೂಜೆ ಪೂರ್ಣ ಸಾಧಿಸದಿದ್ದರೂ ಮಾಡಿದಷ್ಟಕ್ಕೆ ಅನಂತ ಫಲ (೨–೪೦) ಯುದ್ಧ ಮಾಡುವದರಿಂದ ಸತ್‌ಸಂಪ್ರದಾಯವನ್ನು ಮುಂದುವರೆಸುತ್ತಾನೆ ಯುದ್ಧವು ಸ್ವರ್ಗವನ್ನೂ ಕೀರ್ತಿಯನ್ನೂ ಕೊಡುತ್ತದೆ (೪–೨). ಧರ್ಮ ಯುದ್ಧಕ್ಕಿಂತ ಹೆಚ್ಚು ಶ್ರೇಯಸ್ಕರವಾದದ್ದು ಇನ್ನೊಂದಿಲ್ಲ. ಯುದ್ಧ ಮಾಡುವ ಕ್ಷತ್ರಿಯನೂ ಧ್ಯಾನ ಮಾಡುವ ಸನ್ಯಾಸಿಯೂ ಅದೇ ನಿಶ್ರೇಯಸನ್ನೇ ಹೊಂದುತ್ತಾರೆ (೫–೨) (೫-೫). ಅರ್ಜುನನು ಯುದ್ಧ ಮಾಡದಿದ್ದರೆ ಅವನಿಗೆ ಪಾಪ ಬರುತ್ತದೆ. ಮೇಲಾಗಿ ಕೃಷ್ಣನು ವಿಶ್ವರೂಪ ದರ್ಶನದಿಂದ ಯುದ್ಧದ ಭವಿತವ್ಯವನ್ನು ತೋರಿಸುವಾಗ ದುಷ್ಟ ಜನರು ಕಾಲನ ಮುಖದಲ್ಲಿ ಮೃತರಾಗುವದನ್ನು ತೋರಿಸಿದ್ದರಿಂದ ಅವರನ್ನು ಕೊಲ್ಲುವದರಿಂದ ಪಾಪವಿಲ್ಲವೆಂದು ಸಿದ್ಧ ಮಾಡಿದ್ದಾನೆ ಇದಾಗದಿದ್ದರೆ ಪ್ರಕೃತಿಯು (ಸ್ವಭಾವ ಅಧವಾ ಈಶ ಸಂಕಲ್ಪವು) ಅವನನ್ನು ಯುದ್ಧ ಮಾಡಲಿಕ್ಕೆ ಹಚ್ಚುವದು. ಇದು ಗೀತೆಯ ಯುದ್ಧ ಮೀಮಾಂಸವು

**स्वधर्म—** ವರ್ಣ ಮತ್ತು ಆಶ್ರಮಕ್ಕೆ ಉಚಿತವಾದ ಧರ್ಮ. ಅರ್ಜುನನು ಜನ್ಮದಿಂದ ಕ್ಷತ್ರಿಯನಾದುದರಿಂದ ಯುದ್ಧ ಮಾಡುವದು ಅವನ ಕರ್ತವ್ಯ. ಗೀತೆಯು ಒಪ್ಪಿದ್ದು ಜನ್ಮದಿಂದ ಜಾತಿಯನ್ನು ಎಂಬುದನ್ನು ಮುಂದೆ ೪ನೇ ಅಧ್ಯಾಯದಲ್ಲಿ ಚಾತುರ್ವರ್ಣ್ಯದ ವಿಚಾರದಲ್ಲಿ ಸಿದ್ಧವಾಗುವದು. ಕ್ಷತ್ರಿಯ ಧರ್ಮಕ್ಕೆ ಯೋಗ್ಯವಾದ ಕರ್ತವ್ಯವು ಯುದ್ಧ. ಇಲ್ಲಿ ಶಂಕರಾನಂದಿಯು ಅದ್ವೈತದ ಕುದುರೆಯನ್ನು ಮುಂದೆ ನೂಕಿದ್ದಾನೆ. **सर्वमिदं अहं च ब्रह्मैवेति सर्वस्य ब्रह्ममात्रत्व विज्ञानं यस्य तस्य न किंचित् कर्तव्य अस्ति ।** ಯಾರಿಗೆ ಎಲ್ಲವೂ ಬ್ರಹ್ಮವೆಂಬ ಜ್ಞಾನವು ನಿಶ್ಚಯವಾಗಿ ಆಗಿದೆಯೋ ಅವನಿಗೆ ಯಾವ ಕರ್ತವ್ಯವೂ ಇಲ್ಲ; **तदन्यस्य अहंमम इत्याद्यभिमानवतः मुमुक्षोः चित्तशुद्धयर्थं स्वधर्मः पूर्वोक्तज्ञानसिद्धयर्थं कर्तव्यः ।** ಅವರಕಿಂತ ಬೇರೆಯಾದ ಅಹಂಕಾರ ಮಮಕಾರಗಳುಳ್ಳ ಮೋಕ್ಷವನ್ನು ಇಚ್ಛಿಸುವವನು ಐಕ್ಯಜ್ಞಾನಾರ್ಥವಾಗಿ ಚಿತ್ತ ಶುದ್ಧಿಗಾಗಿ ಸ್ವಧರ್ಮವನ್ನು ಆಚರಿಸಬೇಕೆಂದು ಹೇಳುತ್ತಾನೆ.*

---

* ಆದರೆ (೧) ಕರ್ಮ ಮತ್ತು ಕರ್ತವ್ಯ ಇವು ಅಜ್ಞಾನಿಗೆ ಮಾತ್ರ; ಜ್ಞಾನಿಗೆ ಯಾವ ಕರ್ತವ್ಯವೂ ಇಲ್ಲವೆನ್ನುವದು ತಪ್ಪು ಕಲ್ಪನೆ

**धर्म्यं** ಎಂದರೆ 'ತನ್ನ ಧರ್ಮದಿಂದ ಬಂದ' ಎಂದು ಅರ್ಥ; ರಾಘವೇಂದ್ರರು ಗೀತಾ ವಿವೃತಿಯಲ್ಲಿ ಬೇರೆ ಅರ್ಥವನ್ನೂ ಹೇಳುತ್ತಾರೆ, (೧) **परलोकसुखहेतुः धर्मः ।** ಪರಲೋಕದಲ್ಲಿ ಸುಖ ಕೊಡುವದು. ಆ ಸುಖಕ್ಕೆ ಕಾರಣವಾದದ್ದೇ ಕ್ಷತ್ರಿಯ ಧರ್ಮವಾದ ಯುದ್ಧವು. (೨) **धारकत्वात् धर्मो हरिः तत्पूजारूपं धर्म्यं ।** ಜಗತ್ತಿಗೆ ಧಾರಕನಾದುದರಿಂದ ಧರ್ಮವೆಂದರೆ ಹರಿಯು, ಅವನ ಪೂಜಾ ರೂಪವಾದುದೇ ಧರ್ಮ್ಯವಾದ ಯುದ್ಧ.

ಸಂದರ್ಭಕ್ಕೆ ಅನುಗುಣವಾಗಿ ಮತ್ತೆರಡು ಅರ್ಥಗಳನ್ನೂ ಹೇಳುತ್ತಾರೆ— (೧) ಧರ್ಮ ಎಂದರೆ ಬಿಲ್ಲು; ಅರ್ಜುನನು ತನ್ನ ಗಾಂಡೀವ ಧನುಷ್ಯವನ್ನು ವಿಷಾದ ದಲ್ಲಿ ಕೆಳಗೆ ಚೆಲ್ಲಿದ್ದನು. ಅದನ್ನು ನೋಡಿ ಶ್ರೀ ಕೃಷ್ಣನು **स्वधर्ममपि चावेक्ष्य** (ಕೆಳಗೆ ಬಿದ್ದ) ನಿನ್ನ ಚಾಪವನ್ನಾದರೂ ನೋಡಿ ನೀನು ಯುದ್ಧಕ್ಕೆ ನಡುಗಬೇಡ ಎಂದು ಹೇಳುತ್ತಾನೆ. ಆ ಧನುಷ್ಯಕ್ಕೆ ಎಂಟು ನೈತಿಕ ಮತ್ತು ನೈಜವಾದ ಶಕ್ತಿ ಗಳಿವೆ. ಬಹು ಪ್ರಯಾಸದಿಂದ ಅದನ್ನು ದೊರಕಿಸಿದ್ದಾನೆ. ಆದುದರಿಂದ ಅದನ್ನು ಹೀಗೆ ತಿರಸ್ಕಾರದಿಂದ ಚೆಲ್ಲುವದು ಒಳಿತಲ್ಲವೆಂದು ಎಚ್ಚರಿಸುತ್ತಾನೆ.

(೨) ಧರ್ಮವೆಂದರೆ ಧರ್ಮರಾಜನು. ಧರ್ಮರಾಜನು ಯುದ್ಧವನ್ನು ಹೂಡಿದ್ದು ಭೀಮ ಮತ್ತು ಅರ್ಜುನರ ಬಲದ ಮೇಲೆ ಹೋಗಿದ್ದೂ ಅರ್ಜುನನು ಯುದ್ಧದಿಂದ ಹಿಂದೆಗೆದರೆ ಧರ್ಮರಾಜನಿಗೆ ಅನ್ಯಾಯವಾಗುವದು. ಅದನ್ನು ತಪ್ಪಿಸಲಿಕ್ಕಾದರೂ ಅರ್ಜುನನು ಯುದ್ಧ ಕೈಕೊಳ್ಳಬೇಕೆಂದು ಭಗವಂತನ ಅಭಿ ಪ್ರಾಯ.

ರಾಮಾನುಜಾಚಾರ್ಯರ ವಾದವು ಮತ್ತೊಂದು ತರಹ. ಯುದ್ಧವನ್ನು ಅವರು ಯಾಗವೆಂದು ತಿಳಿಯುತ್ತಾರೆ. ಯಾಗದಲ್ಲಿ ಪಶು ಕೊಲ್ಲಲ್ಪಟ್ಟರೂ ಅದು ಉತ್ತಮ ದೇಹ ತಕ್ಕೊಂಡು ಸ್ವರ್ಗಕ್ಕೆ ಹೋಗುವದರಿಂದ ಅದು ಪಶುಹಿಂಸೆ ಎನಿಸು ವದಿಲ್ಲ ಹೇಗೋ ಹಾಗೆ ಯುದ್ಧದಲ್ಲಿ ಮರಣ ಹೊಂದಿದ ವೀರರು ಉತ್ತಮ ದೇಹ ತೆಗೆದುಕೊಂಡು ಸ್ವರ್ಗಕ್ಕೆ ಹೋಗುವದರಿಂದ ಯುದ್ಧದಲ್ಲಿ ವೈರಿಗಳನ್ನು ಕೊಲ್ಲುವದು

---

(೨) ಅರ್ಜುನನು ಒಬ್ಬ ಮೂಢನು ಮತ್ತು ಅವನಿಗೆ ಇಲ್ಲಿಯ ವರೆಗೆ ಹೇಳಿದ ಭಗವಂತನ ಉಪ ದೇಶವು ತಿಳಿಯಲಿಲ್ಲವೆನ್ನುವದು ಸರಿಯಾದ ಮಾತಲ್ಲ

(೩) ಫಲ ಸನ್ಯಾಸ ಮಾಡಿ ಯುದ್ಧವನ್ನು ಮಾಡುವದು ಯಾವ ಕ್ಷತ್ರಿಯನಿಗೂ ಸಾಧ್ಯವಿಲ್ಲೆಂ ಬುದು ಒಂದು ವಿಡಂಬನೆ. ಈ ಮೂರು ದೋಷಗಳು ಈ ವಾದದಲ್ಲಿ ತೋರುತ್ತವೆ.

ಕ್ಷತ್ರಿಯನಿಗೆ ಹಿಂಸೆಯೆನಿಸುವದಿಲ್ಲ. ಆದರಿಂದ ಪಾಪ ಬರುವದಿಲ್ಲ * ಆದುದರಿಂದ ಅರ್ಜುನನು ಯುದ್ಧ ಮಾಡಬೇಕೆಂದು ಭಗವಂತನು ಹೇಳುತ್ತಾನೆಂದು ರಾಮಾನುಜರ ವಾದ.

ಮೊದಲಿನದಾಗಿ ಸಜೀವ ಪಶುಹಿಂಸೆಯನ್ನು ಯಜ್ಞದಲ್ಲಿ ಮಾಡಬಾರದು, ಪಿಷ್ಟಪಶುವನ್ನು ಮಾಡಬೇಕೆಂಬುದು ಮಧ್ವಾಚಾರ್ಯರ ಮತ ಆದರೆ ವೇದಾಂತ ದೇಶಿಕರು ಸಜೀವ ಪಶುಹಿಂಸೆಯನ್ನೇ ಮಾಡಬೇಕೆಂದು ಹೇಳುತ್ತಾರೆ. ಸದ್ಯಕ್ಕೆ ಆ ಪ್ರಶ್ನೆ ಅಪ್ರಸ್ತುತವಾದುದರಿಂದ ಬಿಡೋಣ (ಮುಂದೆ ವಿಚಾರ ಮಾಡಬಹುದು) ಈಗ ಪ್ರಶ್ನೆ ಯಜ್ಞದಲ್ಲಿ ವಧ ಮಾಡುವಾಗ ಪಶುವಿಗೆ ಹಿಂಸೆ ಎನಿಸುವದೋ ಇಲ್ಲವೋ ಎಂದು ಕೊಲ್ಲವಕಾಲಕ್ಕೆ ಅದಕ್ಕೆ ಹಿಂಸೆ ಎನಿಸುತ್ತಿದೆ ಹಾಗೆ ಯುದ್ಧದಲ್ಲಿ ಮೈಗಾಯವಾದಾಗ ಸಾಯುವ ಮೊದಲು ಬೇಕಾದಷ್ಟು ನೋವೆನಿಸುತ್ತದೆ. ಮುಂದೆ ಸ್ವರ್ಗಸಿಗಲಿ; ಸಾಯುವ ಮೊದಲಂತೂ ವಿಪರೀತ ವೇದನೆಯನ್ನು ಅನುಭವಿಸಬೇಕಾಗುತ್ತದೆ ಆದುದರಿಂದ ಹಿಂಸೆ ಇಲ್ಲದ್ದರಿಂದ **(अग्निषोमीयादिष न हिंसापशोः)** ಅರ್ಜುನನು ಯುದ್ಧದಲ್ಲಿ ಕೊಂದರೂ ಸಹ ಅವರಿಗೆ ಹಿಂಸೆ ಇಲ್ಲವೆನ್ನುವದು ಸರಿಯಲ್ಲ. ಅದಕ್ಕಾಗಿ ಅರ್ಜುನನಿಗೆ ಯುದ್ಧಮಾಡೆಂದು ಹೇಳುವದೂ ಸರಿಯಲ್ಲ ಎಂದು ರಾಮಾನುಜರ ತಾತ್ಪರ್ಯಕ್ಕೆ ಈ ದೋಷವು ಬರುತ್ತದೆ.

ಆದುದರಿಂದ ರಾಧಾಕೃಷ್ಣನ್ನರು ಹೇಳುವ ಹಾಗೆ— "Krishna tells Azjuna that for warriors there is no more ennobling duty than a fair fight." ಕೃಷ್ಣನು ಅರ್ಜುನನಿಗೆ ಕ್ಷತ್ರಿಯರಿಗೆ ನ್ಯಾಯವಾದ ಯುದ್ಧವನ್ನು ಬಿಟ್ಟು ಬೇರೆ ಉದಾತ್ತವಾದ ಕರ್ತವ್ಯವು ಇಲ್ಲವೆಂದು ಹೇಳುತ್ತಾನೆ.

**धर्म्याद्धियुद्धात् श्रेयः अन्यत् नास्ति—** ತಮ್ಮದಾದ ರಾಜ್ಯವನ್ನು ದುರ್ಯೋಧನಾದಿಗಳು ಕಸಿದುಕೊಂಡದ್ದನ್ನು ತಿರುಗಿ ತೆಗೆದುಕೊಳ್ಳುವದಕ್ಕಾಗಿ ಪಾಂಡವರು ಹೂಡಿದ ಯುದ್ಧವು ಅಂಥ ಉದಾತ್ತವಾದ ಯುದ್ಧವೇನಲ್ಲ 'ಅದರಕಿಂತ ಹೆಚ್ಚು ಶ್ರೇಯಸ್ಕರ ಯುದ್ಧವು ಇಲ್ಲ' ಎಂದು ಹೇಳುವಂಥ ಯುದ್ಧವು ಇದಲ್ಲವೆಂದು ಕೆಲವರು ಆಕ್ಷೇಪಿಸಿ 'ಧರ್ಮಸಂಸ್ಥಾಪನೆಗಾಗಿ ಮಾಡುವ ಯುದ್ಧವೇ' ಆ ತರಹದ ಶ್ರೇಯಸ್ಕರ ಯುದ್ಧವೆಂದು ಹೇಳುತ್ತಾರೆ. ಮಧ್ವಾ

---

* **यज्ञेषु पशवोब्रह्मन् हन्यंते सततं द्विजैः**
**संकृताः किलमंत्रैश्च तेपि स्वर्गं अवाप्नुवन् ।। स्मृति ।।**

ಚಾರ್ಯರೂ ಇದೇ ಅಭಿಪ್ರಾಯದವರೇ. **नारायणद्विट् तदनुबंधीनांनिग्रहः** ಇದೇ ಧರ್ಮದ ಸಲುವಾಗಿ ಮಾಡುವ ಯುದ್ಧವೆಂದು ಹೇಳಿದ್ದಾರೆ.

**क्षतात् त्रायते इति** ಗಾಯದಿಂದ ರಕ್ಷಿಸುವವನು ಕ್ಷತ್ರಿಯನು ಎಂಬ ಯೌಗಿಕ ಅರ್ಥವೂ ಇದನ್ನೇ ಸೂಚಿಸುತ್ತದೆ

**यदृच्छयाचोपपन्नं स्वर्गद्वारमपावृतम्**
**सुखिनः क्षत्रियाःपार्थ लभंतेयुद्धमीदृशम् ।। ३२ ।।**

ಮತ್ತು, ಎಲೈ ಅರ್ಜುನ ! ಅನಾಯಾಸವಾಗಿ ತೆರೆದ ಸ್ವರ್ಗಕ್ಕೆ ಬಾಗಿಲನಂತೆ ಇರುವ ಇಂಥ ಯುದ್ಧವನ್ನು ಸುಖಕ್ಕೆ ಕಾರಣವಾದ ಪುಣ್ಯವುಳ್ಳ ಕ್ಷತ್ರಿಯರು ಮಾತ್ರ ಹೊಂದುತ್ತಾರೆ ॥ ೩೨ ॥

ಸತ್ಯಧ್ಯಾನತೀರ್ಥರು ಇದರ ತಾತ್ಪರ್ಯವನ್ನು ಹೀಗೆ ಹೇಳುತ್ತಾರೆ— " ಧರ್ಮಕ್ಕೆ ಸಾಧನವಾದ ಯುದ್ಧವನ್ನು ಪುಣ್ಯವಂತರು ಹೊಂದುತ್ತಾರೆ. ಅನಾಯಾಸವಾಗಿ ( ಈಶೇಚ್ಛೆಯಿಂದ ) ಬಂದ ಪುಣ್ಯಸಾಧನವಾದ ಯುದ್ಧವನ್ನು ಬಿಡಬೇಡ. "

**ವಿಶೇಷ ಟಿಪ್ಪಣಿಗಳು :**

೧ನೇ ಅಧ್ಯಾಯ ೩೭ನೇ ಶ್ಲೋಕದಲ್ಲಿ ( **स्वजनंहि कथं हत्वासुखिनः स्माम माधव**) ' ಸ್ವಜನರನ್ನು ಕೊಂದು ನಾವು ಹೇಗೆ ಸುಖಿಗಳಾದೇವು ? ' ಎಂದು ಕೇಳಿದ್ದಕ್ಕೆ ಈಗ ಭಗವಂತನು " ಇಂಥ ಯುದ್ಧವನ್ನು ಸುಖಕ್ಕೆ ಕಾರಣವಾದ ಪುಣ್ಯವುಳ್ಳ ಕ್ಷತ್ರಿಯರು ಹೊಂದುತ್ತಾರೆ " ಎಂದು ಹೇಳುತ್ತಾನೆ

**ईदृश** ಇಂಥ, ಎಂಥ ಎಂಬುದನ್ನು ಹಿಂದಿನ ಶ್ಲೋಕದಲ್ಲಿ ಮತ್ತು ಈ ಶ್ಲೋಕದ ಮೊದಲಿನ ಸಾಲಿನಲ್ಲಿ ಹೇಳಿದ್ದಾನೆ **यदृच्छा** — ಅರ್ಜುನನಿಗೆ ಯುದ್ಧದ ಅವಕಾಶ ದೊರೆತದ್ದು 'ಆಕಸ್ಮಿಕ'ವಲ್ಲ ರಾಘವೇಂದ್ರಸ್ವಾಮಿಗಳು ತಮ್ಮ ವಿವೃತಿಯಲ್ಲಿ १) **अप्रयत्नेन उत्पन्नं** ಪ್ರಯತ್ನವಿಲ್ಲದೆ ದೊರೆತದ್ದು. २) **'यदृच्छाहि तदिच्छास्यात्'** ಎಂದು ಹೇಳಿರುವದರಿಂದ **ईश्वरेच्छाप्राप्तं** ಪರಮಾತ್ಮನ ಸಂಕಲ್ಪದಿಂದ ದೊರೆತದ್ದು. ಇನ್ನು ಯಾರೂ ಈ ಅರ್ಥದ ಕಡೆಗೆ ಲಕ್ಷ್ಯಗೊಟ್ಟಿಲ್ಲ. ನಿಜವಾದ ಈಶ್ವರವಾದಿಯು ಆಕಸ್ಮಿಕತೆಗೆ ಒಪ್ಪುವದಿಲ್ಲ; ಹೀಗೆ ಹೇಳುವದೆಂದರೆ ಆ ವಿಷಯದಲ್ಲಿ ಪರಮಾತ್ಮನ ನಿರ್ಣಯವಿಲ್ಲೆಂದು ಅರ್ಥವಾಗುತ್ತದೆ. ಜಗತ್ತಿನ ಮೇಲಿನ ಯಾವ ಚಲನವೂ ಆತನ ಸಂಕಲ್ಪವಿಲ್ಲದೆ ನಡೆಯಲಾರವು. (**तस्य संकल्पं विनातृणमपि न चलति**).

ವೆಂಕಟನಾಥನು ಇಲ್ಲಿ ಒಂದು ಸಂಶಯುವನ್ನು ಎತ್ತುತ್ತಾನೆ. ಯದೃಚ್ಛೆ ಯಿಂದ ಅರ್ಜುನನಿಗೆ ಬಂದ ಯುದ್ಧವು ಕೌರವರೊಡನೆ ನಡೆಯತಕ್ಕ ಇಡೀ ಯುದ್ಧವೇ ಅಥವಾ ಭೀಷ್ಮ-ದ್ರೋಣಾದಿಗಳ ಕೂಡ ನಡೆಯುವ ಈ ಹೊತ್ತಿನ ಯುದ್ಧ ಮಾತ್ರವೆ ? ವೆಂಕಟನಾಥನು ಭೀಷ್ಮ–ದ್ರೋಣರ ಕೂಡ ಈ ಹೊತ್ತು ನಡೆಯುವ ಯುದ್ಧವಷ್ಟೇ ಎಂದು ಅದನ್ನು ಮಿತಗೊಳಿಸುತ್ತಾನೆ. **कथं भीष्म महं संख्ये** ಎಂದು ಅರ್ಜುನನಿಗೆ ಅವರಗೂಡ ಹೋರಾಡುವದಕ್ಕೆ ಮಾತ್ರ ಆತಂಕ ಬಂದಿದೆ ಎಂದು ಇವರ ವಾದ ಪಾಂಡವರು ದುರ್ಯೋಧನನಗೂಡ ಯುದ್ಧವನ್ನು ಬಯಸಿದ್ದಾರೆ ಆದರೆ ಈ ಗುರುಗಳ ಕೂಡ ಯುದ್ಧವನ್ನು ಬಯಸಿಲ್ಲ ಇರ ಬಹುದು, ಆದರೆ ಹಿಂದಿನ ಎಲ್ಲ ಶ್ಲೋಕಗಳನ್ನೂ ಲಕ್ಷ್ಯಕ್ಕೆ ತೆಗೆದುಕೊಂಡರೆ ಅರ್ಜುನನು ತನ್ನ ಎಲ್ಲ ಆಪ್ತರೊಡನೆ ಹೋರಾಡುವ ಪ್ರಸಂಗಕ್ಕಾಗಿಯೇ ಶೋಕಿಸು ತ್ತಾನೆ ಎನ್ನುವದು ಸ್ಪಷ್ಟವಾಗುತ್ತದೆ ' ಆದುದರಿಂದ ಇಡೀ ಯುದ್ಧವೇ ಪ್ರಸಕ್ತ ವಾಗಿದೆ ಈ ಮಹಾಯುದ್ಧದಲ್ಲಿ ಆಗತಕ್ಕ ಮನುಷ್ಯ ವಧೆಗೆ ಪಾಂಡವರು ಹೊಣೆ ಗಾರರಲ್ಲವೆನ್ನುವದನ್ನು ಕೃಷ್ಣನು ಅರ್ಜುನನಿಗೆ ಮನಗಾಣಿಸುತ್ತಾನೆ

**अपावृतं** ಇದನ್ನು **स्वर्गद्वार**ದ ಕೂಡ ಅನ್ವಯಿಸಿ ಸ್ವರ್ಗದ ದಾರಿಗೆ ಯಾವ ಪ್ರತಿಬಂಧವೂ ಇಲ್ಲವೆಂದು ಅರ್ಥ ಅಥವಾ ಇದನ್ನು ನೇರವಾಗಿ **युद्ध**ದೊಡನೆ ಅನ್ವ ಯಿಸಬಹುದು ಇದರಲ್ಲಿ ಹೋರಾಡುವವರಿಗೆ ನ್ಯಾಯವಾದ ಯುದ್ಧ ದೊರೆಯು ತ್ತಿದೆ. ಇಂಥ ಪ್ರಸಂಗವು ಸಿಗುವದು ಅಪರೂಪ. ಈಗ ಅದು ಅರ್ಜುನನಿಗೆ ದೊರೆತಿದೆ ಎಂದು ಅರ್ಥ, ಈಗ 'ಅಪಾವೃತ'ವೆಂದರೆ ಯುದ್ಧದ ವಿಷಯದಲ್ಲಿ ಈಗ ವಿವೇಕದ ಚುಚ್ಚುಗಳಾವವೂ ಇಲ್ಲ ಎಂದು ಅರ್ಥ.

ಮಧುಸೂದನ ಸರಸ್ವತಿಯವರು— **अपावृतं** ಇವರ ಮೇಲೆ ಹೆಚ್ಚು ಒತ್ತಿ ಹೇಳಿ ಈ ಶ್ಲೋಕದ ಮೊದಲಿನ ಸಾಲು ಯುದ್ಧದಲ್ಲಿ ಮಡಿದರೆ ಇವರಿಗೆ ತಡವಿಲ್ಲದೆ ಸ್ವರ್ಗವು ದೊರೆಯುತ್ತದೆಂದು ಹೇಳುತ್ತದೆ. ಹಾಗೆ ಯುದ್ಧದಲ್ಲಿ ಸೋತರೂ ಇವರ ಸಲುವಾಗಿ ಯುದ್ಧದ ಬಾಗಿಲು ತೆರೆದೇ ಇರುತ್ತದೆ, ಆದರೆ ಯುದ್ಧದಲ್ಲಿ ಗೆದ್ದರೆ ಮಾತ್ರ ಅವರು ಸ್ವರ್ಗಕ್ಕೆ ಹೋಗುವ ಪ್ರಸಕ್ತಿಯಿಲ್ಲ ಅವರು ಸುಖಿಗಳಾಗಿ ಬಾಳುವರು ಎಂದು ಎರಡನೆ ಸಾಲಿನ ಅರ್ಥ.

ಆದರೆ ಈ ತರಹದ ಎರಡು ವಿಕಲ್ಪಗಳಿಗೆ ಶ್ಲೋಕದಲ್ಲಿ ಯಾವ ಆಧಾರಗಳೂ ಇಲ್ಲ, **अपावृतं** ಎನ್ನುವದು ವೀರರಿಗೆ ಸ್ವರ್ಗಲೋಕವು ಯಾವಾಗಲೂ ಸಿದ್ಧ ವಿರುತ್ತದೆ. ಅದಕ್ಕೆ ಪ್ರತಿಬಂಧಗಳಾವವೂ ಇಲ್ಲವೆಂಬುದು ಆದರ ತಾತ್ಪರ್ಯ.

**अपावृत** ಎಂದರೆ ಯುದ್ಧದಿಂದ ಪಾಪ ಬರುವದೆಂಬ ವಿವೇಕದ ಚುಚ್ಚು ಯಾವದೂ ಇಲ್ಲದ (ಯುದ್ಧ)

ಈ ಎರಡನೆ ಸಾಲಿನ ಅರ್ಥದ ವಿಷಯದಲ್ಲಿ ರಾಮಾನುಜಾಚಾರ್ಯರ ಮತ ಎಲ್ಲರಕಿಂತ ಬೇರೆಯಾಗಿದೆ ತಮ್ಮ ಭಾಷ್ಯದಲ್ಲಿ— **ईदृशं युद्धं सुखिनः पुण्यवंतः क्षत्रियालभंते** ಇಂಥ ಯುದ್ಧವು ಪುಣ್ಯವಂತರಾದ ಕ್ಷತ್ರಿಯರಿಗೆ ಲಭಿಸುತ್ತದೆ. ಎಂದರೆ ಹಿಂದಿನ ಪುಣ್ಯದ ಬಲದಿಂದ ಧರ್ಮಯುದ್ಧವು ದೊರೆಯುತ್ತದೆಂಬುದು ಅವರ ಅಭಿಪ್ರಾಯ. ಆದರೆ ರಾಘವೇಂದ್ರರು ಗೀತಾ ವಿವೃತಿಯಲ್ಲಿ— **सुखिनः सुखहेतुपुण्यवंतः ।** ಮುಂದಿನ ಸುಖಕ್ಕೆ ಕಾರಣವಾದ ಪುಣ್ಯವುಳ್ಳವರು. ಆದರೆ ಈ ಭೇದವನ್ನು ಕಟ್ಟುನಿಟ್ಟಾಗಿ ಪಾಲಿಸಿಲ್ಲ, ಕೆಲವರು ಎರಡೂ ಅರ್ಥಗಳನ್ನೂ ಇಟ್ಟುಕೊಂಡಿದ್ದಾರೆ ಆದುದರಿಂದ ಈ ಭೇದಕ್ಕೆ ಅಷ್ಟು ಮಹತ್ವ ಕೊಟ್ಟ ಹಾಗೆ ತೋರುವದಿಲ್ಲ

ಸ್ವಾಮಿ ಚಿದ್ಭವಾನಂದರು— "ಅರ್ಜುನನಿಗೆ ಸಾಕಷ್ಟು ಕಷ್ಟಗಳು ಬಂದವು. ವನವಾಸವಾಯಿತು, ಅಜ್ಞಾತವಾಸವಾಯಿತು. ಈಗ ದೈವ ತೆರೆಯುವ ಪ್ರಸಂಗ ಬಂದಿದೆ ಈ ಪ್ರಸಂಗವನ್ನು ಉಪಯೋಗಿಸಿಕೊಂಡರೆ ಬಹಳ ಒಳ್ಳೇ ದಿನಗಳು ಬರುವವು, ಇಂಥ ಹೊತ್ತಿನಲ್ಲಿ ಕೈಚೆಲ್ಲಿ ಕೂಡುವದು ಬೇಡ" ಎಂದು ಭಗವಂತನ ಅಭಿಪ್ರಾಯವನ್ನು ಸೂಚಿಸುತ್ತಾರೆ.

ಪ್ರಭುಪಾದರು— ಕ್ಷತ್ರಿಯನು ಯುದ್ಧ ಭೂಮಿಯ ಮೇಲೆ ಅಹಿಂಸೆಯನ್ನು ಆಚರಿಸುವದು ಮೂರ್ಖನದ ತತ್ವಜ್ಞಾನವು.

**क्षत्रियो हि प्रजारक्षन् शस्त्रपाणिः प्रदण्डयन्**
**निर्जित्य परसैन्यादि क्षितिम् धर्मेणपालयेत् ।। पराशरस्मृति**

ಕ್ಷತ್ರಿಯನು ಶಸ್ತ್ರಪಾಣಿಯಾಗಿ ಪ್ರಜಾಜನರನ್ನು ರಕ್ಷಿಸುತ್ತ ಯೋಗ್ಯ ಕಾಲದಲ್ಲಿ ಹಿಂಸೆಯಿಂದ ಅಪರಾಧಿಗಳನ್ನು ದಂಡಿಸುತ್ತ ವೈರಿಗಳ ಸೈನ್ಯವನ್ನು ಗೆದ್ದು, ಭೂಮಿಯನ್ನು ಕಾಯಿದೆಗೆ ಅನುಸರಿಸಿ ಸಂರಕ್ಷಿಸಬೇಕು. ಅರ್ಜುನನು ಯುದ್ಧ ಮಾಡಲೇ ಬೇಕು ಸತ್ತರೆ ಸ್ವರ್ಗ ಸಿಗುವದು. ಜಯ ಸಿಕ್ಕರೆ ರಾಜ್ಯವಾಳುವನು.

ರಾಧಾಕೃಷ್ಣನ್ನರು— ಕ್ಷತ್ರಿಯನ ಸುಖವು ಮನೆಯಲ್ಲಿ ದೊರೆಯುವ ಸುಖವಲ್ಲ, ಆದರೆ ನ್ಯಾಯಕ್ಕಾಗಿ ಹೋರಾಡುವದರಲ್ಲಿ ದೊರೆಯುವ ಸುಖವು.

**द्वौ इमौ पुरुषव्याघ्र सूर्यमंडलभेदिनौ ।**

**परिव्राड् योगयुक्तश्च रणेचाभिमुखो हतः ॥**

೩೨–೬೫ ಉದ್ಯೋಗ

ಪುರುಷ ಶ್ರೇಷ್ಠನೇ ! ಸೂರ್ಯಮಂಡಲವನ್ನು ಭೇದಿಸುವವರು ಇಬ್ಬರು : ಯೋಗದಲ್ಲಿ ಮಗ್ನನಾದ ಸನ್ಯಾಸಿಯು ಒಬ್ಬನು; ಯುದ್ಧದಲ್ಲಿ ಹತನಾದ ಕ್ಷತ್ರಿಯನು ಮತ್ತೊಬ್ಬನು.

ವಿನೋಬಾ ಭಾವೆಯವರ ಗೀತಾ ಪ್ರವಚನಗಳಲ್ಲಿ— **स्वधर्म**ದ ವಿಷಯದಲ್ಲಿ ವಿಚಾರವು ಮನನೀಯವಾಗಿದೆ. "ಸ್ವಧರ್ಮವು ನಿಸರ್ಗತಃ ಪ್ರಾಪ್ತವಾಗಿದೆ. ಸ್ವಧರ್ಮವನ್ನು ಹುಡುಕುವ ಕಾರಣ ಬೀಳುವದಿಲ್ಲ. ಯಾವ ಸಮಾಜದಲ್ಲಿ ನಾವು ಹುಟ್ಟಿದ್ದೇವೆ, ಆ ಸಮಾಜದ ಸೇವೆಯನ್ನು ನಾವು ಮಾಡಲೇಬೇಕು. ಸ್ವಧರ್ಮವು ನನ್ನ ತಾಯಿಯಂತೆ ಅದೆ ನನ್ನ ತಾಯಿಯನ್ನು ನಾನು ಆರಿಸಬೇಕಾಗಿಲ್ಲ ಆಕೆಯು ನಮ್ಮ ಮೊದಲೇ ಇದ್ದಾಳೆ, ಸಿದ್ಧಳಿದ್ದಾಳೆ. ಆಕೆ ಹೇಗೇ ಇರಲಿ; ಅವಳನ್ನು ನಾವು ತಪ್ಪಿಸಲಾರೆವು. ಇದೇ ಸ್ವಧರ್ಮದ ಸ್ಥಿತಿಯು. ನಮಗೆ ಈ ಜಗತ್ತಿನಲ್ಲಿ ಸ್ವಧರ್ಮದ ಹೊರತು ಬೇರೆ ಆಶ್ರಯವೇ ಇಲ್ಲ. ಸ್ವಧರ್ಮವನ್ನು ತಪ್ಪಿಸಲಿಕ್ಕೆ ಹವಣಿಸುವದೆಂದರೆ **स्व** ತನ್ನನ್ನೇ ತಪ್ಪಿಸಿಕೊಳ್ಳುವ ಪ್ರಯತ್ನದಂತೆ ಆತ್ಮಘಾತಕಿಯಾಗಿದೆ. ಸ್ವಧರ್ಮವನ್ನು ಆಶ್ರಯಿಸಿ ನಾವು ಮುಂದೆ ಹೋಗಬಲ್ಲೆವು.

ಸ್ವಧರ್ಮಕ್ಕೆ ಒಂದೇ ಒಂದು ಅಡ್ಡಿ; ಅದೆಂದರೆ ಬುದ್ಧಿ. ಈ ದೇಹಬುದ್ಧಿಯು ನಾನಾ ತರಹದ ಪ್ರಭೇದವನ್ನು ಕಲ್ಪಿಸುತ್ತದೆ. ಕುಟುಂಬ ಅಭಿಮಾನ, ದೇಶಾಭಿಮಾನ, ಬ್ರಾಹ್ಮಣ–ಬ್ರಾಹ್ಮಣೇತರ, ಹಿಂದು–ಮುಸಲ್ಮಾನ ಮೊದಲಾದವು ಇವೆಲ್ಲವು ಸ್ವಧರ್ಮವನ್ನು ನಾಶಗೊಳಿಸುತ್ತವೆ.

ಈ ಸ್ವಧರ್ಮದ ವಿಷಯದಲ್ಲಿ ೪ನೇ ಅಧ್ಯಾಯದಲ್ಲಿ ವಿಚಾರ ಮಾಡೋಣ.

**अथ चेत्त्वमिदं धर्म्यं संग्रामं न करिष्यसि ।**

**ततः स्वधर्मं कीर्ति च हित्वा पापमवाप्स्यसि ॥३३॥**

ಆದರೆ ನೀನು ಈ ಧರ್ಮಸಾಧನವಾದ ಯುದ್ಧವನ್ನು ಮಾಡದೇ ಹೋದರೆ ಯುದ್ಧವನ್ನು ಬಿಡುವದರಿಂದ ಸ್ವಧರ್ಮವನ್ನೂ ಮತ್ತು ಕೀರ್ತಿಯನ್ನೂ ಬಿಟ್ಟು ಪಾಪವನ್ನು ಹೊಂದುವಿ.

**ವಿಶೇಷ ಟಿಪ್ಪಣಿಗಳು**

ಯುದ್ಧದಿಂದ ಪರಾವೃತ್ತನಾಗುವದರಿಂದಾಗುವ ಪರಿಣಾಮವನ್ನು ಭಗವಂತನು ಅರ್ಜುನನ ಎದುರಿಗೆ ಇಡುವನು ಇದನ್ನೇ ಗೀತಾವಿವೃತಿಯಲ್ಲಿ **युद्धाकरणे अनर्थप्राप्तीत्युक्त्या च तत्कर्तव्यतामाह ।** "ಯುದ್ಧ ಮಾಡದಿದ್ದರೆ ಅನರ್ಥವಾಗುವದರಿಂದ ಅದು ಕರ್ತವ್ಯವೆಂದು ಸಾಧಿಸುತ್ತಾನೆ" ಎಂದು ಹೇಳಿದ್ದಾರೆ.

ಇದರಲ್ಲಿ **इमं** ಪದವು ಅರ್ಥಪೂರ್ಣವಾಗಿದೆ ಹಿಂದಿನ ಶ್ಲೋಕದಲ್ಲಿಯು **ईदृशं** ಪದವೂ ಇದೇ ಅರ್ಥವನ್ನೇ ಸೂಚಿಸಿದೆ. ಧರ್ಮಸ್ವರೂಪವುಳ್ಳದ್ದೆಂದು ಅರ್ಥ ಆದರೆ ರಾಮಾನುಜಾಚಾರ್ಯರೂ ಮತ್ತು ಅವರ ಅನುಯಾಯಿಗಳೂ ಇದಕ್ಕೊಂದು ವಿಶಿಷ್ಟವಾದ ಅರ್ಥವನ್ನು ಕೊಟ್ಟಿದ್ದಾರೆ. **स्वधर्मभूतं इमं प्रारब्ध संग्रामं** ಎಂದು **इम** ಎಂದರೆ ಪಾರಂಭಿಸಲ್ಪಟ್ಟ ಎಂಬ ಅರ್ಥವನ್ನು ಕೊಟ್ಟಿದ್ದಾರೆ. ವೇದಾಂತ ದೇಶಿಕರು ಒಂದು ಪೂರ್ವಪಕ್ಷವನ್ನು ಕಲ್ಪಿಸಿ ಆ ಪೂರ್ವಪಕ್ಷವನ್ನು ಈ ಅರ್ಥವು ನಿವಾರಿಸುವದಾಗಿ ಹೇಳಿದ್ದಾರೆ. **नह्ययुद्धस्य अकरणमात्रं क्षत्रियस्यापि प्रत्यवायहेतुः सर्वदायुद्धकरण प्रसंगात् इत्यतः उक्तं 'प्रारब्धम्' इति.** ಕೇವಲ ಯುದ್ಧ ಮಾಡದೇ ಇರುವದು ಕ್ಷತ್ರಿಯನಿಗೆ ಪಾಪಕಾರಿಯಲ್ಲ; ಹಾಗಿದ್ದರೆ ಅವನು ಯಾವಾಗಲೂ ಯುದ್ಧ ಮಾಡುತ್ತಲೇ ಇರಬೇಕಾಗುತ್ತಿತ್ತು. ಆದರೆ ಪ್ರಾರಂಭ ಮಾಡಿದ ಯುದ್ಧವನ್ನು ಬಿಡಬಾರದೆಂದು ತಾತ್ಪರ್ಯ. ಅದಕ್ಕಾಗಿಯೇ ಇಲ್ಲಿ **प्रारब्धं** ವೆಂದು ಉಪಯೋಗಿಸಿದ್ದಾರೆ. ಇದು ಕೂಡ ಸರಿಯಾದ ಉತ್ತರವೆನಿಸುವದಿಲ್ಲ. ಯಾಕೆಂದರೆ ಅರ್ಜುನನು ಯುದ್ಧವನ್ನು ಪ್ರಾರಂಭ ಮಾಡಿದ್ದರಿಂದ ಬಿಡುವದಷ್ಟೇ ಪಾಪವಲ್ಲ, ಪ್ರಾರಂಭ ಮಾಡದಿದ್ದರೂ ಅವನಿಗೆ ಪಾಪ ಬರುತ್ತಿತ್ತು. ನ್ಯಾಯವಾದ ಯುದ್ಧಕ್ಕೆ ಸಿದ್ಧತೆ ಮಾಡದಿರುವದೂ ತಪ್ಪು ಎನಿಸುವದು.*

ಬ್ರಹಾನಂದಗಿರಿಯಲ್ಲಿ (ವೆಂಕಟನಾಥರು) ಪೂರ್ವಪಕ್ಷವನ್ನು ಇನ್ನೊಂದು ವಿಧದಿಂದ ಮಾಡಿ ಅದಕ್ಕೆ ಇದೇ ಉತ್ತರವನ್ನೇ ಜೋಡಿಸುತ್ತಾರೆ. —

---

* 33–34 ( The Pearl of the orient by Groffrey A Barborka) "To be Sure the opportunity of Stressing the duty at hand in connection with the Kshatriya Caste is such a Splendid one that it is utilized to the fullest extent. How could a warrior possibly refrain from doing the duty pertainig to his caste as well as to his family ? "

**" ननु युद्धं काम्यं ननुनित्यं नैमित्तिकं वा. "** ಯುದ್ಧವು ಸಂಧ್ಯಾವಂದನೆ ಯಂತೆ ನಿತ್ಯ ಕರ್ಮವಲ್ಲ, ಶ್ರಾದ್ಧದಂತೆ ನೈಮಿತ್ತಿಕ ಕರ್ಮವಲ್ಲ ಅದು ಕಾಮ್ಯ ಕರ್ಮವು ಎಂದಮೇಲೆ ಇಂಥ ಕಾಮ್ಯ ಕರ್ಮವನ್ನು ಮಾಡದಿದ್ದರೆ ಪಾಪವೇಕೆ ಬರುತ್ತದೆ ? ಎಂದರೆ ಪ್ರಾರಂಭ ಮಾಡಿದ ಕಾಮ್ಯ ಕರ್ಮವನ್ನು ಮುಗಿಸದಿದ್ದರೆ ಪಾಪ ಬರುತ್ತದೆಂದು ಇವರ ವಾದ.

ಆದರೆ ಗೀತೆಯಲ್ಲಿ ಯುದ್ಧಗಳು ಕಾಮ್ಯವಿರುವಂತೆ ಅಕಾಮ್ಯಗಳೂ ಇರುತ್ತವೆ ಅಕಾಮ್ಯಕರ್ಮಗಳನ್ನು ಮಾಡದಿದ್ದರೆ ಪಾಪ ಬರುತ್ತದೆ ಅರ್ಜುನನು ಈ ಯುದ್ಧ ವನ್ನು ಫಲಾಪೇಕ್ಷೆ ಇಲ್ಲದೆ ಮಾಡಬೇಕೆಂದು ಭಗವಂತನು ಹೇಳುತ್ತಾನೆ ಯಾವ ಹಂತದಲ್ಲಿಯೂ ಯುದ್ಧವನ್ನು ನಿಲ್ಲಿಸಕೂಡದು. ಇಷ್ಟೇ ಅಲ್ಲ, ಯುದ್ಧ ತಯಾರಿ ಯನ್ನೂ ಮಾಡದಿರುವದು ಪಾಪವೇ !

**कीर्तिं हित्वा** ಈ ಕೀರ್ತಿಯೂ ಕೂಡ ಕರ್ತವ್ಯ ಮಾಡುವವನೆಂದು ಬಂದ ಕೀರ್ತಿಯೇ. ಆದುದರಿಂದ ಕೀರ್ತಿಯನ್ನು ಕಳೆದುಕೊಳ್ಳುವದೂ ದೊಡ್ಡ ಹಾನಿಯೇ ! ಕೀರ್ತಿಯೆಂದರೆ ಪ್ರಸಿದ್ಧಿಯಲ್ಲ; ಗುಣಗಳಿಗೆ ದೊರೆತ ಗೌರವ ಪ್ರಸಿದ್ಧಿಯು ಕೀಳ ವಾದುದು. ಅದರ ಬೆನ್ನು ಹತ್ತುವದು ಬೇಡ. ಅಂಥ ಕೀರ್ತಿಯನ್ನು ಎಲ್ಲರೂ ನಿಷೇಧಿಸುತ್ತಾರೆ. ಆದರೆ ಸದ್ಗುಣಗಳಿಗಾಗಿ ಬಂದ ಕೀರ್ತಿಯನ್ನು ಕಳೆದುಕೊಳ್ಳಲಿಕ್ಕೆ ಯಾರೂ ಸಿದ್ಧರಾಗುವದಿಲ್ಲ.

ಒಟ್ಟಾರೆ ಒಂದೇ ಉಚ್ಚಮಟ್ಟದಲ್ಲಿ ಉಪದೇಶ ನಡೆದಿದೆ, ಭಗವಂತನು ಉಚ್ಚ ಮಟ್ಟದಿಂದ ಇಳಿದು ಕೆಳಮಟ್ಟದಿಂದ ಅರ್ಜುನನಿಗೆ ಉಪದೇಶಿಸುತ್ತಾನೆನ್ನುವದು ಸರಿಯಲ್ಲ

**ಸೋಮನಾಥಾನಂದರು :** ತಮ್ಮ ಗೀತಾಭಾವಧಾರೆಯಲ್ಲಿ ಸರಳವಾದ ವಿಚಾರ ಸರಣಿಯಿಂದ ಅರ್ಜುನನಿಗೆ ಹೇಗೆ ಪಾಪಬರುವದೆಂಬುದನ್ನು ತೋರಿಸಿ ಕೊಡುತ್ತಾರೆ— " ಯುದ್ಧವನ್ನು ಮಾಡದೆ ಹೋದರೆ ಅಧರ್ಮಕ್ಕೆ ಪ್ರೋತ್ಸಾಹ ಕೊಟ್ಟಂತೆ ಆಗುತ್ತದೆ. ಕಳ್ಳತನ ಎದುರಿಗೆ ನಡೆಯುತ್ತಿದ್ದರೂ ಅದನ್ನು ದಂಡಿಸುವ ದಕ್ಕೆ ಯೋಗ್ಯತೆ ಇದ್ದರೂ ಅವನು ಸುಮ್ಮನೆ ಕೈಕಟ್ಟಿಕೊಂಡು ನಿಂತಿರುವದು ಎಲ್ಲ ಕ್ಕಿಂತಲೂ ಪಾಪ. ...... ಪಾಂಡವರು ಕೌರವರನ್ನು ದಂಡಿಸದೆ ಬಿಟ್ಟರೆ ಅನ್ಯಾಯ ಅಧರ್ಮ ಪ್ರಪಂಚದಲ್ಲಿ ತಾನೇ ತಾನಾಗಿ ತಾಂಡವವಾಡುವದು. ಪಾಶವೀ ಶಕ್ತಿಗೆ ಮಾತ್ರ ಪ್ರಪಂಚದಲ್ಲಿ ಮಾನ್ಯತೆ. ಸಾಧು ಸ್ವಭಾವದವರಿಗೆ . . ... ಬಾಳುವದಕ್ಕೆ ಆಗುವದಿಲ್ಲ. "

ಅರ್ಜುನನು ಬಹು ದೊಡ್ಡ ಕೀರ್ತಿಯನ್ನು ಸಂಪಾದಿಸಿದ್ದನು ಅವನು ಅನೇಕ ದೇವದಾನವರೊಡನೆ ಯುದ್ಧ ಮಾಡಿ ಮಹಾ ಶೂರನೆಂದು ಹೆಸರು ಗಳಿಸಿದ್ದನು. ಶಂಕರನೊಡನೆ ಘನಘೋರವಾದ ಯುದ್ಧವನ್ನು ನಡೆಸಿ ಪಾಶು ಪತಾಸ್ತ್ರವನ್ನು ಮೆಚ್ಚಿಗೆಯ ಕುರುಹಾಗಿ ಹೊಂದಿದ್ದನು. ದ್ರೋಣಾಚಾರ್ಯರು ಸಹ ಅವನ ಸಾಹಸಕ್ಕೆ ಮೆಚ್ಚಿ ತಮ್ಮನ್ನು ಸಹ ಕೊಲ್ಲುವ ಶಕ್ತಿಯುಳ್ಳ ಅಸ್ತ್ರವನ್ನು ಕೊಟ್ಟಿದ್ದರು. ಅವನ ತಂದೆಯಾದ ಇಂದ್ರನೂ ಸಹ ತನ್ನ ಮೆಚ್ಚಿಗೆಯನ್ನು ಅಭಿ ವ್ಯಕ್ತಗೊಳಿಸಿದ್ದನು ಇಷ್ಟು ಕೀರ್ತಿಯನ್ನು ಸಂಪಾದಿಸಿದ ಅರ್ಜುನನು ಈ ಯುದ್ಧ ದಿಂದ ಪರಾವೃತ್ತನಾದರೆ ಅವನು ಕ್ಷತ್ರಿಯನ ಕರ್ತವ್ಯದಿಂದ ಚ್ಯುತನಾಗುವನು. ಇಷ್ಟೇ ಅಲ್ಲ, ಈ ಎಲ್ಲ ಗೌರವ ಸ್ಥಾನಗಳನ್ನೂ ಕಳೆದುಕೊಳ್ಳುವನು, ಮತ್ತು ಪಾಪದಿಂದ ನರಕಕ್ಕೆ ಹೋಗುವನು, ಯುದ್ಧ ಮಾಡುವದರಿಂದ ಅಲ್ಲ, ಯುದ್ಧ ಬಿಡುವದರಿಂದ.

**अकीर्तिंचापि भूतानि कथयिष्यन्ति ते व्ययाम् ।**
**संभावितस्य चाकीर्तिः मरणादतिरिच्यते ।। ३४ ।।**

ಜನರು ಎಂದೂ ಅಳಿಯದ ನಿನ್ನ ಅಪಕೀರ್ತಿಯನ್ನು ಆಡಿಕೊಳ್ಳುವರು. ಗೌರವಸ್ಥ ನಿಗೆ ಅಪಕೀರ್ತಿಯು ಮರಣಕ್ಕಿಂತ ಹೆಚ್ಚು

**ವಿಶೇಷ ಟಿಪ್ಪಣಿಗಳು :**

ಸತ್ಯಧ್ಯಾನರು ಇದರ ತಾತ್ಪರ್ಯವನ್ನು ಹೀಗೆ ಹೇಳಿದ್ದಾರೆ— "ಸಂಭಾವಿತ ನಾದ ಮನುಷ್ಯನಿಗೆ ಅಪಕೀರ್ತಿಯು ಮರಣಕ್ಕಿಂತ ಹೆಚ್ಚಾದುದರಿಂದ ನೀನು ಯುದ್ಧ ವನ್ನು ಮಾಡದೆ ಇದ್ದು ಅಪಕೀರ್ತಿಯನ್ನು ಹೊಂದಬೇಡ! ಯುದ್ಧವನ್ನು ಮಾಡು."

ಇದೇ ತತ್ವವನ್ನೇ ಶ್ರೀ ಕೃಷ್ಣನು ಉದ್ಯೋಗಪರ್ವದಲ್ಲಿ ಯುಧಿಷ್ಠಿರನಿಗೆ ಉಪದೇಶ ಮಾಡಿದ್ದಾನೆ.

**कुलीनस्य च यानिंदा वधावाऽमित्रकर्षण ।**
**महागुणोवधोराजन् न तु निंदा कुजीविका ।।**

**(महा । ಉದ್ಯೋ. ೭೨-೨೪)**

ಆದರೆ ಇದರಕ್ಕಿಂತ ಗೀತೆಯ ಶ್ಲೋಕವು ಹೆಚ್ಚು ಸಂಕ್ಷೇಪ ಮತ್ತು ಸುಂದರವಿರುವದ ರಿಂದ ಅದೇ ಪ್ರಚಾರದಲ್ಲಿ ಬಂದಿದೆ

**अकीर्ति**ಯು ಬರೀ ಕೀರ್ತಿಯ ಅಭಾವವಲ್ಲ, ಅದು ನಿರ್ದಿಷ್ಟವಾದ ಕಠೋರವಾದ ಅಪಕೀರ್ತಿಯು. ಅದು ಮರಣದಕ್ಕಿಂತ ಹೆಚ್ಚು ದುಃಖದಾಯಕ ವಾದುದು. ವಿಶೇಷವಾಗಿ ಅರ್ಜುನನಂಥ ಅಪಾರ ಕೀರ್ತಿಯನ್ನು ಸಂಪಾದಿಸಿದ ಮನುಷ್ಯನಿಗೆ ಅಪಕೀರ್ತಿಯು ಸಹಿಸಲಾರದ ವೇದನೆಯನ್ನು ಕೊಡುವದು

**भूतानि** ಜನಸಾಮಾನ್ಯರು (**भूतानि इति सामान्य निर्देशात्**– ವೇದಾಂತ ದೇಶಿಕರು) ( ಇವನನ್ನು ನಿಂದಿಸುತ್ತಾರೆಂದು ರಾಮಾನುಜರ ಅಭಿಪ್ರಾಯ )

ಮಧುಸೂದನ ಸರಸ್ವತಿಯುವರು **भूतानि देवर्षिमनुष्यादीनि** ಭೂತಾನಿ ಎಂದರೆ ದೇವತೆಗಳು, ಋಷಿಗಳು, ಮನುಷ್ಯರು ಎಲ್ಲರು ಎಂದು ತಾತ್ಪರ್ಯವೆಂದು ಹೇಳುತ್ತಾರೆ

ಮಹಾಭಾರತದಲ್ಲಿ ಮನು ಮೊದಲಾದ ಸ್ಮೃತಿಗಳಲ್ಲಿ ಸಹಸಾಯುದ್ಧಕ್ಕೆ ಸಿದ್ಧ ನಾಗಬಾರದೆಂಬ ಉಕ್ತಿಗಳಿಲ್ಲ ಜೀವರಕ್ಷಣೆಯ ವಿವೇಕದ ಮಾತುಗಳಾದರೂ ದೇಶದ ಸಲುವಾಗಿ, ಉಚ್ಚ ಧ್ಯೇಯದ ಸಲುವಾಗಿ ಕ್ಷತ್ರಿಯನಿಗೆ ಪ್ರಾಣತ್ಯಾಗ ಮಾಡಲಿಕ್ಕೆ ಅಡ್ಡಿ ಯಾವದೂ ಬರುವದಿಲ್ಲ ಸ್ವಾಭಿಮಾನಿಯಾದ ಯಾವ ಕ್ಷತ್ರಿಯನೂ ತನ್ನ ಗೌರವಕ್ಕೆ ಧಕ್ಕೆ ಬರುವಾಗ ಪ್ರಾಣವನ್ನು ಕಸದ ಕಡ್ಡಿಗಿಂತ ಕಡೆಮಾಡಿರುವದನ್ನು ರಜಪೂತರ ಇತಿಹಾಸದಲ್ಲಿ ಓದುತ್ತೇವೆ. ಟಾಡರ ರಾಜಸ್ತಾನದಲ್ಲಿ ಒಬ್ಬ ಬೂಂದಿ ರಾಣಿಯ ಚರಿತ್ರೆಯನ್ನು ಓದುತ್ತೇವೆ. ಅವಳಿಗೆ ತಾಯಿಮೊಲೆಯು ಬತ್ತಿ ಅನೇಕ ವರ್ಷಗಳಾಗಿದ್ದರೂ ತನ್ನ ಮಗನು ಯುದ್ಧದಲ್ಲಿ ವೀರಾವೇಶದಿಂದ ಕಾದುತ್ತ ಎಲ್ಲರ ಗೌರವಕ್ಕೆ ಪಾತ್ರನಾಗಿ ಮಡಿದನು ಎಂದು ಸುದ್ದಿಯನ್ನು ಕೇಳಿ ಹಾಲು ಒಣಗಿದ ಮೊಲೆಯಿಂದ ಚಿಮ್ಮಿದವೆಂದು ಓದುತ್ತೇವೆ. ಆದುದರಿಂದ ಮರಣದಕಿಂತ ಅಕೀರ್ತಿಯು ಹೆಚ್ಚು ದುಃಖದಾಯಕವೆಂದು ಕೃಷ್ಣನು ಹೇಳುತ್ತಾನೆ

**भयाद्रणादुपरतं मंस्यंते त्वां महारथाः ।**
**येषां च त्वं बहुमतो भूत्वा यास्यसि लाघवम् ॥३५॥**

ಮಹಾರಥರಾದ ಭೀಷ್ಮ–ದ್ರೋಣಾದಿಗಳು ನಿನ್ನನ್ನು ಯುದ್ಧದಿಂದ ಭಯ ದಿಂದ ಹಿಂದಿರುಗಿದವನನ್ನಾಗಿ ತಿಳಿದುಕೊಳ್ಳುವರು ಮತ್ತು ಯಾವ ಭೀಷ್ಮಾದಿಗಳು ನಿನ್ನನ್ನು ದೊಡ್ಡವನೆಂದು ಗೌರವಿಸುತ್ತಾರೋ ಅವರೆದುರಿಗೆ ಅಗೌರವವನ್ನು ನೀನು ಹೊಂದುತ್ತಿ !!

**ವಿಶೇಷ ಟಿಪ್ಪಣಿಗಳು :**

**ಮಹಾರಥಾ:** ಎಂದರೆ ಭೀಷ್ಮ–ದ್ರೋಣಾದಿಗಳಕಿಂತ ಕರ್ಣ-ದುರ್ಯೋಧನಾದಿಗಳು ಭೀಷ್ಮ–ದ್ರೋಣರು ಅರ್ಜುನನ ಯೋಗ್ಯತೆಯನ್ನು ಚೆನ್ನಾಗಿ ಬಲ್ಲರು ಅವರೆಂದೂ ಅರ್ಜುನನು ಹೆದರಿ ರಣ ಬಿಟ್ಟು ಓಡಿ ಹೋದನೆಂದು ಹೇಳುವದಿಲ್ಲ. ದುರ್ಯೋಧನನು ಈ ಮೊದಲೇ ಪಾಂಡವರು ಪಂಚಗ್ರಾಮಗಳನ್ನು ಬೇಡಿದಾಗ ಅವರು ಯುದ್ಧಕ್ಕೆ ಹೆದರಿದರೆಂದು ಗ್ರಹಿಸಿದ್ದನು. ಭಗವಂತನು ಈ ಅಸೂಯೆಯುಳ್ಳವರು ನಿಜವಾಗಿ ಅರ್ಜುನನ ವಿಷಯದಲ್ಲಿ ನಿಂದೆಯನ್ನು ಹರಡುತ್ತಾರೆಂದೇ ಅವನಿಗೆ ದುಃಖವೆನಿಸುತ್ತದೆ. ಈ ನಿಂದೆಯು ಸರೀಕರ ಎದುರಿಗೆ ಬಹಳ ಅವಮಾನಕರವೆನಿಸುತ್ತದೆ. ಜನಸಾಮಾನ್ಯರು ನಿಂದಿಸಿದರೆ ಅರ್ಜುನನು ಅದಕ್ಕೆ ಬೆಲೆ ಕೊಡುವದಿಲ್ಲ. ತನ್ನ ಕ್ಷೇತ್ರದಲ್ಲಿ ತನಗೆ ಅಗೌರವವಾಗಬಾರದೆನ್ನುವದೇ ಅರ್ಜುನನ ಇಚ್ಛೆಯಾದುದರಿಂದ ಈಗಿನ ಅವನ ಹಾದಿಯು ತನ್ನ ಕ್ಷೇತ್ರದಲ್ಲಿ ನಿಂದೆಗೆ ಆಸ್ಪದ ಕೊಡುವದರಿಂದ ಭಗವಂತನು ಯುದ್ಧಮಾಡಬೇಕೆಂದು ಆಗ್ರಹಿಸುತ್ತಾನೆ

C. M ಪದ್ಮನಾಭಾಚಾರ್ಯರು ಈ ಶ್ಲೋಕದಲ್ಲಿ ನಾಲ್ಕು ಅಂಶಗಳನ್ನು ನೆನಪಿಡಬೇಕೆಂದು ಹೇಳುತ್ತಾರೆ —

೧) ನಿಮ್ಮ ಅಭಿಪ್ರಾಯ ಮತ್ತು ಉದ್ದೇಶಗಳನ್ನು ಅವುಗಳಿಗೆ ಭಿನ್ನವಾದ ಅರ್ಥಗಳಿರುವಾಗ ಜಗತ್ತು ಅವುಗಳನ್ನು ಸರಿಯಾಗಿ ತಿಳಿದುಕೊಳ್ಳುತ್ತದೆ ಮತ್ತು ಮೆಚ್ಚುತ್ತದೆಂಬ ಭರವಸೆ ಇಡಬೇಡಿರಿ.

೨) ಜನಸಾಮಾನ್ಯರಷ್ಟೇ ನಿಮ್ಮ ನಿಂದೆಯನ್ನು ಮಾಡುತ್ತಾರೆಂದು ಗ್ರಹಿಸಬೇಡಿರಿ. ದೊಡ್ಡವರು ಸಹ ನಿಮ್ಮನ್ನು ನಿಂದಿಸಬಹುದು.

೩) ನಿಮ್ಮ ನಡತೆಗೆ ಅಂಜುಬುರಕತನವೇ ಕಾರಣವೆನ್ನುವದಕ್ಕೆ ಕನಿಷ್ಟ ಪಕ್ಷಕ್ಕೆ ಎರಡಾದರೂ ಕಾರಣಗಳಿರುವವು

ಅ) ನಿಮಗೆ ಕ್ಷತ್ರಿಯನ ಕರ್ತವ್ಯವು ಯುದ್ಧಮಾಡುವದಿದೆಯೆಂದು ಗೊತ್ತಿರಬೇಕು, ಆದುದರಿಂದ ನೀವು ದಯಾ-ಮಾಯೆಗೆ ಅವಕಾಶ ನೀಡಬಾರದು ಇದೂ ಗೊತ್ತಿರಬೇಕು ಇದನ್ನು ಗೃಹೀತ ಇಟ್ಟುಕೊಂಡು ಜನರು ನೀವು ಕರ್ಣನಿಗೆ ಅಂಜಿ ಓಡುತ್ತಿದ್ದೀರಿ ಎಂದು ತಿಳಿಯುತ್ತಾರೆ.

ಬ) ನಿಜವಾಗಿಯೂ ನಿಮಗೆ ಅಂತಃಕರಣ ಕರಗಿದ್ದರೆ ನೀವು ಯುದ್ಧವನ್ನೇ ಹೂಡುತ್ತಿರಲಿಲ್ಲ. ಕೈಗೆ ಕೈ ಹತ್ತಿ ಕದನ ಸುರುವಾಗುವ ಪ್ರಸಂಗದಲ್ಲಿ ನೀವು ಕಾಲ್ತೆಗೆದುದರಿಂದ ಜನರು ನೀವು ಕರ್ಣಮೊದಲಾದವರಿಗೆ ಅಂಜಿ ಓಡುತ್ತೀರಿ ಎಂದು ಗ್ರಹಿಸುತ್ತಾರೆ **(ತಪರಸ)**

೪) ಏನೋ ಸಮಾಧಾನ ಹಚ್ಚಿಕೊಂಡು ನೀವು ಈ ನಿಂದೆಯನ್ನು ಸಹಿಸುತ್ತೀರೆಂದು ತಿಳಿಯಬೇಡಿರಿ. ಯಾರು ನಿಮಗೆ ಅಂಜುತ್ತಿದ್ದರೋ ನಿಮ್ಮನ್ನು ಗೌರವದಿಂದ ಕಾಣುತ್ತಿದ್ದರೋ ಅವರೇ ಈ ನಿಂದೆಯಲ್ಲಿ ಪ್ರಸಕ್ತರಾಗುವದರಿಂದ ಅದು ಸಹಜ ಕಹಿಗಿಂತ ಹೆಚ್ಚು ಕಹಿಯಾಗಿ ಪರಿಣಮಿಸುತ್ತಿದೆ.

೫) ಯುದ್ಧವನ್ನು ನಿಶ್ಚಯಿಸಿದಾಗ ಅರ್ಜುನನಿಗೆ ತನ್ನ ಬಂಧು-ಬಾಂಧವ, ಗುರುಹಿರಿಯರೊಡನೆ ಯುದ್ಧ ಮಾಡಬೇಕಾಗುತ್ತದೆಂದು ಗೊತ್ತಿತ್ತು. ಆದುದರಿಂದ ಅರ್ಜುನನು ಬಂಧು-ಬಾಂಧವರ ವಧೆಯಾಗುತ್ತದೆಂದು ರಣ ಬಿಟ್ಟು ಹೋಗಿಲ್ಲ; ಅಂಜಿ ಹೋಗಿದ್ದಾನೆಂದು ಸಹಜವಾಗಿ ತರ್ಕಿಸುವರು.

**अवाच्यवादांश्च बहून वदिष्यंति तवाहिताः ।**
**निदंतः तवसामर्थ्यं ततोदुःखतरन्नु किम् ॥ ३६ ॥**

ನಿನಗೆ ಶತ್ರುಗಳಾದ ದುರ್ಯೋಧನ ಮೊದಲಾದವರು ನಿನ್ನ ಸಾಮರ್ಥ್ಯವನ್ನು ನಿಂದಿಸುತ್ತಾ ಅನೇಕ ಆಡಬಾರದ ಮಾತುಗಳನ್ನು ಆಡುತ್ತಾರೆ. ಇದಕ್ಕಿಂತಲೂ (ಶತ್ರುಗಳು ನಿಂದೆ ಮಾಡುವದನ್ನು ಕೇಳುವದಕ್ಕಿಂತಲೂ) ಅತ್ಯಂತ ದುಃಖಕರ ವಾದುದು ಯಾವದು ಇದೆ.

**ವಿಶೇಷ ಟಿಪ್ಪಣಿಗಳು :**

ದ್ರೌಪದಿಯ ವಸ್ತ್ರಹರಣದ ಕಾಲಕ್ಕೆ ಕರ್ಣ, ದುರ್ಯೋಧನ, ದುಶ್ಶಾಸನ ಮೊದಲಾದವರು ಪಾಂಡವರಿಗೆ ಎಂಥ ಕೆಟ್ಟ ಮಾತುಗಳನ್ನು ಆಡಿದ್ದರೆನ್ನುವದನ್ನು ಅರ್ಜುನನ ನೆನಪಿಗೆ ತಂದು ಅವನ ಸಾತ್ವಿಕ ರೋಷವನ್ನು ಉದ್ದೀಪನಗೊಳಿಸುವದೇ ಕೃಷ್ಣನ ಉದ್ದೇಶವಾಗಿದೆ.

ಆದರೆ ಕೃಷ್ಣನೇ **सुखदुःखे समे कृत्वा** ಎಂದು ಹೇಳಿದ್ದರಿಂದ ಸ್ತುತಿ ನಿಂದೆಗಳಿಗೆ ಏಕೆ ಅರ್ಜುನ ಮಹತ್ವ ಕೊಡಬೇಕೆಂಬ ಪ್ರಶ್ನೆ ಏಳುತ್ತದೆ. ರಾಧಾ ಕೃಷ್ಣನ್ನರವರು— Contrast this with the central teaching of the Geeta that one should be indifferent to praise and blame. ಈ ಉಪದೇಶವನ್ನು ಗೀತೆಯಲ್ಲಿ ಮುಖ್ಯವಾಗಿ ಉಪದೇಶ ಮಾಡಿದ, ನಿಂದಾಸ್ತುತಿ ಗಳಿಗೆ ಉದಾಸೀನನಾಗಿರು ಎಂಬ ಉಪದೇಶದೊಡನೆ ವಿರೋಧಿಸಿರಿ ಎಂದು ಹೇಳಿ ದ್ದಾರೆ. ಆದರೆ ಆ ವಿರೋಧವನ್ನು ಹೇಗೆ ಪರಿಹರಿಸಬೇಕೆಂಬುದನ್ನು ಮಾತ್ರ ಹೇಳಿಲ್ಲ,

ಯಾವ ತರಹದ ಸ್ತುತಿ–ನಿಂದೆಗಳಿಗೆ ಉದಾಸೀನನಿರಬೇಕು ? ತಾನು ನ್ಯಾಯವಾಗಿ ನಡೆದಿದ್ದರೂ ನಿಂದೆ ಮಾಡದಿರೆ, ತಾನು ಮಾಡದಿದ್ದ ಕೆಲಸಕ್ಕಾಗಿ ಸ್ತುತಿ ಮಾಡಿದರೆ ಅವುಗಳಿಗೆ ಕಿವಿಗೊಡಬೇಡಿರಿ. ಆದರೆ ತಾನು ಅನ್ಯಾಯ ಮಾಡಿದ್ದಕ್ಕೆ ಜನರು ನಿಂದಿಸಿದರೆ ಅದರ ಕಡೆಗೆ ಲಕ್ಷ್ಯ ಕೊಡಬೇಕು. ಇಲ್ಲಿ ಯುದ್ಧವನ್ನು ಮಾಡದಿದ್ದರೆ ಪಾಪ ಮಾಡಿದಂತೆ. ಆದುದರಿಂದ ಉದಾಸೀನ ಮಾಡದೆ ನಿಂದೆಯನ್ನು ತಪ್ಪಿಸಿಕೊಳ್ಳುವಂತೆ ಪಾಪಕೃತಿಯನ್ನು ಬಿಡಬೇಕು, ಎಂದರೆ ಯುದ್ಧ ಮಾಡಬೇಕು. ಹೀಗಿರುವದರಿಂದ ಎರಡೂ ಉಪದೇಶಗಳು ನಿಜವಾಗಿ ಒಂದಕ್ಕೊಂದು ವಿರುದ್ಧವಿಲ್ಲ, ಒಂದಕ್ಕೊಂದು ಪೂರಕವಾಗಿವೆ ಎಂದು ಗೊತ್ತಾಗುತ್ತದೆ.

**हतोवा प्राप्स्यसे स्वर्गं जित्वा वा भोक्ष्यसे महीम् ।**
**तस्मादुत्तिष्ठ कौंतेय युद्धाय कृतनिश्चय. ।। ३७ ।।**

ಎಲೈ ಅರ್ಜುನನೇ ! ನೀನು ಕೊಲ್ಲಲ್ಪಟ್ಟರೆ ವೀರಸ್ವರ್ಗವನ್ನು ಹೊಂದುತ್ತೀ. ಜಯಸಿದ್ಧೀ ಆದರೆ ಭೂಮಿಯನ್ನು (ರಾಜ್ಯವನ್ನು) ಅನುಭವಿಸುವಿ ಆದುದರಿಂದ ಜಯಿಸಿದರೂ ಮರಣ ಹೊಂದಿದರೂ ಫಲವು ಸಿಗುವದರಿಂದ ಯುದ್ಧ ಮಾಡುವವನ್ನು ನಿಶ್ಚೈಸಿ ಏಳು,

**ವಿಶೇಷ ಟಿಪ್ಪಣಿಗಳು :**

ರಾಘವೇಂದ್ರರು— **यद्वाजयेम यदिवाजयेयु** ಅರ್ಜುನನಿಗೆ ಜಯದ ವಿಷಯದಲ್ಲಿ ಸಂಶಯವಿತ್ತು. ಆದುದರಿಂದ ಯುದ್ಧಮಾಡುವದೇಕೆ ಎಂಬ ಸಂಶಯು ಬಂದಿತು ಈಗ ಅದಕ್ಕೆ ಉತ್ತರವಾಗಿ ಭಗವಂತನು "ಜಯು ಸಿಗಲಿ ಬಿಡಲಿ ಏನಾದರೂ ಯುದ್ಧ ಮಾಡುವದಕ್ಕೆ ಫಲವಿದೆಯೆಂದು ಈ ಶ್ಲೋಕದಿಂದ ಹೇಳುತ್ತಾನೆ.

ರಾಧಾಕೃಷ್ಣನ್ನರು— "Whether we look at the metaphysical truth or the Social duty our path is clear It is possible to rise higher through the performance of one's duty in the right spirit " ನಾವು ತಾತ್ವಿಕ ದೃಷ್ಟಿಯಿಂದ ನೋಡಲಿ ಅಥವಾ ಸಾಮಾಜಿಕ ಕರ್ತವ್ಯದ ದೃಷ್ಟಿಯಿಂದ ನೋಡಲಿ ನಮ್ಮ ಮಾರ್ಗವು ಸ್ವಚ್ಛವಿದೆ. ಸ್ವಧರ್ಮವನ್ನು ಒಳ್ಳೇ ಮನಸಿನಿಂದ ಆಚರಿಸುವದರಿಂದ ನಾವು ಉಚ್ಚಮಟ್ಟಕ್ಕೆ ಮುಟ್ಟುತ್ತೇವೆ " ಎಂದು ಹೇಳಿದ್ದಾರೆ.

ಈ ಯುದ್ಧವು ಇಲ್ಲಿ **काम्यकर्म** ದಂತೆ ಭಾವಿಸಲ್ಪಟ್ಟಿದೆ. ಯಾಕೆಂದರೆ ಯುದ್ಧದಲ್ಲಿ ಸತ್ತರೆ ಸ್ವರ್ಗ ಮತ್ತು ಜಯಿಸಿದರೆ ರಾಜ್ಯ. ಏನೇ ಆದರೂ ಫಲ

ತಪ್ಪಿಲ್ಲವೆಂದು ಭಗವಂತನು ಹೇಳುವದರಿಂದ ಇದು ಕಾಮ್ಯಕರ್ಮವೆಂದು ಅರ್ಥ ವಾಗುತ್ತದೆ. ರಾಮಾನುಜಾಚಾರ್ಯರು ಮಾತ್ರ ಬರೀ ರಾಜ್ಯ ಮತ್ತು ಸ್ವರ್ಗವಲ್ಲ ಮೋಕ್ಷವೂ ದೊರೆಯುತ್ತಿದೆಂದು ಹೇಳುತ್ತಾರೆ. **(परे. हतः चेत् तत एव परमनिश्रेयसं प्राप्स्यसि) । अनभिसन्हितफलस्य युद्धाख्यस्य धर्मस्य परमनिश्रेयसोपायत्वात्** ಫಲದ ಆಶೆಯನ್ನು ಇಟ್ಟುಕೊಳ್ಳದೆ ಯುದ್ಧವೆಂಬ ಸ್ವಧರ್ಮವನ್ನು ಆಚರಿಸಿದರೆ ಶ್ರೇಷ್ಠವಾದ ಮುಕ್ತಿಗೆ ಉಪಾಯವಾಗುತ್ತದೆ ಎಂದು ಅವರ ವಾದ ವೇದಾಂತ ದೇಶಿಕರು--- ಫಲವು ಉದ್ದೇಶದ ಮೇಲೆ ಅವಲಂಬಿಸಿದೆ, ಫಲದ ಉದ್ದೇಶಕ್ಕಾಗಿ ಯುದ್ಧ ಮಾಡಿದರೆ ಕೆಳಗಿನ ಸ್ವರ್ಗವೂ ನಿಷ್ಕಾಮನಾದಿಂದ ಯುದ್ಧ ಮಾಡಿದರೆ ಉತ್ತಮ ಸ್ವರ್ಗವೆಂದರೆ ಮೋಕ್ಷವೇ ದೊರೆಯುತ್ತದೆಂದು ತಿಳಿದಿದ್ದಾರೆ.

ಗೆದ್ದವನಿಗೆ ಐಹಿಕ ಸುಖ ಮಾತ್ರ; ಸೋತು ಸತ್ತವನಿಗೆ ಸ್ವರ್ಗದಲ್ಲಿ ಹೆಚ್ಚಿನ ಸುಖ, ಇದು ನ್ಯಾಯವೆ ? ಭೂಮಿಯ ಮೇಲಿನ ಸುಖ ಕಡಿಮೆ ಕಾಲದ್ದು ಆದರೆ ಸ್ವರ್ಗದ ಸುಖ ಹೆಚ್ಚು ಕಾಲದ್ದು. ಇದು ಅಲ್ಲದೆ ಸ್ವರ್ಗದ ಸುಖವು ಹೆಚ್ಚು ಸುಖಕರ ವಾದುದು ಭೂಮಿಯ ಮೇಲಿನ ಸುಖವು ದುಃಖಮಿಶ್ರಿತವಾದುದರಿಂದ ಅಷ್ಟು ಸುಖಕಾರಿಯಲ್ಲ. ಈ ಅನ್ಯಾಯ ಯಾರ ಲಕ್ಷ್ಯಕ್ಕೂ ಬಂದಿಲ್ಲ. ಮಧ್ವಾಚಾರ್ಯರು ತಮ್ಮ ತಾತ್ಪರ್ಯದಲ್ಲಿ **जित्वास्वर्गं महींच** ಗೆದ್ದರೆ ಸ್ವರ್ಗ ಮತ್ತು ರಾಜ್ಯವನ್ನು ಅನುಭವಿಸುತ್ತಾನೆ ಎಂದು ಹೇಳಿದ್ದಾರೆ ಅದಕ್ಕೆ ಶ್ರುತಿಯನ್ನು ಉದಾಹರಿಸಿದ್ದಾರೆ. **येयुध्यंते प्रधनेषु शूरासो येतनुत्यजः** ಯಾವ ಶೂರರು ಯುದ್ಧದಲ್ಲಿ ಯುದ್ಧ ಮಾಡುತ್ತಾರೋ ಯಾರು ಮರಣ ಹೊಂದುತ್ತಾರೋ ಅವರ ಸಮೀಪಕ್ಕೇನೇ ಈ ಪ್ರೇತನು ಹೋಗಲಿ ಎಂದು ಪ್ರೇತಕ್ಕೆ ಸ್ವರ್ಗ ಪ್ರಾಪ್ತಿಯಾಗಲಿ ಎಂದು ಯಮ ನೊಡನೆ ಪ್ರಾರ್ಥಿಸಿದ್ದರಿಂದ ಸಾಮ್ರಾಜ್ಯ ಭೋಗಾನಂತರದಲ್ಲಿಯೂ ಸ್ವರ್ಗ ಪ್ರಾಪ್ತಿಯಾಗುತ್ತದೆಂದು ಅಭಿಪ್ರಾಯ. ರಾಘವೇಂದ್ರರು ಗೀತಾವಿವೃತಿಯಲ್ಲಿ— **स्वर्गंचपश्चात् प्राप्स्यसि.** ಆ ಮೇಲೆ ಸ್ವರ್ಗವನ್ನು ಹೊಂದುವಿ ಎಂದು ಸ್ಪಷ್ಟ ಪಡಿಸಿದ್ದಾರೆ. ಇದಕ್ಕೆ ವಿರುದ್ಧವಾಗಿ ಗೆದ್ದವನಿಗೆ ಸ್ವರ್ಗಸಿಗುವದಿಲ್ಲೆಂದು ಗೀತೆ ಯಲ್ಲಿ ಎಲ್ಲೂ ಇಲ್ಲ.

ಶಂಕರಾಚಾರ್ಯರು ಸಹ – **कृतनिश्चयः** ಎನ್ನುವದಕ್ಕೆ **'जेष्यामि शत्रून् मरिष्यामि वा इति निश्चयं कृत्वा'** 'ಶತ್ರುಗಳನ್ನು ಗೆದೆಯುತ್ತೇನೆ ಅಥವಾ ಸಾಯುತ್ತೇನೆ' ಎಂದು ನಿಶ್ಚಯವನ್ನು ಮಾಡಿ" ಎಂದು ಹೇಳುತ್ತಾರೆ. ರಾಮಾನು ಜಾಚಾರ್ಯರು ಮಾತ್ರ — **परमपुरुषार्थ लक्षण मोक्षसाधनं इति निश्चित्य**

ಎಂದರೆ ಪ್ರಾಮಾಣಿಕ ರೀತಿಯಿಂದ ಯುದ್ಧ ಮಾಡುವದು ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಸಾಧನವೆಂದು ನಿಶ್ಚೈಸಿ ' ಎಂದು ಹೇಳುತ್ತಾರೆ. ಇವೆರಡರಲ್ಲಿ ಶಂಕರಾಚಾರ್ಯರ ಅರ್ಥವು ಲೌಕಿಕ ದೃಷ್ಟಿಯುಳ್ಳದ್ದು. ರಾಮಾನುಜಾಚಾರ್ಯರದು ಧಾರ್ಮಿಕ ಮತ್ತು ಗೀತಾಶಾಸ್ತ್ರದ ತತ್ವದ ಮೇಲೆ ಅವಲಂಬಿಸಿದ್ದು ಎಂದು ತೋರುತ್ತದೆಂದು C M. ಪದ್ಮನಾಭಾಚಾರ್ಯರು ಹೇಳುತ್ತಾರೆ

**कौंतेय** — ಹೆಸರುಗಳು ಉಳಿದ ಶ್ಲೋಕದ ಮುಖ್ಯಾರ್ಥದೊಡನೆ ವಿಶೇಷ ಸಂಬಂಧವನ್ನು ಹೊಂದುವದಿಲ್ಲವೆಂದು ಲೋ ಟಿಳಕ ಮೊದಲಾದವರ ಮತ. ಆದರೆ ಮತ್ತೆ ಕೆಲವರು ಜಗ್ಗಿ ಅದರ ಅರ್ಥವನ್ನು ಶ್ಲೋಕದ ಅರ್ಥಕ್ಕೆ ಜೋಡಿಸುತ್ತಾರೆ ಅಂಥ ಒಂದು ಉದಾಹರಣೆಯು ಬ್ರಹ್ಮಾನಂದಗಿರಿಯಲ್ಲಿ ದೊರೆಯುತ್ತಿದೆ. — **कौंतेय इत्यनेन इद सूचितं मत्पितृष्वसृकुंतीपुत्रस्य तव मदनुबंध महिम्नाजय एव भविता ।** ಕೌಂತೇಯ ಎಂಬ ಹೆಸರು ' ನನ್ನ ಸೋದರತ್ತೆಯ ಮಗನಾದ ನಿನಗೆ ನನ್ನ ಆಪ್ತತ್ವದ ನಿಮಿತ್ತವಾಗಿ ಜಯವು ನಿಶ್ಚಿತವಾಗಿ ಸಿಗುವದು ' ಎಂಬುದನ್ನು ಸೂಚಿಸುತ್ತದೆಂದು ಹೇಳುತ್ತಾರೆ ಆದರೆ ಇದು ಬಹು ದೂರ ಎಳೆದು ಹಚ್ಚಿದ ಅರ್ಥವೆಂಬುದು ಸ್ಪಷ್ಟ ಕಾಣಿಸುತ್ತದೆ.

ಈ ಸಂದರ್ಭದಲ್ಲಿ ಇಂಗ್ಲೀಷಿನಲ್ಲಿ ಲಾಜಿಕ (ತರ್ಕ) ಓದಿದವರಿಗೆ ಇದು ಹೊಳೆಯಬೇಕಾಗಿತ್ತು ಯಾರಿಗೂ ಹೊಳೆಯದೆ ಇದ್ದುದು ಆಶ್ಚರ್ಯ; ಅದರಕಿಂತ ಆಶ್ಚರ್ಯವೆಂದರೆ ಈ ಆಧುನಿಕ ಆಕ್ಷೇಪಗಳಿಗೂ ಮುಂಜಾಗ್ರತೆಯಿಂದ ಪೂರ್ವಜರು ಉತ್ತರವನ್ನು ತಯಾರಿಸಿದ್ದು. Logic ನಲ್ಲಿ Dilemma ಎಂಬುದೊಂದು ಅನುಮಾನ ಪದ್ಧತಿ ಉಂಟು. ಆದರೆ ಅದು ದುಷ್ಟ ಅನುಮಾನವೆಂದು ಪ್ರಸಿದ್ಧವದೆ. Javons says " Dilemmatic arguments are more often fallacious than not. " ಈಗ ಈ ಶ್ಲೋಕದಲ್ಲಿರುವ ಅನುಮಾನವು Dilemma ಪದ್ಧತಿಯದು

" ನೀನು ಸತ್ತರೆ ಸ್ವರ್ಗ ಹೊಂದುವಿ; ಗೆದ್ದರೆ ರಾಜ್ಯವಾಳುವಿ. ಆದುದರಿಂದ ಹೇಗಾದರೂ ಯುದ್ಧ ಮಾಡು "

ಇದನ್ನು ಸುಲಭವಾಗಿ ತಿರುಗಿಸಿಬಿಡಬಹುದು. ಆಗ ಅದು ಸಾಧ್ಯದ ಅಭಾವವನ್ನು ನಿರ್ಣಯಿಸುವದರಿಂದ ವಿರುದ್ಧವಾಗುವದು.

ನೀನು ಸತ್ತರೆ ರಾಜ್ಯ ಸಿಗುವದಿಲ್ಲ; ಗೆದ್ದರೆ ಸ್ವರ್ಗ ಸಿಗುವದಿಲ್ಲ
ಆದುದರಿಂದ ಹೇಗಾದರೂ ನೀನು ಯುದ್ಧ ಮಾಡುವ ಕಾರಣವಿಲ್ಲ.

ಆದರೆ ರಾಘವೇಂದ್ರರು— ನೀನು ಗೆದ್ದರೂ ರಾಜ್ಯವಾಳಿದ ಮೇಲೆ ಸ್ವರ್ಗ ಸಿಕ್ಕೇಸಿಗುವದು ಎಂದು ಸಪ್ರಮಾಣವಾಗಿ ಸಿದ್ಧ ಮಾಡಿದ್ದಾರೆ. ಆದರ ಮೇಲಿಂದ ' ನೀನು ಸತ್ತರೆ ಸ್ವರ್ಗ ಹೊಂದುವಿ ಆ ಮೇಲೆ ಹುಟ್ಟಿ ರಾಜ್ಯವಾಳುವಿ ' ಎಂಬುದು ಕೂಡ ಅವರಿಗೆ ಸಮ್ಮತವೆಂದು ಗೊತ್ತಾಗುತ್ತದೆ ಸಾಧ್ಯಾಭಾವವನ್ನು ಸಾಧಿಸಲಿಕ್ಕೆ ಇವುಗಳನ್ನು ತಿರುಗಿಸಲಿಕ್ಕೆ ಬರುವದಿಲ್ಲ ಯಾಕೆಂದರೆ ನೀನು ಸತ್ತರೆ ರಾಜ್ಯ ಸಿಗುವದಿಲ್ಲ ' ಎಂದು ಅನ್ನಲಾರಿರಿ. ಮತ್ತೆ ಹುಟ್ಟಿರಾಜ್ಯವನ್ನು ಹೊಂದುತ್ತಾನೆ. ಆದರಂತೆಯೇ ' ನೀನು ಗೆದ್ದರೆ ಸ್ವರ್ಗ ಸಿಗುವದಿಲ್ಲ ಎಂದು ಅನ್ನಲಾರಿರಿ. ಯಾಕೆಂದರೆ ರಾಜ್ಯವಾಳಿ ಸತ್ತಮೇಲೆ ಸ್ವರ್ಗ ಸಿಗುತ್ತದೆಂದು ಸಿದ್ಧಮಾಡಿದ್ದಾರೆ ಆದುದರಿಂದ ಹೇಗಾದರೂ ಯುದ್ಧ ಬೇಡವೆಂಬ ನಿರ್ಣಯಕ್ಕೆ ಬರಲಾರಿರಿ. ಈಗ ರಾಘವೇಂದ್ರರ ಅಭಿಪ್ರಾಯದ ಮಹತಿಯು ತೋರಿಬರುತ್ತದೆ

ಭಾರತದರ್ಶನದಲ್ಲಿ ಭೀಷ್ಮ ಪರ್ವದಲ್ಲಿ – ಭಗವದ್ಗೀತಾ ಪರ್ವದಲ್ಲಿ ಈ ಶ್ಲೋಕದ ಸಾರಾಂಶವನ್ನು ಹೀಗೆ ಬರೆಯುತ್ತಾರೆ— " ಧರ್ಮ್ಯವಾದ ಯುದ್ಧವನ್ನು ಆಚರಿಸುವಾಗ ಶಸ್ತ್ರಪಾತ ಮುಂತಾದವುಗಳಿಂದ ದುಃಖವುಂಟಾಗಬಹುದು ... ಆದರೆ ಅವುಗಳಿಂದ ವಿಕಾರಗೊಳ್ಳದೆ, ರಾಗದ್ವೇಷಗಳನ್ನು ಇಟ್ಟುಕೊಳ್ಳದೆ ಅವುಗಳು ಅನಿವಾರ್ಯವೆಂದು ಭಾವಿಸಿ ಸಾಮ್ಯಬುದ್ಧಿಯಿಂದ ಯುದ್ಧವನ್ನು ಮಾಡಿದರೆ ಪಾಪವು ಉಂಟಾಗುವದಿಲ್ಲ. ದುಃಖರೂಪವಾದ ಸಂಸಾರವು ಒದಗುವದಿಲ್ಲ " ಎಂದು ಕರ್ಮಯೋಗಿಯಾದ ಕ್ಷತ್ರಿಯನು ಮಾಡಬೇಕಾಗಿರುವ ಯುದ್ಧಾನುಷ್ಠಾನ ಕ್ರಮವನ್ನು ಇಲ್ಲಿ ಭಗವಂತನು ಬೋಧಿಸಿದ್ದಾನೆ.

ಲೋಕಮಾನ್ಯ ಟಿಳಕರು ಭಗವಂತನು ಕರ್ಮಯೋಗದ ಪ್ರಸ್ತಾಪವನ್ನೇ ಇಲ್ಲಿಂದ ಪ್ರಾರಂಭಿಸಿದ್ದಾರೆಂದು ಹೇಳುತ್ತಾರೆ.

**सुखदु:खे समेकृत्वा लाभालाभौ जयाजयौ**
**ततो युद्धाय युज्यस्व नैवं पापमवाप्स्यसि ।। ३८ ।।**

ಸುಖ–ದುಃಖ, ಲಾಭ–ಹಾನಿ, ಜಯ–ಅಪಜಯಗಳನ್ನು ಸಮಮಾಡಿಕೊಂಡು ಯುದ್ಧಕ್ಕೋಸ್ಕರ ಸಿದ್ಧನಾಗು (ವಿಷ್ಣುಪೂಜಾರ್ಥವಾಗಿ ಸ್ವಧರ್ಮವಾದ ಯುದ್ಧವನ್ನು ಮಾಡುವದರಿಂದ) ಪಾಪವನ್ನು ಹೊಂದುವದೇ ಇಲ್ಲ.

**ವಿಶೇಷ ಟಿಪ್ಪಣಿಗಳು :**

ಸತ್ಯಧ್ಯಾನತೀರ್ಥರು ಇದರ ತಾತ್ಪರ್ಯವನ್ನು ಹೀಗೆ ಬರೆಯುತ್ತಾರೆ— " ಕ್ಷತ್ರಿಯರಿಗೆ ವಿಹಿತವಾದ ಯುದ್ಧವನ್ನು ಫಲಾಪೇಕ್ಷೆಯನ್ನು ಬಿಟ್ಟು ವಿಷು

ಪೂಜಾರ್ಥವಾಗಿ ಮಾಡುವದರಿಂದ ಭೀಷ್ಮ-ದ್ರೋಣಾದಿಗಳ ಸಂಹಾರ ಪ್ರಯುಕ್ತ ವಾದ ಪಾಪವನ್ನು ಹೊಂದದಿರುವದರಿಂದ ಪಾಪಭಯದಿಂದ ಯುದ್ಧವನ್ನು ಮಾಡೆನು ಎಂದು ನೀನು ಹೇಳುವದು ಪಂಡಿತರು ಆಡುವ ಮಾತುಗಳಲ್ಲ "

ರಾಘವೇಂದ್ರರು ಇದಕ್ಕ ಸಂಗತಿಯನ್ನು ಹೀಗೆ ಕೊಡುತ್ತಾರೆ — " **पापमेवाश्रयेदस्मान्** " ಎಂಬುದಕ್ಕೆ ಉತ್ತರವೇ ಈ ಶ್ಲೋಕವು ನಿಂಬಾರ್ಕರೂ ಮಧುಸೂದನ ಸರಸ್ವತಿಯವರೂ ಈ ಸಂಗತಿಯನ್ನು ಒಪ್ಪಿಕೊಂಡಿದ್ದಾರ ಶಂಕರಾಚಾರ್ಯರು ಮಾತ್ರ ಸ್ವಧರ್ಮವೆಂದು ಯುದ್ಧ ಮಾಡುವವನು ಏನು ಮಾಡಬೇಕೆಂಬುದನ್ನು ಭಗವಂತನು ತಿಳಿಸುತ್ತಾನೆಂದು ಹೇಳುತ್ತಾರೆ ಇದೇ ಅಭಿಪ್ರಾಯ ದಲ್ಲಿ ರಾಮಾನುಜರು ಸಂಗತಿಯನ್ನು ನೀಡುತ್ತ **मुमुक्षोः युद्धानुष्ठान प्रकारमाह** ಎಂದು ಹೇಳುತ್ತಾರೆ.

ರಾಧಾಕೃಷ್ಣನ್ನರು— " Yet in the previous verses krishna lays stress on sensibility to shame, the gain of heaven and earthly soverignty After urging worldly Considerations he declares that the fight has to be undertaken in a Spirit of equal mindedness " ಎಂದು ಹೇಳುತ್ತಾರೆ " ಆದರೂ ಹಿಂದಿನ ಶ್ಲೋಕಗಳಲ್ಲಿ ಕೃಷ್ಣನು 'ಅಕೀರ್ತಿ ಮತ್ತು ಸ್ವರ್ಗ ಮತ್ತು ಸಾಮ್ರಾಜ್ಯಗಳ ಸಂಪಾದನೆ' ಗಳ ಪ್ರಜ್ಞೆಗೆ ಹೆಚ್ಚಿನ ಮಹತ್ವ ಕೊಟ್ಟನು. ಲೌಕಿಕ ವಿಚಾರಗಳ ಮಹತ್ವವನ್ನು ಹೆಚ್ಚಿಸಿ ಈಗ ಯುದ್ಧವನ್ನು ಸಮಬುದ್ಧಿಯಿಂದ ಮಾಡಬೇಕಂದು ಸಾರುತ್ತಾನೆ. "

ಇದನ್ನೇ ಸೋಮನಾಥಾನಂದರು ಹೆಚ್ಚು ಸ್ಪಷ್ಟಪಡಿಸುತ್ತಾ ಹೇಳುತ್ತಾರೆ— " ಶ್ರೀ ಕೃಷ್ಣ ಕೆಳಮಟ್ಟಕ್ಕೆ ಬಂದು ಪುನಃ ಮೇಲೇಳುತ್ತಾನೆ " ಅಪಕೀರ್ತಿ ಬರುವದನ್ನು ತಪ್ಪಿಸುವದು, ಸ್ವರ್ಗ ಸಿಗುವದು ರಾಜ್ಯ ಸಿಗುವದು ಇವುಗಳ ಆಮಿಷವನ್ನು ಮೊದಲು ಕೆಳಮಟ್ಟದಲ್ಲಿ ಹಚ್ಚಿದನು ಆ ಮೇಲೆ ಮೇಲ್ಮಟ್ಟದಲ್ಲಿ ಸಮಬುದ್ಧಿಯಿಂದ ಯುದ್ಧ ಮಾಡುವದನ್ನು ಹೇಳುತ್ತಾನೆಂದು ಇವರ ಮಾತಿನ ತಾತ್ಪರ್ಯ. ಕೃಷ್ಣನ ಉಪದೇಶ ಮೇಲ್ಮಟ್ಟದ್ದು ಕೆಳಮಟ್ಟದ್ದು ಎಂದು ಇಲ್ಲ ಯುದ್ಧ ಮಾಡಬೇಕೆಂದು ಹೇಳಿದ್ದನ್ನು ಉಚ್ಚ ಮಟ್ಟದ ಸಾಧನವನ್ನಾಗಿ ಹೇಗೆ ಪರಿವರ್ತಿಸಬೇಕೆಂಬ ಒಂದೇ ಉಪದೇಶವನ್ನೇ ಹೇಳುತ್ತಾನೆ " ಯಾವದರಿಂದ ಪಾಪ ಬರುವದೆಂದು ಅರ್ಜುನನು ತಿಳಿದುಕೊಂಡಿದ್ದನೋ ಅಂಥ ಯುದ್ಧವೇ ಹೇಗೆ ಉತ್ತಮ ಸಾಧನವಾಗಿ ಉಚ್ಚ ಪುರುಷಾರ್ಥದಲ್ಲಿ ಪರಿಣಮಿಸುವದೋ ಅದನ್ನು ಶ್ರೀಕೃಷ್ಣನು ಈಗ ಹೇಳುತ್ತಾನೆಂಬ ರಾಘವೇಂದ್ರರ ಸಂಗತಿಯು ಸರಿಯಾದದ್ದೆಂದು ತೋರುತ್ತದೆ. ದ್ವಂದ್ವಗಳನ್ನು ಸಮ ಅವಸ್ಥೆಗೆ ತಂದು ಯುದ್ಧಮಾಡಬೇಕೆಂಬುದೇ ಕೃಷ್ಣನ ತಾತ್ಪರ್ಯ.

ದ್ವಂದ್ವಗಳನ್ನು ಸಮ ಅವಸ್ಥೆಗೆ ತರುವದೆಂದರೇನು ? "ದ್ವಂದ್ವದಲ್ಲಿ ಸಮತ್ವ ವೆಂದರೆ ಸುಖ ಬಂದಾಗ ಹಿಗ್ಗಬಾರದು, ದುಃಖ ಬಂದಾಗ ಕುಗ್ಗಬಾರದು .... ವಿಜಯದಂತೆಯೇ ಅಪಜಯವನ್ನೂ ಸ್ವಾಗತಿಸಬೇಕು" ಎಂದು ಮುಂತಾಗಿ ಕೆಲವರು ಹೇಳುತ್ತಾರೆ. ಈ ತರಹದ ಸಮತ್ವವನ್ನು ಆಚರಿಸಲಿಕ್ಕೆ ಅಭ್ಯಾಸ ಮಾಡಬೇಕೆಂದು ಹೇಳುತ್ತಾರೆ.

ಇದಕ್ಕೂ ಆಳವಾದ ಅರ್ಥವನ್ನು ನೋಡಬಹುದು— "ಜಯ-ಅಪಜಯ ಗಳು ಮೊದಲನೇ ದ್ವಂದ್ವ ಇದರ ಪರಿಣಾಮವು ಲಾಭಹಾನಿ ಈ ಲಾಭಹಾನಿಯೇ ಕ್ರಮವಾಗಿ ಸುಖ-ದುಃಖಗಳನ್ನು ಹುಟ್ಟಿಸುವದು. ಹೀಗೆ ಇವುಗಳ ನಡುವೆ ಕಾರ್ಯ ಕಾರಣ ಭಾವವಿರುವದು * ಆದರೆ ಅವುಗಳನ್ನು ಇಲ್ಲಿ ವ್ಯತ್ಕ್ರಮದಿಂದ ಹೇಳಿ ದ್ದಾರೆ.

ಇವುಗಳ ಸಮತ್ವವೆಂದರೇನು ? ಎಂಬುದನ್ನು ಆಳವಾಗಿ ವಿಚಾರ ಮಾಡಿ ಮಧ್ವಾಚಾರ್ಯರು ಹೇಳಿದ್ದನ್ನೇ ರಾಘವೇಂದ್ರರು ಸ್ಪಷ್ಟಪಡಿಸಿದ್ದಾರೆ. **ಯಥಾ ದುःखं अनुपादेयं तथा वैषयिकसुखमपि अनुपादेय इति अनुपादेयत्वेन दुःखसमं सुखं कृत्वा ।** **उपादेय**ವೆಂದರೆ ಇಷ್ಟವೆಂದು ಸ್ವೀಕರಿಸುವದು **अनु-पादेय**ವೆಂದರೆ ಇಷ್ಟವೆಂದು ಸ್ವೀಕರಿಸದಿರುವದು. ದುಃಖವನ್ನು ಇಷ್ಟವೆಂದು ಯಾರೂ ಸ್ವೀಕರಿಸುವದಿಲ್ಲ. ಅದು ಅನ ಪಾದೇಯವೆಂದು ಎಲ್ಲರೂ ಒಪ್ಪುತ್ತಾರೆ, ಆದರೆ ವಿಷಯಗಳಿಂದ ದೊರೆಯತಕ್ಕ ಸುಖವು ಮಾತ್ರ ಬೇಕೆಂದು ಬಯಸುತ್ತಾರೆ. ಆದರೆ ಸುಖ-ದುಃಖಗಳನ್ನು ಸ್ವೀಕರಿಸುವದು ಬಿಡುವದು ನಮ್ಮ ಆಧೀನದಲ್ಲಿಲ್ಲ. ಬೆಂಕಿ ತಗಲಿದಾಗ ದುಃಖವು ಆಗೇ ಆಗುತ್ತದೆ. ನೀರಡಿಸಿದಾಗ ನೀರು ಕೊಟ್ಟರೆ ಸುಖವನ್ನು ತಪ್ಪಿಸಲಿಕ್ಕೆ ಬರುವದಿಲ್ಲ. ಹಾಗಾದರೆ ಸುಖ-ದುಃಖಗಳು ಎರಡೂ ಅನುಪಾದೇಯವೆಂದು ಸಮವಾಗಿವೆಯೆಂದರೆ ಅರ್ಥವೇನು ? ದುಃಖವು ಆಗ ಬೇಕೆಂದು ನಾವು ಹೇಗೆ ಇಚ್ಛಿಸುವದಿಲ್ಲವೋ ಹಾಗೆ ಸುಖವೂ ಆಗಬೇಕೆಂಬ ಇಚ್ಛೆ ಮಾಡದೆ ಕರ್ತವ್ಯವೆಂದು ವಿಷ್ಣುಪೂಜಾತ್ವೇನ ಕರ್ಮ ಮಾಡುವದು. ಹೀಗೆ ಮಾಡಿದರೆ ಯುದ್ಧರೂಪ ಕರ್ಮದಿಂದ ಸಹ ಪಾಪ ಬರುವದಿಲ್ಲೆಂದು ಕೃಷ್ಣನ ಅಭಿಪ್ರಾಯ.

---

* ಸ್ವಾಮಿ ಚಿದ್ಭವಾನಂದರು ಈ ಕಾರ್ಯಕಾರಣ ಭಾವವನ್ನು ಒಪ್ಪಿಕೊಂಡಂತೆ ತೋರುತ್ತದೆ— "It is the way of the world to view gain and victory with pleasure and loss and defeat with pain"

ನನಗೆ ಬೇಕೆಂದು ಇಚ್ಛಿಸುವದೇ ಆಸಕ್ತಿ: ಆ ಇಚ್ಛೆಯನ್ನು ತೊರೆಯುವದೇ ಅನಾಸಕ್ತಿ. ಈ ಅನಾಸಕ್ತಿಯಿಂದ ಈ ದ್ವಂದ್ವಗಳನ್ನು ಪರಮಾತ್ಮನ ಸಂಕಲ್ಪವೆಂದು ಸಹಿಸಿಕೊಂಡು ನಮ್ಮ ಕರ್ತವ್ಯವನ್ನು ಮಾಡುವದು ಕರ್ಮಯೋಗ. ರಾಮಕೃಷ್ಣ ಪರಮಹಂಸರು ಒಂದು ಸುಂದರವಾದ ಉದಾಹರಣೆಯನ್ನು ಕೊಟ್ಟಿದ್ದಾರೆ— "ಹಲಸಿನ ಹಣ್ಣನ್ನು ಬಿಡಿಸುವ ಮುಂಚೆ ಕೈಗೆ ಎಣ್ಣೆ ಸವರಿಕೊಳ್ಳಿ" ಎಂದು ಅವರು ಹೇಳುತ್ತಿದ್ದರು ಕೈಗೆ ಎಣ್ಣೆ ಸವರಿಕೊಂಡರೆ ಅಂಟು ತಾಕುವದಿಲ್ಲ ಇಲ್ಲದೆ ಇದ್ದರೆ ಹಲಸಿನ ಹಣ್ಣಿನ ವಾಸನೆ ಹೋದರೂ ಅಂಟು ಬಿಡುವಂತಿಲ್ಲ ಆ ಎಣ್ಣೆಯನ್ನು ಅನಾಸಕ್ತಿಯೆಂದು ಕರೆಯುತ್ತಿದ್ದರು

ಇದಕ್ಕೆ Sports man spirit ಆಟಗಾರನ ದೃಷ್ಟಿಯೆಂದು ಕರೆಯುತ್ತಾರೆ. ಸೋಲು-ಗೆಲುವಿಗೆ ಹೆಚ್ಚಿನ ಮಹತ್ವ ಕೊಡದೇ ಆಟವು ಪ್ರೇಕ್ಷಕರಿಗೆ ಸಂತೋಷ ಉಂಟು ಮಾಡಿದ್ದರೆ ಸೋಲು ಬರಲಿ, ಗೆಲವು ಬರಲಿ ಆಟಗಾರನು ಸಂತೋಷಿಸುವನು. ಅದು ದೇವರ ಪೂಜೆಯೆಂಬ ಭಾವನೆ ಅಲ್ಲಿರುವದಿಲ್ಲ ಆದರೆ ಕರ್ಮಯೋಗಿಯಲ್ಲಿ ಕರ್ಮಾಚರಣೆಯು ದೇವರ ಪೂಜೆಯೆಂದು ದೃಢವಾದ ಭಾವನೆ ಇರಬೇಕು.

ಸುಖ-ದುಃಖಗಳೆರಡೂ ಅನುಪಾದೇಯವೆಂಬುದು ಆಚಾರ್ಯರ ಅಭಿಪ್ರಾಯ ಆದರೆ ರಾಮಾನುಜಾಚಾರ್ಯರು ಮಾತ್ರ— (ಇದು ಅವರ ಗೀತಾಭಾಷ್ಯದಲ್ಲಿ ಇಲ್ಲ) ಸಿ. ಎಮ್. ಪದ್ಮನಾಭಾಚಾರ್ಯರು ಹೇಳುವಂತೆ to render them equal is to elevate the un wel-come member of the pair viz pain to the level of the wel-come member viz pleasure. ಸುಖ-ದುಃಖಗಳನ್ನು ಸಮ ಮಾಡುವದೆಂದರೆ ಈ ದ್ವಂದ್ವದಲ್ಲಿ ಅನಿಷ್ಟವಾದ ದುಃಖವನ್ನು ಇಷ್ಟವಾದ ಸುಖದ ಮಟ್ಟಕ್ಕೆ ಏರಿಸುವದೇ!! ಹೀಗೆ ಎರಡನ್ನೂ ಉಪಾದೇಯವಾಗಿ ಸಮಮಾಡುತ್ತಾರೆ. ಮಧ್ವಾಚಾರ್ಯರು ಎರಡೂ ಅನುಪಾದೇಯವೆಂದು ಸಮ ಮಾಡುತ್ತಾರೆ. ರಾಮಾನುಜಾಚಾರ್ಯರ ಅಭಿಪ್ರಾಯದಲ್ಲಿ ವಿಷಯ ಸುಖವು ಉಪಾದೇಯವೆಂಬ ಅಭಿಪ್ರಾಯ ಬರುವಂತೆ ಎನಿಸುತ್ತಿದೆ. ಮುಮುಕ್ಷುವಿಗೆ ಇದು ಅನಿಷ್ಟವಾದುದರಿಂದ ಮಧ್ವಾಚಾರ್ಯರ ಅಭಿಪ್ರಾಯವು ಗ್ರಾಹ್ಯವೆಂದು ತೋರುತ್ತಿದೆ.

ಹಿಂದೆ ಪ್ರಸ್ತಾಪಿಸಿದಂತೆ ಕೆಲವರು ಇದರ ಹಿಂದಿನ ಶ್ಲೋಕದಲ್ಲಿ ಕಾಮ್ಯಕರ್ಮವು ಪ್ರಸಕ್ತವಾಗಿದೆಯೆಂದೂ ಈ ಶ್ಲೋಕದಲ್ಲಿ ಅಕಾಮ್ಯಕರ್ಮವು ಪ್ರಸಕ್ತವಾಗಿದೆಯೆಂದೂ ಹೇಳುತ್ತಾರೆ. ಆದರೆ ಮಧುಸೂದನ ಸರಸ್ವತಿಯುವರು ಹೇಳುವಂತೆ ಎರಡೂ ಶ್ಲೋಕಗಳೂ ಒಂದೇ ಕರ್ಮವನ್ನೇ ಪ್ರಸ್ತಾಪಿಸಿ ಒಬ್ಬನಿಗೆ ಹೇಳಲ್ಪಟ್ಟಿವೆ. ಈ ಅಭಿಪ್ರಾಯವು ಕೃಷ್ಣನು ಒಂದೇ ರೀತಿಯಾಗಿ ಅರ್ಜುನನಿಗೆ ಉಪದೇಶಿಸಿದ್ದಾನೆಂಬ ಮಾತಿಗೆ ಅನುಗುಣವಾಗಿರುತ್ತದೆ.

ಯಾವಯಾವಾಗ **ಯುದ್ಧಾಯಯುಜ್ಯಸ್ವ, ಯುಧ್ಯಸ್ವ, ಯುಧ್ಯಚ** ಎಂದು ಭಗವಂತನು ಹೇಳುತ್ತಾನೆ. ಆಗ ಅದ್ವೈತಿಗಳಲ್ಲಿ ದೊಡ್ಡ ಗೊಂದಲವೇ ಏಳುತ್ತದೆ ಆತ್ಮನು ಅಕರ್ತನು ಆದುದರಿಂದ ಅರ್ಜುನನಿಗೆ ಯುದ್ಧ ಮಾಡು ಎಂದು ಮನಃಪೂರ್ವಕ ಹೇಳಿದ ಮಾತಲ್ಲ ಇದು ಪ್ರಾಸಂಗಿಕವಾಗಿ ಹೇಳಿದ ಮಹತ್ವವಿಲ್ಲದ ಮಾತು ಆದುದರಿಂದ ಅದಕ್ಕೆ ಹೆಚ್ಚು ಮಹತ್ವಕೊಡುವ ಅಗತ್ಯವಿಲ್ಲೆಂದು ಅವರ ಅಭಿಪ್ರಾಯ.

ಆದರೆ ಒಬ್ಬ ವ್ಯಾಖ್ಯಾನಕಾರರು ಹೇಳಿದ ಮಾತು ಕೇಳಿದರೆ ಈ ಅಭಿಪ್ರಾಯ ಎಷ್ಟು ಅನುಚಿತವಾದುದೆಂಬುದು ಗೊತ್ತಾಗುತ್ತದೆ. ಗೀತಾಪದ್ಮವಿಕಾಸದಲ್ಲಿ— "೨ ನೇ ಅಧ್ಯಾಯ ೧೧ ರಿಂದ ೨೫ ಮತ್ತು ೨೬ ರಿಂದ ೩೮ ವರೆಗೆ ಆತ್ಮಾ ಅಕರ್ತಾ ಎಂಬ ಉಪದೇಶವನ್ನು ಭಗವಂತನು ಎಲ್ಲಿಯೂ ಮಾಡಿಲ್ಲ. ಇದಕ್ಕೆ ವಿಪರೀತವಾಗಿ ಶ್ರೀಕೃಷ್ಣನು ಅರ್ಜುನನಿಗೆ ಇಲ್ಲಿ ಯುದ್ಧ ಮಾಡಬೇಕೆಂಬುದನ್ನೇ ಆಗ್ರಹ ಪೂರ್ವಕವಾಗಿ ಹೇಳಿದ್ದಾನೆ" ಎಂದು ನಿವೇದಿಸಿದ್ದಾರೆ.

ಹೀಗೆ ೩೧ ನೇ ಶ್ಲೋಕದಿಂದ ಪ್ರಾರಂಭವಾದ ವಾದವು ಈ ಶ್ಲೋಕದಿಂದ ಪೂರ್ತಿಯಾಯಿತು. ಮೊದಲು ಆತ್ಮ ಮತ್ತು ಈಶ್ವರರ ವಿಷಯದಲ್ಲಿ ತಿಳುವಳಿಕೆ ನೀಡುವಂತೆ ನಿರೂಪಣೆ ಮಾಡಿ ಕೃಷ್ಣನು, ಬುದ್ಧಿವಂತನಂತೆ ಮಾತನಾಡಿದ ಅರ್ಜುನನ ಆಕ್ಷೇಪಗಳಿಗೆ ಒಂದೊಂದಾಗಿ ಉತ್ತರ ಕೊಡುತ್ತಾನೆ ಕೃಷ್ಣನು ಯುದ್ಧಮಾಡದಿದ್ದರೆ ಅರ್ಜುನನಿಗೆ ಆಗುವ ತೊಂದರೆಗಳನ್ನೂ ಅದಕ್ಕೆ ಅವನು ಮಾಡುವ ಪ್ರತಿಕ್ರಿಯೆಗಳನ್ನೂ ನಿರೂಪಿಸುತ್ತಾನೆ. ಯುದ್ಧದ ಪರಿಣಾಮವು ಏನೇ ಆದರೂ ಅರ್ಜುನನಿಗೆ ಹಾನಿಯಿಲ್ಲ, ಲಾಭವೇ ಇದೆ ಎಂದು ತೋರಿಸಿಕೊಟ್ಟು ಅವನಿಗೆ ವರ್ಣಾಶ್ರಮಕ್ಕೆ ಉಚಿತವಾದ ಕರ್ತವ್ಯದ ಮಹತಿಯನ್ನು ತೋರಿಸುತ್ತಾನೆ. ಮುಖ್ಯವಾಗಿ ಎಲ್ಲ ಜೀವರುಗಳಿಗೂ ಎಲ್ಲ ವೃತ್ತಿಗಳಿಂದಲೂ ಪರಮಪುರುಷಾರ್ಥವಾದ ಮೋಕ್ಷವನ್ನು, ಹೊಂದಲಿಕ್ಕೆ ಪರಮಾತ್ಮನ ಪ್ರಸಾದ ದೊರೆಯಲಿಕ್ಕೆ, ಎಲ್ಲ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಅವನ ಪೂಜೆಯೆಂದು ಮಾಡುವ ಪರಮಭಾಗವತ ಧರ್ಮವನ್ನು ಉಪದೇಶಿಸುತ್ತಾನೆ. ಮುಖ್ಯವಾಗಿ ದ್ವಂದ್ವಗಳನ್ನು ಅನುಪಾದೇಯವೆಂದು ಲಕ್ಷಿಸದೇ ಸ್ವಧರ್ಮವಾದ ಯುದ್ಧವನ್ನು ಮಾಡಿದರೆ ಪಾಪ ಬರುವದಿಲ್ಲ; ಪುಣ್ಯವೇ ಲಭಿಸುತ್ತದೆ ಎಂದು ಹೇಳುತ್ತಾನೆ.

ಇಲ್ಲಿ ಕೆಲವರು ಕೃಷ್ಣನು ಮೊದಲು ೧) ಲೌಕಿಕ ಫಲಕ್ಕಾಗಿ ಯುದ್ಧ ಮಾಡು; ಆ ಮೇಲೆ, ೨) ಧಾರ್ಮಿಕ ಪುಣ್ಯದಿಂದ ಸ್ವರ್ಗ ದೊರಕಿಸಲಿಕ್ಕೆ ಯುದ್ಧ ಮಾಡು, ೩) ನಿಷ್ಕಾಮಕರ್ಮದಿಂದ ಭಗವದಾರಧನಾರೂಪವಾಗಿ ಯುದ್ಧಮಾಡು ಎಂದು ಮೂರು ಮಟ್ಟದಲ್ಲಿ ಉಪದೇಶಿಸಿದ್ದಾನೆಂದು ಹೇಳುತ್ತಾರೆ.

ಇದು ಸರಿಯಾದ ರೀತಿಯಲ್ಲ. ೧) ಯಾಕೆಂದರೆ ಕೃಷ್ಣನಿಗೆ ಯಾವದೋ ರೀತಿಯಿಂದ ಅರ್ಜುನನಿಂದ ಯುದ್ಧ ಮಾಡಿಸಬೇಕೆಂಬ ಚಾಪಲ್ಯವಿಲ್ಲ ಹಾಗಿದ್ದರೆ ಅದು ಕೃಷ್ಣನಿಗೆ ಕುಂದು. ಸರಿಯಾದ ಗುರಿಯನ್ನು ಸರಿಯಾದ ಸಾಧನೆಯಿಂದ ಯೋಗ್ಯ ಶಿಷ್ಯನಿಗೆ ಮುಟ್ಟಿಸುವದೇ ಒಳ್ಳೇ ಗುರುವಿನ ಕೆಲಸ ೨) ಮೇಲಾಗಿ ಅರ್ಜುನನು ಅಪರೋಕ್ಷ ಜ್ಞಾನಿಯು ಇಂದ್ರಾಂಶನು ಸ್ವಲ್ಪ ಅಜ್ಞಾನದಿಂದ ಬಂದ ತಪ್ಪು-ತಿಳುವಳಿಕೆಯನ್ನು ದೂರ ಮಾಡಿ ನಿಜವಾದ ಮಾರ್ಗವನ್ನು ಉಪದೇಶಿಸಿದ್ದಾನೆ. ೩) ಅಜ್ಞ ಗುರುವಿನ ಹಾಗೆ ಯಾವ ಮಾತು ನಾಟುತ್ತದೆಂದು ಪ್ರಯೋಗ ಮಾಡಿ ವಿಫಲವಾದುದನ್ನು ಬಿಟ್ಟು ಸಫಲವಾದುದನ್ನು ಮುಂದುವರಿಸುವವನು ಶ್ರೀಕೃಷ್ಣನಲ್ಲ

ಕೃಷ್ಣನಿಗೆ ಹೇಳಬೇಕಾದದ್ದು ಇಷ್ಟು— ಯಾವ ದೃಷ್ಟಿಯಿಂದ ನೋಡಿದರೂ ನೀನು ಯುದ್ಧ ಮಾಡಬೇಕು ಅದನ್ನು ನಿಷ್ಕಾಮಪೂರ್ವಕ ಭಗವದಾರಾಧನೆಯೆಂದು ಮಾಡುವದೇ ಯೋಗ್ಯರೀತಿ ಎಂದು ಕೃಷ್ಣನು ಉಪದೇಶಿಸಿದ್ದಾನೆ.

**एषा तेऽभिहिता सांख्ये बुद्धिर्योगे त्विमां शृणु ।**
**बुद्ध्या युक्तो यया पार्थ कर्मबंधं प्रहास्यसि ।। ३९ ।।**

ಜೀವ ಪರಮಾತ್ಮರ ಜ್ಞಾನ ವಿಷಯದಲ್ಲಿ ಈ ಪಾರವು ನಿನಗೆ (ಇಷ್ಟು ಹೊತ್ತಿನ ವರೆಗೆ) ಹೇಳಿದ್ದಾಯಿತು. ಈಗ ಉಪಾಯದ ಜ್ಞಾನದ ಸಲುವಾಗಿ ನನ್ನ ಉಪದೇಶ ವನ್ನು ಕೇಳು ಈ ಉಪಾಯದ ಜ್ಞಾನದಿಂದ ಯುಕ್ತನಾಗಿ (ಅಪರೋಕ್ಷ ಜ್ಞಾನ ವನ್ನು ಹೊಂದಿ) ಕರ್ಮಬಂಧರೂಪವಾದ ಸಂಸಾರವನ್ನು ಕಳೆದುಕೊಳ್ಳುತ್ತಿ ॥೩೯॥

**ವಿಶೇಷ ಟಿಪ್ಪಣಿಗಳು :**

ತಾತ್ಪರ್ಯ ( ಸತ್ಯಧ್ಯಾನತೀರ್ಥರು ) "ಜೀವೇಶ್ವರ ಸ್ವರೂಪಗಳನ್ನು ಈ ಪೂರ್ವಗ್ರಂಥಗಳಿಂದ ಹೇಳಿದೆ ಉತ್ತರ ಗ್ರಂಥಗಳಲ್ಲಿ ಪರಮಾತ್ಮನ ಅಪರೋಕ್ಷ ಜ್ಞಾನಕ್ಕೆ ಕಾರಣವಾದ ಉಪಾಯವನ್ನು ಹೇಳುತ್ತೇನೆ. ಅವುಗಳನ್ನು ಕೇಳಿ ಆ ಪ್ರಕಾರವಾಗಿ ಆಚರಿಸಿ ಅಪರೋಕ್ಷ ಜ್ಞಾನವನ್ನು ಹೊಂದಿ ಆ ಪರಮಾತ್ಮನ ಪ್ರಸಾದ ದಿಂದ ಮೋಕ್ಷವನ್ನು ಹೊಂದು."

ಇಲ್ಲಿ **सांख्य** ಮತ್ತು **योग** ವೆಂಬ ಶಬ್ದಗಳು ಆವಳಿ ದರ್ಶನಗಳಾದ ಸಾಂಖ್ಯ ಯೋಗಗಳೆಂಬ ಭ್ರಮೆ ಬರುತ್ತದೆ. ಆದರೆ ಗೀತೆಯಲ್ಲಿ ಈ ಎರಡೂ ಶಬ್ದಗಳನ್ನು ಒಂದು ವಿಶಿಷ್ಟವಾದ ಅರ್ಥದಲ್ಲಿ ಉಪಯೋಗಿಸಿದ್ದಾರೆನ್ನುವದನ್ನು ಎಲ್ಲ ವಿಮರ್ಶಕರೂ ವ್ಯಾಖ್ಯಾನಕಾರರೂ ಒಪ್ಪಿದ್ದಾರೆ. ಶಂಕರಾಚಾರ್ಯರು ಸಾಂಖ್ಯ ಶಬ್ದಕ್ಕೆ

**सांख्ये = परमार्थवस्तुविवेकविषये** ಪರಮಾರ್ಥ ವಸ್ತುವನ್ನು ವಿಂಗಡಿಸಿ ತಿಳಿಯುವ ವಿಷಯದಲ್ಲಿ **बुद्धि**: ಜ್ಞಾನವು **योगे तु तत्प्राप्त्युपाये** ಅದನ್ನು ಸಂಪಾದಿಸುವ ಉಪಾಯವೆಂದು ಅರ್ಥ ಮಾಡಿದ್ದಾರೆ. ರಾಮಾನುಜಾಚಾರ್ಯರು **सांख्य** ವೆಂದರೆ **सख्यबुद्धिः बुद्ध्याऽवधारणीय आत्मतत्वं सांख्यं** ಬುದ್ಧಿಯಿಂದ ತಿಳಿಯಲ್ಪಡುವ ತತ್ವವು ಸಾಂಖ್ಯವೆಂದೂ **योग** ವೆಂದರೆ **आत्मज्ञान-पूर्वक, मोक्षसाधनभूत कर्मानुष्ठाने** ಆತ್ಮಜ್ಞಾನವನ್ನು ಸಂಪಾದಿಸಿಕೊಂಡು ಮೋಕ್ಷಕ್ಕೆ ಸಾಧನವಾದ ಕರ್ಮಗಳನ್ನು ಆಚರಿಸುವದು ಮಧ್ವಾಚಾರ್ಯರು **सांख्य** ಎಂದರೆ ಜ್ಞಾನವೆಂದು ಹೇಳಿದ್ದಾರೆ **शुद्धात्मतत्वविज्ञान सांख्यमित्य-भिधीयते** ಶುದ್ಧವಾದ ಆತ್ಮತತ್ವ ವಿಜ್ಞಾನಕ್ಕೆ ಸಾಂಖ್ಯವೆನ್ನುತ್ತಾರೆಂದು ವ್ಯಾಸಸ್ಮೃತಿಯಲ್ಲಿಯ ಪ್ರಮಾಣವನ್ನು ಉದಾಹರಿಸಿದ್ದಾರೆ **योगः उपायः** ಯೋಗ ಎಂದರೆ ಉಪಾಯ *

ಹೀಗೆ ಸಾಂಖ್ಯವೆಂದರೆ ಪರಮಾರ್ಥತತ್ವವೆಂದಾಗಲೀ ಅದರ ಜ್ಞಾನವೆಂದಾಗಲೀ ಯೋಗವೆಂದರೆ ಉಪಾಯವೆಂದು ಅರ್ಥವೆಂಬ ವಿಷಯದಲ್ಲಿ ಒಪ್ಪಿಗೆ ಮೂವರಲ್ಲಿಯೂ ಇದೆ ಮುಖ್ಯವಾಗಿ ಇವು ಸಾಂಖ್ಯಯೋಗ ದರ್ಶನಪರವಲ್ಲವೆಂದು ಒಪ್ಪಿದ್ದಾರೆ.

ರಾಘವೇಂದ್ರರು ಇದನ್ನೇ ಸ್ಪಷ್ಟಪಡಿಸುತ್ತಾರೆ. **सांख्यशब्दोजीवेश्वर ज्ञानपरः** ಜೀವಪರಮಾತ್ಮ ಉಭಯತತ್ವಗಳ ಜ್ಞಾನಕ್ಕೆ ಸಾಂಖ್ಯಯೆಂದು ಹೆಸರು. ಆತ್ಮ ಎನ್ನುವದು ಜೀವ – ಪರಮೇಶ್ವರರೆಂದು ಎರಡು ವಿಧವೆಂಬುದನ್ನು ಸ್ಪಷ್ಟಪಡಿಸುತ್ತಾರೆ. **नत्वंनेमेजनाधिपाः** ಎಂದು ಮುಖ್ಯವಾಗಿ ಜೀವರ ವಿಷಯದಲ್ಲಿ, ಆ ಮೇಲೆ **तात्पर्येन** ಅವನ ಸಲುವಾಗಿ ಪರಮಾತ್ಮನ ಜ್ಞಾನವೂ ಪ್ರಸಕ್ತವಾದುದನ್ನು ಉದಾಹರಿಸುತ್ತಾರೆ. **बुद्धिः** ಎಂದರೆ **बुद्ध्यते अनया** ಎಂಬ ಕರಣ ವ್ಯುತ್ಪತ್ತಿಯಿಂದ ಜ್ಞಾನವು ಯಾವದರಿಂದ ಹುಟ್ಟುವದೋ ಅದು

---

*ಅರವಿಂದರು ತಮ್ಮ Essays on the Gita ದಲ್ಲಿ— "Gita insists that Sankhya and yoga are not two different incompatible and discordant Systems and one in theirs principle and aim. Samkhya proceeds by knowledge ... ... while yoga proceeds by works, . . ... yoga is the practise of the Truth of which Knowledge gives the Vision."

ವಾಕ್ಯ. **योगे युज्यते प्राप्यते फल अनेन** ಎಂಬ ಕರಣ ವ್ಯುತ್ಪತ್ತಿಯಿಂದ ಉಪಾಯವೆಂಬ ಅರ್ಥ ಹೇಳುತ್ತಾರೆ.

ರಾಧಾಕೃಷ್ಣನ್ನರು ಕೂಡ ಇದೇ ಅರ್ಥವನ್ನೇ ಹೇಳುತ್ತಾರೆ— "Samkhya in the Geeta does not mean the system of philosophy known by that name; nor does yoga mean Patanjalayoga" ಗೀತೆಯಲ್ಲಿ ಸಾಂಖ್ಯ ಶಬ್ದಕ್ಕೆ ಆ ಹೆಸರಿನ ದರ್ಶನವೆಂದು ಅರ್ಥವಲ್ಲ. ಅದರಂತೆ ಯೋಗ ಶಬ್ದವು ಪಾತಂಜಲ ಯೋಗವೆಂದು ಅರ್ಥವಲ್ಲ ರಾಧಾಕೃಷ್ಣನ್ನರು ಅದಕ್ಕೆ ಒಂದು ಕಾರಣ ವನ್ನು ಕೊಟ್ಟು ತಾತ್ವಿಕ ವಿಷಯದಲ್ಲಿ ಒಂದು ಹೆಜ್ಜೆ ಮುಂದೆ ಇಡುತ್ತಾರೆ ಸಾಂಖ್ಯ ದರ್ಶನವು ಪ್ರಕೃತಿಪುರುಷರೆಂಬ ಎರಡು ತತ್ವಗಳನ್ನು ಒಪ್ಪುವದರಿಂದ ಅದು ದ್ವೈತ ಪರವಾಗಿರುತ್ತದೆ. ಆದರೆ ಗೀತಯು— This is transcended in Geeta, which affirms the reality of a supreme self who is the lord of all. ಪ್ರಕೃತಿಪುರುಷರಾಚೆಗೆ ಪರಮಾತ್ಮನ ಸತ್ಯತ್ವವನ್ನೂ ಅವನು ಎಲ್ಲರ ಪ್ರಭು ಎನ್ನುವದನ್ನೂ ಒಪ್ಪುತ್ತದೆಂದು ಹೇಳುತ್ತದೆ (ಆ ಪರತತ್ವವು ಸರ್ವೋತ್ತಮವೂ ಸರ್ವೇಶ್ವರನೂ ಎಂದು ಗೀತೆಯು ಹೇಳುತ್ತದೆಂಬುದನ್ನು ಲಕ್ಷ್ಯದಲ್ಲಿಡ ಬೇಕು. ಇವು ಸಾಂಖ್ಯಯೋಗ ದರ್ಶನಗಳಲ್ಲ ಎನ್ನುವದಕ್ಕೆ ಮತ್ತೊಂದು ಐತಿಹಾಸಿಕ ಕಾರಣ ಕೊಡುತ್ತಾರೆ) "ಗೀತೆಯ ಕಾಲದಲ್ಲಿ ಸಾಂಖ್ಯಯೋಗ ದರ್ಶನಗಳು ನಿರ್ದಿಷ್ಟ ಆಕಾರದಲ್ಲಿ ಬೆಳೆದಿರಲಿಲ್ಲ". ಆದುದರಿಂದ ಕೃಷ್ಣನು ಅವುಗಳ ಪ್ರಭಾವಕ್ಕೆ ಒಳಗಾಗಿಲ್ಲವೆಂದು ಅವರ ಅಭಿಪ್ರಾಯ. ಆದರೂ ಅವುಗಳ ಪ್ರಭಾವ ತಕ್ಕಮಟ್ಟಿಗೆ ಗೀತೆಯ ಮೇಲೆ ಆಗಿದೆ ಎಂದು ಅವರ ಅಭಿಪ್ರಾಯ.

ಲೋಕಮಾನ್ಯ ಟಿಳಕರು— "ಭಗವದ್ಗೀತೆಯ ರಹಸ್ಯವನ್ನು ತಿಳಿಯಲು ಈ ಶ್ಲೋಕವು ಅತ್ಯಂತ ಮಹತ್ವದ್ದು ಸಾಂಖ್ಯ ಶಬ್ದದಿಂದ ಬರೀ ಕಾಪಿಲ ಸಾಂಖ್ಯ ವಲ್ಲ ಅಥವಾ ಬರೀ ವೇದಾಂತವಲ್ಲ. ಮತ್ತು ಯೋಗ ಶಬ್ದದ ಅರ್ಥವು ಪಾತಂಜಲ ಯೋಗವಲ್ಲ, . . ..ಸಾಂಖ್ಯವೆಂದರೆ ಸನ್ಯಾಸ ಮಾರ್ಗ ಮತ್ತು ಯೋಗವೆಂದರೆ ಕರ್ಮಮಾರ್ಗ— ಇದೇ ಅರ್ಥವನ್ನೇ ಇಲ್ಲಿ ತೆಗೆದುಕೊಳ್ಳಬೇಕು. ಹೀಗೆ ಗೀತೆಯ ೩-೩ ಶ್ಲೋಕದಿಂದ (**ज्ञानयोगेन सांख्यानां कर्मयोगेण योगिनां**) ಎರಡು ನಿಷ್ಠೆಗಳಿವೆ ಎಂದು ಗೊತ್ತಾಗುತ್ತದೆ. ಈ ಎರಡೂ ಮಾರ್ಗಗಳು ಸ್ವತಂತ್ರವಿರುತ್ತವೆ (**यत्सांख्यैः प्राप्यते ज्ञानं तद्योगैरपि गम्यते**). ಸಾಂಖ್ಯರು ಮುಟ್ಟುವ ಸ್ಥಾನವನ್ನೇ ಯೋಗಿಗಳು ಮುಟ್ಟುತ್ತಾರೆ. ಸಾಂಖ್ಯರು ಕೊನೆಗೆ ಕರ್ಮಸನ್ಯಾಸವೇ ಶ್ರೇಷ್ಠವೆಂದು ಒಪ್ಪುತ್ತಾರೆ. ಆದುದರಿಂದ ಇದು ಯುದ್ಧವನ್ನು ಏಕೆ ಮಾಡಬೇಕು ? ಎನ್ನುವ ಅರ್ಜುನನ ಪ್ರಶ್ನೆಗೆ ಉತ್ತರವಾಗುವದಿಲ್ಲ. ಜ್ಞಾನಪ್ರಾಪ್ತಿಯಾದ ಮೇಲೆ

ಸಹ ನಿಷ್ಕಾಮ ಬುದ್ಧಿಯಿಂದ ಕರ್ಮ ಮಾಡುವದೇ ಪುರುಷಾರ್ಥವೆಂದು ಯೋಗ ನಿಷ್ಠೆಯ ಮತ ಎಂದು ಭಗವಂತನು ಕರ್ಮಯೋಗದ ಸಿದ್ಧಾಂತವನ್ನು ವಿವರಿಸುತ್ತಾನೆ" ಎಂದು ಹೇಳುತ್ತಾರೆ.

ಆರ್. ಬಿ, ಲಾಲರು 'The Geeta and Modern Science'ದಲ್ಲಿ ಈ ಸಾಂಖ್ಯ ಮತ್ತು ಯೋಗದ ಮೇಲೆ ಹೀಗೆ ಬರೆಯುತ್ತಾರೆ— " ಈ ಯೋಗಕ್ಕೆ ಅವರು ಬುದ್ಧಿಯೋಗವೆಂದು ಕರೆಯುತ್ತಾರೆ The term Buddhiyoga is more comprehensive and includes the discipline of the emotions, the intelligence and the senses as well. ಬುದ್ಧಿಯೋಗದಲ್ಲಿ ವ್ಯಾಪಕವಾದ ಅರ್ಥವು ಅಡಕವಾಗಿದೆ ಅದರಲ್ಲಿ ಭಾವನೆಗಳ ನಿಯಂತ್ರಣ, ಬುದ್ಧಿಯ ವಿವರಣೆ ಮತ್ತು ಇಂದ್ರಿಯಗಳ ನಿಗ್ರಹ ಇವೆಲ್ಲ ಸೇರಿವೆ It means the Yoga of intelligence or union of the intellect with God The intellect is used as an instrument of thought ವಿಚಾರಸಾಧನೆಯೆಂದು ಬುದ್ಧಿಯನ್ನು ಉಪಯೋಗಿಸುತ್ತಾರೆ. ಬುದ್ಧಿಯೋಗವನ್ನು ಕರ್ಮಗಳಿಗೆ ಯೋಜಿಸಿದರೆ ಅದಕ್ಕೆ ಕರ್ಮಯೋಗವೆನ್ನುತ್ತಾರೆ. ಹೀಗೆ ಬುದ್ಧಿಯೋಗದ ಸಾಮಾನ್ಯರೂಪವೆಂದರೆ ಪ್ರತಿನಿತ್ಯದ ಜೀವನದಲ್ಲಿ ಅದು ಕರ್ಮಯೋಗವೇ ಆಗಿರುತ್ತದೆ.*

---

* ಸಾತವಳೇಕರರು ಸಾಂಖ್ಯವನ್ನು ಹೀಗೆ ನಿರ್ವಚನ ಮಾಡಿದ್ದಾರೆ— ಸಾಂಖ್ಯ ಶಬ್ದವು 'ಸಂಖ್ಯಾ' ದಿಂದ ಬಂದಿದೆ

(ಅಮರಕೋಶ) **चर्चा संख्या विचारणा।**

(ಹೇಮಕೋಶ) **संख्यैकार्थौ विचरेच।**

(ಮಧುಸೂದನ ಸರಸ್ವತಿ **गी. टी. ३–३; ५–४**) **संख्या सम्यगात्मबुद्धिः।**

(ಶಬ್ದೇಂದು ಶೇಖರ) **सम्यक् ख्यानं संख्या क्रम वैशिष्ट्येन ज्ञानं।**

(ಮಧುಸೂದನಸಂ ಟಿ. ಗೀ. ೧೮-೧೩) **पदार्थाः संख्यायंतेव्युत्पाद्यंते अस्मिन्**

**इति सांख्यम्।**

ಸಂಖ್ಯಾ ಶಬ್ದದ ಅರ್ಥವು **(सम्यक् ख्यानम्)** ವಿಚಾರ ಮಾಡುವದು, ತತ್ವ ನಿಶ್ಚಯಿಸಲಿಕ್ಕೆ ವಾದ-ವಿವಾದ ಮಾಡುವದು.

(ಸಂಖ್ಯಾ ಶಬ್ದದ (2)ನೇ ಅರ್ಥ) 'ಆತ್ಮ ವಿಷಯಕ ನಿಶ್ಚಿತ ಜ್ಞಾನ'.

ಕ್ರಮಪೂರ್ವಕ ಮತ್ತು ಯುಕ್ತಿಪ್ರಮಾಣಗಳನ್ನು ತೋರಿಸಿ ಸಿದ್ಧಾಂತವನ್ನು ಎಲ್ಲಿ ಪ್ರತಿಪಾದಿಸುತ್ತಾರೆ ? ಅದು ಸಾಂಖ್ಯವೆನಿಸುತ್ತಿದೆ. ಜಗತ್ತಿನಲ್ಲಿದ್ದ ಪದಾರ್ಥಗಳ ಸಂಖ್ಯೆಯನ್ನು ನಿಶ್ಚಯಿಸಿ ಅವುಗಳ ಯಥಾವತ್ತಾಗಿ ಜ್ಞಾನ ಮಾಡಿಕೊಡುವ ಶಾಸ್ತ್ರಕ್ಕೆ ಸಾಂಖ್ಯವೆಂದು ಹೆಸರು.

ಹೀಗೆ ಬುದ್ಧಿಯೋಗವೆಂದರೆ ಧರ್ಮ ಮತ್ತು ವಿಜ್ಞಾನದ ಸಂಯೋಜನೆಯು (Integration) ಹಾಗೆಯೇ ಅದು ವಿಚಾರ ಮತ್ತು ವಿಶ್ವಾಸ ಅಥವಾ ಶ್ರದ್ಧೆ, ಮತ್ತು ವ್ಯವಹಾರಬುದ್ಧಿ ಇವುಗಳ ಸಂಘಟನೆಯೂ ಆಗಿದೆ. ಕೆಲವರು ಬುದ್ಧಿಯ ಉಪಯೋಗವು ದೇವರ ಸಂಶೋಧನೆಯಲ್ಲಿ ಆಗುವದಿಲ್ಲೆಂದು ಹೇಳಿದ್ದರೂ **ಕೃಷ್ಣನ ಮತದಲ್ಲಿ ನಿಶ್ಚಿತವಾದ ಬುದ್ಧಿಯು ಈಶ್ವರ ಸಂಪಾದನೆಯಲ್ಲಿ ಮಹಾ ಪ್ರಯೋಜನಕಾರಿಯೆಂದು ಸಿದ್ಧವಾಗಿದೆ.** (ಇದರೊಡನೆ ಕಠೋಪನಿಷತ್ತಿನ ವಾಕ್ಯವನ್ನು ಫಲದಾಯಕವಾಗಿ ಓದಬಹುದು **एष सर्वेषु भूतेषु गूढोत्मान प्रकाशते । दृश्यतेत्वग्रया बुद्धया सूक्ष्मया सूक्ष्मदर्शिभिः ॥ १–२–१२** ಈ ಪರಬ್ರಹ್ಮವೆಂದು ವಸ್ತುವು ತನ್ನ ಸ್ವರೂಪವನ್ನು ಅಡಗಿಸಿದ್ದರಿಂದ ಅಭಿವ್ಯಕ್ತಿಯನ್ನು ಹೊಂದುವದಿಲ್ಲ ಆದರೆ ಭಗವಂತನ ಪ್ರಸಾದದಿಂದ ಶ್ರವಣದ ಅಭ್ಯಾಸದಿಂದ ಹರಿತಾರ ಬುದ್ಧಿಯಿಂದ ಸೂಕ್ಷ್ಮದರ್ಶಿಗಳಿಗೆ ಅಭಿವ್ಯಕ್ತವಾಗುತ್ತದೆ ) ಇದರ ಸಮಗ್ರ ಸಂಗತಿಯನ್ನು ಈ ರೀತಿಯಾಗಿ ಕೊಡಬಹುದು. ಈ ಅಧ್ಯಾಯದ ೧೨ ರಿಂದ ೩೦ ರ ವರೆಗೆ ಜೀವ-ಪರಮಾತ್ಮರ ಗುಣಗಳು ಮತ್ತು ಅವರ ಪರಸ್ಪರ ಸಂಬಂಧದ ವಿಷಯದಲ್ಲಿ ಚರ್ಚೆ ನಡೆಯಿತು ಆತ್ಮದ ನಿತ್ಯತ್ವ ಪ್ರಾಕೃತ ವಸ್ತುಗಳ ನಾಶ ಜೀವರುಗಳ ಜನ್ಮಾಂತರಗಳ ಪ್ರಾಪ್ತಿ ಮತ್ತು ಇದಕ್ಕೆ ಹೊಂದಿದ ವಿಷಯಗಳೂ ಚರ್ಚಿಸಲ್ಪಟ್ಟವು ಮೇಲೆ ಮೇಲೆ ಪರಮಾತ್ಮನನ್ನು ನಿರ್ದೇಶಿಸಿ ಜೀವನು ಅವನ ಮೇಲೆ ಅವಲಂಬಿಸಿದ್ದುದನ್ನು ಒತ್ತಿ ಹೇಳಲಾಯಿತು. ಆ ಮೇಲೆ ೩೧–೩೮ ರ ವರೆಗೆ ವಿಷಯಾಂತರ ಪ್ರಸ್ತಾಪಿತವಾಯಿತು ಹಿಂದೆ ಹೇಳಿದ್ದನ್ನು ಸಾಂಖ್ಯವೆಂದೂ ಈಗ ಹೇಳಿದ್ದನ್ನು ಯೋಗವೆಂದೂ ಹೇಳಿದ್ದಾಯಿತು. ಆದರೆ ಒಂದು ವಿಷಯಕ್ಕೆ ಕೆಲವರು ತಕರಾರು ತೆಗೆದಿದ್ದಾರೆ. " ೨–೧೧ ರಿಂದ ೩೦ ವರೆಗೆ ದೇಹಾತ್ಮ ವಿಚಾರವನ್ನು ಹೇಳಿದ್ದಕ್ಕೆ ಶಂಕರಾಚಾರ್ಯರು ಸಾಂಖ್ಯಬುದ್ಧಿಯೆಂದು ಮನ್ನಿಸುತ್ತಾರೆ. ಮತ್ತು ಬಹಳ ಜನ ಟೀಕಾಕಾರರು ಅವರನ್ನೇ ಅನುಸರಿಸಿದ್ದಾರೆ ಹಾಗೆ ತಿಳಿಯಬೇಕಾಗಿದ್ದರೆ **एषाबुद्धिः** ಇದು ೨–೩೦ ಈ ಶ್ಲೋಕ

---

ಮಹಾಭಾರತದಲ್ಲಿ **दोषाणां च गुणानां च प्रमाण प्रविभागत. ।**
**कचिदर्थ मभिप्रेत्य सासंख्येत्युपधार्यताम् ॥**
**(शाति ३१०–८२)**

ಯಾವದಾದರೊಂದರ ವಿಷಯದಲ್ಲಿ ಗುಣದೋಷಗಳನ್ನು ವಿಭಾಗ ಮಾಡಿ ಅವುಗಳ ಪ್ರಮಾಣವನ್ನು ನಿಶ್ಚಯಿಸಿರುತ್ತಾರೆ. ಅದಕ್ಕೆ ಸಂಖ್ಯಾ ಎಂದು ಹೆಸರು. ಹೀಗೆ ಸಂಖ್ಯೆಯನ್ನು ನಿರ್ಧಾರ ಮಾಡಿದ ಶಾಸ್ತ್ರಕ್ಕೆ ಸಾಂಖ್ಯವೆಂದು ಹೆಸರು.

ಭಗವಂತನು ಈ ಶಾಸ್ತ್ರಕ್ಕೆ ಅನುಸರಿಸಿ ಅರ್ಜುನನಿಗೆ ಉಪದೇಶಿಸುತ್ತಾನೆ.

ಪಾದ ಕೂಡಲೇ ಬರಬೇಕಾಗಿತ್ತು ಆದರೆ ೨-೩೧-೩೮ ಈ ಎಂಟು ಶ್ಲೋಕಗಳಲ್ಲಿ ಬೇರೆ ವಿಷಯು ಮಧ್ಯದಲ್ಲಿ ಬಂದ ಮೇಲೆ ೨-೩೯ ನೇ ಶ್ಲೋಕದಲ್ಲಿ ಈ ಎಂಟು ಶ್ಲೋಕಗಳ ಹಿಂದಿನ ವಿಷಯಕ್ಕೆ ಅನುಸರಿಸಿ **एषा बुद्धिः** ಎಂದು ಹೇಳುವದು ಸರಿಯಾಗಲಾರದು ಆದುದರಿಂದ ೨-೧೧ ರಿಂದ ಪ್ರಾರಂಭಿಸಿ ೩೮ ರ ವರೆಗೆ ನಡೆದ ಎಲ್ಲ ವಿಚಾರಕ್ಕೂ ಅನುಸರಿಸಿ ಶ್ರೀಕೃಷ್ಣನು **एषा बुद्धि** ಈ ಶಬ್ದಗಳನ್ನು ಉಪಯೋಗಿಸಿದ್ದಾನೆ ಹೀಗೆಂದು ಅದರ ಅರ್ಥವನ್ನು ಮಾಡಬೇಕು ಹಾಗೆ ಮಾಡಿದರೆ ಪ್ರಸ್ತುತ ಯುದ್ಧವನ್ನು, ಶೋಕ ರಹಿತವಾಗಿ ಕೇವಲ ಕರ್ತವ್ಯ ಬುದ್ಧಿಯಿಂದ ಮಾಡುವದು ಅವಶ್ಯವಿದೆಂದು ಶ್ರೀಕೃಷ್ಣನು ನಾನಾ ರೀತಿಯಿಂದ ಯುಕ್ತಿವಾದವನ್ನು ಮಾಡಿದ್ದಾನೆ ಇವೆಲ್ಲಕ್ಕೂ ಉದ್ದೇಶಿಸಿ **एषाबुद्धि** ಎಂದು ಉಪಯೋಗಿಸಿದ್ದಾನೆ. ... .. ಆ ಮೇಲೆ ಸುಖದುಃಖಾದಿಗಳನ್ನು ಸಮ ಮಾಡಿಕೊಂಡು ಯುದ್ಧ ಮಾಡುವದು ಹೇಗೆಂಬುದನ್ನು ೨-೩೯ ರಿಂದ **योगे बुद्धिः** ಎಂದರೆ ಸುಖದುಃಖ ಸಮೀಕರಣ ಬುದ್ಧಿಯೆಂದು ತಿಳಿಯಬೇಕು. "

" **बुद्धियोगः – बुद्धि** ಇದು ಅತ್ಯಂತ ಮುಖ್ಯವಾದ ಶಬ್ದ. **बुद्ध्या युक्त** ಈ ಬುದ್ಧಿಯೋಗವು ಮೊದಲು ಕರ್ಮನಾಶ ಮಾಡುವದು. ಮುಂದಿನ ಶ್ಲೋಕಗಳಲ್ಲಿ ಅದರ ಮೆಟ್ಟಿಲುಗಳನ್ನು ತೋರಿಸುತ್ತಾನೆ ಆ ಮೇಲೆ ಆದರ ಗುರಿಯನ್ನು ಹೇಳುತ್ತಾರೆ. ಇಲ್ಲಿ ಭಗವಂತನು ಬಹಳ ಸೂಕ್ಷ್ಮ ರೀತಿಯಿಂದ ಹೇಳುತ್ತಾನೆ. ಪ್ರತಿಯೊಂದು ಕ್ರಿಯೆಯು ಒಳ್ಳೇದಿರಲಿ ಕೆಟ್ಟದ್ದಿರಲಿ ಒಂದು ಪರಿಣಾಮ ಹುಟ್ಟಿಸುತ್ತದೆ. ಈ ಪರಿಣಾಮದಿಂದ ಯಾರೂ ಮುಕ್ತರಾಗಲಾರರು ಅವರು ಹೆಚ್ಚಿನ ಜ್ಞಾನದಿಂದ ಮಾತ್ರ ಆ ಪರಿಣಾಮದಿಂದ ಪಾರಾಗುತ್ತಾರೆ. ಬುದ್ಧಿಯೋಗವು ಆ ಹೆಚ್ಚಿನದಾದ ಜ್ಞಾನವು ಆದುದರಿಂದ ಅದು ನಮ್ಮನ್ನು ಆ ಪರಿಣಾಮದಿಂದ ಪಾರು ಮಾಡುತ್ತದೆ " ಎಂದು ಬೋಧಿರಾಜರು ಬರೆಯುತ್ತಾರೆ.

ಸರ್ವನಾಮವು ಪೂರ್ವಪ್ರಸಕ್ತನಾಮ (ವಿಷಯ) ವನ್ನೇ ಪರಾಮರ್ಶಿಸುತ್ತದೆ ಎಂದ ಮೇಲೆ ಪೂರ್ವದಲ್ಲಿ ಪ್ರಸಕ್ತವಾದುದೇ ಸಾಂಖ್ಯವೇನೋ ನಿಜ ಆದರೆ ಉತ್ತರದಲ್ಲಿ (**इमां**) ದಿಂದ ಪ್ರಸಕ್ತವಾಗುವ ಕರ್ಮಯೋಗಕ್ಕೂ ೩೧ ರಿಂದ ೩೮ ರ ವರೆಗೆ ಉಪೋದ್ಘಾತವನ್ನೂ ರೂಚಿಸಲಾಗಿದೆ. **इमां** ಎಂಬುದು ಮುಂದೆ ನಡೆದ ವಿಷಯವನ್ನು ಪರಾಮರ್ಶಿಸುತ್ತಿದೆ. ಇದನ್ನೇ ರಾಘವೇಂದ್ರರ ವಿವೃತಿಯಲ್ಲಿ ಸ್ಪಷ್ಟವಾಗಿ ಹೇಳುತ್ತಾರೆ. **अयमर्थः – – – – एषा नत्वेवाहमित्यारभ्य, देहोनित्य मवध्यः इत्यंता बुद्धिः तदुभयस्वरूपबोधजनिका वाक् – – – योगे तज्ञानहेतूपाय विषये – – – इमां त्रैगुण्यविषया इत्यादिना**

**अषष्ठ समाप्ति वक्ष्यमाणां बुद्धि उपाय बोधजनिकां वाचं** – – – **शृणु (तत्रनिष्ठाकुरु)**. ಇದು ಅರ್ಧವು – – – ಇದು **नत्वेवाहं** ಶ್ಲೋಕದಿಂದ ಪ್ರಾರಂಭವಾಗಿ **देहीनित्य** ಎಂಬ ಶ್ಲೋಕದ ಕೊನೆಯವರೆಗೆ ಅವೆರಡುಗಳ (ಜೀವ ಪರಮಾತ್ಮರ) ಜ್ಞಾನವನ್ನು ಹುಟ್ಟಿಸುವ ವಾಕ್ಯವು ... ... **योगे** ಎಂದರೆ ಆದರ ಜ್ಞಾನ ಹುಟ್ಟುವದಕ್ಕೆ ಬೇಕಾದ ಉಪಾಯದ ವಿಷಯದಲ್ಲಿ ಈ **त्रैगुण्य विषयां** ಇಲ್ಲಿ ೬ ನೇ ಅಧ್ಯಾಯ ಮುಗಿಯುವವರೆಗೆ ಮುಂದೆ ಹೇಳುವ ಉಪಾಯವನ್ನು ತಿಳಿಸುವ ವಾಕ್ಯವನ್ನು ಕೇಳು. ಯಾಕೆಂದರೆ **इमां** ಎಂಬುದೂ ಸರ್ವನಾಮ ವಾದುದರಿಂದ ಅದು ಪೂರ್ವದಲ್ಲಿ ಪ್ರಸಕ್ತವಾದುದನ್ನೂ ಮುಂದೆ ಬರುವದನ್ನೂ ಹೇಳುತ್ತದೆ, **एषा** ಮತ್ತು **इमां** ಇವು ಪರಸ್ಪರ ವಿಭಿನ್ನವಾದ ವಿಷಯಗಳನ್ನು ಪ್ರಸ್ತಾಪಿಸುವದರಿಂದ ರಾಘವೇಂದ್ರರು ಈ ರೀತಿಯಾಗಿ ಯೋಜಿಸಿದ್ದಾರೆ ಶಂಕರಾಚಾರ್ಯರು ಯುದ್ಧ ಮಾಡುವ ಪ್ರಸಕ್ತಿ ಇದ್ದುದರಿಂದ ೩೧-೩೮ ವರೆಗಿನ ಶ್ಲೋಕಗಳಿಗೆ ಮಹತ್ವವನ್ನೇ ಕೊಡುವದಿಲ್ಲ

ಪ್ರಭುಪಾದರು ತಮ್ಮ Bhagavıdgeeta as ıt is ದಲ್ಲಿ ಈ ಶ್ಲೋಕಕ್ಕೆ ಒಂದು ಮಹತ್ವದ ಟಿಪ್ಪಣಿಯನ್ನು ಬರೆದಿದ್ದಾರೆ ಇಲ್ಲಿ ಪ್ರಸಕ್ತವಾದ **सांख्य**ವು ನಾಸ್ತಿಕವಾದಿಯಾದ ಕಾಪಿಲ ಸಾಂಖ್ಯವಲ್ಲ ಇದು ವೇದಸಮ್ಮತವಾದ ನಿರುಕ್ತದಲ್ಲಿ ಕೊಟ್ಟ ಆಸ್ತಿಕ ಸಾಂಖ್ಯಶಾಸ್ತ್ರವೆಂದು ಅವರ ಅಭಿಪ್ರಾಯ. ಈ ಸಾಂಖ್ಯಶಾಸ್ತ್ರದಲ್ಲಿ ದೇಹ ಮತ್ತು ಆತ್ಮದ ವಿವೇಚನೆಯು ವಿಷಯವಾಗಿದೆಂದೂ ಮತ್ತು ಜೀವಾತ್ಮ ಪರಮಾತ್ಮರ ವಿವೇಚನೆ ಇಲ್ಲಿ ಇದೆ ಯಂಬ ವಿಷಯವನ್ನು ಎತ್ತದೆ ಇದ್ದುದರಿಂದ ಇವರು ದ್ವೈತಿಗಳಾಗಿದ್ದರೂ ಅದ್ವೈತಿಗಳ ಟೀಕೆಯ ಪರಿಣಾಮ ಇದರ ಮೇಲೆ ಆದಂತೆ ತೋರುತ್ತದೆ ಆದರೆ ಇವರ ವಿವೇಚನೆ ಶುದ್ಧವಾಗಿದೆ. ಸಾಂಖ್ಯದಲ್ಲಿ ಅಡಕವಾದ ಕಾಪಿಲಸಾಂಖ್ಯಶಾಸ್ತ್ರವು ಪರಮಾತ್ಮನ ಅವತಾರಭೂತರಾದ ಕಪಿಲರು ಭಾಗವತದಲ್ಲಿ ತನ್ನ ತಾಯಿಯಾದ ದೇವಹೂತಿಗೆ ಉಪದೇಶಮಾಡಿದ ಭಕ್ತಿಪ್ರಧಾನ ವಾದ ಸಾಂಖ್ಯಶಾಸ್ತ್ರವೆಂದೇ ಹೇಳಿದ್ದು ಸಯುಕ್ತಿಕವಾಗಿದೆ. ನಾಸ್ತಿಕವಾದ ಸಾಂಖ್ಯ ಶಾಸ್ತ್ರವೆಂದೇ ಹೇಳಿದ್ದು ಸಯುಕ್ತಿಕವಾಗಿದೆ. ನಾಸ್ತಿಕವಾದ ಸಾಂಖ್ಯಶಾಸ್ತ್ರವು ಈ ಬುದ್ಧಿಯೋಗದಲ್ಲಿ ಯಾವ ಸ್ಥಾನವನ್ನೂ ಹೊಂದಿಲ್ಲ. * ಈ ರಹಸ್ಯವನ್ನು ಅರಿ

* ಆದುದರಿಂದ ಮಹಾಭಾರತದಲ್ಲಿ ಸಾಂಖ್ಯ ಮತ್ತು ಯೋಗ ಶಾಸ್ತ್ರಗಳನ್ನು ವೇದ ವಿರುದ್ಧ ದರ್ಶನಗಳ ವರ್ಗದಲ್ಲಿ ಸೇರಿಸಿದ್ದಾರೆ ನಾರದ ಪುರಾಣದಲ್ಲಿ ಇವುಗಳನ್ನು ನ್ಯಾಯ ವೈಶೇಷಿಕ— ಮತ್ತು ಭೌದ್ಧ ಪಾಶುಪತ ಧರ್ಮಗಳ ಪಂಕ್ತಿಯಲ್ಲಿ ಕೂಡಿಸಿದ್ದಾರೆ. ಹಾಗೆಯೇ ಯೋಗವೆಂದರೆ ಪಾತಂಜಲಯೋಗವಲ್ಲ ಗೀತೆಯಲ್ಲಿ ಕರ್ಮಯೋಗ ಜ್ಞಾನಯೋಗ ಭಕ್ತಿಯೋಗವೆಂದು ಬಳಿ ಸಿದ್ದಾರೆ ಬರೀ ಯೋಗವೆಂದು ಕರೆದಿಲ್ಲ ಆದರೆ ಅನ್ನಿಬೆಸೆಂಟರು ಮಾತ್ರ ಕಾಪಿಲಸಾಂಖ್ಯ ಮತ್ತು ಪಾತಂಜಲ ಯೋಗಗಳೇ ಇಲ್ಲಿ ಪ್ರಸಕ್ತವಾಗಿವೆಂದು ಬಳಕಿದ್ದಾಳೆ.

ಯದ ಕೆಲವು ವ್ಯಾಖ್ಯಾನಕಾರರು ಇದು ನಾಸ್ತಿಕ ಸಾಂಖ್ಯವೆಂದೇ ಹೇಳುತ್ತಾರೆ. ಬುದ್ಧಿಯೋಗವೆಂದರೆ ಕೃಷ್ಣನ ಚಿಂತನೆಯಲ್ಲಿ ಕಾರ್ಯ ಮಾಡುವದು; ಭಕ್ತಿ ಪ್ರೇರಿತ ಸೇವೆ ಸಲ್ಲಿಸುವದರಲ್ಲಿ ಪೂರ್ಣ ಸಂತೋಷವನ್ನು ಆನಂದವನ್ನು ಹೊಂದುವದು ಇದನ್ನು ಬಿಟ್ಟು ಇಂದ್ರಿಯ ಸುಖಕ್ಕಾಗಿ ಕರ್ಮಮಾಡುವದು ಮೋಹವೆಂದು ಅವರು ಅಭಿಪ್ರಾಯಪಟ್ಟಿದ್ದಾರೆ.

ಅಂತೂ ರಾಮಾನುಜಾಚಾರ್ಯರು ಸಾಂಖ್ಯವೆಂದರೆ ಜೀವನಜ್ಞಾನವೆಂದೂ, ಶಂಕರಾಚಾರ್ಯರು ಬ್ರಹ್ಮನಜ್ಞಾನವೆಂದೂ ಮಧ್ವಾಚಾರ್ಯರು ಜೀವ ಮತ್ತು ಬ್ರಹ್ಮ–ಉಭಯರ ಜ್ಞಾನವೆಂದೂ ಹೇಳುತ್ತಾರೆ.

ಅದ್ವೈತಿಗಳು ಜ್ಞಾನಕ್ಕೂ ಕರ್ಮಕ್ಕೂ ಎಣ್ಣೆ-ಸೀಗೇಕಾಯಿ ಸಂಬಂಧವನ್ನು ಬಳಸುತ್ತಾರೆ ಜ್ಞಾನಿಯು ಕರ್ಮವನ್ನು ಬಿಡುತ್ತಾನೆ; ಅಜ್ಞಾನಿಯು ಕರ್ಮವನ್ನು ಆಶ್ರಯಿಸುತ್ತಾನೆ. (**ज्ञानकर्मणोः समुच्चयासंभवात् . . . . ज्ञानस्य कर्मणश्चोपदेशो नोपपद्यते**) ಮಧುಸೂದನ ಸರಸ್ವತಿಯವರು ಜ್ಞಾನಕರ್ಮಗಳು ಒಂದೆಡೆಗೆ ಸೇರಲಾರವು ಆದುದರಿಂದ ಶ್ರೀಕೃಷ್ಣನು ಒಂದೇ ಕಡೆಗೆ ಜ್ಞಾನ ಕರ್ಮಗಳೆರಡನ್ನೂ ಈ ಶ್ಲೋಕದಲ್ಲಿಯಂತೆ ಉಪದೇಶ ಮಾಡಲಾರ ಎಂದು ಆಕ್ಷೇಪಿಸುತ್ತಾರೆ. ಅವಕ್ಕೆ ತಾವೇ ಉತ್ತರ ಕೊಡುತ್ತಾರೆ— ಜ್ಞಾನಿಗೆ ಜ್ಞಾನವನ್ನೂ ಅಜ್ಞಾನಿಗೆ ಕರ್ಮವನ್ನೂ ಉಪದೇಶಿಸಿದ್ದಾನೆಂದು ಸಮಾಧಾನ ಹೇಳುತ್ತಾರೆ. ಅವರು ಅರ್ಜುನನನ್ನು ಕೆಳದರ್ಜೆಗೆ ಒಗೆದು ಅವನಿಗೆ ಕರ್ಮಯೋಗವನ್ನು ಕೃಷ್ಣನು ಉಪದೇಶಿಸಿದನೆಂದು ಹೇಳುತ್ತಾರೆ.

ಆದರೆ ಈ ವಾದವು ವೇಂಕಟನಾಥನಿಗೆ ಸರಿಯೆನಿಸಿಲ್ಲ. ಅರ್ಜುನನು ಅಯೋಗ್ಯನಿದ್ದರೆ ಗೀತೆಯಲ್ಲಿ ಭಗವಂತನು ಅವನಿಗೆ ಜ್ಞಾನಯೋಗವನ್ನು ಏಕೆ ಉಪದೇಶಿಸಿದನೆಂದು ನಿಷ್ಠುರವಾಗಿ ಕೇಳುತ್ತಾನೆ. (**श्रवणानधिकारिणं एव अर्जुनं प्रति भगवता ज्ञानमुपदिष्टमिति तस्य अविवेकिगुरुत्वं स्यात्**) ಶ್ರವಣಾದಿ ಜ್ಞಾನಯೋಗಕ್ಕೆ ಅನರ್ಹನಾದ ಅರ್ಜುನನಿಗೆ ಜ್ಞಾನವನ್ನು ಉಪದೇಶಿಸಿದ ಭಗವಂತನು ಅವಿವೇಕಿಯಾದ ಗುರು ಆಗಬೇಕಾಗುತ್ತದೆಂದು ಆರೋಪಿಸುತ್ತಾನೆ.

ಇದೊಂದೇ ವಿಷಯವಲ್ಲ. ಮಧುಸೂದನ ಸರಸ್ವತಿಯವರು ಕರ್ಮಬಂಧಕ್ಕೆ ಎಲ್ಲರೂ ಸಂಸಾರವೆಂದು ಅರ್ಥ ಮಾಡಿದ್ದರೂ, ಜ್ಞಾನಕ್ಕೆ ಪ್ರತಿಬಂಧಕವಾದ ಚಿತ್ತಕಾಲುಷ್ಯವೆಂದು ಅರ್ಥಮಾಡಿದ್ದಾರೆ. ಸಂಸಾರವೆಂಬ ಅರ್ಥವನ್ನು ಶಂಕರಾಚಾರ್ಯರು ಸಹ ಒಪ್ಪಿದ್ದರೂ ಮಧುಸೂದನರು ಅದರಲ್ಲಿ ದೋಷವನ್ನು ಉದ್ಘಾ

ಟಿಸುವ ಸಾಹಸ ಮಾಡಿದ್ದಾರೆ. (**कर्मबंधं संसारं ईश्वरप्रसादनिमित्तज्ञान-प्राप्त्या प्रहास्यसीति प्राचां व्याख्याने तु अध्याहारदोषः कर्मपदवैयर्थ्यं च परिहर्तव्यम् ।**

ಸಾಂಖ್ಯವನ್ನು ಇಷ್ಟು ಹೊತ್ತಿನ ವರೆಗೆ ಹೇಳಿದೆ ಇನ್ನು ಯೋಗವನ್ನು ಹೇಳುವೆ ಎಂದು ಭಗವಂತನು ಅವೆರಡರಲ್ಲಿಯ ಅಂತರವನ್ನು ತೋರಿಸಿದರೂ ಅವು ಪರಸ್ಪರ ವಿರುದ್ಧವಲ್ಲ. **सांख्ययोगौ पृथग्बाला प्रवदंति न पण्डिताः** ಎಂದು ಸ್ಪಷ್ಟವಾಗಿ ಸಾರಿದ್ದಾನೆ ಸಾಂಖ್ಯವೆಂದರೆ ತತ್ವ; ಯೋಗವೆಂದರೆ ಅದರ ಆಚರಣೆ — ಹೀಗೆ ಪರಸ್ಪರ ಪೂರಕ ಪದಗಳಿವು **ಶ್ರೀ ಅರವಿಂದರು ಗೀತೆಯೊಳಗಿನ ಸಾಂಖ್ಯಯೋಗದ ಮೇಲೆ** Essays on Gita ದಲ್ಲಿ ಒಂದು ಪ್ರಕರಣವನ್ನೇ ಬರೆದಿದ್ದಾರೆ **एषा तेऽभिहिता सांख्ये** ಈ ಶ್ಲೋಕದಿಂದ ಪ್ರಾರಂಭಿಸಿ **द्वाविमौ पुरुषौ लोके** ವರೆಗೆ ಗೀತೆಯನ್ನು ಬಳಸಿಕೊಂಡು ತಮ್ಮ ಅಭಿಪ್ರಾಯವನ್ನು ಕೊಟ್ಟಿದ್ದಾರೆ ಸಾಂಖ್ಯಯೋಗ ಶಬ್ದಗಳು ಆ ಹೆಸರಿನ ದರ್ಶನಗಳನ್ನು ಉದ್ದೇಶಿಸಿಲ್ಲ ಈಶ್ವರ ಕೃಷ್ಣರ ಸಾಂಖ್ಯಕಾರಿಕಾದಂತೆ ಇರುವ ಕಾಪಿಲಸಾಂಖ್ಯವು ಅದಲ್ಲ, ಪಾತಂಜಲ ಸೂತ್ರಗಳನ್ನು ಅನುಸರಿಸುವ ಯೋಗ ದರ್ಶನವೂ ಅದಲ್ಲ. ಆದರೆ ಸಾಂಖ್ಯಯೋಗ ದರ್ಶನಗಳ ಪ್ರಭಾವವು ಅವುಗಳ ಮೇಲೆ ಬೀಳದೆ ಇಲ್ಲ. ಅವುಗಳಲ್ಲಿಯ ಮುಖ್ಯಾಂಶಗಳನ್ನು ಗೀತೆಯು ಬಳಸಿಕೊಳ್ಳುವದು. ಗೀತೆಯು ಸಾಂಖ್ಯಯೋಗಗಳೆರಡೂ ಒಂದು ಎಂದು ಹೇಳುವದು, ಯೋಗವೆಂದರೆ ತತ್ವದ ಆಚರಣೆಯು; ಜ್ಞಾನದಿಂದ ಆ ತತ್ವದ ಸಾಕ್ಷಾತ್ಕಾರವಾಗುವದು, ಸಾಂಖ್ಯವು ಭೇದವಾದಿಯಾದರೂ ದ್ವೈತದಂಥ ಭೇದವಾದಿಯಲ್ಲಿ ಸಾಂಖ್ಯರಲ್ಲಿ ಎರಡು ಸ್ವತಂತ್ರ ತತ್ವಗಳನ್ನು (ಪ್ರಕೃತಿ ಮತ್ತು ಪುರುಷ) ಒಪ್ಪಿದ್ದಾರೆ. ಅವುಗಳಲ್ಲಿ ಪ್ರಕೃತಿಯು ಚಟುವಟಿಕೆ ಉಳ್ಳದ್ದು ಪುರುಷನು ಉದಾಶೀನನು ಪ್ರಕೃತಿಯಲ್ಲಿ ಮೂರು ಗುಣಗಳಿವೆ ಇವುಗಳ ಸಾಮ್ಯ ಕಳೆದು ಹೋದಾಗ ಸೃಷ್ಟಿ ನಡೆಯುತ್ತದೆ. ಇದಕ್ಕೆ ಒಬ್ಬನೇ ಪುರುಷನಿದ್ದರೆ ಸಾಲದು. ಕೆಲವರು ಮಾತ್ರ ಮುಕ್ತರಾಗುತ್ತಾರೆ; ಉಳಿದವರು ಸಂಸಾರದಲ್ಲಿ ಸಾಗುತ್ತಾರೆ. ಆದುದರಿಂದ ಅನೇಕ ಪುರುಷರು ಬೇಕಾಗುತ್ತಾರೆ (**Only by the theory of many Purushas can this fact be explained**) ಇದಕ್ಕೆ ಮಾಯಾವಾದ ಒಂದೇ ಯೋಗ್ಯ ಉತ್ತರವಾದರೂ ಅಲ್ಲಿ ಜಗತ್ತು ಒಂದು ಕನಸಾಗುತ್ತದೆ ಬಂಧ–ಮೋಕ್ಷಗಳೆರಡೂ ಸುಳ್ಳಾಗುತ್ತವೆ. ಆದರೆ ವಾಸ್ತವವಾದಿಯಾದ ಸಾಂಖ್ಯವು ಇದನ್ನು ಒಪ್ಪುವದಿಲ್ಲ. ಆದುದರಿಂದ ಒಬ್ಬ ಪುರುಷನಾದರೆ ನಾನಾತ್ವ ಹೇಗೆ ? ಗೀತೆಯು ಇದಕ್ಕೆ ಉತ್ತರ ಕೊಡುತ್ತದೆ. ಗೀತೆಯಲ್ಲಿ ಪುರುಷರು ಮೂರು ಅಥವಾ ಪುರುಷನಿಗೆ ಮೂರು ಅವಸ್ಥೆಗಳು. ಉಪ

ನಿಷತ್ತು ಮಾತ್ರ ಎರಡೇ ಪುರುಷರನ್ನು ಹೇಳುತ್ತದೆ ಒಂದನೆಯದು ಮೂರು ಗಳಿಂದ ಹುಟ್ಟದೆ ಇದ್ದುದು, ಎರಡನೆಯದು ಮೂರು ಗುಣಗಳುಳ್ಳ ಪ್ರಕೃತಿಯು. ಇಬ್ಬರು ಪುರುಷರು — ಒಂದು ಅದಕ್ಕೆ ಅಂಟಿಕೊಂಡು ಅದರ ಫಲ ತಿನ್ನುತ್ತದೆ. ಎರಡನೆಯದು ಅವನ್ನು ಬಿಟ್ಟುಬಿಡುತ್ತದೆ ಮತ್ತೊಂದರಲ್ಲಿ ಎರಡು ಪಕ್ಷಿಗಳೆಂದು ವರ್ಣಿಸಿದ್ದಾರೆ ಇವೆರಡಕ್ಕೆ ಗೀತೆಯು ಪುರುಷೋತ್ತಮನೆಂದು ಮೂರನೆಯದನ್ನು ಜೋಡಿಸುತ್ತದೆ ಹೀಗೆ ಕ್ಷರ, ಅಕ್ಷರ ಮತ್ತು ಉತ್ತಮ ಉಪನಿಷತ್ತುಗಳಲ್ಲಿ ಹೇಳಿದ್ದನ್ನೇ ಗೀತೆಯು ವಿಸ್ತರಿಸಿ ಹೇಳಿದೆ ಈ ಪುರುಷೋತ್ತಮವೇ ಭಕ್ತಿಯೋಗಕ್ಕೆ ಮೂಲವಾಗುವದು ಈ ಭಕ್ತಿಯೋಗವೇ ಕಟ್ಟುನಿಟ್ಟಾದ ಅದ್ವೈತ ತತ್ವದ ಲಕ್ಷಣವನ್ನು ಮಿಕ್ಕಿ ನಿಲ್ಲುವದು. ಗೀತೆಯಲ್ಲಿ ಆ ಪುರುಷನೇ ಪ್ರಕೃತಿಯಿಂದ ಜೀವನನ್ನು ಹುಟ್ಟಿಸುತ್ತಾನೆ. ಅದು ಜಡ ಪ್ರಕೃತಿಯಿಂದ ಅಲ್ಲ, ಚೇತನ ಪ್ರಕೃತಿಯಿಂದ ಜೀವರು ಹೊರಬೀಳುತ್ತಾರೆ. ಈ ಉತ್ತಮ ಪ್ರಕೃತಿಯಲ್ಲಿ ನಾನಾತ್ವವು ಹುದುಗಿದೆ 'ಸೃಷ್ಟಿಯಲ್ಲಿರುವ ಜೀವನು ನಾನೇ'. ಅದು ಅವರ ಪ್ರಕೃತಿಯಲ್ಲಿ ಇಳಿದಾಗ ಕರ್ಮದಿಂದ ಬದ್ಧನಾಗಿರುವನೆಂದು ತಿಳಿಯುತ್ತಿದೆ ಅದು ಮೇಲೆ ಎದ್ದು ಪುರುಷೋತ್ತಮನನ್ನು ಪೂಜಿಸಿ ಅವನನ್ನು ಹೊಂದಬಹುದು' ಎಂದು ಅವರು ಸಾರಿದ್ದಾರೆ ಆದುದರಿಂದಲೇ ಆಚಾರ್ಯರು ತಮ್ಮ ಭಾಷ್ಯದಲ್ಲಿ— ವ್ಯಾಸಸ್ಮೃತಿಯಲ್ಲಿ ಉದಾಹರಿಸಿದ್ದೇ ಸಾಂಖ್ಯವೆಂದು ಸ್ಪಷ್ಟವಾಗಿ ಹೇಳಿ (ಶುದ್ಧಾತ್ಮತತ್ವವಿಜ್ಞಾನ) **नेतरौ सांख्ययोगौ उपादेयत्वेन विवक्षितौ** ಬೇರೆ ಯಾವು ಗ್ರಹಣ ಯೋಗ್ಯವೆಂದು ವಿವಕ್ಷಿತವಾಗಿಲ್ಲವೆಂದು ಹೇಳುತ್ತಾರೆ. ಇವು ಎಲ್ಲಿಯೂ ( ಕಾಪಿಲಸಾಂಖ್ಯಪಾತಂಜಲಯೋಗ ) ಗ್ರಾಹ್ಯಗಳೆಂದು ಹೇಳಿಲ್ಲ. ಇದಕ್ಕೆ ವಿರುದ್ಧವಾಗಿ ಅವು (**अक्षपादकणादौ च सांख्ययोगौ च हैतुकाः । सर्ववेदविरुद्धं च** ಎಂದು ಪರಮಾತ್ಮನ ಅವತಾರನಾದ ಕಪಿಲನು ಹೇಳಿದನು) ವೇದವಿರುದ್ಧವಾದುವೆಂದು ನಿಂದಿಸಿದ್ದಾರೆ. ಹಾಗೆ ಪಂಚರಾತ್ರಾಗಮವನ್ನು ಸ್ತುತಿಸಿದ್ದಾರೆ ಯೋಗವೆಂದರೆ ಕರ್ಮಯೋಗವೆಂದು ತಿಳಿಯಬೇಕು. ಅದರಂತೆ ನ್ಯಾಯವೈಶೇಷಿಕಗಳನ್ನೂ ನಿಂದಿಸಿದ್ದಾರೆ. ಬ್ರಹ್ಮತರ್ಕವನ್ನೂ ಮೀಮಾಂಸೆಯನ್ನೂ ಸೇವಿಸಬೇಕೆಂದು ಹೇಳುತ್ತಾರೆ.

ನಿರೀಶ್ವರವಾದವನ್ನು ಪುರಸ್ಕರಿಸಿದ ಸಾಂಖ್ಯಯೋಗಗಳು ಬೇಡೆಂದು ತಾತ್ಪರ್ಯ. ಮೋಕ್ಷ ಸಾಧನೆಗಳಾದ ಶಾಸ್ತ್ರಗಳನ್ನೇ ಸ್ವೀಕರಿಸಬೇಕೆಂದು **कर्मबंधं प्रहास्यसि** ಎಂಬ ಭರವಸೆಯನ್ನು ಭಗವಂತನು ಕೊಡುತ್ತಾನೆ.

Geoffrey. A. Barborkaರವರು ತಮ್ಮ The Pearl of the Orient ದಲ್ಲಿ **सांख्य** ಮತ್ತು **योग**ಗಳ ವಿಷಯದಲ್ಲಿ ಹೀಗೆ ಬರೆಯುತ್ತಾರೆ. Right performance of action represents the view of the Yoga School,

renunciation of action represents the Sankhya School ಕರ್ಮವನ್ನು ಸರಿಯಾಗಿ ಆಚರಿಸುವದು ಯೋಗವು. ಕರ್ಮವನ್ನು ಬಿಟ್ಟುಬಿಡುವದು ಕರ್ಮ ಸನ್ಯಾಸವು ಸಾಂಖ್ಯವೆಂದು ಅವರ ಅಭಿಪ್ರಾಯ.*

ಗೀತಾಶಾಸ್ತ್ರಾರ್ಥ ವಿವೇಕದಲ್ಲಿ ಶ್ರೀ ಸಚ್ಚಿದಾನೇಂದ್ರ ಸರಸ್ವತಿ ಸ್ವಾಮಿಗಳು ಸಾಂಖ್ಯಯೋಗ ಪದಾರ್ಥವಿವೇಕವೆಂಬ ಎರಡು ಪ್ರಕರಣಗಳಲ್ಲಿ ಸಾಂಖ್ಯಯೋಗ ಪದಗಳನ್ನು ಗೀತೆಯಲ್ಲಿ ಯಾವ ಅರ್ಥದಲ್ಲಿ ಉಪಯೋಗಿಸಿದ್ದಾರೆಂಬುದನ್ನು ವಿವೇಚಿಸಿದ್ದಾರೆ. ಅವರೂ **एषा तेऽभिहिता** ಈ ಶ್ಲೋಕದಿಂದಲೇ ಪ್ರಾರಂಭಿಸಿದ್ದಾರೆ (೨–೩೯). ಇವೆರಡೂ ಪರಮಪುರುಷಾರ್ಥಕ್ಕೆ ಸಾಧನವೆಂಬ ಲೋಕದಲ್ಲಿ ಖ್ಯಾತಿಯನ್ನು ಪಡೆದಿವೆ ಶಿಷ್ಟರಾದ ಮನ್ವಾದಿಗಳು ಅಂಗೀಕರಿಸಿದ್ದಾರೆ. ಶ್ರುತಿಯು ಕೂಡ ನಾಮನಿರ್ದೇಶ ಮಾಡಿದೆ— **"तत्कारणं सांख्ययोगाभिपन्न ज्ञात्वा देवं मुच्यते सर्वपाशैः (श्वे. ६–१३) ।** ಇವರ ನಿರ್ಣಯವೆಂದು **सांख्य** ಶಬ್ದವು ಇಲ್ಲಿ ಎಲ್ಲ ಕಡೆಗೆ ಶ್ರುತಿಯಿಂದ ಹುಟ್ಟಿದ ಜ್ಞಾನವೆಂದು ಅರ್ಥವುಳ್ಳದ್ದು. **सांख्य** ಶಬ್ದವು (೨–೩೯, ೩–೩, ೫–೪, ೫–೫, ೧೩–೨೪, ೧೮–೩೩) ಇಷ್ಟು ಸ್ಥಳಗಳಲ್ಲಿ ದೊರೆಯುತ್ತಿದೆ ೨–೩೯ ಈ ಶ್ಲೋಕವು ಆತ್ಮತತ್ವನಿರೂಪಣ ಪ್ರಕರಣದಲ್ಲಿ ಹೇಳಲಾಗಿದೆ. ಇಲ್ಲಿ ಸಾಂಖ್ಯರು ಒಪ್ಪಿದ ತತ್ವವು ನಿರೂಪಿತವಾಗಿಲ್ಲ ಸಾಂಖ್ಯರು ಒಪ್ಪಿದ ಪುರುಷನ ಧರ್ಮಗಳು ಇಲ್ಲಿ ಉಕ್ತವಾಗಿಲ್ಲ ಸಾಂಖ್ಯರು ಪುರುಷನನ್ನು ಅಸದ್ರೂಪ ಜಗತ್ತನ್ನು ವ್ಯಾಪಿಸಿದ್ದಾನೆಂದು ಒಪ್ಪುವದಿಲ್ಲ. ಇನ್ನೂ ಅನೇಕ ಶ್ರುತಿ

---

* ಆದರೆ ಮೋದಿಯವರು ತಮ್ಮ ಭಗವದ್ಗೀತೆಯ ಮೇಲೆ ಟಿಪ್ಪಣಿಗಳಲ್ಲಿ— "Moreover we believe that nothing is said in B G. II – ( 11–38 ) about renunciation of all actions and that even if Sankhya can be proved to mean **सन्यास** of all actions in B. G III and XVIII and also II – 40–72 we are not bound to accept that sense unless the view in V 11–38 can be shown to refer to the Renunciation of all action There fore we hold that **सांख्य** in Adh. II 39 does not mean renunciation of all actions.

**सांख्य** will be the stand point in philosophy or the stand point in knowledge; Sankhya is derived from **सम् + ख्या** to knwo well or understand. Thus **सांख्य** is knowledge and **योग** is practice.

ಗಳಿಂದ ಶ್ರುತಿಬುದ್ಧಿಯೇ ಸಾಂಖ್ಯಬುದ್ಧಿಯೆಂದು ನಿರ್ಣೀತವಾಗುತ್ತದೆ ಜ್ಞಾನ ವೆಂದರೆ ಆತ್ಮ ಅನಾತ್ಮವಿವೇಕ ಲಕ್ಷಣವಾದುದು. ಇದರಿಂದ ಬ್ರಾಹ್ಮೀಸ್ಥಿತಿಯು ದೊರೆಯುವದೆಂದು ಹೇಳಿದ್ದರಿಂದ ಅದು ಶ್ರೌತಜ್ಞಾನವೇ ಇರಬೇಕೆಂದು ನಿಶ್ಚಿತವಾ ಗುತ್ತದೆ ಸಾಂಖ್ಯವೆಂದರೆ ಸನ್ಯಾಸವೆಂದೂ **संन्यासः कर्मयोगश्च** ವೊದಲಾದವು ಗಳಿಂದ ಗೊತ್ತಾಗುತ್ತದೆ ಇದರಿಂದ ಇದು ಶ್ರೌತಸಾಂಖ್ಯಪರವೆಂದು ತಿಳಿಯುತ್ತಿವೆ. ಆದರೆ ಸಾಂಖ್ಯರಿಗೆ ಸಮ್ಮತವಾದ ಗುಣತ್ರಯಗಳಿಗೆ ಇಲ್ಲಿ ಸಮ್ಮತಿಯೂ ಉಂಟು. ಇದು ಅಲ್ಲದೆ ಸಾಂಖ್ಯರ ಇನ್ನೂ ಅನೇಕ ತತ್ವಗಳನ್ನು ಇಲ್ಲಿ ಒಪ್ಪಿಕೊಳ್ಳಲಾಗಿದೆ.

ಇನ್ನು ಯೋಗಪದಾರ್ಥದ ವಿಚಾರ— ಯೋಗ ಶಬ್ದವು ಹಿಂದೆ ಒಂದ. ಶಬ್ದ ತೆಗೆದುಕೊಂಡು ಉಪಯೋಗಿಸಲ್ಪಡುತ್ತದೆ. **कर्मयोग, ज्ञानयोग** ವೊದ ಲಾದವು. ಈ ಯೋಗ ಶಬ್ದಕ್ಕೆ ಒಂದೇ ಅರ್ಥವೇ ? ಬೇರೆ ಬೇರೆ ಅರ್ಥಗಳಿವೆಯೇ ? ಇದು ಸಂಶಯು. ಮುಖ್ಯವಾಗಿ ಜ್ಞಾನನಿಷ್ಠವಾದುದೇ ಯೋಗಶಬ್ದಾರ್ಥವು ಶಂಕರಾಚಾರ್ಯರ ಅಭಿಪ್ರಾಯದಂತೆ ಆತ್ಮವಿಷಯಕವಾದ ಸರಿಯಾದ ಜ್ಞಾನವೇ ಮೋಕ್ಷಕ್ಕೆ ಕಾರಣವಾಗುತ್ತದೆ. ಆದುದರಿಂದ ಯೋಗವು ಜ್ಞಾನನಿಷ್ಠವಾದುದು ಎಂದು ಆಚಾರ್ಯರಿಗೆ ಸಮ್ಮತ.

ಆದರೆ **भगवतो योगो नाम ऐश्वर्यम् – पश्य मे योगमैश्वरम् ।** ಕೆಲವು ಕಡೆಗೆ ಉಪಾಸನೆಯೇ ಯೋಗವೆನಿಸುತ್ತದೆ. ಆದುದರಿಂದ ಅರ್ಥವನ್ನು ಪ್ರಕರಣದಿಂದ ನಿರ್ಧರಿಸಬೇಕು. ಇದರಿಂದ ಆಚಾರ್ಯರ ಮತದಲ್ಲಿ **ಓಂ**ಕಾರದ್ವಾರ ದಿಂದ ಭಗವಂತನನ್ನು ಉಪಾಸನೆ ಮಾಡುವದು ಸಹ ಯೋಗವೆನಿಸುತ್ತದೆ ಅವರು ಇನ್ನೂ ಅನೇಕ ಅರ್ಥಗಳನ್ನು ನಿರೂಪಿಸುತ್ತಾರೆ.

**नेहाभिक्रमनाशोऽस्ति प्रत्यवायो न विद्यते ।**
**स्वल्पमप्यस्य धर्मस्य त्रायते महतो भयात् ॥ ४० ॥**

ಈ ಕರ್ಮಯೋಗದಲ್ಲಿ ಕೇವಲ ಪ್ರಾರಂಭ ಮಾಡಿಬಿಟ್ಟರೂ ನಿಷ್ಫಲತ್ವವು ಇಲ್ಲ; ಪಾಪವಿಲ್ಲ. ಈ ವಿಷ್ಣುಪೂಜಾತ್ಮಕ ಕರ್ಮಯೋಗವನ್ನು ಸ್ವಲ್ಪ ಆಚರಿಸಿ ದರೂ ಅದು ದೊಡ್ಡ ಸಂಸಾರ ಭಯದಿಂದ ರಕ್ಷಿಸುತ್ತದೆ.

**ವಿಶೇಷ ಟಿಪ್ಪಣಿಗಳು :**

ಸತ್ಯಧ್ಯಾನರ ತಾತ್ಪರ್ಯ ಸರ್ವಸಂಗ್ರಾಹಕವಾಗಿದೆ. "ನಿಷ್ಕಾಮನಾಗಿ (ಅಲ್ಪ ಫಲಾಪೇಕ್ಷಾರಹಿತನಾಗಿ) ವಿಷ್ಣುಪೂಜಾತ್ಮಕವಾದ ಕರ್ಮವನ್ನು (ಯೋಗವನ್ನು) ಪ್ರಾರಂಭಿಸಿ ಮುಗಿಸುವದಕ್ಕೆ ಸಾಧ್ಯವಿಲ್ಲದೆ ನಿಂತು ಹೋದರೂ ಮಾಡಿದಷ್ಟು ಕರ್ಮವು

(ಧರ್ಮವು) ವ್ಯರ್ಥವಾಗುವದಿಲ್ಲ ಈ ಸ್ವಲ್ಪ ಕರ್ಮವಾದರೂ ಸಂಸಾರ ಭಯದಿಂದ ರಕ್ಷಿಸುತ್ತದೆ ಕ್ಷುದ್ರ ದೇವತೆಯನ್ನು ಉದ್ದೇಶಿಸಿ ಮಾಡಿದ ಕರ್ಮಗಳಿಗೆ ಮಧ್ಯದಲ್ಲಿ ವಿಘ್ನಗಳುಂಟಾಗಿ ಅವು ಪೂರ್ಣವಾಗದಿದ್ದರೆ ಹೇಗೆ ಪ್ರತ್ಯವಾಯವು (ಪಾಪವು) ಉಂಟಾಗುತ್ತದೆಯೋ ಹಾಗೆ ವಿಷ್ಣುಪೂಜಾತ್ಮಕವಾದ ನಿಷ್ಕಾಮಕರ್ಮಗಳು ಮಧ್ಯದಲ್ಲಿ ವಿಘ್ನವುಂಟಾಗಿ ಪೂರ್ಣವಾಗದೆ ಹೋದರೂ ಇದರಿಂದ ಪಾಪವುಂಟಾಗುವದಿಲ್ಲ. ಆದುದರಿಂದ ವಿಷ್ಣುಪೂಜಾತ್ಮಕವಾದ, ಅಪರೋಕ್ಷ ಜ್ಞಾನಕ್ಕೆ ಸಾಧನವಾದ ಕರ್ಮ (ಯೋಗ) ಗಳನ್ನು ಮಾಡಿ ಸಂಸಾರದಿಂದ ಮುಕ್ತನಾಗು"

ಅರ್ಜುನನಿಗೆ ಯೋಗವನ್ನು ಕೇಳೆಂದು ಹೇಳಿ ಈಗ ಆ ಕರ್ಮಯೋಗದ ವೈಶಿಷ್ಟ್ಯವನ್ನು ನಿರೂಪಿಸುತ್ತಾನೆ ಮೊದಲು ಕರ್ಮಯೋಗದಲ್ಲಿ ಅಡಕವಾದ ವಸ್ತುಗಳನ್ನು ತಿಳಿಯಿರಿ ಮೊಲಿನದಾಗಿ ೧) ಅದು ಆತ್ಮಾರ್ಪಣ ತತ್ವದಮೇಲೆ ನಿಂತಿದೆ ೨) ಭಗವಂತನಲ್ಲಿ ಪರಮವಿಶ್ವಾಸ ಅವನ ಸರ್ವೋತ್ತಮತ್ವದಲ್ಲಿ ದೀಕ್ಷೆ, ಜೀವನ ಪರಾಧೀನತೆಯನ್ನು ಒಪ್ಪಿಕೊಳ್ಳುವದು,— ಇವು ಅದರಲ್ಲಿಯ ಮುಖ್ಯ ಅಂಶಗಳು ಮಧ್ವಾಚಾರ್ಯರು ತಮ್ಮ ಗೀತಾತಾತ್ಪರ್ಯದಲ್ಲಿ ಇದು ಮುಖ್ಯವಾದ ಭಾಗವತಧರ್ಮವೆಂದು ಹೇಳುತ್ತಾರೆ ಸ್ವವರ್ಣಾಶ್ರಮಕ್ಕೆ ಉಚಿತವಾದ ಕರ್ಮವನ್ನೇ ವಿಷ್ಣುಪೂಜೆಯೆಂದು ಮಾಡುವರು. ಇದು ಕೃತಯುಗದ ಧರ್ಮವು, ಮತ್ತು ವೇದಗಳಿಗೆ ಸಮ್ಮತವಾದ ಪಾಂಚರಾತ್ರಧರ್ಮವು ಶ್ರೀಹರಿಯ ಪ್ರೀತಿಯು ಹೊರತು ಬೇರೆ ಉದ್ದೇಶದಿಂದ ಇತರರಿಗೆ ನೀರಿನ ಕಣವನ್ನಾಗಲಿ ಅಕ್ಕಿಕಾಳನ್ನಾಗಲಿ ಕೊಡಕೂಡದು ಫಲೇಚ್ಛೆಯನ್ನು ಬಿಟ್ಟು ಭಗವಂತನಲ್ಲಿ ಭಕ್ತಿಯನ್ನು ಮಾಡಬೇಕು **(तत्प्रीत्यर्थं विनाऽन्यस्मै नोदबिंदुं न तंडुलं। दद्यान्निराशीश्च सदाभवेद्भक्तश्च केशवे** ಗೀತಾತಾತ್ಪರ್ಯ) ಯಾರು ಹೀಗೆ ಭಗವಂತನಿಗೆ ವಿಶೇಷವಾಗಿ ಭಕ್ತಿಯನ್ನು ತೋರಿಸುತ್ತಾರೋ ಅವರೇ ಮುಕ್ತರಾಗುತ್ತಾರೆ. ಇದೇ ಭಾಗವತ ಧರ್ಮವು

ತ್ರೈವಿದ್ಯ ಧರ್ಮವು ಬೇರೆ; ಮೂರು ವೇದಗಳಲ್ಲಿ ಆಪಾತತಃ ತೋರುವ ಧರ್ಮಗಳನ್ನು— ಅನೇಕ ದೇವತೆಗಳನ್ನು ಪೂಜಿಸುವದು, ಯಾಗ ಮೊದಲಾದವುಗಳನ್ನು ಮಾಡಿ ಕೊನೆಗೆ ಶ್ರೀಕೃಷ್ಣನಿಗೇ ಸಮರ್ಪಿಸುತ್ತಾನೆ. **(त्रैविद्या मां सोमपा पूतपापा)** ಸ್ವರ್ಗಕ್ಕೆ ಹೋಗಿ ಮತ್ತೆ ಭೂಮಿಗೆ ಬರುತ್ತಾನೆ. ಮತ್ತೆ ಸ್ವರ್ಗಕ್ಕೆ ಹೋಗುತ್ತಾನೆ. ಮುಕ್ತಿಯಿಲ್ಲ ಇದು ಮೇಲೆ ಹೇಳಿದ ಭಾಗವತ ಧರ್ಮದಿಂದ ಬೇರೆಯಾದುದು

ಹೀಗೆ ಕೃಷಿ ವ್ಯಾಪಾರ ಮೊದಲಾದ ಲೌಕಿಕ ಕರ್ಮಗಳಲ್ಲಿ ಯಜ್ಞಯಾಗ

ಮೊದಲಾದ ವೈದಿಕ ಕರ್ಮಗಳಲ್ಲಿ ಅವುಗಳನ್ನು ಅರ್ಧಕ್ಕೆ ನಿಲ್ಲಿಸಿದರೆ ನಮಗೆ ಫಲ ದೊರೆಯುವದಿಲ್ಲ, ಇಷ್ಟೆ ಅಲ್ಲ; ಆದರೆ ಅದರಿಂದ ವಿಶೇಷವಾದ ಹಾನಿ ಪಾಪಗಳೂ ಬರುತ್ತವೆ ಆದರೆ ಈ ಕರ್ಮಯೋಗದಲ್ಲಿ ಮಾತ್ರ ಆಚಾರ್ಯರು ಹೇಳುವಂತೆ **प्रारंभमात्रमिच्छा वा विष्णुधर्मे न निष्फला** ವಿಷ್ಣುವಿನ ಉದ್ದೇಶವಾಗಿ ಕರ್ಮದ ಪ್ರಾರಂಭ ಮಾಡಿದರೂ ಅದರ ಇಚ್ಛೆಯನ್ನು ಮಾಡಿದರೂ ನಿಷ್ಫಲ ವಾಗುವದಿಲ್ಲ.

ಪೇಜಾವರ ಶ್ರೀಗಳವರು ಗೀತಾಸಾರೋದ್ಧಾರದಲ್ಲಿ ಹೇಳುವಂತೆ "ಎಷ್ಟು ಕರ್ತವ್ಯ ಮಾಡಿದ್ದೇವೆ ಎಂಬುದಕ್ಕಿಂತ ಹೇಗೆ ಮಾಡಿದ್ದೇವೆಂಬುದೇ ಮುಖ್ಯ. ಸುದಾಮನು ನೀಡಿದ ಹಿಡಿ ಅವಲಕ್ಕಿಗೆ ಭಗವಂತನು ಎಂತಹ ಪ್ರತಿಫಲವನ್ನು ನೀಡಿರುವನು !" *

ಲೋಕಮಾನ್ಯ ಟಿಳಕರು **प्रत्यवायो न विद्यते** ಎಂಬುದಕ್ಕೆ "(ಮುಂದೆ) ವಿಘ್ನಗಳೂ ಬರುವದಿಲ್ಲ" ಎಂದು ಅರ್ಥಮಾಡಿದ್ದಾರೆ. ಇಡೀ ಶ್ಲೋಕದ ತಾತ್ಪರ್ಯವನ್ನು ಹೀಗೆ ಹೇಳುತ್ತಾರೆ. "ಕರ್ಮಯೋಗ ಮಾರ್ಗದಲ್ಲಿ ಒಂದು ಜನ್ಮದಲ್ಲಿ ಸಿದ್ಧಿಯು ಸಿಗದಿದ್ದರೂ ಮಾಡಿದ ಕರ್ಮವು ವ್ಯರ್ಥವಾಗುವದಿಲ್ಲ; ಅದು ಮುಂದಿನ ಜನ್ಮದಲ್ಲಿ ಉಪಯೋಗ ಬೀಳುತ್ತದೆ, ಮತ್ತು ಜನ್ಮ ಜನ್ಮಗಳಲ್ಲಿ ಹೀಗೆ ಕೂಡಿ ಬೀಳುತ್ತಾ ಕೊನೆಗೆ ಅದು ಸದ್ಗತಿಯನ್ನು ಕೊಡುತ್ತದೆ." ಆದರೆ ಇದು ಕರ್ಮ ಸಾಮಾನ್ಯದ ರೀತಿಯೇ ಹೀಗೆ ಅದೆ. ಇದರಿಂದ ಕರ್ಮಯೋಗದ ವೈಶಿಷ್ಟ್ಯ ವೇನೂ ಗೊತ್ತಾಗುವದಿಲ್ಲ. ಭಗವಂತನು ಹೇಳಿದಂತೆ 'ಮಧ್ಯದಲ್ಲಿ ಬಿಟ್ಟರೆ ಪಾಪ ವಿಲ್ಲ; ಮತ್ತು ಮಾಡಿದ ಅಲ್ಪಫಲಕ್ಕೆ ದೊಡ್ಡದಾದ ಫಲ. ಪರಿಮಾಣದಿಂದ ಅಲ್ಲ, ಉದ್ದೇಶದಿಂದ ಕರ್ಮವನ್ನು ಕರ್ಮಯೋಗದಲ್ಲಿ ಅಳೆಯುತ್ತಾರೆ.

**न अभिक्रमनाशः** — ಬರೀ ಪ್ರಾರಂಭವೇ ಫಲದಾಯಿಯಾಗಿದೆ. ಪ್ರಾರಂಭಕ್ಕೆ ಫಲನಾಶವಿಲ್ಲ) ಅಭಿಕ್ರಮ ಎಂದರೆ ಪ್ರಾರಂಭ. ಆದರೆ ನೀಲಕಂಠನು— **कर्मारंभः कर्मैव वा** ಕೆಲಸದ ಪ್ರಾರಂಭ ಅಥವಾ ಕೆಲಸ. ಒಟ್ಟಾರೆ ಇವನ ವಾದವೂ ಟಿಳಕರಂತೆ ಸಾಮಾನ್ಯ ಕರ್ಮದಂತೆ ಇರುವದರಿಂದ ಕರ್ಮಯೋಗದ ವೈಶಿಷ್ಟ್ಯವು ಆದರಿಂದ ಗೊತ್ತಾಗುವದಿಲ್ಲ. ಮಧುಸೂದನ ಸರಸ್ವತಿಯವರು **अभिक्रम** ವೆಂದರೆ ಕರ್ಮದ ಫಲವೆಂದು ಹೇಳುತ್ತಾರೆ. ಮತ್ತು ಈ ಶ್ಲೋಕವನ್ನು ಒಂದು ವಿಸ್ತಾರ ವಾದ ಸಂಶಯಕ್ಕೆ ಉತ್ತರವಾಗಿ ಬಳಸುತ್ತಾರೆ. ಪ್ರಶ್ನೆ ಈ ರೀತಿಯಾಗಿದೆ—

* ಆದರೆ ಅವರು ಒಂದು ಕಡೆಗೂ ಭಾಗವತಧರ್ಮದ ನಾಮನಿರ್ದೇಶವನ್ನು ಮಾಡಿಲ್ಲ.

" ಶ್ರುತಿಯಲ್ಲಿ ಯಜ್ಞಾದಾನ ತಪಸ್ಸುಗಳು ಪಾಪನಾಶಕವಾದುದರಿಂದ ಎಲ್ಲ ಕರ್ಮಗಳು ಅಂತಃಕರಣಶುದ್ಧಿದ್ವಾರದಿಂದ ಜ್ಞಾನವನ್ನು ಹುಟ್ಟಿಸುತ್ತವೆ. ಜ್ಞಾನದೊರಕಿಸುವ ಇಚ್ಛೆಯೂ ಕಾಮ್ಯವಾದುದರಿಂದ ಅದರ ಫಲವು ಉಳಿದ ಫಲಗಳಂತೆ ನಾಶಹೊಂದುತ್ತದೆ ಹಾಗಾದರೆ ಕರ್ಮ ಮಾಡುವದರಿಂದ ಏನು ಪ್ರಯೋಜನ ? ಇದು ಒಂದು; ಇನ್ನು ಎರಡನೆಯದು ಎಲ್ಲ ಕರ್ಮಗಳು ಹೀಗೆ ಕಾಮ್ಯವಾದುದರಿಂದ ಕಾಮ್ಯಕರ್ಮಗಳನ್ನು ಸಮಾಪ್ತಗೊಳಿಸದಿದ್ದರೆ ಅಥವಾ ಯಥಾವತ್ತಾಗಿ ಮಾಡದಿದ್ದರೆ ನಿಷ್ಫಲವಾಗುವದರಿಂದ ಕರ್ಮಯೋಗದಲ್ಲಿ ತೊಡಗುವದರಿಂದಲೂ ಪ್ರಯತ್ನವು ವ್ಯರ್ಥವಾಗುತ್ತದೆ ಯಾಕೆಂದರೆ ಅಲ್ಪವಾದ ಆಯುಷ್ಯವುಳ್ಳ ನಾವು ಯಾವ ಕರ್ಮವನ್ನೂ ಪೂರ್ತಿಯಾಗಿ ಮಾಡಲಾರೆವು ಇದಕ್ಕೆ ಭಗವಂತನು ಉತ್ತರ ಕೊಡುತ್ತಾನೆ — ಕರ್ಮಯೋಗದಲ್ಲಿ ಫಲಕ್ಕೆ ನಾಶವಿಲ್ಲ ಕರ್ಮಯೋಗದ ಪರಿಣಾಮವು ಅಂತಃಕರಣಶುದ್ಧಿಯು, ಅದರಿಂದ ಪಾಪನಾಶವು ಅಂತಃಕರಣಶುದ್ಧಿಯೆಂದರೆ ಪಾಪದ ನಾಶವು, (**शुद्धेः पापक्षयरूपत्वेन**). ಇಲ್ಲಿ ಲೋಕಗಳ ಸಂಪಾದನೆ ಇಲ್ಲದಿರುವದರಿಂದ ನಾಶಕ್ಕೂ ಅವಕಾಶವಿಲ್ಲ. ಕರ್ಮಯೋಗದ ಇನ್ನೊಂದು ಫಲವೆಂದರೆ ಜ್ಞಾನವು. ಅದರ ದ್ವಾರದಿಂದ ಅಜ್ಞಾನ ನಾಶವು. (**वेदनस्य अव्यवधानेन अज्ञाननिवृत्तिफलजनकस्य**) ಈ ಜ್ಞಾನವು ಅಜ್ಞಾನವನ್ನು ನಾಶ ಮಾಡದೇ ತಾನು ನಾಶ ಹೊಂದುವ ಯೋಗವಿಲ್ಲ ಹೀಗೆ ಒಮ್ಮೆ ಅಜ್ಞಾನ ನಾಶವಾದರೆ ಅದು ಕಡೆತನಕ ಉಳಿಯುವದರಿಂದ ಈ ಕರ್ಮಯೋಗದ ಫಲವು ನಾಶವಾಗುವ ಸಂಭವವಿಲ್ಲ. (**फलं अजनयित्वा नाशासंभवात्** ). ಆದುದರಿಂದ ಕರ್ಮ ಪೂರ್ಣವಾಗದಿದ್ದರೆ ಅಥವಾ ವಿಧಾನೋಕ್ತವಾಗಿ ಜರುಗದಿದ್ದರೆ ಪಾಪ ಬರುತ್ತದೆಂಬ ಭೀತಿಯಿಲ್ಲ. *

---

* R B ಲಾಲರು— ತಮ್ಮ Gita and Modern Scienceದಲ್ಲಿ A S. P. ಅಯ್ಯರರನ್ನು ಉದಾಹರಿಸಿದ್ದಾರೆ. No effort is ever lost (**नेहाभिक्रमनाशोऽस्ति**) ಇದರ ಮೇಲೆ theory of least action (ಅತ್ಯಲ್ಪ ಕರ್ಮವಾದ)ವನ್ನು ಹೇಳಿದ್ದಾರೆ "ಗೀತೆಯು ಈ ಅತ್ಯಲ್ಪ ಕರ್ಮವಾದವನ್ನು ಹೇಳುತ್ತದೆ. ಅರ್ಥವಿಲ್ಲದ ಸಂಸಾರಿಕರು ಆಚರಿಸುವ ಸಾವಿರಾರು ಕರ್ಮಗಳನ್ನು ಸ್ವಾರ್ಥದ ಆಕ್ರಮಣಕ್ಕೆ, ಕೀರ್ತಿಗೆ, ಲಾಭಕ್ಕೆ ಮಾತ್ರ ಕಾರಕವಾಗುವದರಿಂದ ಅವುಗಳನ್ನು ಬಿಡಬೇಕು ಆದರೆ ಲೋಕಸಂಗ್ರಹಾರ್ಥವಾಗಿ (ಅದರಲ್ಲಿ ಶರೀರ ಯಾತ್ರೆಯೂ ಇರುತ್ತದೆ ) ಕರ್ಮ ಮಾಡುವದನ್ನು ಬಿಡಬಾರದು. ನಿಷ್ಕಾಮದಿಂದ ಎಲ್ಲವನ್ನೂ ಭಗವಂತನಿಗೆ ಅರ್ಪಿಸಿ ಕರ್ಮ ಮಾಡುವದೇ ಅಭಿಕ್ರಮ ನಾಶವಿಲ್ಲದ್ದು. ಇದೇ **कर्मसु कौशलं ।** ಇದೇ ಅತ್ಯಲ್ಪ ಕರ್ಮ ವಾದವು.

ಮಧುಸೂದನ ಸರಸ್ವತಿಯವರು ಗೀತೆಯ ಪ್ರಸಕ್ತ ವಿಷಯ ಬಿಟ್ಟು ಬಹು ದೂರ ಹೋದಂತೆ ತೋರುತ್ತದೆ. ಕರ್ಮಯೋಗದ ಫಲವು ಪಾಪನಾಶವಾದರೆ ಅದು ಕೊನೆಯವರೆಗೂ ಉಳಿಯುತ್ತದೆ ಯಾಕೆಂದರೆ ನಾಶವು ಅಥವಾ ಧ್ವಂಸವು ನಿತ್ಯವಾದುದು ಇನ್ನು ಕರ್ಮಯೋಗದ ಫಲವು ಗೊತ್ತಿರದಿದ್ದರೆ ಪ್ರತಿವಾದಿಗೆ ಫಲವನ್ನು ತಿಳಿಸಬೇಕಾಗುತ್ತದೆ ಆಗ **अभिक्रमनाश.** ಇದು ಕಬ್ಬಿಣದ ಕಡಲೆ ಯಾಗುತ್ತದೆ ನಾಶವೆಂದರೆ ಫಲ ಹುಟ್ಟದೇ ಇರುವದೆಂದೇ ಉಳಿದ ವ್ಯಾಖ್ಯಾನ ಕಾರರು ಮಾಡಿದ್ದಾರೆ; ಹುಟ್ಟಿ ಫಲವು ನಾಶ ಹೊಂದುವದೆಂದು ಅಲ್ಲ ಗೀತೆಯಲ್ಲಿ ಹೇಳಿದ ಮಾತೆಂದರೆ ಕರ್ಮಯೋಗದಲ್ಲಿ ಪ್ರತ್ಯವಾಯ ಎಂದರೆ ಪಾಪವು ಇಲ್ಲ.

ಕರ್ಮಯೋಗವು ಅದರಿಂದ ಅಂತಃಕರಣಶುದ್ಧಿಯನ್ನು ಬಯಸಿದರೂ ಕಾಮ್ಯ ಕರ್ಮವಲ್ಲ; ಎರಡನೇಯದಾಗಿ ಕರ್ಮಯೋಗವು ಭಗವಂತನನ್ನು ಕಡೆಗಣಿಸು ವಂತಿಲ್ಲ. ಕರ್ಮಯೋಗವು ಭಗವಂತನ ಪೂಜಾರೂಪವಾಗಿರುವದು ಅದಕ್ಕೆ ಮಧ್ವಾಚಾರ್ಯರು ಕರ್ಮಯೋಗಕ್ಕೆ ವೈಷ್ಣವ ಧರ್ಮವೆಂದು ಕರೆದಿದ್ದಾರೆ.

**नेहाभिक्रयनाशः** ವನ್ನು ಹೀಗೆ ಬಿಡಿಸಿದ್ದಾರೆ, **न ईहाभिक्रामनाशः** ಇಚ್ಛೆ ಅಥವಾ ಪ್ರಾರಂಭವೂ ವ್ಯರ್ಥವಾಗುವದಿಲ್ಲ. (**आरम्भमात्रं इच्छावा विष्णु धर्मे न निष्फला**). ಬರೀ ಪ್ರಾರಂಭಿಸುವದು ಅಥವಾ ಇಚ್ಛೆಯು ವಿಷ್ಣು ಧರ್ಮ ದಲ್ಲಿ ವ್ಯರ್ಥವಾಗುವದಿಲ್ಲ,

**अभिक्रम** ಹತ್ತುವದು; ವಿಷ್ಣುಧರ್ಮದಲ್ಲಿ ಮೇಲೆ ಹತ್ತುವದಕ್ಕೆ ನಾಶ ಎಂದರೆ ಪತನವಿಲ್ಲ.

**अभिक्रम** ಎಂದರೆ ಮುಂದೆ ಹೆಜ್ಜೆ ಇಡುವದು, ಕರ್ಮಯೋಗಿಯು ಧೀರ ಸೈನಿಕನಂತೆ ಮುಂದೆ ಹೆಜ್ಜೆ ಇಟ್ಟವನು ಹಿಂದಿರುಗುವದಿಲ್ಲ.

**अभिक्रम** ಎಂದರೆ ಯುದ್ಧವೆಂದೂ ಅರ್ಥವಾಗುತ್ತದೆ ಕರ್ಮಯೋಗಿಯು ತನಗೆ ಯೋಗ್ಯವಾದ ಕರ್ತವ್ಯವೆಂದು ಯುದ್ಧವನ್ನೂ ಕೈಕೊಳ್ಳಬಹುದು. ಅದೂ ವಿಷ್ಣುಧರ್ಮವಾಗುತ್ತದೆ.

**धर्मस्य स्वल्पं महतः भायात् त्रायते** ಸ್ವಲ್ಪ ಕರ್ಮಯೋಗವು ಯಮನ ದೊಡ್ಡ ಭಯದಿಂದ ನಮ್ಮನ್ನು ಉಳಿಸುತ್ತದೆ, (ಅಜಾಮಿಳನು ನಾರಾಯಣ ನೆಂದು ಉಚ್ಚರಿಸಿದ್ದಕ್ಕೆ ಯಮನ ದೂತರಿಂದ ರಕ್ಷಿಸಲ್ಪಟ್ಟ).*

---

* "ಇಲ್ಲಿ ಧರ್ಮವೆಂದರೆ ಬುದ್ಧಿಯೋಗವು" ಎಂದು ಬೋಧಿರಾಜರು ಹೇಳುತ್ತಾರೆ.

ರಾಮನುಜಾಚಾರ್ಯರು ಕರ್ಮಯೋಗದ ವೈಶಿಷ್ಟ್ಯವನ್ನು ವರ್ಣಿಸುವಾಗ ಅನ್ಯಕರ್ಮಗಳ ಸ್ವರೂಪವನ್ನು ವರ್ಣಿಸುತ್ತಾರೆ. **अन्यानिह्विवैदिकानि लौकिकानि साधनानिविच्छिन्नानि न हि फलप्रसवाय भवंति प्रत्यवायायच भवंति** ಉಳಿದ ಲೌಕಿಕ ವೈದಿಕ ಕರ್ಮಗಳು ಮಧ್ಯಮಧ್ಯದಲ್ಲಿ ನಿಂತರೆ ಫಲವನ್ನು ಕೊಡುವದಿಲ್ಲ ವಿಪರೀತ ಫಲವನ್ನು ಕೊಡುತ್ತವೆ ವರದದೇಶಿಕಾಚಾರ್ಯರಂಗ ಪ್ರೀಯರು ಇದಕ್ಕೆ ರಾಮಾಯಣದ ಒಂದು ಪ್ರಸಂಗವನ್ನು ಉದಾಹರಿಸುತ್ತ ಇದನ್ನು ದೃಢೀಕರಿಸುತ್ತಾರೆ :—

ದಶರಥನು ಕಾಮ್ಯಕರ್ಮವಾದ ಪುತ್ರಕಾಮೇಷ್ಟಿಯ ವಿಷಯವಾಗಿ ಹೀಗೆ ಹೇಳುತ್ತಾನೆ.

**छिद्रं हिमृगयंतेत्र विद्वांसोब्रह्मराक्षसाः ।**
**निहतस्य च यज्ञस्य सद्यः कर्ताविनश्यति ॥**

**तद्यथाविधिपूर्वंमे क्रतुरेषसमाप्यते ।**
**तथाविधानं क्रियतां . . . . . . . ॥**

" ತಿಳುಕೊಂಡಂಥ ಬ್ರಹ್ಮ ರಾಕ್ಷಸರು ಯಜ್ಞದ ಮಧ್ಯದಲ್ಲಿ ಏನಾದರೂ ದೋಷ ವನ್ನು ಹುಡುಕುತ್ತಿರುತ್ತಾರೆ. ಮಧ್ಯದಲ್ಲಿ ಯಾವದಾದರೂ ಕಾರಣದಿಂದ ಹಾಳಾದರೆ ಯಜಮಾನನು ಒಡನೆಯೇ ಸಾಯುತ್ತಾನೆ. ಈ ಯಜ್ಞವು ವಿಧಿಪೂರ್ವಕವಾಗಿ ಸಮಾಪ್ತಿಯನ್ನು ಹೊಂದುವಂತೆ ನೀವು ಪ್ರಯತ್ನಮಾಡಿರಿ. " ಇಂಥ ವಿಪತ್ತುಗಳು ಕಾಮ್ಯಕರ್ಮಗಳಲ್ಲಿ ಉಂಟು. *

ಆದರೆ ಭಾಗವತದಲ್ಲಿ **कर्मयोग** ವಿಷಯದಲ್ಲಿ ಒಂದು ಹೇಳಿಕೆ ಇದೆ :—

**त्यत्वा स्वधर्मं चरणांबुजं हरे. ।**
**भजन् अपक्वोऽथ पतेत्ततोयदि ॥**

---

* ಮಾಂಡೂಕ್ಯೋಪನಿಷತ್ತಿನಲ್ಲಿ (೧-೨-೩).

೧) ಅಗ್ನಿಹೋತ್ರದ ತರುವಾಯ ದರ್ಶಪೂರ್ಣಮಾಸಗಳನ್ನು ಆಚರಿಸದಿದ್ದರೆ ಅದರಂತೆ ಚಾತುರ್ಮಾಸ್ಯ ಮತ್ತು ಅಗ್ರಾಯಣಗಳನ್ನೂ ಮಾಡದಿದ್ದರೆ.

೨) ಅತಿಥಿಗಳು ಬಾರದಿದ್ದರೆ.

೩) ವೈಶ್ವದೇವನನ್ನು ಮಾಡದಿದ್ದರೆ.

೪) ವಿಧಾನೋಕ್ತಮಾಡದಿದ್ದರೆ ಅವನ ಸಪ್ತಲೋಕಗಳು ನಾಶವಾಗುತ್ತವೆ.

**यत्रक्ववाभद्रमभूष्य किं**
**को वार्थ आप्तोऽभजतां स्वधर्मतः ॥**

೧–೫–೧೭ (ಭಾಗವತ).

ವೇದವ್ಯಾಸರನ್ನು ಕುರಿತು ನಾರದರು ಈ ಮಾತನ್ನು ಹೇಳಿದ್ದಾರೆ— ನಿವೃತ್ತಿ ಧರ್ಮೋಪದೇಶವನ್ನು ಮಾಡುವ ಗ್ರಂಥವನ್ನು ರಚಿಸಲಿಕ್ಕೆ ಅವರಿಗೆ ನಾರದರು ಕೇಳಿ ಕೊಳ್ಳುತ್ತಾರೆ. ಭಾಗವತದಲ್ಲಿ ನಿವೃತ್ತಿಧರ್ಮವೆಂದರೆ ಭಗವಂತನಿಗೆ ಅರ್ಪಿತವಾದ ಕರ್ಮವು, ಕೇವಲ ಲೌಕಿಕ ಸುಖಕ್ಕಾಗಿ ಭಗವಂತನಿಗೆ ಅನರ್ಪಿತವಾದ ಕರ್ಮವು ಪ್ರವೃತ್ತ ಧರ್ಮವು ಪ್ರವೃತ್ತಿ ಧರ್ಮದಕ್ಕಿಂತ ನಿವೃತ್ತಿಧರ್ಮವೇ ಶ್ರೇಷ್ಠವೆಂಬ ಮಾತನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. "ಲೌಕಿಕ ಸುಖವನ್ನು ಕೊಡುವ ಪ್ರವೃತ್ತ ಧರ್ಮ ಆಚರಿಸುವದನ್ನು ಬಿಟ್ಟು ಭಗವಂತನ ಚರಣಕಮಲಗಳನ್ನು ಆಶ್ರಯಿಸಿ ಆಸಕ್ತಿ ಮೊದಲಾದ ದೋಷಗಳಿಂದ ಅಪರಿಪಕ್ವತೆಯಿಂದ ಆ ಧರ್ಮ ಆಚರಿಸುವದನ್ನು ನಿಲ್ಲಿಸಿದರೆ ಆಗುವ ಹಾನಿಯಾದರೂ ಏನು ? ಅಥವಾ ಪರಮಾತ್ಮನ ಆರಾಧನೆಯನ್ನು ಬಿಟ್ಟು ಪ್ರವೃತ್ತಿ ಧರ್ಮರೂಪ ಸ್ವಧರ್ಮವನ್ನು ಆಚರಿಸಿದರೆ ಬರುವ ಲಾಭವಾದರೂ ಏನು ? ವಿಜಯಧ್ವಜಕಾರರು ಇದರ ತಾತ್ಪರ್ಯವನ್ನು ಹೀಗೆ ತೆಗೆದಿದ್ದಾರೆ :— ಭಗವಂತನಿಗೆ ಶರಣ ಹೋಗಿ ಕರ್ಮವನ್ನು ಆಚರಿಸಿದ (ನಿವೃತ್ತಿ ಕರ್ಮ ಆಚರಿಸಿದ) ಮನುಷ್ಯನು **क्षिप्रं भवति धर्मात्मा** ಎಂದು ಮುಂದೆ ಹೇಳಿದಂತೆ **यत्रक्वत्रवाजन्मांतरे श्रीमदादिकुले उद्भूतस्य निवृत्ति-धर्मात्मकं भद्रं एष्यति.** ಮುಂದಿನ ಜನ್ಮದಲ್ಲಿಯಾದರೂ ಒಳ್ಳೇ ಕುಲದಲ್ಲಿ ಹುಟ್ಟಿ ನಿವೃತ್ತಿಕರ್ಮವನ್ನು ಆಚರಿಸುತ್ತಾನೆ, ಆದುದರಿಂದ ಭಗವದರ್ಪಿತ ಕರ್ಮಯೋಗ ರೂಪ ನಿವೃತ್ತಿ ಕರ್ಮವನ್ನು ಆಚರಿಸುವದರಿಂದ ಏನೂ ಹಾನಿಯಿಲ್ಲ.

**व्यवसायात्मिकाबुद्धिरेकेहकुरुनंदन ।**
**बहुशाखा ह्यनंताश्चबुद्धयोऽव्यवसायिनाम् ॥ ४१ ॥**

ಎಲೈ ಕುರುಕುಲೋತ್ಪನ್ನನಾದ ಅರ್ಜುನನೇ ! ಯಥಾರ್ಥಜ್ಞಾನವನ್ನು ಹುಟ್ಟಿಸುವ ಬೋಧವು ಪೌರುಷೇಯ ಗ್ರಂಥಗಳಲ್ಲಿಯೂ ಅಪೌರುಷೇಯವಾದ ವೇದಗಳಲ್ಲಿಯೂ ಒಂದೇ ವಿಧವಾದುದು ಇರುತ್ತದೆ. ಯಥಾರ್ಥಜ್ಞಾನ ರಹಿತರಾದವರ ಭೋಧಗಳು ವಿರುದ್ಧವಾದ ಅನೇಕ ಅರ್ಥಗಳನ್ನು ಕೊಡುವಂಥವು ಮತ್ತು ಅನೇಕ ವಾದವುಗಳು.

ಈ ಶ್ಲೋಕದ ತಾತ್ಪರ್ಯವನ್ನು ಸತ್ಯಧ್ಯಾನ ತೀರ್ಥರೂ ಈ ರೀತಿಯಾಗಿ ಕೊಡುತ್ತಾರೆ— ಯಥಾರ್ಥ ಜ್ಞಾನವನ್ನು ಕೊಡುವ ಬೋಧಗಳು (ವಾಕ್ಯಗಳು)

ವೇದದಲ್ಲಿಯಾಗಲಿ ಪೌರುಷೇಯ ಗ್ರಂಥಗಳಲ್ಲಿಯಾಗಲಿ ಒಂದೇ ವಿಧವಾಗಿರುತ್ತದೆ. ಯಥಾರ್ಥಜ್ಞಾನರಹಿತರಾದ ದುರ್ವಾದಿಗಳ ಅಪ್ರಮಾಣವಾದ ಬೋಧಗಳು (ವಾಕ್ಯಗಳು) ಅನೇಕವಾಗಿದ್ದರೂ ಸ್ವೀಕರಿಸುವದಕ್ಕೆ ಯೋಗ್ಯವಾದವುಗಳಲ್ಲ. ಆದುದರಿಂದ ನಾನು (ಕೃಷ್ಣನು) ಹೇಳಿದ ವಾಕ್ಯಗಳೇ (ಮಾತುಗಳೆ) ಪ್ರಮಾಣಗಳು. ಆದುದರಿಂದ ಪರಸ್ಪರ ವಿರುದ್ಧಗಳಾದ ಅನೇಕ ಅರ್ಥಗಳನ್ನು ಹೇಳುವ ಅನೇಕ ಮಾತುಗಳು (ಮತಗಳು) ಇರಲಾಗಿ ನೀನು (ಕೃಷ್ಣನು) ಹೇಳಿದ ಮಾತುಗಳನ್ನೇ (ವಾಕ್ಯಗಳನ್ನೇ) ಕೇಳಿ ಅವುಗಳಲ್ಲಿ ವಿಶ್ವಾಸ ಮಾಡಿ ಆ ಪ್ರಕಾರವಾಗಿಯೇ ಆಚರಿಸು ಎಂದು ಹೇಳುವದು ಹೇಗೆ ಹೊಂದುವದು ಎಂದು ಯೋಚಿಸಬೇಡ.

**ವಿಶೇಷ ಟಿಪ್ಪಣಿಗಳು :**

ರಾಘವೇಂದ್ರರು ಈ ರೀತಿಯಾಗಿ ಸಂಗತಿಯನ್ನು ಕೊಡುತ್ತಾರೆ. **ननु ज्ञानोपायविषया. वाचः अन्योन्यविरुद्धाः बह्वयः मतभेदेन संति । अतः कथमेकत्र त्वदीयायामेव उपायविषयवाचि निष्ठाशब्दितं विश्वासं करोमि ।** ಈ ಸಂಶಯಕ್ಕೆ ಉತ್ತರವನ್ನು ಸಿ ಎಮ್ ಪದ್ಮನಾಭಾಚಾರ್ಯರು ಹೀಗೆ ಕೊಡುತ್ತಾರೆ. Truth is ever single, based on verified and established truths. This is as true of worldly teachings as of Vedic ones ಸಮ್ಮತವಾದ ಪ್ರಮಾಣಗಳು ಮತ್ತು ಪ್ರಮಿತವಾದ ಪ್ರಮಾಣಗಳ ಮೇಲೆ ನಿಂತಿರುವ ತತ್ವವು ಒಂದೇ ಇರುತ್ತದೆ ಈ ಮಾತು ಲೌಕಿಕ ಮತ್ತು ವೈದಿಕ ಬೋಧಗಳಲ್ಲಿಯೂ ಸಮನಾಗಿ ತೋರಿಬರುತ್ತದೆ. ರಸಾಯನ ಶಾಸ್ತ್ರ, ಪದಾರ್ಥವಿಜ್ಞಾನ ಶಾಸ್ತ್ರ, ಗಣಿತಶಾಸ್ತ್ರಗಳಲ್ಲಿ ಪರಸ್ಪರ ವಿರುದ್ಧ ಮಾತುಗಳು ತೋರಿಬರುವದಿಲ್ಲ. ಹಾಗೆ ವೇದಗಳ ಮತ್ತು ಸ್ಮೃತಿಗಳ ಬೋಧದಲ್ಲಿ ವಿರುದ್ಧ ಮಾತುಗಳು ಬರುವದಿಲ್ಲ. ಶ್ರೀಕೃಷ್ಣನು ತಾನು ಬೋಧಿಸುವ ಯೋಗವು ಹೀಗೆ ಪ್ರಮಾಣಪ್ರಮಿತವಾದುದರಿಂದ ಸ್ವವಿರೋಧಶೂನ್ಯವಾಗಿದೆ ಎಂದು ಭರವಸೆ ಕೊಡುತ್ತಾನೆ. ವೇದವಿರುದ್ಧ ಮತಗಳಲ್ಲಿ ಸ್ವವಿರೋಧವು ಸಾಕಷ್ಟಿದೆ. ಯಾಕೆಂದರೆ ಆವರ ವಿಚಾರ ಶುದ್ಧವಾದುದಲ್ಲ, ತರ್ಕಬದ್ಧವಾದುದಲ್ಲ, ಅನುಭವದಮೇಲೆ ಸ್ಥಾಪಿತವಾದುದಲ್ಲ ಪ್ರಮಾಣ ಪರೀಕ್ಷಿತವಾದುದಲ್ಲ,

ಈ ಶ್ಲೋಕದ ಈ ತಾತ್ಪರ್ಯ ಮಧ್ವರಿಗೆ ಸಮ್ಮತವಾದುದು. Mrs. Besantರ ತರ್ಜುಮೆಯು ಸ್ವಲ್ಪ ಹೆಚ್ಚುಕಡಿಮೆ ಇದೇ ತಾತ್ಪರ್ಯವನ್ನು ಕೊಡುತ್ತದೆ. "The determinate reason is but one pointed, many branched and endless are the thoughts of the irresolute". ಗಾಂಧಿಯವರ ಅನಾಸಕ್ತಿ ಯೋಗದಲ್ಲಿ ಸಹ ಇದೇ ತಾತ್ಪರ್ಯ ಹೊರಡುತ್ತದೆ. The attitude springing

from fixed resolve is but one, but for those who have no fixed mixed resolve the attitudes are many branched and unending

ಟಿಳಕರು **ಬುದ್ಧಿ** ಎನ್ನುವದಕ್ಕೆ ಕಾರ್ಯಾಕಾರ್ಯ ನಿಶ್ಚಯ ಮಾಡುವ ಬುದ್ಧಿ ಎಂದು ಹೇಳುತ್ತಾರೆ ಮಧ್ವಾಚಾರ್ಯರು ಬುದ್ಧಿಯೆಂದರೆ ಜ್ಞಾನಸಾಧನ ಎಂದು ಒಪ್ಪಿದ್ದಾರೆ. ಟಿಳಕರ ಅರ್ಥದಲ್ಲಿ ಇದರ ಪ್ರಕಾರ ವ್ಯವಸಾಯಾತ್ಮಕ ಬುದ್ಧಿಯು ಏಕಾಗ್ರವಿರಬೇಕಾಗುತ್ತದೆ ಎಂದು ಹೇಳಿದ್ದಾರೆ ಆದರೆ ಹಿಂದೆ ೩೯ನೇ ಶ್ಲೋಕದಲ್ಲಿ ಬುದ್ಧಿಯೆನ್ನುವದಕ್ಕೆ ಜ್ಞಾನವೆಂದು ಅರ್ಥಮಾಡಿದ್ದಾರೆ ಎರಡನೇ ಚರಣದಲ್ಲಿ ಬುದ್ಧಿ ಎಂಬ ಪದಕ್ಕೂ ನಿಶ್ಚಯ ಮಾಡುವ ಬುದ್ಧಿ ಇಂದ್ರಿಯವೆಂದೇ ಮಾಡಿದ್ದಾರೆ ಈಗ ಹೀಗೆ ಹೇಳುವದರಿಂದ ಸರಿಯಾಗಿ ಹಿಂದಿನ ಶ್ಲೋಕದೊಡನೆ ಸಂಗತಿ ಹೇಳುವದು ಕಷ್ಟವಾಗುತ್ತದೆ.

ಆದರೆ ಮಧ್ವಾಚಾರ್ಯರು ಸರಿಯಾದ ಸಂಗತಿಯನ್ನು ತಮ್ಮ ಭಾಷ್ಯದಲ್ಲಿ ಹೀಗೆ ಹೇಳುತ್ತಾರೆ— ಯೋಗದಲ್ಲಿ ಜ್ಞಾನೋಪಾಯರೂಪ ಬುದ್ಧಿಯನ್ನು ಕೇಳು ಎಂದು ಹೇಳಿದ್ದಾಯಿತು ಮತಗಳು ಬೇರೆ ಬೇರೆ ಇದ್ದುದರಿಂದ ಅನೇಕ ಜ್ಞಾನೋಪಾಯಗಳು ಇವೆ. ಆದುದರಿಂದ ಒಂದರಲ್ಲಿ ನಾನು ನಿಷ್ಠೆಯನ್ನು ಹೇಗೆ ತೋರಿಸಲಿ ಎಂದು ಕೇಳಿದಾಗ ಕೃಷ್ಣನು ಈ ಶ್ಲೋಕರೂಪದಿಂದ ಉತ್ತರ ಕೊಟ್ಟಿದ್ದಾನೆ— **सम्यग्युक्तिनिर्णीतानां मतानां ऐक्यमेव इत्यर्थः।** ಚನ್ನಾಗಿ ಯುಕ್ತಿಗಳಿಂದ ನಿರ್ಣೀತವಾದ ಮತಗಳಲ್ಲಿ ಐಕ್ಯವಿರುತ್ತದೆ. ಪ್ರಮಾಣ ಸಾಮಾನ್ಯಗಳಿಂದ ಸಿದ್ಧವಾದ ಮತಗಳು ಒಂದೇ ರೀತಿಯಾಗಿ ಇರುತ್ತವೆ. ಆದರೆ ಪ್ರಮಾಣಕ್ಕೆ ವಿರುದ್ಧವಾದ ಮತಗಳು ಮಾತ್ರ ಬಹು ರೀತಿಯಾಗಿರುತ್ತವೆ.

ಶಂಕರಾಚಾರ್ಯರು ಸಾಂಖ್ಯ (ಜ್ಞಾನ) ಮತ್ತು ಯೋಗ (ಕರ್ಮಯೋಗ) ಇವೆರಡೂ ಒಂದು ಪಕ್ಷವೆಂದು ಇಟ್ಟುಕೊಂಡು ಅದರ ವಿರುದ್ಧ ವಿಪರೀತ ಬುದ್ಧಿಯುಳ್ಳ ಲೌಕಿಕರು ಎರಡನೆ ಪಕ್ಷವೆಂದು ಇಟ್ಟುಕೊಂಡಿದ್ದಾರೆ. ಸಾಂಖ್ಯವೆಂದರೆ ಜ್ಞಾನ ಪ್ರಮಾಣಪ್ರಮಿತವಾಗಿ ನಿಶ್ಚಿತ ಸ್ವರೂಪವುಳ್ಳದ್ದು; ಲೌಕಿಕರ ಅನೇಕ ಬುದ್ಧಿಗಳನ್ನು ನಿಲ್ಲಿಸಿ ಸಂಸಾರವನ್ನು ಸಹ ನಿಲ್ಲಿಸಿ ಬಿಡುತ್ತದೆ. ಪ್ರಮಾಣದಿಂದ ಹುಟ್ಟಿದ ವಿವೇಕ ಬುದ್ಧಿಯು ಇಲ್ಲದಿರುವದರಿಂದ ಅನಂತ ಬುದ್ಧಿಗಳು, ಅನಂತ ಮತಗಳು ಹುಟ್ಟಿ ಮನುಷ್ಯನನ್ನು ಘಾಸಿಗೊಳಿಸುತ್ತವೆ. ಮೊದಲನೆ ಪಕ್ಷವಾದ ಸಾಂಖ್ಯ-ಯೋಗಗಳೆರಡೂ ಒಂದೇ. ಯಾಕೆಂದರೆ ಒಂದು ಜ್ಞಾನವಾದರೆ ಇನ್ನೊಂದು (ಯೋಗ) ಜ್ಞಾನಕ್ಕೆ ಸಾಧನವಾಗುವದು, ಮತ್ತು ಎರಡರ ಫಲವು ಮುಕ್ತಿಯು ಒಂದೇ ಇರುತ್ತದೆ.

ಆದುದರಿಂದ ಇವರ ಅಭಿಪ್ರಾಯದಲ್ಲಿ **इह** ಎಂದರೆ "ಮೋಕ್ಷ ಮಾರ್ಗದಲ್ಲಿ" ಎಂದು ಅರ್ಥ ಎಂದರೆ ಸಾಂಖ್ಯ ಮತ್ತು ಯೋಗ, **व्यवसायात्मिका** ಎಂದರೆ ಇವೆರಡರ ಪರಸ್ಪರ ಕಾರ್ಯಕಾರಣಭಾವ — ಅದು ಒಂದೇ. ಯಾಕೆಂದರೆ ಎರಡಕ್ಕೂ ಒಂದೇ ಗುರಿ ಇದೆ,[1]

ಶ್ರೀಧರರು ಮಾತ್ರ **इह** ಇದನ್ನು (**ईश्वराराधनलक्षणे कर्मयोगे**) ಕರ್ಮಯೋಗಕ್ಕೆ ಮಾತ್ರ ಸಂಬಂಧಿಸುತ್ತಾರೆ. ಮುಂದೆ ಇದನ್ನು ಹೀಗೆ ಸ್ಪಷ್ಟವಾಗಿ ವಿವರಿಸುತ್ತಾರೆ. **परमेश्वरभक्त्यैव ध्रुव तरिष्यामीति निश्चयात्मिका एका एव एकनिष्ठैवबुद्धिः भवति** ಪರಮಾತ್ಮನಲ್ಲಿ ಭಕ್ತಿಯಿಂದಲೇ ನಿಶ್ಚಯವಾಗಿ ನಾನು ದಾಟುತ್ತೇನೆಂಬ ಏಕನಿಷ್ಠವಾದ ಬುದ್ಧಿಯು ತಯಾರಾಗುತ್ತದೆ, **अव्यवसायिनांतु बहिर्मुखानां कामिनां कामानां अनन्त्यात् अनंताः।** ಆದರೆ ನಿಶ್ಚಯವಿಲ್ಲದವರ, ಹೊರಗೆ ಇಂದ್ರಿಯ ಸುಖವನ್ನು ಇಚ್ಛಿಸುವವರ, ಬುದ್ಧಿಯು ಕಾಮನೆಗಳು ಇಚ್ಛೆಗಳು ಅನಂತವಾದುದರಿಂದ ಅನಂತವಾಗಿರುತ್ತದೆ [2]

---

1 ಸಾಂಖ್ಯರು ಬುದ್ಧಿಯನ್ನು ಮುಖ್ಯವಾಗಿ ಎಂಟು ವಿಭಾಗಗಳನ್ನು ಮಾಡುತ್ತಾರೆ. ಅಭಿಬುದ್ಧಿಯಲ್ಲಿ ೫ ಭಾಗಗಳು .—

೧) ವ್ಯವಸಾಯ (ನಿರ್ಧಾರ) ೨) ಅಭಿಮಾನ ೩) ಇಚ್ಛಾ ೪) ಕರ್ತವ್ಯ
೫) ಕ್ರಿಯಾ

2 ಅರವಿಂದೋರವರು **व्यवसायात्मिकाबुद्धिः** ಯ ಮೇಲೆ ಬರೆಯುತ್ತಾರೆ .—

ಗೀತೆಯಲ್ಲಿ ಬುದ್ಧಿಯ ಅರ್ಥವು " The whole action of the discriminating and deciding mind which determines both the direction and use of our thoaghts and the direction and use of our acts

It is not only concentration of the mind that kuows but espechally Concentration of the mind that decides and persists in the decision (**व्यवसाय**) " ಇರುತ್ತದೆ.

ಸಾತವಳೇಕರರು "**व्यवसायात्मिकाबुद्धिः** ಎಂದರೆ ಪ್ರಯತ್ನವನ್ನು ಮಾಡಲಿಕ್ಕೆ ಬೇಕಾದ ಉತ್ಸಾಹವನ್ನು ಕಾಯ್ದಿಡುವ ಬುದ್ಧಿಯು ಉದ್ಯೋಗತತ್ಪರ ಬುದ್ಧಿ " ಎಂದು ಹೇಳಿದ್ದಾರೆ.

ನೀಲಕಂಠರರು ಮಾತ್ರ ಸ್ವಬಂಧುಗಳೇ ಜರೆಯುವಂತೆ ಅರ್ಥೈಸಿದ್ದಾರೆ. ಅವರ ಅಭಿಪ್ರಾಯದಲ್ಲಿ ಅಜ್ಞ ಸಂಸಾರಿಗಳ ಮತಕ್ಕೂ ಅದ್ವೈತ ಸಾಕ್ಷಾತ್ಕಾರ ಹೊಂದಿದವರ ಮತಕ್ಕೂ ಇಲ್ಲಿ ವಿರೋಧವನ್ನು ತೋರಿಸಲಾಗಿದೆ. **व्यवसायात्मिका- बुद्धिः "अहं ब्रह्मास्मि इति वाक्यजन्या ब्रह्माकारः अंतःकरणवृत्तिः ब्रह्मविद्याभिधाना ।** ಹೀಗೆ ವ್ಯವಸಾಯಾತ್ಮಿಕಾ ಬುದ್ಧಿಯೆಂದರೆ ಒಳ್ಳೆದೃಢವಾದ ಐಕ್ಯಸಾಕ್ಷಾತ್ಕಾರವು. ಅದು **एका** ಒಂದು ಇರುತ್ತದೆ ಯಾಕೆಂದರೆ ಐಕ್ಯ ಸಾಕ್ಷಾತ್ಕಾರ ಹೊಂದಿದವನಿಗೆ ಬೇರೆ ಮಾಡತಕ್ಕದ್ದು ಏನೂ ಉಳಿದಿರುವದಿಲ್ಲ. ಆದರೆ ಅಜ್ಞ ಸಂಸಾರಿಗಳಿಗೆ ಮಾಡತಕ್ಕದ್ದು ಅನೇಕವಿರುತ್ತವೆ

ಆದರೆ ಈ ಶ್ಲೋಕವು ಇವರ ಅಭಿಪ್ರಾಯದಲ್ಲಿ ಉತ್ತರಿಸಿದ್ದು ಯಾವದು ? ಈ ಮೊದಲೆ ಸಾಂಖ್ಯಯೋಗಗಳೆರಡೂ ಒಪ್ಪಿಗೆಯಾಗಿವೆ ಮತ್ತು ಅವುಗಳನ್ನು ಸ್ತುತಿಸಿದ್ದಾಗಿದೆ. ಆದರೆ ನೀಲಕಂಠರರು ಮಾತ್ರ ಅವೆರಡು ಸರಿಯಲ್ಲವೆಂದು ಅಭಿಪ್ರಾಯಪಡುತ್ತಾರೆ. ಸಾಂಖ್ಯವು ಬ್ರಹ್ಮಸಾಕ್ಷಾತ್ಕಾರವುಳ್ಳದ್ದಾದುದರಿಂದ ದೊಡ್ಡದು. ಆದರೆ ಯೋಗವು ಮಾತ್ರ ಪತನಕ್ಕೆ ಅಸ್ಪದ ಕೊಡುತ್ತದೆ. ಆದರೆ ಈ ಅಭಿಪ್ರಾಯವನ್ನು ಶಾಂಕರ ಭಾಷ್ಯದ ದೀಪಿಕಾಕಾರರು ವಿರೋಧಿಸುತ್ತಾರೆ. ೩೯ ನೇ ಶ್ಲೋಕದಲ್ಲಿ ಕರ್ಮಯೋಗವು ಮನುಷ್ಯನನ್ನು ಸಂಸಾರ ಬಂಧನದಿಂದ ಬಿಡುಗಡೆ ಮಾಡುತ್ತದೆ ಎಂದು ನೀಲಕಂಠರರು ಹೇಳಿದ್ದು ಸರಿಯಲ್ಲವೆಂದು ಅವರು ಹೇಳುತ್ತಾರೆ. ಹಾಗೆ ೪೦ನೇ ಶ್ಲೋಕದಲ್ಲಿ **नेहाभिक्रमनाशोस्ति** ಎಂದು ಕರ್ಮಯೋಗದಲ್ಲಿ ಅಪೂರ್ಣತೆಯು ಸಹ ಪರಿಪೂರ್ಣತೆಗೆ ಮುಟ್ಟಿಸುತ್ತದೆಂದು ಭಗವಂತನು ಹೇಳಿದ್ದಾನೆ. ಇದಾದ ಕೂಡಲೇ ಅದೇ ಭಗವಂತನೇ ಕರ್ಮಯೋಗವನ್ನು ನಿಂದಿಸಿದ್ದಾನೆಂದು ಹೇಳುವದು ಯುಕ್ತಿಗೆ ವಿರುದ್ಧವಾಗುವದು ಕರ್ಮಯೋಗವನ್ನು ನಿಂದಿಸುವದೂ ಕಾಮ್ಯಕರ್ಮವನ್ನು ನಿಂದಿಸುವದೂ ಒಂದೇ ಅಲ್ಲ. ಆದುದರಿಂದ ೪೧ ರಲ್ಲಿ ಕರ್ಮಯೋಗವನ್ನು ನಿಂದಿಸಿದ್ದಾರೆಂದು ಹೇಳುವದು ಸರಿಯಲ್ಲ.

ಶ್ರೀಧರರು ಮಾತ್ರ ಇಲ್ಲಿ ಯೋಗ ಒಂದೇ ನಿರ್ದಿಷ್ಟವಾಗಿದೆ ಅದು ಕಾಮ್ಯಕರ್ಮದೊಡನೆ ವಿರೋಧಿಸುತ್ತದೆ ಎಂದು ಪ್ರತಿಪಾದಿಸಿದ್ದಾರೆ. ಇದರಂತೆ ಬಹಳ ಕಡೆಗೆ ಗೀತೆಯಲ್ಲಿ ಅದ್ವೈತಿಗಳ ಅಭಿಪ್ರಾಯವನ್ನು ಪರಿತ್ಯಜಿಸಿ ಭಗವಂತನ ಅಭಿಪ್ರಾಯವನ್ನು ಎತ್ತಿ ಹಿಡಿದಿದ್ದಾರೆ.

ಇನ್ನು ರಾಮಾನುಜರ ಅಭಿಪ್ರಾಯವನ್ನು ನೋಡೋಣ. ರಾಮಾನುಜರು ಈ ಶ್ಲೋಕದಲ್ಲಿ — **काम्यकर्मविषयायाः बुद्धेः मोक्षसाधनभूतकर्मविषयां बुद्धिं विशिनष्टि** ಕರ್ಮಯೋಗವೆಂದರೆ ಮುಮುಕ್ಷುವು ಮಾಡುವ ಕರ್ಮವು.

ಇಂಥ ಕರ್ಮವನ್ನು ಕಾಮ್ಯಕರ್ಮದಿಂದ ಬೇರೆ ಮಾಡಿ ಭಗವಂತನು ತೋರಿಸುತ್ತಾನೆಂದು ಅಭಿಪ್ರಾಯವಡುತ್ತಾರೆ. **इह** ಎಂದರೆ **शास्त्रीये सर्वस्मिन् कर्मणि** ಶಾಸ್ತ್ರದಲ್ಲಿ ಪ್ರತಿಪಾದಿತವಾದ ಕರ್ಮಗಳು **व्यवसायात्मिका बुद्धिः** ಎಂದರೆ **व्यवसायः** ನಿಶ್ಚಯ **साहिबुद्धि. आत्मयाथात्म्यनिश्चयपूर्विका** ಆ ಮುಮುಕ್ಷುವಿನ ಬುದ್ಧಿಯು ಆತ್ಮನ ಯಥಾರ್ಥಜ್ಞಾನವನ್ನು ನಿಶ್ಚಯಿಸಿರುತ್ತದೆ ಆದುದರಿಂದ ಅದು **एका** ಏಕ ಮುಖವಾಗಿರುತ್ತದೆ ಮುಮುಕ್ಷುವು ನಿತ್ಯ ನೈಮಿತ್ತಿಕ—ಎಲ್ಲ ಕರ್ಮಗಳನ್ನು ಮೋಕ್ಷಕ್ಕಾಗಿ ಮಾತ್ರ ಮಾಡುತ್ತಾನೆ. ಇಂಥ ಮುಮುಕ್ಷುವಿನ ಬುದ್ಧಿಯು ಸಾಮಾನ್ಯ ಅಜ್ಞ ಮನುಷ್ಯನ ಬುದ್ಧಿಯಿಂದ ಬೇರೆಯಾಗಿರುತ್ತದೆ.

ಆತ್ಮನ ವಿಷಯದಲ್ಲಿಯು (ಸಮತಾ) ರಾಮಾನುಜರ ಮತವು ಗೀತೆಯ ಮತವಲ್ಲವೆಂಬುದನ್ನು ಮುಂದೆ ವಿಮರ್ಶಿಸಲಾಗಿದೆ ಇಲ್ಲಿ ಆತ್ಮದ ವಿಷಯ ಪ್ರಸಕ್ತವಾಗಿಲ್ಲ, ಮೇಲಾಗಿ ಸಾಂಖ್ಯ ಮತ್ತು ಯೋಗದ ಪ್ರಸಕ್ತಿಯು ದೂರವೇ ಉಳಿಯಿತು

ಸಾಮಾನ್ಯವಾಗಿ ಎಲ್ಲರೂ ಕರ್ಮಯೋಗವನ್ನು ಹೊಗಳಿದ್ದಾರೆ ಈ ಶ್ಲೋಕದಲ್ಲಿ ಎಂಬುದನ್ನು ಒಪ್ಪಿದ್ದಾರೆ ಮುಖ್ಯವಾಗಿ ನಿಶ್ಚಿತ ಅಥವಾ ನಿರ್ಧಾರಿತ ಬುದ್ಧಿಯು ಏಕಮುಖವಾಗಿರುತ್ತದೆ ಅನಿಶ್ಚಿತ ಬುದ್ಧಿಯು ನಾನಾಮುಖವಾಗಿರುತ್ತದೆ ಎಂಬ ವಿಷಯದಲ್ಲಿ ರಾಧಾಕೃಷ್ಣನ್ನರೂ ಒಪ್ಪಿಗೆ ನೀಡಿದ್ದಾರೆ. ಅವರು Discursive ness of the irresolute Buddhi is contrasted with the concetration, the single mindedness of the resolute. Human life finds its fulfilment through self devotion to a commanding end and not in the unfaltered pursuit of endless possibilities ನಾನಾ ವಿಷಯಕವಾದ ಅನಿಶ್ಚಿತ ಬುದ್ಧಿಯನ್ನು ನಿಶ್ಚಿತವಾದ ಬುದ್ಧಿಯ ಏಕ ವಿಷಯಕತೆ ಮತ್ತು ಏಕಾಗ್ರತೆಯೊಡನೆ ವಿರೋಧಿಸಿದ್ದಾರೆ. ಮಾನವ ಜೀವನದ ಸಾಫಲ್ಯವು ಸರ್ವೋನ್ನತ ಧ್ಯೇಯಕ್ಕೆ ಆತ್ಮಾರ್ಪಣೆ ಮಾಡುವದರಿಂದ ದೊರೆಯುತ್ತಿದೆ. ಆದರೆ ಅನಂತ ಸಂಭಾವ್ಯಗಳ ಬೆನ್ನು ಹತ್ತುವದರಿಂದ ದೊರೆಯುವದಿಲ್ಲ

ವರದ ದೇಶಿಕಾಚಾರ್ಯರಂಗಪ್ರಿಯರು ತಮ್ಮ ಭಾರತ ದರ್ಶನದಲ್ಲಿ ಅಂತಃಕರಣಕ್ಕೆ ಮನಸ್ಸು ಬುದ್ಧಿ ಎಂದು ಎರಡು ಭೇದಗಳು, ಮನಸು ಸಂಕಲ್ಪವಿಕಲ್ಪಾತ್ಮಕವಾಗಿರುವದು ಬುದ್ಧಿಯು ವ್ಯವಸಾಯಾತ್ಮಕವೂ ನಿಶ್ಚಯಾತ್ಮಕವೂ ಆಗಿರುವವು. ವ್ಯವಸಾಯ ಎಂಬ ಪದಕ್ಕೆ ಉತ್ಸಾಹವೆಂದೂ ಅರ್ಥವಿರುವದು. ಆದರೆ ಪ್ರಕೃತದಲ್ಲಿ ವ್ಯವಸಾಯ ಪದಕ್ಕೆ ನಿಶ್ಚಯಾತ್ಮಕ ಬುದ್ಧಿಯ ಹೊರತು ಉಳಿದ ಎರಡು

ಅರ್ಥಗಳು ಪ್ರಸಕ್ತವಲ್ಲವೆಂದು ಹೇಳಿದ್ದಾರೆ ಮತ್ತೆ ಶ್ರೇಯೋ ಮಾರ್ಗದಲ್ಲಿ ನಿಶ್ಚಯಾತ್ಮಕವಾದ ಒಂದೇ ಬುದ್ಧಿಯು ಇರುತ್ತದೆ. ವ್ಯವಸಾಯವಿಲ್ಲದವರಿಗೆ ಅನೇಕ ಬುದ್ಧಿಗಳಿರುತ್ತವೆಂದು ಹೇಳಿದ್ದಾರೆ. ಅದಕ್ಕೆ ಉದಾಹರಣವಾಗಿ "ಒಂದು ಲೆಕ್ಕಕ್ಕೆ ಸರಿಯಾದ ಉತ್ತರ ಒಂದೇ ಇರುತ್ತದೆಂದು ನಿಶ್ಚಯ ಬುದ್ಧಿಯುಳ್ಳ ಗಣಿತ ಶಾಸ್ತ್ರಜ್ಞನು ಹೇಳುತ್ತಾನೆ ಗಣಿತ ಶಾಸ್ತ್ರಜ್ಞನಲ್ಲದವನು ಆ ಲೆಕ್ಕಕ್ಕೆ ಕೊಡುವ ಉತ್ತರಗಳು ನೂರಾರು ಎಂದು ಶ್ರೀರಂಗ ಮಹಾಗುರುಗಳು ಕೊಡುತ್ತಿದ್ದರೆಂದು ಹೇಳಿದ್ದಾರೆ.

ಪೇಜಾವರ ಶ್ರೀಗಳವರು ತಮ್ಮ ಗೀತಾಸಾರೋದ್ಧಾರದಲ್ಲಿ 'ಸತ್ಯದ ದಾರಿ ಒಂದೇ' ಎಂಬ ಪ್ರಕರಣದಲ್ಲಿ 'ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ' ಎಂಬುದರ ಕೆಳಗೆ ವಿನೋಬಾಭಾವೆಯವರ ಕೂಡ ಸಂಧಿಸಿದಾಗ ನಡೆದ ಒಂದು ವಿಚಾರ ವಿನಿಮಯವನ್ನು ಉದಾಹರಿಸಿದ್ದಾರೆ. ವಿನೋಬಾ ಅವರು— "ಭಿನ್ನ ಭಿನ್ನ ಆಹಾರಗಳು ಅವರವರ ಅಭಿರುಚಿಗೆ ಅನುಗುಣವಾಗಿ ತೃಪ್ತಿಯನ್ನು ನೀಡುವವು ...... (ಹಾಗೆಯೇ) ಅವರವರ ಅಭಿರುಚಿಗೆ ತಕ್ಕಂತೆ ಯಾವ ಮತವನ್ನು ಅನುಸರಿಸಿದರೂ ಶ್ರೇಯಸ್ಸು ಆಗುವದು" ಎಂದು ಅಭಿಪ್ರಾಯಪಟ್ಟಾಗ ಪೇಜಾವರ ಶ್ರೀಗಳವರು— "ಭಿನ್ನ ಭಿನ್ನ ಆಹಾರಗಳು (ಬೇರೆ ಬೇರೆ ಜನರಿಗೆ) ರುಚಿಕರಗಳಾದರೂ ಎಲ್ಲ ಆಹಾರಗಳಿಂದಲೂ ಶರೀರದ ಮೇಲೆ ಒಂದೇ ರೀತಿಯ ಪರಿಣಾಮಗಳಾಗುವದಿಲ್ಲ. .. ತಾತ್ವಿಕ ವಿಚಾರದಲ್ಲೂ ಇದೇ ಮಾತು ಬರುವದು. ಪರಸ್ಪರ ವಿರೋಧಿ ವಿಚಾರಗಳು ಎಂದಿಗೂ ಸತ್ಯವೆನಿಸಲಾರವು ಸತ್ಯ ಮತ್ತು ಅಸತ್ಯ ವಿಚಾರಗಳಿಂದ ಆತ್ಮನ ಮೇಲೆ ಒಂದೇ ವಿಧವಾದ ಪರಿಣಾಮ ಹೇಗೆ ಆಗಬಹುದು ? (ಆಗಲಾರದು)" ವಿನೋಬಾರವರು ಈ ಮಾತನ್ನು ಒಪ್ಪಿಕೊಂಡರೆಂದು ಹೇಳಿದ್ದಾರೆ. ಇನ್ನು ಸತ್ಯಕ್ಕೆ ಅನೇಕ ಮುಖಗಳಿರುತ್ತವೆಂದೂ ಒಬ್ಬೊಬ್ಬರು ಒಂದೊಂದು ಮುಖವನ್ನು ತಮ್ಮ ಮತವೆಂದು ಪ್ರತಿಪಾದಿಸಿದ್ದಾರೆಂದು ಕಲ್ಪಿಸಿದರೆ ಅದು ಸರಿ ಎನಿಸುವದಿಲ್ಲ. ಯಾಕೆಂದರೆ ಪ್ರತಿಯೊಬ್ಬ ಮತಪ್ರತಿಪಾದಕನು ತನ್ನ ಮತವೇ ಸತ್ಯ ಮತ; ಉಳಿದವರದು ಅಸತ್ಯಮತ ಎಂದು ಸಾರಿದ್ದಾರೆ ಮೇಲಾಗಿ ಪರಸ್ಪರ ವಿರುದ್ಧ ಮತಗಳು ಎರಡೂ ಸತ್ಯವಾಗುವದು ಹೇಗೆ ? ಆದುದರಿಂದ ವಿಮರ್ಶೆಯಿಂದ ಯತಾರ್ಥವನ್ನು ನಿಶ್ಚಯಿಸಿ ಸ್ವೀಕರಿಸುವದೇ ಒಳ್ಳೇದು. ಶ್ರೀಕೃಷ್ಣನು ತಾನು ಪ್ರತಿಪಾದಿಸಿದ ಕರ್ಮಯೋಗ ಈ ತರಹದ ವಿಮರ್ಶೆಗೆ ನಿಲ್ಲುವ ಮತವೆಂದು ಅರ್ಜುನನಿಗೆ ಹೇಳಿದ್ದಾನೆ.

ಸೋಮನಾಥಾನಂದರು ತಮ್ಮ ಗೀತಾಭಾವಧಾರೆಯಲ್ಲಿ (ಅವರು ಅದ್ವೈತವಾದಿಗಳಾಗಿದ್ದರೂ) ಈ ರೀತಿಯಾಗಿ ಹೇಳಿದ್ದಾರೆ— "ನಿಶ್ಚಯ ಸ್ವಭಾವವುಳ್ಳವರೇ

ಕರ್ಮಯೋಗಿಗಳು ಅವರು ಒಂದೇ ಮನಸಿನಿಂದ ಕೆಲಸ ಮಾಡುತ್ತಾರೆ. ಅವ್ಯವ ನಾಯಿಗಳು ಮಾತ್ರ ನಿಶ್ಚಯ ಬುದ್ಧಿ ಇಲ್ಲದವರು. ಅವರ ಮನಸು ಇಪ್ಪತ್ತೆಂಟು ಕವಲೊಡೆದು ಹೋಗುತ್ತದೆ"ಂದು ಹೇಳಿದ್ದಾರೆ.

ಚಿದ್ಭವಾನಂದರು ತಮ್ಮ The Bhagavdgeeta ದಲ್ಲಿ But to the Seeker of the Divine, the purpose is one and all edeavours are concentrated on it. "ಭಗವಂತನನ್ನು ಅರಸುವದರಲ್ಲಿ ತೊಡಗಿದವನಿಗೆ ಉದ್ದೇಶವು ಒಂದಾಗಿರುತ್ತದೆ, ಮತ್ತು ಎಲ್ಲ ಪ್ರಯತ್ನಗಳು ಅದರಮೇಲೆ ಕೇಂದ್ರೀಕೃತವಾಗಿರುತ್ತವೆ" ಎಂದು ಹೇಳಿದ್ದಾರೆ. ಕೇಂದ್ರೀಕೃತ ಪ್ರಯತ್ನವೇ ಪರಿಣಾಮಕಾರಿಯಾಗುವದಕ್ಕೆ ಒಂದು ಉದಾಹರಣೆಯನ್ನು ಕೊಟ್ಟಿದ್ದಾರೆ. ಮಧ್ಯೋನ್ನತವಾದ ಕನ್ನಡಿಯಲ್ಲಿ (Lens) ಸೂರ್ಯ ಕಿರಣಗಳನ್ನು ಕೇಂದ್ರೀಕರಿಸಿದರೆ ಅದರ ಬುಡಕ್ಕೆ ಇಟ್ಟ ಕಾಗದವನ್ನು ಸುಟ್ಟುಬಿಡುತ್ತದೆಂದು ಹೇಳಿದ್ದಾರೆ ಅರ್ಜುನನು ಗುರಿಹೊಡೆಯುವದರಲ್ಲಿ ಪ್ರಸಿದ್ಧನಾದುದು ಅವನ ಏಕಾಗ್ರತೆಯ ಸಾಧನೆಯಿಂದ J C. Bose could probe into the mystery of Plant Life— "For to know all about the plants I my self became a plant mentally". ಜೆ ಸಿ ಬೋಸರು ಸಸ್ಯ ಜೀವನವನ್ನು ತಿಳಿದ ರಹಸ್ಯವನ್ನು ಹೀಗೆ ಹೇಳಿದ್ದಾರೆ— "ಸಸ್ಯಗಳ ವಿಷಯದಲ್ಲಿ ಎಲ್ಲವನ್ನು ತಿಳಿಯಲಿಕ್ಕೆ ನಾನು ನನ್ನ ಮನಸಿನಲ್ಲಿ ಆ ಸಸ್ಯವೇ ಆಗುತ್ತಿದ್ದೆ".

ಚಿತ್ತೈಕಾಗ್ರತೆಯೇ ತತ್ವದ (ಬ್ರಹ್ಮನ) ಸಾಕ್ಷಾತ್ಕಾರಕ್ಕೆ ಕಾರಣವಾಗಿದೆ. ಯಾಕೆಂದರೆ ಎಲ್ಲ ಕರ್ಮಗಳೂ ಏಕೋದ್ದೇಶವಾಗಿ ನಡೆಯುತ್ತಿವೆ. ರಾಮಕೃಷ್ಣ ಪರಮಹಂಸರು — ಹಡಗವು ಯಾವ ದಿಕ್ಕಿಗೆ ಹೊರಟರೂ ಅದರಲ್ಲಿರುವ ಹೋಕಾಯಂತ್ರವು ಉತ್ತರ ದಿಕ್ಕನ್ನೇ ತೋರಿಸುವದೆಂದು ಉದಾಹರಿಸಿದ್ದಾರೆ.

ಕೊನೆಯದಾಗಿ ಮೂವರು ಆಚಾರ್ಯರ ತಾತ್ವಿಕ ವಿವೇಚನೆಯ ತುಲನಾತ್ಮಕ ವಿಮರ್ಶೆಯನ್ನು ಮಾಡಿ ಅವರ ಅಭಿಪ್ರಾಯವನ್ನು ಸ್ಪಷ್ಟವಾಗಿ ನಿರ್ದಿಷ್ಟವಾಗಿ ತಿಳಿದುಕೊಳ್ಳೋಣ ಶಂಕರಾಚಾರ್ಯರು, ರಾಮಾನುಜಾಚಾರ್ಯರು **व्यवसायात्मिका बुद्धिः** ವಿಷಯದಲ್ಲಿ ಇಲ್ಲಿ ಸಾಂಖ್ಯ ಯೋಗಗಳೇ ನಿರ್ದಿಷ್ಟವಾಗಿವೆ ಎಂದು ಒಪ್ಪುತ್ತಾರೆ ಶಂಕರಾಚಾರ್ಯರ ಅಭಿಪ್ರಾಯದಲ್ಲಿ ಸಾಂಖ್ಯವು ಯೋಗದಕ್ಕಿಂತ ಹೆಚ್ಚಿನದು; ಮತ್ತು ಯೋಗವು ಉಪಲಕ್ಷಣದಿಂದ ಸೂಚಿತವಾಗುತ್ತದೆ. ಸಾಂಖ್ಯವು (ಯೋಗದೊಡನೆ) ಅದ್ವೈತ ಜ್ಞಾನವನ್ನು ಪ್ರತಿನಿಧಿಸುತ್ತದೆ. ಅದರಲ್ಲಿ ಯೋಗವೂ ಸಮಾವಿಷ್ಟವಾಗಿದೆ. ಇವೆರಡನ್ನು ಕಾಮ್ಯಕರ್ಮದೊಡನೆ ವಿರೋಧಿಸಿದ್ದಾನೆ ಭಗವಂತ ಎಂದು ಹೇಳುತ್ತಾರೆ. ರಾಮಾನುಜಾಚಾರ್ಯರು ಯೋಗದ ಮಹತ್ವ

ವನ್ನು ತೋರಿಸುತ್ತ ಅದನ್ನು ಕಾಮ್ಯಕರ್ಮದೊಡನೆ ವಿರೋಧಿಸುತ್ತಾರೆ. ಯೋಗ ವೆಂದರೆ ಮುಮುಕ್ಷುವು ಅನುಸರಿಸುವ ಕರ್ಮಯೋಗವು. ಅದು ಆತ್ಮಜ್ಞಾನರೂಪ ಸಾಂಖ್ಯವನ್ನು ಆಧಾರಿಸಿದೆ —

ಮಧ್ವಾಚಾರ್ಯರು ಮಾತ್ರ ಅರ್ಜುನನ ವಿಚಾರಸರಣಿಯನ್ನು ಅನುಸರಿಸ ತ್ತಾರೆ. ಅರ್ಜುನನಿಗೆ ಸಾಂಖ್ಯಯೋಗದಲ್ಲಿ ಆಗಲೀ ಅಥವಾ ಸಾಂಖ್ಯ ಮತ್ತು ಕಾಮ್ಯಕರ್ಮಗಳನ್ನಾಗಲೀ ಯಾವದೊಂದನ್ನು ಆರಿಸುವದು ಪ್ರಸಕ್ತವಾಗಿಲ್ಲ. ಆದರೆ ಕೃಷ್ಣನು ಕರ್ಮಯೋಗವನ್ನು ಆಚರಿಸಬೇಕೆಂದು ಹೇಳಿದಾಗ ಅರ್ಜುನನಿಗೆ ಜಗತ್ತಿನಲ್ಲಿ ಅನೇಕ ಮತಗಳು ಪ್ರಚಲಿತವಾಗಿವೆ. ಅವುಗಳಲ್ಲಿ ಯಾವದನ್ನು ಅನುಸರಿಸಬೇಕೆಂದು ಸಾಮಾನ್ಯ ಪ್ರಶ್ನೆಯನ್ನು ಎತ್ತಿದ್ದಾನೆ. ಅದಕ್ಕೆ ಶ್ರೀಕೃಷ್ಣನು ಸತ್ಯವು ಒಂದು; ಸರಿಯಾದ ರೀತಿಯಿಂದ ವಿಚಾರ ಮಾಡಿದ ತತ್ವಗಳಲ್ಲಿ ವಿರೋಧವಿಲ್ಲವೆಂದೂ, ವಿಚಾರದ ಒರೆಗಲ್ಲಿಗೆ ಹತ್ತದ ತತ್ವಗಳು ಮಾತ್ರ ಪರಸ್ಪರ ವಿರುದ್ಧವಿರುತ್ತವೆ ಎಂದು ನಿರ್ಣಯಕೊಟ್ಟಿದ್ದಾನೆ ಹೀಗೆ ಪ್ರಮಾಣ ಪ್ರಮಿತವಾದ ಮತ್ತು ಪ್ರಾಮಾಣಿಕವಲ್ಲದ ಮತಗಳಲ್ಲಿ ವಿರೋಧ ತೋರಿಸುತ್ತಾನೆ. ಮಧ್ವಾಚಾರ್ಯರ ಅಭಿಪ್ರಾಯದಲ್ಲಿ ಯೋಗ್ಯರೀತಿಯಿಂದ ವಿಚಾರಪೂರ್ವಕ ಪ್ರತಿಪಾದಿಸಿದ ತತ್ವಗಳು ಒಂದೇ ನಿರ್ಣಯಕ್ಕೆ ಬರುತ್ತವೆ. **विचार्यंच पुन. पुनः। इदंमेकंसुनिष्पन्न ध्येयो नारायणः सदा।** ವಿಚಾರ ಹೀನರಿಗೆ ವಿಭಿನ್ನಮತಗಳು ಬೆದರಿಸುತ್ತವೆ ಮಧ್ವಾಚಾರ್ಯರು ಬ್ರಹ್ಮವೈವರ್ತದಿಂದ ಈ ಶ್ಲೋಕವನ್ನು ಉದಾಹರಿಸುತ್ತಾರೆ.

**बुद्धिनिर्णीततत्वाना एका विष्णुपरायणा**
**बहुशाखाह्यनंताश्च बुद्धयोऽव्यवसायिनाम् ॥**

---

**यामिमां पुष्पितां वाचं प्रवदंत्यविपश्चितः ।**
**वेदवादरताः पार्थ नान्यदस्तीतिवादिनः ॥ ४२ ॥**

**कामात्मानः स्वर्गपरा जन्मकर्मफलप्रदाम् ।**
**क्रियाविशेषबहुलां भोगैश्वर्यगतिं प्रति ॥ ४३ ॥**

**भोगैश्वर्यप्रसक्तानां तयापहृतचेतसाम् ।**
**व्यवसायात्मिकाबुद्धिः समाधौनविधीयते ॥ ४४ ॥**

**ಈ ಮೂರು ಶ್ಲೋಕಗಳನ್ನು ಕೂಡಿಯೇ ಓದಬೇಕು.**

ಎಲೈ ಅರ್ಜುನನೇ ಪಂಡಿತರಲ್ಲದವರು ವೇದಗಳ ಮೇಲೆ ತೋರುವ ಅರ್ಥವಲ್ಲಿಯೇ ಆಸಕ್ತರಾದವರು ಹೂವಿನಂತೆ ತೋರುವ ಸ್ವರ್ಗ ಮೊದಲಾದ ಫಲಗಳುಳ್ಳ ವೇದವಾಕ್ಯಗಳನ್ನೇ ಹೇಳುತ್ತಾರೆ; ಮತ್ತು ಅವರು ಸ್ವರ್ಗಾದಿಗಳಕಿಂತ ಬೇರೆ ಮೋಕ್ಷಮೊದಲಾದ ಫಲಗಳು ಇಲ್ಲವೆಂದು ಹೇಳುತ್ತಾರೆ. ॥ ೪೨ ॥ ಅವರು ಕಾಮ್ಯವಾದ ಫಲಗಳಲ್ಲಿಯೇ ಆಸಕ್ತರಾಗಿ ಸ್ವರ್ಗವೇ ಉತ್ತಮ ಪುರುಷಾರ್ಥವೆಂದು ತಿಳಿದುಕೊಂಡವರು ಜನ್ಮ ರೂಪವಾದ ಉತ್ತಮ ಫಲಗಳನ್ನು ಕೊಡುವ, ವಿಶೇಷವಾದ ಯಜ್ಞಾದಿ ಕರ್ಮಗಳನ್ನು ಪ್ರತಿಪಾದಿಸುವ ಯಾವ ಈ **(यां इमां)** ವೇದವಾಕ್ಯವನ್ನು **(वाचं)** ಸುಖದ ಭೋಗವು ಮತ್ತು ಐಶ್ವರ್ಯವು ಇವುಗಳಿಗೋಸುಗ ಹೇಳುತ್ತಾರೆ. **(प्रवदति)** ॥ ೪೩ ॥ ಈ ಮಾತಿಗೆ ಮುಗ್ಧವಾದ ಮನಸ್ಸುಳ್ಳವರ, ಭೋಗ ಮತ್ತು ಐಶ್ವರ್ಯಗಳಿಗೆ ಮನಸೋತವರ ತತ್ವವನ್ನು ನಿರ್ಣಯಿಸುವ ಜ್ಞಾನವು ಧ್ಯಾನವಿಷಯದಲ್ಲಿ ಕಾರ್ಯಕಾರಿಯಾಗುವದಿಲ್ಲ ॥ ೪೪ ॥

ಸತ್ಯಧ್ಯಾನರ ತಾತ್ಪರ್ಯವು — "ವೇದದಿಂದ ಆಪಾತತಃ ತೋರುವ ಸ್ವರ್ಗಾದಿಗಳೇ ಫಲವೆಂದು ಇಟ್ಟುಕೊಂಡು ಈಶ್ವರನು ಇಲ್ಲ, ಮೋಕ್ಷವಿಲ್ಲ, ಎಂದು ಹೇಳುತ್ತಾ ಯಾವಾಗಲೂ ನಶ್ವರವಾದ ಸ್ತ್ರೀ–ಪುತ್ರ ಧನಾದಿಗಳನ್ನೇ ಇಚ್ಛಿಸುತ್ತ ಅವುಗಳಿಗೋಸ್ಕರವೇ ಯಜ್ಞಾದಿಗಳನ್ನು ಅಜ್ಞರಂತೆ ಮಾಡುತ್ತಿದ್ದರೆ ಯಥಾರ್ಥವಾದ ಭಗವತ್ತತ್ವ ನಿಶ್ಚಯವು ಆಗದೆ ಮೋಕ್ಷವನ್ನು ಹೊಂದದೇ ಪುನಃ ಪುನಃ ಜನನ-ಮರಣಾದಿಗಳನ್ನು ಹೊಂದುತ್ತಾನೆ. ಆದುದರಿಂದ ದುಃಖವುಂಟಾಗುವದರಿಂದ **ज्योतिष्ठोमेन स्वर्गकामोयजेत** ಇತ್ಯಾದಿ ವಾಕ್ಯಗಳು ಜ್ಯೋತಿಷ್ಟೋಮಯಾಗದಿಂದ ಸ್ವರ್ಗವು ಪ್ರಾಪ್ತವಾಗುತ್ತದೆಂದು ಹೇಳಿದಂತೆ ತೋರಿದರೂ ಈ ವೇದಕ್ಕೆ ನಶ್ವರವಾದ ಸ್ವರ್ಗವೇ ಫಲವೆಂದು ಹೇಳುವದರಲ್ಲಿ ತಾತ್ಪರ್ಯವಿಲ್ಲ. **"यन्न दुखेन सम्भिन्न नचग्रस्तमनंतरं । अभिलाषोपनीतं च सुखं स्वर्ग पदास्पदं** ಎಂಬ ಪ್ರಮಾಣದಲ್ಲಿ ಹೇಳಿರುವಂತೆ ಸ್ವರ್ಗಶಬ್ದವಾಚ್ಯವಾದ ಅತ್ಯಂತ ದುಃಖನಾಶಪೂರ್ವಕವಾದ ನಿತ್ಯಸುಖರೂಪವಾದ ಮೋಕ್ಷವೇ ಯಜ್ಞಾದಿಗಳಿಗೆ ಮುಖ್ಯ ಫಲವೆಂದು ತಾತ್ಪರ್ಯವು".

ಕರ್ಮವನ್ನೇ ಪ್ರಧಾನವಾಗಿ ಇಟ್ಟುಕೊಂಡ ಮೀಮಾಂಸಕ ಮತದ ನಿಂದೆ ಇಲ್ಲಿ ಅದೆ (ವೈದಿಕರಲ್ಲಿ ಯಜ್ಞದಿಂದ ಸ್ವರ್ಗವು ದೊರೆಯುತ್ತದೆಂದು ಹೇಳುವವರು). ವೇದಗಳು ತಮ್ಮ ವಿಧಿಗಳಿಂದ ಸ್ವರ್ಗಕ್ಕಾಗಿ ಯಜ್ಞ ಮಾಡಬೇಕೆಂದು ಹೇಳುವವರನ್ನು ಕೃಷ್ಣನು ನಿಂದಿಸುತ್ತಾನೆ ಅವರಿಗೆ ದೇವರಲ್ಲಿ ವಿಶ್ವಾಸವಿಲ್ಲ; ಮುಕ್ತಿಯು ಅವರಿಗೆ ಗುರಿಯಲ್ಲ. ಅವರಿಗೆ ಮನಃಪ್ರಸಾದವಿಲ್ಲ. ವೇದದಲ್ಲಿಯ ಕರ್ಮಕಾಂಡಕ್ಕೆ

ಮಾರುಹೋದ ಮಹಾನುಭಾವರಿವರು. ಶಂಕರಾಚಾರ್ಯರ ಮೊದಲು ಪ್ರಚಾರ ದಲ್ಲಿದ್ದರು ಶಂಕರಾಚಾರ್ಯರು ತಮ್ಮ ವಾದಚಾತುರ್ಯದಿಂದ ಈ ಮತದವರನ್ನು ಸೋಲಿಸಿದರು ಬ್ರಹ್ಮಸೂತ್ರಗಳು ಗೀತೆಯೂ ಇಚ್ಛಾಪೂರ್ತಿಗಾಗಿ ಯಜ್ಞಮಾಡು ವದನ್ನು ನಿಷ್ಠುರವಾಗಿ ಖಂಡಿಸಿದವು. ಉಪನಿಷತ್ತುಗಳೇ ಈ ರೀತಿಯಾಗಿ ಈ ಮೀಮಾಂಸಕರನ್ನು ನಿಂದಿಸುತ್ತವೆ

**इष्टापूर्तं मन्यमानावरिष्टं नान्यच्छ्रेयोवेदयते प्रमूढाः ।**
**नाकस्यपृष्ठे ते सुकृतेऽनुभूत्वेमं लोकं हीनतरं विशंति ॥**

**मुंड १-२-१०**

(ಇಂಥ ಜ್ಞಾನರಹಿತವಾದ ಹೀನ ಉದ್ದೇಶಕ್ಕಾಗಿ ಉಪಯೋಗಿಸುವ ಕರ್ಮದ ನಿಂದೆಯು ಈಶಾವಾಸ್ಯ ಮತ್ತು ಕಠೋಪನಿಷತ್ತುಗಳಲ್ಲಿಯೇ ತೋರಿಬರುತ್ತದೆ. **(कठ २–५) (ईश १–१२)** । "ಇಷ್ಟಾ ಮತ್ತು ಪೂರ್ತಿಗಳು ಶ್ರೇಷ್ಠವಾದವು, ಉಳಿದುದು ಯಾವದೂ ಶ್ರೇಷ್ಠವಾದುದಲ್ಲ. ಇಂಥ ಮೂರ್ಖರು ಸ್ವರ್ಗದಲ್ಲಿ ಪುಣ್ಯವನ್ನು ಅನುಭವಿಸಿ ಮತ್ತೆ ಕೆಳಗೆ ಇರುವ ಈ ಜೀವಲೋಕಕ್ಕೆ ಬರುತ್ತಾರೆ". ಇಂಥ ಕಾಮ್ಯಕರ್ಮವನ್ನು ಬೆನ್ನುಹತ್ತಿದರೆ ಮತ್ತೆ ಸ್ವರ್ಗ ಮತ್ತೆ ಭೂಮಿ ಈ ರೀತಿ ಯಾಗಿ ತಿರುಗುವದು ತಪ್ಪಿದ್ದಲ್ಲ. ಮತ್ತು ಅವರ ಬುದ್ಧಿಯು ಈ ಕೆಲಸದಿಂದ ಆ ಕೆಲಸ ಅದರಿಂದ ಮತ್ತೊಂದು ಹೀಗೆ ತಿರುಗುತ್ತಿರುವದರಿಂದ ಅವರಿಗೆ ಮೋಕ್ಷಕ್ಕೆ ಬೇಕಾದ ಏಕಾಗ್ರ ಮನಸು ಉಳಿಯುವದಿಲ್ಲ.

ಇದೆಲ್ಲವನ್ನು ಸಂಗ್ರಹಿಸಿ ರಾಘವೇಂದ್ರರು ತಮ್ಮ ವಿವೃತಿಯಲ್ಲಿ ಈ ಶ್ಲೋಕ ಗಳಿಗೆ ಸಂಗತಿಯನ್ನು ಹೀಗೆ ಕೊಡುತ್ತಾರೆ— ಅವೈದಿಕ ಮತಗಳು ಅಪ್ರಾಮಾಣಿಕ ವಾದುದರಿಂದ ಅವುಗಳು ವಿಶ್ವಾಸಕ್ಕೆ ಅರ್ಹವಾಗದಿದ್ದರೂ ವೈದಿಕ ಮತಗಳಲ್ಲಿ ಕೆಲವು ಕರ್ಮಗಳು ಸ್ವರ್ಗಾದಿಫಲವುಳ್ಳವೆಂದು ಸ್ವರ್ಗಾದಿ ಫಲಗಳು ಕಾಮ್ಯಗಳೆಂದೇ ಹೇಳು ತ್ತಾರೆ. ಈಶ್ವರಾರ್ಪಣ ಬುದ್ಧಿಯಿಂದ ಮಾಡಿದವು ನಿಷ್ಕಾಮ ಕರ್ಮಗಳು. ಇವೇ ಜ್ಞಾನದ ಸಲುವಾಗಿ ಮಾಡಿದ ಕರ್ಮಗಳು. ಆದುದರಿಂದ ನಿನ್ನ ಮಾತಿನಲ್ಲಿ ಹೇಗೆ ವಿಶ್ವಾಸವಿಡಬೇಕೆಂದು ಅರ್ಜುನನು ಭಗವಂತನನ್ನು ಕೇಳಿದಾಗ ಭಗವಂತನು ಆ ಮೀಮಾಂಸಕರು ವೈದಿಕ ಆಭಾಸರು (ಮೇಲೆ ತೋರಲಿಕ್ಕೆ ಮಾತ್ರ ವೈದಿಕರು) ಎಂದು ಹೇಳುತ್ತಾನೆ.

"ಸ್ವರ್ಗದ ಸುಖೋಪಭೋಗದ ಆಮಿಷವನ್ನು ಜನರ ಮುಂದಿಟ್ಟು ಕೇವಲ ಕರ್ಮಕಾಂಡದ ಪ್ರಸ್ತವನ್ನು ಬೆಳೆಸಿದ್ದಾರೆ, ......ಇವರು ವೇದವೇತ್ತರಲ್ಲ, ವೇದ ವಾದಿಗಳು ಬರಿ ವೇದ ಪಾಠಕರು. ಮರವು ಹೂ ಬಿಟ್ಟಾಗ ಅದರಿಂದ ಉಂಟಾಗುವ

ಫಲಕ್ಕೆ ದಾರಿ ಕಾಯದೆ ಹೂವಿನ ಪರಿಮಳಕ್ಕಾಗಿ ಆತುರತೆಯಿಂದ ಹೂವನ್ನೇ ಕಿತ್ತು ಕೊಂಡು (**पुष्पितां वाच**) ಹಣ್ಣನ್ನೇ (ಮೋಕ್ಷವನ್ನೇ) ಕಳೆದುಕೊಳ್ಳುತ್ತಾರೆ" ಎಂದು ಪೇಜಾವರ ಶ್ರೀಗಳವರು ತಾತ್ಪರ್ಯ ತೆಗೆದಿದ್ದಾರೆ ವೇದಗಳಲ್ಲಿ ಅಭಿರುಚಿ ಹುಟ್ಟಿಸಲಿಕ್ಕೆ ಅದರ ಸ್ವರ್ಗಾದಿ ಫಲಗಳನ್ನು ಹೇಳಿದ್ದಾರೆ (**रोचनार्थंतु फलश्रुतिः**) ಛಾಂದೋಗ್ಯ ಉಪನಿಷತ್ತಿನಲ್ಲಿ ಮೃತ್ಯುವು ಜೀವನನ್ನು ಬೆನ್ನು ಹತ್ತಿದಾಗ ಜೀವನು ವೇದಗಳ ಆಶ್ರಯವನ್ನು ಹೊಂದಿದನೆಂದು ಹೇಳಿದೆ ವೇದದಲ್ಲಿ ಮೇಲೆ ಮೇಲೆ ತೇಲಾಡಿದರೆ ಏನೂ ಪ್ರಯೋಜನವಿಲ್ಲ ಆಳವಾಗಿ ಹೊಕ್ಕು ಅದರ ಅರ್ಥ ವನ್ನು ವಿಮರ್ಶಿಸಿದರೆ ನಾವು ಮೃತ್ಯುವಿನಿಂದ ಪಾರಾಗುತ್ತೇವೆ ಅಮೃತತ್ವದ ಕಡೆಗೆ ಸಾಗುತ್ತೇವೆ

**वेदवादरता** —– ಲೋಕಮಾನ್ಯ ಟಿಳಕರು ' ವೇದದಲ್ಲಿಯ ಫಲಶ್ರುತಿಯ ವಾಕ್ಯಗಳಿಗೆ ಮನಸೋತವರು ' ಎಂದು ಅರ್ಥೈಸಿದ್ದಾರೆ " ವೇದದ ಪರಮಾರ್ಥ ಗಳನ್ನರಿಯದೇ ತೋರಿಕೆಯ ಅರ್ಥಗಳನ್ನು ವಾದಿಸುವವರು " ಭಾರತ ಪ್ರಕಾಶನ ದವರು ಹೇಳಿದ ಅರ್ಥವು. **फलसाधनप्रकाशकेषु वेदवाक्येषु रताः** ಶಂಕರಾ ಚಾರ್ಯರ ಭಾಷ್ಯ. **वेदेषु ये स्वर्गादि फलवादाः तेषुसक्ताः** ರಾಮಾನು ಜಾಚಾರ್ಯರು ಹೇಳಿದ ಅರ್ಥ ಭಾರತ ಪ್ರಕಾಶನವನ್ನು ಬಿಟ್ಟು ಉಳಿದ ಮೂರು ಒಂದೇ ಅರ್ಥವನ್ನು ಸೂಚಿಸುತ್ತವೆ ಅದರೆ ಮಧ್ವಾಚಾರ್ಯರು ಮಾತ್ರ **कामादिवाचक वेदवादरताः – वेदैः यन्मुखतः उच्यते तत्रैवरताः** " ಶಬ್ದ ಶಬ್ದಾರ್ಥದಲ್ಲಿಯೇ ರತರಾದವರು " ಎಂದು ಹೇಳುತ್ತಾರೆ ವೇದದ ಯಾವದೇ ಭಾಗದಲ್ಲಿ ಶಬ್ದಶಬ್ದಾರ್ಥವು ಫಲಶ್ರುತಿಯನ್ನು ಹೇಳುತ್ತಿದ್ದರೂ ಅದೇ ವಾಕ್ಯಕ್ಕೆ ಪರಮ ಮುಖ್ಯವೃತ್ತಿಯಿಂದ ಒಂದು ಗೂಢಾರ್ಥವಿರುತ್ತದೆ ಆ ಅರ್ಥವು ಪರ ಮಾತ್ಮನನ್ನೇ ಬೋಧಿಸುತ್ತದೆಂದು ಮಧ್ವಾಚಾರ್ಯರು ಹೇಳುತ್ತಾರೆ ಆದುದರಿಂದ ವೇದದ ಎಲ್ಲ ಭಾಗಗಳೂ ಪರಮಾತ್ಮನನ್ನೇ ಬೋಧಿಸುತ್ತವೆ ಎಂದು ಇವರ ಮತ ಆದರೆ ಉಳಿದವರು ಫಲ ಹೇಳುವ ವಾಕ್ಯಗಳನ್ನು ಅಷ್ಟು ಬಿಡಬೇಕು. ಅವು ಕರ್ಮ ಕಾಂಡ ಎಂದು ಹೇಳುತ್ತಾರೆ

ಆಧುನಿಕ ಕೆಲವು ವಿಮರ್ಶಕರು **वेदवादरताः** ಎಂದು ಹೇಳುವದರಿಂದ ಕೃಷ್ಣನು ವೇದಗಳನ್ನೇ ನಿಂದಿಸುತ್ತಾನೆಂದು ಅಭಿಪ್ರಾಯ ಪಡುತ್ತಾರೆ. * ಆದರೆ ಭಗವಂತನು

* ಸಾತವಳೇಕರರು — "**वेदवादरताः** ಎಂಬ ಪದವನ್ನು ಗೀತೆಯಲ್ಲಿ ನೋಡಿ ಇಲ್ಲಿ ವೇದ ಧರ್ಮವನ್ನು ನಿಂದಿಸಿದ್ದಾರೆಂಬ ತಿಳುವಳಿಕೆಯು ತಪ್ಪು. ಯಾಕೆಂದರೆ ಗೀತೆಯಲ್ಲಿ —

ಇನ್ನು ಕೆಲವು ಸ್ಥಳಗಳಲ್ಲಿ ಗೀತೆಯು ವೇದಗಳ ಮೇಲೆ ನಿಂತಿದೆ ಎಂದು ಹೇಳುತ್ತಾನೆ ವೈದಿಕವಾದ ಯಜ್ಞದಾನತಪಃ ಕರ್ಮಗಳನ್ನು ಮಾಡಲೇಬೇಕೆಂದು ಹೇಳುತ್ತಾನೆ ಫಲಾಪೇಕ್ಷೆ ಇಲ್ಲದೇ ಮಾಡಬೇಕೆಂದು ಹೇಳುತ್ತಾನೆ ಅರ್ಥವಾದಗಳಾದ ಫಲಶ್ರುತಿಗಳನ್ನು ನಿಂದಿಸುತ್ತಾನೆಂದು ಶಂಕರಾಚಾರ್ಯರು ಹೇಳುತ್ತಾರೆ. ಆದರೆ ಪರಮಾತ್ಮನು ನಿಂದಿಸುವದು ಮೇಲೆ ತೋರುವ ಫಲಾಪೇಕ್ಷೆಗಳಿಂದ ಮಾಡುವ ಕರ್ಮಗಳನ್ನು ಮಾತ್ರ; ಆ ಶ್ರುತಿಗಳೆಲ್ಲ ವಿದ್ವದ್ ರೂಢಿಯಿಂದ ಪರಮಾತ್ಮನನ್ನೇ ಬೋಧಿಸುತ್ತವೆಂದು ಮಧ್ವಾಚಾರ್ಯರು ಹೇಳುತ್ತಾರೆ ಇದನ್ನು ಪ್ರಥಮಾಧ್ಯಾಯದಲ್ಲಿ ಬ್ರಹ್ಮಸೂತ್ರಗಳು ಪ್ರತಿಪಾದಿಸುತ್ತವೆ. ವೇದದ ಪ್ರತಿವರ್ಣ, ಪದ, ವಾಕ್ಯಗಳು ಪರಬ್ರಹ್ಮನನ್ನು ವರ್ಣಿಸುತ್ತವೆ * ಆದುದರಿಂದ ವೇದಗಳಲ್ಲಿ ಕೆಲವು ಕರ್ಮಕಾಂಡವೆಂದೂ, ಕೆಲವು ಉಪಾಸನಾಕಾಂಡವೆಂದೂ ಆದುದರಿಂದ ಅಪ್ರಮಾಣವೆಂದೂ ಹೇಳುವದು ಸರಿಯಲ್ಲ. ( ಎಲ್ಲವೂ ಬ್ರಹ್ಮನನ್ನೇ ವರ್ಣಿಸುವದರಿಂದ ) ೧) ವೇದದ ಕೆಲವು ಭಾಗಗಳು ಪ್ರಮಾಣವಲ್ಲವೆಂದು ವಾದಿಸುವವರೂ, ೨) ವೇದಪಾರಮಾಡುವದರಲ್ಲಿಯೇ ಕಾಲಕಳೆಯುವವರು, ೩) ವೇದದ ಫಲಶ್ರುತಿಗಳ ಮೇಲಿನ ಅರ್ಥದಲ್ಲಿ ತೊಡಗಿದವರೂ ಎಂದು **वेदवादरताः** ಕ್ಕೆ ಮೂರು ಅರ್ಥಗಳನ್ನು ಹೇಳುತ್ತಾರೆ.

ಒಟ್ಟಾರೆ ಈ ಶ್ಲೋಕಗಳಲ್ಲಿ ತಿರಸ್ಕೃತರಾದವರು ವೈದಿಕರಲ್ಲಿಯೇ ಕೆಲವು ಜನರು— १) **नान्यदस्तीति वादिनः** ಬ್ರಹ್ಮ ಮುಕ್ತಿಗಳು ಇವೆಯೆಂದು ನಂಬದವರು. २) **स्वर्गपराः** ಸ್ವರ್ಗ ಮತ್ತು ಸ್ವರ್ಗಸುಖಗಳಿಗಾಗಿ ಮಾತ್ರ ಯತ್ನಿಸುವವರು. ३) **जन्मकर्मफलप्रदां** ಮರಣದ ತರುವಾಯ ತಮಗೆ ಜನ್ಮ, ಈಗಿನ ಕರ್ಮದ ಫಲ ದೊರೆಯುವದೆಂದು ಹೇಳುವವರು — ಇವರನ್ನು ನಿಂದಿಸುತ್ತಾನೆ. ಅದಕ್ಕೆ ಶ್ರೀಕೃಷ್ಣನು ಸುಖಭೋಗವನ್ನೂ ಐಶ್ವರ್ಯವನ್ನೂ ಹೊಂದುವ ಆಶೆಯುಳ್ಳವರನ್ನೂ ಅದರಲ್ಲಿ ಮನಸು ಮಗ್ನರಾದವರನ್ನೂ ನಿಂದಿಸುತ್ತಾನೆ.

---

**वेदानां सामवेदोऽस्मि** (೧೦-೨೨) **वेदैश्च सर्वैरहमेववेद्यः** (೧೫—೧೫) **वेदविदेवचाहम्** (೧೫-೧೫) **(अह) ऋक् सामयजुरे वच** ೯—೧೭ ಹಾಗಿದ್ದರೆ ಈ ಮಾತುಗಳು ಗೀತೆಯಲ್ಲಿ ಬರುತ್ತಿರಲಿಲ್ಲ ಇಲ್ಲಿ ಬರೇ ವೇದಗಳ ಬರೀ ವಾದ ಮಾಡುವವರ ನಿಂದೆಯನ್ನು ಮಾಡುತ್ತಾರೆ. ವೇದಧರ್ಮದ ನಿಂದೆಯು ಇಲ್ಲಿ ಇಲ್ಲ. "

---

* ಆದರೆ ಮೀಮಾಂಸಕರು ಮಾತ್ರ ಎಲ್ಲ ವೇದಗಳೂ ಮುಖ್ಯವಾಗಿ ಕರ್ಮವನ್ನೇ ಪ್ರತಿಪಾದಿಸುತ್ತವೆಂದು ಹೇಳುತ್ತಾರೆ.

ಚಿದ್ಭವಾನಂದರು ತಮ್ಮ The Bhagavad Gita ದಲ್ಲಿ ಈ ಶ್ಲೋಕದ ಸಾರವನ್ನು ಲಕ್ಷಣವಾಗಿ ಹೇಳಿದ್ದಾರೆ— Rituals simply distract the mind. Samadhi Cannot be had from them ಯಜ್ಞಯಾಗಾದಿಗಳು ಮನಸ್ಸನ್ನು ಉದ್ವಿಗ್ನಗೊಳಿಸುತ್ತವೆ. ಆದರಿಂದ ಮನಸು ಏಕಾಗ್ರವಾಗಿ ಧ್ಯಾನದಲ್ಲಿ ಉಳಿಯುವದಿಲ್ಲ.

**पुष्पितावाक्** ಪುಷ್ಪದಂತಿರುವ ಮಾತುಗಳು, ಫಲಕೊಡುವ ಮೊದಲು ಪುಷ್ಪಗಳು ಬರುತ್ತವೆ ಆದುದರಿಂದ ಮಧ್ವಾಚಾರ್ಯರು ಮುಕ್ತಿಯಕಿಂತ ಮೊದಲು ಬರುವ ಸ್ವರ್ಗ ಸುಖಗಳು ಹೂವುಗಳು ಮುಕ್ತಿಯು ಫಲವು ಮುಕ್ತಿಯು ಮೊದಲು ಸ್ವರ್ಗಾದಿಗಳು ದೊರೆಯುತ್ತವೆ ಆದರೆ ಯಾವಾಗಲೂ ಮುಕ್ತಿ ದೊರೆಯುವ ಮೊದಲು ಸ್ವರ್ಗಸಿಗುವದಿಲ್ಲ ಸ್ವರ್ಗವಿಲ್ಲದೇ ಜೀವನು ಮುಕ್ತಿಗೆ ಹೋಗಬಹುದು.

**समाधौ** — ಶಂಕರ_ರಾಮಾನುಜರು— "ಮನಸ್ಸು" ಎಂದು ಹೇಳುತ್ತಾರೆ. "ನಿಜವಾದ ನಿರ್ಣಯವು ಮನಸಿನಲ್ಲಿ ಹುಟ್ಟುವದಿಲ್ಲ" ಎಂದು ಅರ್ಥ. ಮಧ್ವರು ಮಾತ್ರ ಪ್ರಮಾಣಗಳಿಂದ ನಿರ್ಣೀತವಾದ ಜ್ಞಾನವು ಮನಸಿಗೆ ಭಗವಂತನಲ್ಲಿ ವಿಶ್ವಾಸ ವಿಟ್ಟು ಶಾಂತಿಯನ್ನು ದೊರಕಿಸಲಿಕ್ಕೆ ಸಹಾಯವಾಗುವದಿಲ್ಲ ಅದಕ್ಕೆ ರಾಘವೇಂದ್ರರು **प्रमाणनिर्णीतार्थनिश्चयरूपा बुद्धिः भगवति मनः समाधानार्थं न विधीयते** ಎಂದು ಸ್ಪಷ್ಟಪಡಿಸುತ್ತಾರೆ **सम** ಎಂದರೆ ಪರಮಾತ್ಮನು; ಆದುದರಿಂದ **समाधि** ಎಂದರೆ ದೇವರಲ್ಲಿ ಇಟ್ಟ ವಿಶ್ವಾಸ. ಶಂಕರಾಚಾರ್ಯರ ಅರ್ಥ (ಮನಸು) ಎಂಬುದನ್ನು ಬಿಟ್ಟು 'ದೇವರ ಮೇಲೆ ವಿಶ್ವಾಸ' ಎಂಬ ಅರ್ಥದಲ್ಲಿ ಅಥವಾ ದೇವನಲ್ಲಿ ಏಕಾಗ್ರತೆ ಎಂಬ ಅರ್ಥವನ್ನು ನೀಲಕಂಠ ಮತ್ತು ಶ್ರೀಧರರು ಹೇಳುತ್ತಾರೆ ಭಾಷ್ಯೋತ್ಕರ್ಷ ದೀಪಿಕಾಕಾರರೂ ಇದೇ ಅರ್ಥ ಬರುವಂತೆ ಯತ್ನಿಸುತ್ತಾರೆ

ಆರ್. ಬಿ ಲಾಲ್ ಅವರು ಈ ಶ್ಲೋಕದ ಮೇಲೆ ಹೀಗೆ ಬರೆಯುತ್ತಾರೆ— ' A follower of the path of Buddhi follows the spirit of religious teachings and not their letter, knowing full well that dogma and ritualism are not the essence of spiritual life; keeps the intellect clear of self ful desires anger and other strong emotions. The scriptures useful as they are, are no substitute for a man's own intelligence".

———

**त्रैगुण्यविषया वेदा निस्त्रैगुण्यो भवार्जुन ।**
**निर्द्वंद्वो नित्यसत्वस्थो निर्योगक्षेमआत्मवान् ॥ ४५ ॥**

ಎಲೈ ಅರ್ಜುನನೇ ! ವೇದಗಳು ಸತ್ವರಜಸ್ತಮೋಗುಣಗಳ ಕಾರ್ಯಗಳಾದ ಸ್ವರ್ಗಾದಿಗಳನ್ನು ಫಲವೆಂದು ಆಪಾತತಃ ಪ್ರತಿಪಾದಿಸುತ್ತವೆ. ನೀನು ಸತ್ವರಜಸ್ತಮೋಗುಣಗಳಿಂದ ಹುಟ್ಟಿದ ಸ್ವರ್ಗಾದಿಗಳಿಂದ ನಿವೃತ್ತನಾಗು. ಸುಖ-ದುಃಖ ರೂಪಗಳಾದ ದ್ವಂದ್ವಗಳಿಂದ ದೂರಾಗು. ನಿರಂತರವೂ ಪರಮಾತ್ಮನಲ್ಲಿದ್ದು ಸರ್ವದಾ ಪರಮಾತ್ಮನನ್ನೇ ಸ್ಮರಿಸು ಇಲ್ಲದ್ದನ್ನು ಸಂಪಾದಿಸುವ ಗೋಜಿಗೆ (ಯೋಗ)ಇದ್ದದ್ದನ್ನು ರಕ್ಷಿಸುವ ಗೋಜಿಗೆ **(ಕ್ಷೇಮ)**ಹೋಗದೇ ಪರಮಾತ್ಮನೇ ಸ್ವಾಮಿಯೆಂದು ನಿತ್ಯ ಸ್ಮರಿಸು.

ತಾತ್ಪರ್ಯ— "ನೀನು ನಶ್ವರವಾದ ಇಂದ್ರಲೋಕರೂಪವಾದ ತ್ರಿಗುಣಾತ್ಮಕ ಸ್ವರ್ಗವನ್ನು ಇಚ್ಛಿಸದೆ ಐಹಿಕವಾದ ಸುಖವನ್ನು ದುಃಖದಂತೆ ಹೇಯವೆಂದು ತಿಳಿದು ಸರ್ವದಾ ಪರಮಾತ್ಮನಲ್ಲಿ ಮನಸ್ಸನ್ನು ಇಟ್ಟು ಸರ್ವಕಾಲದಲ್ಲಿಯೂ ನನ್ನ ಧ್ಯಾನ ಮಾಡುವವರ ಯೋಗಕ್ಷೇಮವನ್ನು ನಾನು (ಶ್ರೀಕೃಷ್ಣನು) ವಹಿಸುತ್ತಿದ್ದುದರಿಂದ ಅದಕ್ಕಾಗಿ ಮನುಷ್ಯರು ಯತ್ನ ಮಾಡದೆ, ಅಪ್ರಮತ್ತರಾಗಿ ಕಾಲವನ್ನು ವ್ಯರ್ಥ ಮಾಡಿಕೊಳ್ಳದೆ ಸರ್ವದಾ ಪರಮಾತ್ಮನ ಧ್ಯಾನವನ್ನು ಮಾಡಿ ಮೋಕ್ಷಾದಿ ಪುರುಷಾರ್ಥಗಳನ್ನು ಹೊಂದಬೇಕು.

**ವಿಶೇಷ ಟಿಪ್ಪಣಿಗಳು :**

ಈ ಶ್ಲೋಕದ ಮೊದಲಿನ ಸಾಲನ್ನು ಅರ್ಥೈಯಿಸುವದು ಬಹಳ ಕಠಿಣ ತೋರುತ್ತದೆ. ಶ್ರೀಕೃಷ್ಣನು ವೇದವನ್ನು ಧಿಃಕ್ಕರಿಸುವಂತೆ ಮೇಲೆ ಮೇಲೆ ಓದಿದವರಿಗೆ ಎನಿಸುತ್ತದೆ; ಮತ್ತು ಅರ್ಜುನನಿಗೆ ಅವುಗಳನ್ನು ತಿರಸ್ಕರಿಸಲಿಕ್ಕೆ ಉಪದೇಶಿಸುವಂತೆ ತೋರುತ್ತದೆ. ಆದರೆ ಹಿಂದೆ ಹೇಳಿದಂತೆ ವೈದಿಕ ಧರ್ಮವನ್ನೇ ಪ್ರತಿಷ್ಠಾಪಿಸಲಿಕ್ಕೆ ಅವತಾರ ಮಾಡಿದ ಶ್ರೀಕೃಷ್ಣನು ವೇದಗಳನ್ನು ಹೇಗೆ ಅಲ್ಲಗಳೆಯುತ್ತಾನೆ ಎಂಬುದೊಂದು ದೊಡ್ಡ ಕಗ್ಗಂಟು.

ಶಂಕರಾಚಾರ್ಯರು **त्रैगुण्यं संसारः विषयः प्रकाशयितव्यः येषां ते** ತ್ರಿಗುಣಗಳ (ಸತ್ವರಜಸ್ತಮೋಗುಣಗಳ) ಪರಿಣಾಮವಾದ ಸಂಸಾರವೆಂದು ಹೇಳುತ್ತಾರೆ. ಇಲ್ಲಿ ವೇದಗಳೆಂದರೆ ಕರ್ಮಕಾಂಡಾತ್ಮಕವಾದ ವೇದಗಳು. ಈ ವಾಕ್ಯಕ್ಕೂ **निस्त्रैगुण्यः** ಎಂಬ ವಾಕ್ಯಕ್ಕೂ ಕಟುವಾದ ವಿರೋಧವದೆ. ರಾಮಾನುಜಾಚಾರ್ಯರು **सत्वरजस्तमःप्रचुराः पुरुषाः त्रैगुण्यं तद्विषयाः वेदा तेषां हितं अवबोध-**

**षया वेदाः ।** ವೇದಗಳು ಈ ಮೂರು ಗುಣಗಳುಳ್ಳ ಜನರಿಗೆ ಉಪದೇಶವನ್ನು ಮಾಡುತ್ತವೆ ಆದರೆ ಮುಮುಕ್ಷುಗಳು ಸಾತ್ವಿಕ ಪ್ರಚುರರಿಗೆ ಹೇಳಿದುದನ್ನು ಬಿಟ್ಟು ರಾಜಸ ಪ್ರಚುರರಿಗೆ, ತಾಮಸ ಪ್ರಚುರರಿಗೆ ಹೇಳಿದ್ದರಲ್ಲಿ ಅನುಪಾದೇಯ ವಾದುದನ್ನು ಬಿಟ್ಟುಬಿಡಬೇಕು ಎಂದು ಹೇಳುತ್ತಾರೆ. ಆದರೆ ಮಧ್ವಾಚಾರ್ಯರು ಮಾತ್ರ **विषय** ಶಬ್ದಕ್ಕೆ ಬಹಳ ಮಹತ್ವ ಕೊಟ್ಟಿದ್ದಾರೆ **विषय**ವೆಂದರೆ 'ಹೇಳುವ ಅರ್ಥ' ಆದರೆ **विषय**ವೆಂದರೆ ಶಂಕರಾಚಾರ್ಯರು ಇದೇ ಅರ್ಥದಲ್ಲಿ ಸ್ವೀಕರಿಸಿದ್ದರೂ ರಾಮಾನುಜರು ಮಾತ್ರ— "ಯಾರ ವಿಷಯವಾಗಿ ಹೇಳಿದೆಯೋ ಅವರು" ಎಂದು ಹೇಳುತ್ತಾರೆ. ಮಧ್ವಾಚಾರ್ಯರು ಕೋಶದ ಆಧಾರದಿಂದ **"वादो विषयश्चैव मुखतो वचनं स्मृतम् ।** ವಾದ ಮತ್ತು ವಿಷಯಗಳೆಂದರೆ 'ಮೇಲೆ ತೋರುವ ಅರ್ಥವು' ಎಂದು ಹೇಳುತ್ತಾರೆ. (**वेद वाद** ೪೧ನೇ ಶ್ಲೋಕದಲ್ಲಿ ಇಲ್ಲಿ **विषय**) "ಈ ಮೇಲೆ ತೋರುವ ಅರ್ಥವನ್ನೂ ಬಿಟ್ಟು ಒಂದು ತರಹವಾಗಿ ರುವ ಒಳಗಿನ ಅರ್ಥವನ್ನು ಸ್ವೀಕರಿಸು" ಎಂದು ಅರ್ಥವೆಂದು ಹೇಳುತ್ತಾರೆ.

ಮಧ್ವಾಚಾರ್ಯರ ಈ ಅರ್ಥದಲ್ಲಿ ಕರ್ಮವನ್ನು ಪ್ರತಿಪಾದಿಸುತ್ತಿದೆಯೆಂದು ಕರ್ಮಕಾಂಡವನ್ನಾಗಲಿ, ರಾಜಸರಿಗೆ ತಾಮಸರಿಗೆ ಹೇಳಿದ್ದೆಂದು ಆ ಭಾಗಗಳನ್ನಾಗಲಿ ಬಿಡಬೇಕಾದ ಪ್ರಸಕ್ತಿಯಿಲ್ಲ. ಮೇಲೆ ತೋರುವ ಅರ್ಥವನ್ನು ಬಿಟ್ಟು ವಿದ್ವದ್ರೂಢಿ ಯಿಂದ ಗೊತ್ತಾದ ಗೂಢಾರ್ಥವನ್ನು ಸ್ವೀಕರಿಸಬೇಕೆಂದು ಮಧ್ವಾಚಾರ್ಯರು ಅಭಿಪ್ರಾಯಪಡುತ್ತಾರೆ *

ಶಂಕರಾನಂದರು ಎಲ್ಲೆಡೆಯಲ್ಲಿಯೂ ಅದ್ವೈತವನ್ನೇ ಕಾಣುತ್ತಾರೆ. ಆದಕ್ಕೆ ಪದಗಳು ಅನುಕೂಲವಿರಲಿ ಬಿಡಲಿ; ಸಂದರ್ಭವಿರಲಿ ಬಿಡಲಿ; ಸದ್ಯಕ್ಕೆ ಶ್ರೀಕೃಷ್ಣನು

---

* ಋಗ್ವೇದಾದಿ ನಾಲ್ಕು ವೇದಗಳಿಗೆ **अपरा विद्या** ಎಂದು ಕರೆದಿದ್ದಾರೆ. ಅದು ಬರಿ ಶಾಬ್ದಿಕವಿದ್ಯೆ **पराविद्या** ಎಂದರೆ ಯಾವ ವಿದ್ಯೆಯು ಅನುಭವಸಿದ್ಧವಿರುತ್ತದೆ ಅದು **पराविद्या** ಎಂದು ಸಾತವಳೆಕರರು ಹೇಳಿದ್ದಾರೆ. ಆದರೆ **ता एव परमाविद्या यदा विष्णोस्तु-वाचकाः** ಆ ಋಗ್ವೇದಾದಿಗಳೇ ವಿದ್ವದ್ರೂಢಿಯಿಂದ ಮಹಾಯೋಗದಿಂದ ಗೊತ್ತಾದ ಗೂಢಾರ್ಥವನ್ನು (ಪರಮಾತ್ಮನನ್ನು) ಬೋಧಿಸುವಾಗ **पराविद्या** ಎನಿಸುವವು ಎಂದು ಮಧ್ವಾಚಾರ್ಯರ ಮತ ವೇದಗಳು ತ್ರೈಗುಣ್ಯವಿಷಯಗಳೆಂದು ಹೇಳಿದ್ದಾರೆ. ಮೂರು ಗುಣಗಳಿಂದ ಕೂಡಿದ ವಿಷಯಗಳು ವೇದದಲ್ಲಿ ಇವೆ. ನೀನು ರಜೋಗುಣ ತಮೋಗುಣಗಳನ್ನು ದಾಟಿ ಸತ್ವ ಗುಣದಲ್ಲಿ ನಿಲ್ಲು ಇದೇ ಗುಣಾತೀತಾವಸ್ಥಾ; ಇದೇ ನಿಸ್ತ್ರೈಗುಣ್ಯಾವಸ್ಥಾ " ಎಂದು ಸಾತವಳೇಕರರು ಹೇಳುತ್ತಾರೆ.

ವೇದ ಸಹಿತವಾದ ಜಗತ್ತನ್ನು ಬಿಡಲಿಕ್ಕೆ ಉಪದೇಶಿಸುತ್ತಾನೆ (**त्रैगुण्यस्य वेद-विषयत्वेन सर्वेषां उपादेयत्वे ऽप्यपि न तत् मुमुक्षुभि आदर्तव्यम् ।**) ವೇದ ಮತ್ತು ಜಗತ್ತು ಮಿಥ್ಯಾಭೂತವಾದುದರಿಂದ ಅವುಗಳನ್ನು ಬಿಡು ಎಂದು ಕೃಷ್ಣನು ಹೇಳುತ್ತಾನೆಂದು ಅವರ ಅಭಿಪ್ರಾಯ ಅರ್ಜುನನು ತಮ್ಮ ಮತದಲ್ಲಿ ಮತ್ತು ಸಹವಾಸಿಗಳಾದ ಇತರ ಅದ್ವೈತಿಗಳ ಮತದಲ್ಲಿ ಅದ್ವೈತ ತತ್ವಜ್ಞಾನಕ್ಕೆ ಅನರ್ಹನಿದ್ದನು ಎನ್ನುವದನ್ನು ಅವರು ಮರೆತು ಬಿಟ್ಟಿದ್ದಾರೆ ಅವನು ಸಾಂಖ್ಯಕ್ಕೆ ಅರ್ಹನಲ್ಲವೆಂದೇ ಯೋಗವನ್ನು ಪ್ರಾರಂಭ ಮಾಡಿದ್ದಾಯಿತು.

ಆದುದರಿಂದ ಮಧ್ವಾಚಾರ್ಯರು **विषय**ವೆಂದರೆ ಕೋಶದ ಆಧಾರದಿಂದ ಮೇಲಿನ ಅರ್ಥವೆಂದು ಹೇಳಿ ತ್ರಿಗುಣಗಳ ಪರಿಣಾಮವಾದ ಸ್ವರ್ಗಾದಿಗಳನ್ನು ಪ್ರತಿಪಾದಿಸುವಂತೆ ತೋರುವ ವೇದಭಾಗಗಳ ಪರಮಾತ್ಮಪರವಾದ ನಿಜವಾದ ಅರ್ಥವನ್ನು ಅನುಸಂಧಾನ ಮಾಡಿಕೊಂಡು ಮೇಲೆ ತೋರುವ ಸ್ವರ್ಗಾದಿ ಅರ್ಥಗಳನ್ನು ಅರ್ಜುನನು ಬಿಡಬೇಕೆಂಬುದು ಸಂದರ್ಭಕ್ಕೆ ಉಚಿತವಾದುದೂ ಪದಗಳಿಂದ ಪ್ರಾಪ್ತವಾದುದೂ ಆಹುದು ಎಂದು ನಿರೂಪಿಸುತ್ತಾರೆ. *

ಆದರೆ ವೆಂಕಟನಾಥರು **यत्तु अत्रमधवव्याख्यानम्** ಎಂದು ಪ್ರಾರಂಭಿಸಿ ಸುಧಾದಲ್ಲಿ ವ್ಯಾಖ್ಯಾನಿಸಿದ ವಿದ್ವದ್ರೂಢಿ ಪ್ರಸಂಗವನ್ನು ವಿವೇಚಿಸಿ ಅದಕ್ಕೆ ಉತ್ತರವಾಗಿ **वेदमेवव्याकुलीकुर्वतो गीतमेव व्याकुलीकरणं उचितमेवेति समाश्वसितव्यम् ।** ಮೇಲೆ ತೋರಲಿಕ್ಕೆ ಕರ್ಮಬೋಧಕವಾದ ವಾಕ್ಯಗಳು ಸಹ (**वसले वसंते ज्योतिषायजेत**) ಮಧ್ವಾಚಾರ್ಯರ ಅಭಿಪ್ರಾಯದಲ್ಲಿ ಪರಬ್ರಹ್ಮನನ್ನೇ ಬೋಧಿಸುತ್ತವೆ **वसंते** ಎಂದರೆ ಮೇಲೆ ತೋರುವ ಅರ್ಥವೆಂದರೆ 'ವಸಂತ ಋತುವಿನಲ್ಲಿ' ಎಂದು. ಆದರೆ ವಿದ್ವಜ್ಜನರು ತಿಳಿದುಕೊಳ್ಳುವ ಅರ್ಥವೆಂದರೆ— **वसतीति वसः तनोतीति तिः — वसंश्च असौ तिश्च वसतिः सर्वत्र व्याप्यावर्तमानो जगत्कर्ता च ।** ಎಲ್ಲ ಕಡೆಗೂ ವ್ಯಾಪ್ತನಾದ ಜಗತ್ಕರ್ತನು. ಅದರ ಸಂಬೋಧನ ವಿಭಕ್ತಿ ಹೀಗೆ ಇಡೀ ವಾಕ್ಯಕ್ಕೆ ಅರ್ಥ ಮಾಡುತ್ತಾರೆ.

---

* ಮಧ್ವಾಚಾರ್ಯರು **विषय** ಎರಡನೆ ಅರ್ಥವನ್ನೂ ಬರೆದಿದ್ದಾರೆ. ೨) **त्रैगुण्यस्य विषं यापयंति अपगमयंति इति त्रैगुण्य विषया:** ೧) ಮೊದಲನೇ ಅರ್ಥದಂತೆ — ವೇದಗಳು ಮೇಲೆ ತೋರಲಿಕ್ಕೆ ತ್ರಿಗುಣಾತ್ಮಿಕವಾದ ಸ್ವರ್ಗಾದಿಗಳನ್ನು ಪ್ರತಿಪಾದಿಸುತ್ತವೆಂದು ತೋರುತ್ತದೆ. ೨) ಎರಡನೆದರಂತೆ ಸಂಸಾರವೆಂಬ ವಿಷವನ್ನು ವೇದಗಳು ದೂರ ಮಾಡುತ್ತವೆಯೆಂದು ಅರ್ಥ.

ಆದರೆ ಈ ತರಹದ ವ್ಯಾಖ್ಯಾನದಿಂದ ವೈದಿಕ ವಿಧಿ ನಿಷೇಧಗಳೆಲ್ಲ ಲುಪ್ತ ವಾಗುತ್ತವೆ ಇದರಲ್ಲಿ "ಪ್ರತಿ ವಸಂತ ಋತುವಿನಲ್ಲಿ ಜ್ಯೋತಿಷ್ಟೋಮಯಾಗ ವನ್ನು ಮಾಡಬೇಕು" ಈ ಸ್ಪಷ್ಟವಾದ ವೈದಿಕ ವಿಧಿಯನ್ನು ಮಧ್ವಾಚಾರ್ಯರು ಹೇಗೆ ತಡೆಹಿಡಿಯುತ್ತಾರೆ ?

೧) ಆದರೆ ಮಧ್ವಾಚಾರ್ಯರು ಸಾಮಾನ್ಯ ಅರ್ಥವನ್ನು ಅಲ್ಲಗಳೆಯದೇ ಗೂಢಾರ್ಥವನ್ನು ಹೆಚ್ಚಿನ ಸಾಧನೆಗಾಗಿ ಒಪ್ಪುತ್ತಾರೆ ಎಲ್ಲ ಧರ್ಮ–ಕರ್ಮಗಳಿಗೆ ಪ್ರಮಾಣವೆಂದು ಇದೇ ಶ್ಲೋಕವನ್ನೇ ಉದಾಹರಿಸುತ್ತಾರೆ. ೨) ಆ ಮೇಲೆ ಆಪಾತತಃ ಅರ್ಥದಮೇಲೆ ಅವಲಂಬಿಸಿ ಆ ಕರ್ಮಗಳನ್ನು ಬಿಡುವದು ಹೇಗೆ ? ಮಧ್ವಾಚಾರ್ಯರು ಹೇಳುವದೆಂದರೆ ಯಜ್ಞಯಾಗಾದಿಗಳನ್ನು ಮಾಡಿರಿ ಆದರೆ ಅವುಗಳಿಗೆ ಹೇಳಿರುವ ಸ್ವರ್ಗಾದಿಫಲಗಳಿಗೆ ಮಹತ್ವ ಕೊಡಬೇಡಿರಿ, ವೇದಗಳು ಇಂಥ ಫಲಗಳನ್ನು ಹೇಳಿದ್ದರೂ ಅವುಗಳ ಸಲುವಾಗಿ ಕರ್ಮ ಮಾಡುವದು ಬೇಡ. ವೇದಗಳು ವಿಧಿಗಳ ಗುಚ್ಛವಾಗಿದ್ದರೂ ಪರಮಾತ್ಮನ ಗುಣಗಳನ್ನು ಗೂಢವಾಗಿ ವರ್ಣಿಸಿದರೆ ಬಾಧಕವೇನು ?

ವೆಂಕಟನಾಥರು ದೋಷಗಳಕಿಂತ ದ್ವೇಷಪೂರಿತ ಬೈಗಳನ್ನು ಹೆಚ್ಚು ಬೆಳಿಸಿದ್ದಾರೆ ಅವರ ಮುಖ್ಯವಾದ ದೂಷಣೆಯೆಂದರೆ ಮಧ್ವಾಚಾರ್ಯರು ಉದಾಹರಿಸಿದ ಇಲ್ಲಿಯ ಪ್ರಮಾಣಗಳು ಅಸ್ತಿತ್ವದಲ್ಲಿಯೇ ಇಲ್ಲ ಕೌರವ್ಯ ಮಾಂಡವ್ಯ ಭಾಲವೇಯವೆಂಬ ಅನೇಕ ಪ್ರಮಾಣಗಳನ್ನು ಸ್ವತಃ ಕಲ್ಪಿಸಿದವರಿಗೆ ಇಲ್ಲಿರುವ ಸುಳ್ಳು ಪ್ರಮಾಣವನ್ನು ಹುಟ್ಟಿಸುವದರ ತೊಂದರೆ ಎನಿಸೀತೆ ? ಶಂಕರ ರಾಮಾನುಜರು ಹೇಳದಿದ್ದ ಪ್ರಮಾಣಗಳನ್ನು ಮಧ್ವಾಚಾರ್ಯರು ಹಗುರಾಗಿ ಹುಟ್ಟಿಸುತ್ತಾರೆ. ಅವರಿಗೆ ಆಗ ಏನೂ ಎನಿಸುವದಿಲ್ಲ—, ಎಂದು ಅವರ ವಾದ.

ಈ ದೋಷವು ಮಧ್ವಾಚಾರ್ಯರ ಮೇಲೆ ಇತ್ತೀಚೆಗೆ ಹೊರಿಸಿದ್ದಾರೆ. ಹಿಂದೆ ವಿದ್ಯಾರಣ್ಯರಿಂದಾಗಲೀ ವೇದಾಂತ ದೇಶಿಕರಿಂದಾಲೀ ಈ ತರಹದ ದೋಷಗಳ ಉದ್ಘಾಟನೆಯೂ ಆಗಿಲ್ಲ ಗ್ರಂಥಗಳು ಅಚ್ಚುಹಾಕಿಸದೆ ಇದ್ದುದರಿಂದ ವೆಂಕಟನಾಥರಿಗೆ ಈ ಗ್ರಂಥಗಳು ನೋಡಲಿಕ್ಕೆ ಸಿಕ್ಕಿರುವದಿಲ್ಲ, ಇಷ್ಟೇ ಇದರ ಅರ್ಥವಾಗುತ್ತವೆ ಸತ್ಯಧ್ಯಾನರ ಕಾಲಕ್ಕೆ ಇದೇ ರೀತಿ ಆರೋಪಕ್ಕೆ ಗುರಿಯಾದ ಕೆಲವು ಪ್ರಮಾಣಗಳನ್ನು ರಾಮಾನುಜರೂ ಉದಾಹರಿಸಿದ್ದನ್ನು ಪ್ರತಿವಾದಿಗಳಿಗೆ ಸಮಾಧಾನಪಡಿಸಿದ ಸಂಗತಿಯು ಗಯಾದಲ್ಲಿ ಜರುಗಿತೆಂದು ಹೇಳುತ್ತಾರೆ. ಈ ರೀತಿಯಿಂದ ಮೋಸದ ಆರೋಪದಿಂದ ಎಲ್ಲ ಪ್ರಮಾಣಗಳನ್ನೂ ಯಾರು ಬೇಕಾದವರೂ ಬದಿಗೆ ಸರಿಸಬಹುದು.

ಆದರೆ ವೆಂಕಟನಾಥರು ಸ್ವತಃ ರಾಮಾನುಜರ ಅರ್ಥವನ್ನು **ಇಷಯ** ಕ್ಕೆ ಒಪ್ಪಿ ಕೊಂಡಿದ್ದಾರೆ. ರಾಮಾನುಜರ ಭಾಷ್ಯದೊಳಗಿನ ದೊಡ್ಡ ವಾಕ್ಯವೃಂದವನ್ನು ಉದಾಹರಿಸಿ ಅದಕ್ಕೆ ರಾಮಾನುಜರದೆಂದು ಒಪ್ಪಿಗೆ ನೀಡಿಲ್ಲ ಗ್ರಂಥಚೌರ್ಯ ವನ್ನು ಗುರುತಿಸುವದಕ್ಕೆ ಎಷ್ಟೂ ಆಸ್ಪದಕೊಟ್ಟಿಲ್ಲ ! !

ಚಿದ್ಭವಾನಂದರು ವೇದವೆಂದರೆ ಪ್ರಕೃತಿಯೆಂದು ಹೇಳುತ್ತಾರೆ. ಋಗ್ವೇದ ಮೊದಲಾದ ಗ್ರಂಥಗಳೂ ವೇದವೆನಿಸುತ್ತಿವೆ ಯಾಕೆಂದರೆ ಅವು ಪ್ರಕೃತಿಯ ಪರಿ ಣಾಮವಾದ ವಿಶ್ವವನ್ನೇ ವರ್ಣಿಸುತ್ತವೆ. ಪ್ರಕೃತಿಯ ಕಾರ್ಯವನ್ನೇ(ವಿಶ್ವವನ್ನು) ಮುಮುಕ್ಷು ಇವುಗಳ ಸಹಾಯದಿಂದ ತಿಳಿಯುತ್ತಾನೆ. ವೇದಗಳು ನಿತ್ಯವೆಂದಾಗ ಅವು ನಿತ್ಯವಾದ ಪ್ರಕೃತಿಯನ್ನೇ ಬೋಧಿಸುತ್ತಿವೆ. ಎಲ್ಲದಕ್ಕಿಂತ ಹೆಚ್ಚಾಗಿ ಪ್ರಕೃತಿಯೇ ಮೂರು ಗುಣಗಳಿಂದ ಕೂಡಿದೆ ಜ್ಞಾನಿಯಾದವನು ಪ್ರಕೃತಿಯಿಂದ ಬದ್ಧನಾಗಲು ಇಚ್ಛಿಸುವದಿಲ್ಲ. ಆದರೆ ಇಲ್ಲಿಯ ಜೀವನ ಪ್ರಕೃತಿಬದ್ಧವಾಗಿದೆ. ಅವುಗಳಿಂದ ವಿಮೋಚನೆಯನ್ನು ಹೊಂದುವ ಸಾಧನವನ್ನೂ ಈ ವೇದಗಳಲ್ಲಿ ಹೇಳಿದ್ದಾರೆ

ಸ್ವಾಮಿ ಪ್ರಭುಪಾದರು— ವೇದಗಳು ಮುಖ್ಯವಾಗಿ ಪ್ರಕೃತಿಯ ಮೂರು ಗುಣಗಳ ಕ್ರಿಯೆ ಪ್ರತಿಕ್ರಿಯೆಗಳನ್ನೇ ವರ್ಣಿಸುತ್ತಿವೆ, ಅವುಗಳ ಉದ್ದೇಶವು ಫಲ ಕೊಡುವದು ಇರುತ್ತದೆ. ಆ ಫಲವೇ ಬಂಧವನ್ನು ತರುತ್ತದೆ ವೇದಗಳು ಕ್ರಮ ವಾಗಿ ಜನರನ್ನು ಈ ಇಂದ್ರಿಯ ತೃಪ್ತಿಯಿಂದ ಅತ್ಯುಚ್ಚವಾದ ಆತ್ಮ ತೃಪ್ತಿಯ ಕಡೆಗೆ ಒಯ್ಯುತ್ತವೆ. ಕರ್ಮಕಾಂಡದಿಂದ ಉಪನಿಷತ್ತುಗಳ ಮತ್ತು ಭಗವದ್ಗೀತೆಯ ಕಡೆಗೆ ಹೊರಳುತ್ತಾನೆ. ಆಗ ದ್ವಂದ್ವಗಳಿಂದ ದೂರಾಗುತ್ತಾನೆ. ಕೃಷ್ಣನ ಅನು ಗ್ರಹದಿಂದ ಎಲ್ಲವನ್ನೂ ದಾಟುತ್ತಾನೆ. ಇದು ಶ್ಲೋಕದ ತಾತ್ಪರ್ಯವೆಂದು ಹೇಳುತ್ತಾರೆ.

ಪೇಜಾವರ ಶ್ರೀಗಳವರು— "ವೇದವು ತ್ರಿಗುಣಜನ್ಯವಾದ ಕರ್ಮವನ್ನು ಹೇಳಿದರೂ ನೀನು ಅದನ್ನು ಮಾಡಬೇಡ" ಎಂದು ಅರ್ಜುನನಿಗೆ ಕೃಷ್ಣ ಉಪದೇಶಿ ಸುತ್ತಾನೆಂದು ಹೇಳುತ್ತಾರೆ. ವೇದಗಳು ಕರ್ಮಮಾಡಬೇಕೆಂದು ವಿಧಿಸುತ್ತವೆ. ಫಲಗಳನ್ನು ಅಪೇಕ್ಷಿಸಬೇಕೆಂದು ಇಚ್ಛಿಸುವದಿಲ್ಲ. ನಿಷ್ಕಾಮಕರ್ಮ ಮಾಡುವದೇ ಭಗವಂತನ ಇಚ್ಛೆ. ಕೆಲವರು ಗೀತೆಯ ಆಪಾತತಃ ಅರ್ಥವನ್ನು ನೋಡಿ ವೇದ ಗಳನ್ನು ಬಿಡಲಿಕ್ಕೆ ಕೃಷ್ಣನು ಉಪದೇಶಿಸಿದ್ದಾನೆಂದು ಹೇಳುತ್ತಾರೆ. ವೇದಗಳು ಫಲ ಬಿಡಬೇಕೆಂದು ಹೇಳುತ್ತವೆ. ನಿಷ್ಕಾಮಕರ್ಮ ಹೊಸದೇನಲ್ಲ. ಉಪನಿಷತ್ತು ಗಳಲ್ಲಿ ಸಹ (ಕರ) ನಿಷ್ಕಾಮಾಚರಣೆಯು ಉಕ್ತವಾಗಿದೆ" ಎಂದು ಇದರ ಅಭಿಪ್ರಾಯ ವನ್ನು ವಿವರಿಸಿದ್ದಾರೆ.

ಎಲ್ಲರೂ ಸಾಮಾನ್ಯವಾಗಿ ಈ ಅಭಿಪ್ರಾಯವನ್ನು ತೋರಿಸಿದರೂ ಲೋಕಮಾನ್ಯ ಟಿಳಕರು ಮಾತ್ರ— ತ್ರೈಗುಣ್ಯವೆಂದರೆ ಮೂರು ಗುಣಗಳುಳ್ಳ ಪ್ರಕೃತಿಯ ಸಂಸಾರವೆಂದರ್ಥವೆಂದು ಹೇಳಿ, ಆ ಮೇಲೆ ಒಮ್ಮೆಲೆ **ಪ್ರಕೃತಿಯ ಸಂಸಾರವೆಂದರೆ ಮಾಯೆಯ ಸಂಸಾರವೆಂದು ಕೈಗಂಟು ಹಾಕುತ್ತಾರೆ.** ಅದರಲ್ಲಿ ಸುಖದೊರೆಯಬೇಕೆಂದು ಮೀಮಾಂಸಕರು ಶ್ರೌತ ಯಜ್ಞಯಾಗಾದಿಗಳನ್ನು ಮಾಡುತ್ತಾರೆ, ಮತ್ತು ಅದರಲ್ಲಿಯೇ ಮಗ್ನರಾಗುತ್ತಾರೆ ...... .ಆದುದರಿಂದ ಮುಮುಕ್ಷುಗಳು ಈ ತ್ರಿಗುಣಾತ್ಮಕ ಮತ್ತು ಯೋಗಕ್ಷೇಮಾತ್ಮಕ ಕರ್ಮಗಳನ್ನು ಬಿಟ್ಟು ತಮ್ಮ ಮನಸ್ಸನ್ನು ಅದರಾಚೆಗೆ ಬ್ರಹ್ಮನ ಕಡೆಗೆ ಒಯ್ಯಬೇಕೆಂದು ಹೇಳುತ್ತಾರೆ. ಅದಕ್ಕೆ 'ನಿರ್ದ್ವಂದ್ವ ನಿರ್ಯೋಗಕ್ಷೇಮ' ಪದಗಳನ್ನು ಉಪಯೋಗಿಸಿದ್ದಾರೆಂದು ಈ ಶ್ಲೋಕದ ತಾತ್ಪರ್ಯ ತೆಗೆದಿದ್ದಾರೆ. ಈ ತಾತ್ಪರ್ಯಕ್ಕೆ 'ಸಂಸಾರ ಮಾಯೆ' ಏಕೆ ಆಗಬೇಕಾಗುತ್ತದೆ ? ಹೇಳಲಿಕ್ಕೆ ಬರುವದಿಲ್ಲ. ಆದರೂ ಸೇರಿಸಿದ್ದಾರೆ. ಇಲ್ಲಿ ವೈದಿಕ ಕರ್ಮಗಳನ್ನೂ ನಿಂದಿಸಿಲ್ಲ. ಆದರೆ ಅದರಲ್ಲಿಯ ಕಾಮ್ಯಬುದ್ಧಿಯನ್ನು ನಿಂದಿಸಿದ್ದಾರೆಂದು ಅವರೂ ಹೇಳುತ್ತಾರೆ.

ಭಾಗವತದಲ್ಲಿ ಹೇಳಿದ್ದಾರೆ—

**वेदोक्तमेव कुर्वाणो निःसंगोऽर्पितमीश्वरे ।**
**नैष्कर्म्यांलभते सिद्धिं रोचनार्था फलश्रुतिः ।।**

(११–३–४६)

ಹೀಗೆ ಯಜ್ಞವನ್ನು ನಾವು ಮಾಡಲೇಬೇಕು, ಕಾಮ್ಯಬುದ್ಧಿಯನ್ನು ಬಿಡಬೇಕು, ಅದರಂತೆ ಇತರ ಕರ್ಮಗಳನ್ನೂ ಮಾಡಲೇಬೇಕು. ಇದು ಗೀತೆಯ ಉಪದೇಶದ ಸಾರವಾಗಿದೆ ಎಂದು ಅವರು ಹೇಳುತ್ತಾರೆ. ಇದೇ ಅರ್ಥವನ್ನೇ ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆಂದು ಟಿಳಕರು ಸೂಚಿಸುತ್ತಾರೆ.

ಭಾರತದರ್ಶನ ಪ್ರಕಾಶನದಲ್ಲಿ— "ವೇದಗಳೇನೋ ಸತ್ತ್ವ–ರಜಸ್ಸು–ತಮಸ್ಸು ಎಂಬ ಮೂರು ಗುಣಗಳನ್ನು ಪ್ರಕಾಶಪಡಿಸುತ್ತಿವೆ. ವಿವೇಕಿಯಾದ ಅರ್ಜುನನು ಈ ಮೂರು ಗುಣಗಳನ್ನು ದಾಟಿ ಸಮಾಧಿನಿಷ್ಠನಾಗಬೇಕು. ಎಂದರೆ ವೇದದ ಪರಮಾರ್ಥದಲ್ಲಿ ನೆಲೆಗೊಳ್ಳಬೇಕು ಆತ್ಮ ಸಾಧನೆಗೆ ಅತ್ಯಂತಾವಶ್ಯಕವಾದ ಪದಾರ್ಥಗಳ ವಿಷಯದ ಯೋಗಕ್ಷೇಮಗಳನ್ನು ಮಾತ್ರ ಇಟ್ಟುಕೊಳ್ಳಬೇಕು. ಉಳಿದ ಯೋಗಕ್ಷೇಮಗಳನ್ನು ಬಿಡಬೇಕು. **(आत्मस्वरुप तत् प्राप्त्युपायबहिर्भूतानां अर्थानां योगं प्राप्तानां च क्षेमं परित्यज्य । —रामानुज)** ಎಂದು ಹೇಳಿದ್ದಾರೆ.

**आत्मवान्** ಎಂಬುದಕ್ಕೆ ಶಂಕರಾಚಾರ್ಯರು **अप्रमत्तः च भव** ಸತ್ಯಧ್ಯಾನರೂ 'ಪ್ರಮಾದವನ್ನು ಹೊಂದಬೇಡ' ಎಂದು ಶ್ಲೋಕದಲ್ಲಿ ಅನುವಾದಿಸಿದ್ದಾರೆ. ರಾಮಾನುಜಾಚಾರ್ಯರು **आत्मवान् आत्मस्वरूपान्वेषणोभव ।** ಆತ್ಮಸ್ವರೂಪವನ್ನು ಶೋಧಿಸುವವ(ನಾಗು) ರಾಘವೇಂದ್ರರು— **आत्मावन् – परमात्मवान् तथा स्मृतिमान् ।** ಪರಮಾತ್ಮವುಳ್ಳವನೆಂದು ಸ್ಮರಣೆಯಲ್ಲಿಡು. ಬ್ರಹ್ಮಸೂತ್ರದಲ್ಲಿ (**आत्मेति तूपगच्छंति ग्राहयति च** ಎಂಬ ಸೂತ್ರದಲ್ಲಿ ಹೇಳಿದಂತೆ) ಹೇಳಿದಂತೆ ನನ್ನ ಸ್ವಾಮಿಯು ಹರಿಯೆಂದು ಸ್ಮರಿಸು.

**नित्यसत्वस्थः** ಇದನ್ನು Hillರು ಹೀಗೆ ಭಾಷಾಂತರಿಸಿದ್ದಾರೆ— abiding in eternal truth ಇದು ಮಧ್ವಾಚಾರ್ಯರ—"ನಿರಂತರವೂ ಪರಮಾತ್ಮನಲ್ಲಿದ್ದು" ಇದಕ್ಕೆ ಸಮಾನವೇ ಇದೆ.

— ಸಮಾಪ್ತ —